॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ
ಸಂಖ್ಯಾ - ೧೯

# ಶ್ರೀ ಲಿಂಗಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ)

ಪೂರ್ವಭಾಗ—ಸಂಪುಟ ೩
ಅಧ್ಯಾಯಗಳು ೭೦–೮೭

ಅನುವಾದಕ:
ಆಸ್ಥಾನ ಮಹಾವಿದ್ವಾನ್
ಎಡತೊರೆ ಚಂದ್ರಶೇಖರ ಶಾಸ್ತ್ರೀ, ಎಂ. ಎ.
ಸಾಹಿತ್ಯ ವಿದ್ವಾನ್

ಮೈಸೂರು :
ಬೆಂಗಳೂರು ಪ್ರೆಸ್ ಬ್ರಾಂಚ್
೧೯೪೫

# ಮುನ್ನುಡಿ

॥ ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ ॥

ಈ ಲಿಂಗ ಮಹಾಪುರಾಣವು ಭಾರತಾರ್ಯ್ಯರ ಸಾಹಿತ್ಯದಲ್ಲಿ ಉತ್ತಮ ಗ್ರಂಥಗಳ ಸಾಲಿನಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಇದಕ್ಕೆ ಕಾರಣವು ಇದರಲ್ಲಿರುವ ಮಹತ್ತ್ವ ಪೂರಿತವಾದ ಉಪದೇಶ, ಉದಾಹರಣೆಗಳನ್ನು ಒಳಗೊಂಡಿರುವುದೇ ಆಗಿದೆ. ದೇಶ, ಕಾಲ, ವ್ಯಕ್ತಿಗಳು ಬದಲಾಯಿಸಿದರೂ ಜನಾದರಕ್ಕೆ ಪಾತ್ರವಾಗಿರಬಲ್ಲ ಇಂತಹ ಗ್ರಂಥಗಳೇ ಉತ್ತಮವೆನ್ನಿಸುತ್ತವೆ. ಇವುಗಳಿಂದ ಏರ್ಪಟ್ಟ ಸಾಹಿತ್ಯವು ಜನ ಜೀವನವನ್ನು ಪ್ರತಿಬಿಂಬಿಸುತ್ತಾ, ಎಲ್ಲ ಜನರ ನಡೆ, ನುಡಿ, ಭಾವಗಳೆಂಬ ಸಂಸ್ಕೃತಿಯನ್ನು ಮೇಲ್ಪಡಿಸುತ್ತಿರುತ್ತದೆ. ಈ ತತ್ವವು ಎಲ್ಲ ದೇಶಗಳ ಸಾಹಿತ್ಯಗಳಲ್ಲಿಯೂ ಇರುವಂತೆ, ನಮ್ಮ ಸಾಹಿತ್ಯದಲ್ಲೂ ಮೇಲಾಗಿ, ಮಿಗಿಲಾಗಿ ಇದೆ. ಚರಿತ್ರೆಯ ದೃಷ್ಟಿಯಿಂದ ನೋಡಿದರೂ ಕನಿಷ್ಠ ಪಕ್ಷದಲ್ಲಿ ಈಗ್ಗೆ ನಾಲ್ಕುಸಾವಿರ ವರ್ಷಗಳಿಂದಲೂ ಬೆಳೆದು ಬರುತ್ತಿರುವ ನಮ್ಮ ಸಾಹಿತ್ಯದಲ್ಲಿ ಕಾಣಬರುವ ಸಂಸ್ಕೃತಿಯು ಧಾರ್ಮಿಕವಾದುದು. ಈ ಅಂಶವನ್ನು "ಧರ್ಮೋವಿಶ್ವಸ್ಯಜಗತಃ ಪ್ರತಿಷ್ಠಾ" "ಸತ್ಯಂವದ, ಧರ್ಮಂಚರ" ಎಂದು ಮುಂತಾದ ಶ್ರುತಿವಾಕ್ಯಗಳೂ, "ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ" "ಧರ್ಮಏವಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ" ಎಂದು ಮುಂತಾದ ಸ್ಮೃತಿ ಪುರಾಣವಾಕ್ಯಗಳೂ ತಿಳಿಯ ಹೇಳುತ್ತಿವೆ.

ಪುರಾಣಗಳ ವ್ಯಾಸಂಗವು ಪುರುಷಾರ್ಥಗಳ ಸಾಧನೆಗೆ ಉತ್ತಮವಾದ ದಾರಿಗಳನ್ನು ತಿಳಿಸುತ್ತದೆ. ಧರ್ಮ, (Duty) ಅರ್ಥ, (Wealth) ಕಾಮ, (Desires) ಮೋಕ್ಷ (Liberation) ಗಳೆಂದು ನಾಲ್ಕು ಪುರುಷಾರ್ಥಗಳು ಪ್ರಸಿದ್ಧವಾಗಿರುತ್ತವೆ. ಆದರೂ ಕಣ್ಣಿಗೆ ಕಾಣಿಸದ, ಆಯಾಸವನ್ನುಂಟುಮಾಡುವ, ವೆಚ್ಚವನ್ನು ಒಳಗೊಂಡಿರುವ, ಧರ್ಮಾಚರಣೆಯು ಸಾಮಾನ್ಯ ಜನರಿಗೆ ಬೇಡವೆನಿಸುತ್ತದೆ. ಹಾಗೆಯೇ ಜ್ಞಾನ, ವಿವೇಕ,

ವೈರಾಗ್ಯ, ಸನ್ಯಾಸಗಳನ್ನು ಅವಲಂಬಿಸಿರುವ ಮೋಕ್ಷವು ಪ್ರಾಪಂಚಿಕವಾದ ಸಂಸಾರವ್ಯವಹಾರದಲ್ಲಿ ಆದರವುಳ್ಳ ಜನರಿಗೆ ಅಸಹ್ಯವಾಗಿ ಕಾಣುತ್ತದೆ. ಆದುದರಿಂದ ಅರ್ಥಸಂಪಾದನೆ (earning of Wealth,) ಕಾಮ, (Fulfilment of desires and hopes,) ಪೂರ್ತಿಗಳಲ್ಲಿಯೇ ಜನರು ಆಸಕ್ತರಾಗಿ ದುಡಿಯುತ್ತಿದ್ದಾರೆ. ಸಾಧ್ಯವಾದಷ್ಟು ಮಟ್ಟಿಗೆ ಧರ್ಮ, ನೀತಿಗಳೂ ಇರಲೆಂಬುದೂ ವಿದ್ಯಾವಂತರ ಆಶಯವಾಗಿದೆ. ಆದರೆ ಇವರ ಪ್ರಯತ್ನಗಳಿಂದ ದೊರೆಯುವ ಫಲಗಳು ಮಾತ್ರ ಮೂರು ದೋಷಗಳುಳ್ಳವೆಂಬುದು ಅವರಿಗೂ ಎಲ್ಲರಿಗೂ ಕಡೆಗೆ ಗೊತ್ತಾಗುತ್ತದೆ. ದುಃಖ, ಪಾಪಗಳಿಂದ ಮಿಶ್ರವಾಗಿರುವಿಕೆ, ಅನಿತ್ಯವಾಗಿರುವಿಕೆ, ಹೆಚ್ಚುಕಡಿಮೆ ತಾರತಮ್ಯದಿಂದ ಅಸೂಯಾದಿಗಳನ್ನುಂಟುಮಾಡುವಿಕೆ; ಈ ಮೂರುದೋಷಗಳು ಅನಿವಾರ್ಯವಾಗಿರುವುದರಿಂದ ಆ ಫಲಗಳು ಅವರಿಗೂ ತೃಪ್ತಿಸಮಾಧಾನಗಳನ್ನುಂಟು ಮಾಡದೆ ಇರುತ್ತವೆ. ಇಂತಹ ದುಃಖಮಿಶ್ರ ಸುಖಾಭಾಸಗಳಿಂದ ಜನರಿಗೆ ಶಾಂತಿ ಸುಖಗಳು ದೊರೆಯದೆ, ಆ ಜನರ ಕೋರಿಕೆ, ನಿರೀಕ್ಷಣೆಗಳೂ, ಪ್ರಯತ್ನಗಳೂ ವ್ಯರ್ಥವಾಗಿ, ದುಡಿದು, ಬಳಲಿ, ಸಂಕಟಪಡುವ ಅವರ ಮನಸ್ಸನ್ನೂ ಅರ್ಥಕಾಮಗಳಲ್ಲಿಯೇ ಆಸಕ್ತವಾಗಿರುವಿಕೆಯಿಂದ ತಿರುಗಿಸಿ, ಧರ್ಮ, ಮೋಕ್ಷಗಳ ಕಡೆಗೂ ಒಲಿಯುವಂತೆ ಮಾಡುವುದು ಈ ಪುರಾಣಗಳ ಮುಖ್ಯವಾದ ಉದ್ದೇಶವಾಗಿದೆ.

ಈ ಉದ್ದೇಶ ಸಾಧನೆಗಾಗಿ ಇತರ ಮಹಾ ಪುರಾಣಗಳಂತೆ ಈ ಲಿಂಗ ಮಹಾಪುರಾಣವೂ ಬೋಧಿಸುವ ಮಾರ್ಗದಲ್ಲಿ ಮೊದಲನೆಯ ಅಂತಸ್ತಿನ ಉಪದೇಶವು ಆಸ್ತಿಕತೆಯಾಗಿದೆ. ಈ ಬಾಹ್ಯ ಪ್ರಪಂಚವನ್ನು ಪರಿಶೀಲಿಸಿದರೆ ಅದರಲ್ಲಿ ಸೌಂದರ್ಯ, ಉದ್ದೇಶ, ಧರ್ಮ, ಕ್ರಮಗಳು, ಕಂಡು ಬರುತ್ತವೆ. ಇವೆಲ್ಲಕ್ಕೂ ವ್ಯವಸ್ಥಾಪಕನಾದ, ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆಗಿರಬೇಕಾದ ಈಶ್ವರನು ಒಬ್ಬನಿದಾನೆಂದು ಗೊತ್ತಾಗುತ್ತದೆ. ನಮ್ಮ ಮನಸ್ಸಿನಲ್ಲಿ ಇಂತಹ ಈಶ್ವರನನ್ನು ಜ್ಞಾಪಕಕ್ಕೆ ತರುವ ಗುರುತಿಗೇ ಲಿಂಗವೆಂದು ಹೆಸರು. ಇದರಂತೆ ಸ್ವಲ್ಪ ದೀರ್ಘಗೋಳಾಕಾರವಾದ, ಹೃದಯಾಕಾಶದಲ್ಲೂ, ಶರೀರದಲ್ಲೂ, ಅಷ್ಟಮೂರ್ತಿ ರೂಪವಾದ ಬ್ರಹ್ಮಾಂಡದಲ್ಲೂ, ಸೂರ್ಯಸಂಸ್ಥಾನದಲ್ಲೂ, ಆ ದೇವನನ್ನು ವಿಶ್ವರೂಪಿ ಎಂದು ಧ್ಯಾನಮಾಡಬೇಕು. ಇದಕ್ಕಾಗಿ ಲಿಂಗರೂಪವಾದ ಪ್ರತೀಕ ಪೂಜಾ, ಪಂಚಾಕ್ಷರೀ ಮಂತ್ರ ಜಪ, ಮೂರ್ತಿ ಧ್ಯಾನಗಳಿಂದ ಪರಮೇಶ್ವರನ ಆರಾಧನೆಯನ್ನು ಹೇಳಿದೆ. ಈ ಸಂಪುಟದಲ್ಲಿ ೮೫, ೮೬, ೮೭, ನೇ

ಅಧ್ಯಾಯಗಳನ್ನು ನೋಡಿ. ಇದೇ ಸಾಕಾರ ಸಗುಣಮೂರ್ತಿಯ ಧ್ಯಾನವು. ಭಕ್ತರು ತಮಗೆ ಇಷ್ಟವಾದ ಮೂರ್ತಿಯನ್ನು ಆರಿಸಿಕೊಳ್ಳಬೇಕು. ಇದು ತ್ರಿಮೂರ್ತಿಗಳನ್ನೂ ಒಳಗೊಂಡಿರುತ್ತದೆ. ಅಲ್ಲದೆ ಈ ಲಿಂಗದ ಬುಡದಲ್ಲಿ ಬ್ರಹ್ಮನನ್ನೂ, ಮಧ್ಯದಲ್ಲಿ ವಿಷ್ಣುವನ್ನೂ, ಅಗ್ರದಲ್ಲಿ ಶಿವನನ್ನೂ, ಧ್ಯಾನಿಸ ಬೇಕೆಂದೂ, ಲಿಂಗದ ಎಡಭಾಗದಲ್ಲಿ ಬ್ರಹ್ಮನನ್ನೂ, ಬಲಭಾಗದಲ್ಲಿ ವಿಷ್ಣುವನ್ನೂ ಮಧ್ಯದಲ್ಲಿ ಈಶ್ವರನನ್ನೂ, ಧ್ಯಾನಿಸಬೇಕೆಂದೂ ಹೇಳಿದೆ. ಇದರಿಂದ ಚಿತ್ತದ ಏಕಾಗ್ರತೆಯು ದೊರೆತ ಮೇಲೆ ಎರಡನೆಯ ಅಂತಸ್ತಿನ ಉಪದೇಶವನ್ನೂ ಈ ಪುರಾಣದಲ್ಲಿ ಹೇಳಿದೆ. ಈ ಅಂತಸ್ತಿಗೆ ತಲಪಿದ ಮೇಲೆ ನಿರಾಕಾರ ಸಗುಣತತ್ವವನ್ನು ಉಪಾಸಕನು ಧ್ಯಾನಿಸಬೇಕು. ಈಗ ಮಾಯಾವಿಶಿಷ್ಟ ಬ್ರಹ್ಮರೂಪವಾದ, ಅಥವಾ ಶಿವ ಶಕ್ತ್ಯಾತ್ಮಕವಾದ ತತ್ವವನ್ನು ಉಪಾಸನೆ ಮಾಡಬೇಕು. ಈ ತತ್ವವು ತ್ರಿಮೂರ್ತಿಗಳಿಗೂ ಅವರ ಸಹಧರ್ಮಿಣಿಯರಾದ ಶಕ್ತ್ಯಂಶರಾದ ದೇವಿಯರಿಗೂ ಮೂಲಕಾರಣ ವಾದ ಸ್ವರೂಪವಾಗಿದೆ. ಆಮೇಲೆ ಮನಸ್ಸು ನಾಮ, ರೂಪ, ಲಿಂಗಗಳನ್ನು ಮೀರಿರುವ ಪರತತ್ವವನ್ನು ಅಧ್ಯಾರೋಪ ಅಪವಾದ ನ್ಯಾಯವನ್ನು ಅನು ಸರಿಸಿ ನಿತ್ಯಶುದ್ಧ ಬುದ್ಧ ಮುಕ್ತ ಪರಬ್ರಹ್ಮತತ್ವವನ್ನು ಉಪಾಸನೆ ಮಾಡ ಬಹುದು. ಇದೇ ಕಡೆಯದಾದ ಸಚ್ಚಿದಾನಂದಾದ್ವೈತ ರೂಪವಾದ ನಿರ್ಗುಣಪರತತ್ವದ ಉಪದೇಶವು. ಇದರ ಧ್ಯಾನದಿಂದ ಸ್ವಸ್ವರೂಪದ, ಜೀವಬ್ರಹ್ಮೈಕ್ಯದ, ಅಪರೋಕ್ಷಾನುಭವವಾಗುತ್ತದೆ. ಇದೇ ಮೋಕ್ಷವು.

ಇದರಿಂದ ಭಕ್ತರ ಮನಸ್ಸಿನಲ್ಲಿ ಸಂಕುಚಿತ ಭಾವವು ಹೋಗಿ ವಿಶ್ವ ವಿಶಾಲ ಭಾವವು ಮೂಡುವುದಕ್ಕೆ ಅನುಕೂಲವಾಗುತ್ತದೆ. ಇಂತಹ ಮನೋವೈಶಾಲ್ಯದಿಂದ ಪ್ರಪಂಚದಲ್ಲಿರುವ ಎಲ್ಲ ಮತಗಳಲ್ಲೂ ಎಂದರೆ ದ್ವೈತ, ವಿಶಿಷ್ಟಾದ್ವೈತ, ಶೈವ, ಶಾಕ್ತೇಯ ಮುಂತಾದ ವೈದಿಕಮತ ಗಳಲ್ಲೂ, ಬೌದ್ಧ, ಕ್ರಿಶ್ಚಿಯನ್, ಮುಸಲ್ಮಾನ್, ಮುಂತಾದ ಇತರ ಮತ ಗಳಲ್ಲೂ, ಸಹಾನುಭೂತಿ, ಆದರ, ಗೌರವಗಳು, ನಮ್ಮ ಮನಸ್ಸಿನಲ್ಲೂ ಉಂಟಾಗುತ್ತವೆ. ಇಂತಹ ಉಪದೇಶವನ್ನೂ ತಿಳಿಸುವ ಈ ಲಿಂಗ ಪುರಾಣವು ಸಂಕುಚಿತವಾದ ಶೈವ ಪುರಾಣವಲ್ಲವು. ವಿಶ್ವಧರ್ಮವನ್ನು ಬೋಧಿಸುವ ಮಹಾಪುರಾಣವೆಂಬ ಬಿರುದಿಗೆ ಅರ್ಹವಾಗಿದೆ. ಇಂತಹ ಉಪದೇಶವನ್ನೂ ಸೂತ ಸಂಹಿತೆಯ ಮಾರ್ಗ ಪ್ರಾಮಾಣ್ಯದಲ್ಲೂ, ದೇವೀ ಭಾಗವತದ ಶಕ್ತಿ ಸ್ವರೂಪದಲ್ಲೂ ಮನಗಾಣಬಹುದು. ಇಂತಹ ವಿಶ್ವಧರ್ಮದ ತಿಳಿವಳಿಕೆಯ ಪ್ರಚಾರದಿಂದಲೂ ಆಚರಣೆಯಿಂದಲೂ, ಜಗತ್ತಿನಲ್ಲಿರುವ ಸ್ವಾರ್ಥಪರತೆ, ಅಸೂಯೆ, ಅಸಹನೆಗಳು ತೊಲಗಿ

ಹೋಗಿ, ಸರ್ವಸಮತೆ ಸಹಕಾರಗಳು ನೆಲೆಸಿ, ಧಾರ್ಮಿಕತೆ, ಆಸ್ತಿಕತೆಗಳ ಆಚರಣೆಯಿಂದ ಪ್ರಪಂಚದಲ್ಲಿ ಕಲ್ಯಾಣ ಸಾಧನೆಯಾಗಬೇಕಾಗಿದೆ.

ಈ ಘನತಮವಾದ ಉದ್ದೇಶದಿಂದಲೇ ನಮ್ಮನ್ನಾಳುತ್ತಿರುವ ಧಾರ್ಮಿಕ ಮಹಾಪ್ರಭುಗಳಾದ ಶ್ರೀ **ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್** ಜಿ. ಸಿ. ಎಸ್. ಐ. ಮಹಾಸ್ವಾಮಿಯವರ ಉದಾರವಾದ ಅಪ್ಪಣೆಯನ್ನು ಅನುಸರಿಸಿ ಈ ಗ್ರಂಥವನ್ನೂ ಪ್ರಕಟಿಸಲಾಗಿದೆ. ಈ ಮಹಾನುಭಾವರ ಸದುದ್ದೇಶವು ಸರ್ವದಾ ನೆರವೇರುತ್ತಿರುವಂತೆ ಅನುಗ್ರಹಿಸಲೆಂದು ಜಗನ್ಮಾತೆಯಾದ ತ್ರಿಪುರಸುಂದರೀ, ಭುವನೇಶ್ವರೀ ದೇವಿಯ ಅಡಿದಾವರೆಗಳಲ್ಲಿ ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತಿರುತ್ತೇನೆ.

ಪಾರ್ಥಿವ ಸಂವತ್ಸರದ
ಮಾರ್ಗಶಿರ್ಷ ಶುಕ್ಲ ತೃತೀಯಾ
ಶುಕ್ರವಾರ ೭–೧೨–೧೯೪೫

ಎಡತೊರೆ ದೇವಯ್ಯ ದೀಕ್ಷಿತರ ಮಗ
**ಚಂದ್ರಶೇಖರಶಾಸ್ತ್ರೀ.**

# ವಿಷಯಗಳ ಸೂಚಿಕೆ.

## ಎಪ್ಪತ್ತೊಂದನೆಯ ಅಧ್ಯಾಯ—

ಪರಮೇಶ್ವರನಿಂದ ತ್ರಿಪುರದಹನ ಕಥೆಯ ವಿವರಣೆ; ತ್ರಿಪುರ ನಿರ್ಮಾಣ; ವಿದ್ಯುನ್ಮಾಲೀ, ತಾರಕಾಕ್ಷ, ಕಮಲಾಕ್ಷರಿಗೆ ವರ; ದೇವತೆಗಳಿಗೂ, ಧರ್ಮಕ್ಕೂ, ಗ್ಲಾನಿ; ನಾರಾಯಣನು ಯಾಗದಿಂದ ಶಿವನನ್ನು ಆರಾಧಿಸಿದುದು; ರಾಕ್ಷಸರ ಧರ್ಮಾಚರಣೆಗೆ ಮಾಯಾ ಪುರುಷನ ಉಪದೇಶದಿಂದ ವಿಘ್ನಾಚರಣೆ, ರಾಕ್ಷಸರ ಧರ್ಮತ್ಯಾಗ; ತ್ರಿಪುರ ದಹನಕ್ಕೆ ನಂದೀಶ್ವರನ ಮಾತಿನಂತೆ ಸಿದ್ಧತೆಗಳು; ೭೧—೧೦೫

## ಎಪ್ಪತ್ತೆರಡನೆಯ ಅಧ್ಯಾಯ—

ವಿಶ್ವಕರ್ಮನಿಂದ ರಥ ನಿರ್ಮಾಣ; ಪಶುಪತಿಯಾದ ಶಿವನ ಸಲಹೆಯಂತೆ ದೇವತೆಗಳು ಪಶುಗಳಾದುದು; ಪಾಶುಪತ ವ್ರತದಿಂದ ಅದರ ಮೋಚನೆಯಾಗುವುದೆಂದು ಶಿವನ ಅನುಗ್ರಹ; ವಿಘ್ನ ನಿವಾರಣೆಗಾಗಿ ವಿನಾಯಕನ ಆರಾಧನೆ; ದೇವಗಣಗಳೊಡನೆ ಶಿವನು ಯುದ್ಧಕ್ಕೆ ಹೊರಟನು; ಬ್ರಹ್ಮನು ಸಾರಥಿಯಾಗಿದ್ದುದು; ಶಿವನು ಪಾಶುಪತಾಸ್ತ್ರವನ್ನು ಹೂಡಿ, ತ್ರಿಪುರಗಳನ್ನು ನೋಡಲು, ಅವು ಒಂದಾದುದು; ತ್ರಿಪುರ ದಹನ; ದೇವತೆಗಳು ಶಿವನನ್ನು ಸ್ತುತಿಸಿದರು; ಬ್ರಹ್ಮನು ಸಾರಥಿಯಾಗಿಯೂ ವಿಷ್ಣುವು ವಾಹನವಾಗಿಯೂ ಇದ್ದುದು. ೧೦೬—೧೪೫

## ಎಪ್ಪತ್ತುಮೂರನೆಯ ಅಧ್ಯಾಯ—

ಬ್ರಹ್ಮನು ಲಿಂಗಾರ್ಚನೆಯ ಮಹಿಮೆಯನ್ನು ವಿವರಿಸಿದುದು; ತ್ರಿಪುರಾಸುರರು ಈ ಧರ್ಮನಿಷ್ಠರಾಗಿದ್ದ ಪರ್ಯಂತವಾಗಿ ಅಜೇಯರಾಗಿದ್ದರು. ಇದನ್ನು ಬಿಟ್ಟ ಮೇಲೆ ತ್ರಿಪುರ ದಹನವಾಯಿತು; ದೇವತೆಗಳು ಪಾಶುಪತವ್ರತಾಚರಣೆಯಿಂದ ತಮ್ಮ ಪಶುತ್ವವನ್ನು ಬಿಟ್ಟು ಶುದ್ಧರಾದರು; ಅಲ್ಲಿಂದ ಈ ವ್ರತವು ರೂಢಿಗೆ ಬಂದಿತು.

೧೪೬—೧೫೧

## ಎಪ್ಪತ್ತನಾಲ್ಕನೆಯ ಅಧ್ಯಾಯ—

ವಿಶ್ವಕರ್ಮನು ದೇವತೆಗಳಿಗೆ ಲಿಂಗಗಳನ್ನು ತಕ್ಕಂತೆ ರಚಿಸಿಕೊಟ್ಟನು: ಅನೇಕ ಬಗೆಯ ಲಿಂಗಗಳು; ಅವುಗಳ ಅರ್ಚನೆಯ ಫಲಗಳು; ಲಿಂಗದಲ್ಲಿ ಮೂಲ ದಲ್ಲಿ ಬ್ರಹ್ಮನೂ, ಮಧ್ಯದಲ್ಲಿ ವಿಷ್ಣುವೂ, ಮೇಲು ಭಾಗದಲ್ಲಿ ರುದ್ರನೂ, ಎಲ್ಲಕ್ಕೂ ಮೇಲೆ ಪ್ರಣವ ರೂಪಿ ಯಾದ ಸದಾಶಿವನೂ, ನೆಲೆಸಿರುತ್ತಾರೆ; ಲಿಂಗಗಳ ಪ್ರತಿಷ್ಠಾಪನೆಯು ಪುಣ್ಯಕರವಾದುದು; .. ೧೫೦–೧೧೮

## ಎಪ್ಪತ್ತೈದನೆಯ ಅಧ್ಯಾಯ—

ನಿಷ್ಕಲವಾದ ಶಿವನು ಸಕಲನಾದುದು ಹೇಗೆ? ಓಂ ಕಾರ ರೂಪಿಯಾದ ಭಗವಂತನು ಜ್ಞಾನಸ್ವರೂಪನು; ಅದರಿಂದಲೇ ಮುಕ್ತಿಯು; ದೇವರನ್ನು ಜ್ಞಾಪಕಕ್ಕೆ ತರುವುದು ಲಿಂಗವು; ಇಡಿಯ ಬ್ರಹ್ಮಾಂಡವೇ ಲಿಂಗ ರೂಪವೆಂದು ಧ್ಯಾನಿಸಬೇಕು; ಪಂಚಮಹಾಭೂತ ಗಳೂ ಲಿಂಗದಲ್ಲಿವೆ; ವರ್ಣಾಶ್ರಮಗಳೂ ಲಿಂಗದಿಂದ ಉಂಟಾದುವು; ಪರಶಿವನು ಕರ್ಮಾತ್ಮನಾಗಿ ಸರ್ವ ಪ್ರಕೃತಿಗೂ ಪ್ರವರ್ತಕನಾದನು; ಕರ್ಮ ಯಜ್ಞ, ತಪೋಯಜ್ಞ, ಜಪ, ಧ್ಯಾನ, ಯಜ್ಞಗಳು ಜ್ಞಾನ ಸಾಧನಗಳು; ಯೋಗಿ ಹೃದಯದಲ್ಲಿ ನಿಷ್ಕಲ ಲಿಂಗದ ಸಾನ್ನಿಧ್ಯವಿರುತ್ತದೆ; ಪರಾನಂದವೇ ಲಿಂಗವು; ಬಾಹ್ಯ ಮತ್ತು ಆಭ್ಯಂತರ ಲಿಂಗಗಳು; ಸ್ಥೂಲ, ಸೂಕ್ಷ್ಮಲಿಂಗಗಳು; ಅಧಿಕಾರಾನುಗುಣವಾದ ಲಿಂಗ ಪೂಜೆಯು ಸಫಲವು. ಎಲ್ಲವೂ ಶಿವಲಿಂಗವಾಗಿದೆ; ಲಿಂಗವು ಉಪಾಸನೆಗಾಗಿ ಕಲ್ಪಿತವಾಗಿದೆ; ಶಿವಶಕ್ತಿ, ಸಕಲ ನಿಷ್ಕಲ ಅಭೇದ ಭಾವನೆ ಆವಶ್ಯಕ; ಶಿವಾ ದ್ವೈತ ಭಾವನೆ ಶ್ರೇಯಸ್ಕರವು; ೧೫೯–೧೬೭

ಸಂಬಂಧ; ಪ್ರಾಣಿಗಳು ಕಾಪಾಡುವವನನ್ನು ರಕ್ಷಿಸುತ್ತವೆ; ಹಿಂಸಕನನ್ನು ನಾಶಮಾಡುತ್ತವೆ; ಆದುದರಿಂದ ಕಾಯಿಕ, ವಾಚಿಕ, ಮಾನಸಿಕವಾದ ಮೂರು ಬಗೆಯ ಹಿಂಸೆಯನ್ನೂ ಬಿಡಬೇಕು. ವೇದವಿಹಿತವಾದ ಯಾಗದಲ್ಲಿ ಪಶುವಿನ ಹಿಂಸೆಯು ದೋಷಾವಹವಲ್ಲ; ಅಹಿಂಸೆಯಿಂದ ರುದ್ರಲೋಕ ಪ್ರಾಪ್ತಿಯು ಫಲವು; ಸ್ತ್ರೀಯರು ಯಾವಾಗಲೂ ರಕ್ಷಣೀಯರು, ಅವರನ್ನು ಹಿಂಸಿಸಬಾರದು: ಶಿವಭಕ್ತಿಯ ಮಹಿಮೆ; .. ೨೧೩–೨೨೦

## ಎಪ್ಪತ್ತೊಂಬತ್ತನೆಯ ಅಧ್ಯಾಯ—

ಉಚ್ಛಿಷ್ಟ ಪೂಜೆಯ ಫಲ: ದೀಪದಾನದ ಫಲ: ಶಿವನು ಭಕ್ತರ ಭಾವಾನುರೂಪವಾದ ಫಲವನ್ನು ಕೊಡುತ್ತಾನೆ; ಶಿವಲಿಂಗ ಪೂಜೆಯ ಕ್ರಮ ವಿವರಗಳು; ರುದ್ರಗಾಯತ್ರಿಯಿಂದ ಅರ್ಚನೆ; ಪಂಚ ಮೂರ್ತಿಯ ಪೂಜಾ ಫಲಗಳು; ಶಿವನ ಬಲಭಾಗದಲ್ಲಿ ಬ್ರಹ್ಮನನ್ನೂ, ಎಡಭಾಗದಲ್ಲಿ ವಿಷ್ಣುವನ್ನೂ, ಪೂಜಿಸಬೇಕು. ೨೨೧–೨೨೯

## ಎಂಬತ್ತನೆಯ ಅಧ್ಯಾಯ—

ದೇವತೆಗಳು ಪಶುತ್ವವನ್ನು ಕಳೆದು ಕೊಂಡ ಬಗೆ; ಅವರು ಕೈಲಾಸಕ್ಕೆ ಹೋಗಿ ಶಿವದರ್ಶನ ಮಾಡಿದುದು; ವಿಷ್ಣುವಿನೊಡನೆ, ಭೋಗ್ಯ ಎಂಬ ಶಿವ ವಾಸಸ್ಥಾನಕ್ಕೆ ಹೋದುದು; ಮೇರು ಪರ್ವತ ವರ್ಣನೆ, ಅಲ್ಲಿ ಪುರ ವರ್ಣನೆ; ದೇವತೆಗಳೊಡನೆ ಬ್ರಹ್ಮನೂ ವಿಷ್ಣುವೂ ಶಿವನ ಪುರವನ್ನು ಪ್ರವೇಶಿಸಿದರು; ಪ್ರಥಮ ವಿಮಾನದಲ್ಲಿ ಗಣೇಶನಾದ ನಂದಿಯ ದರ್ಶನ; ಅವನ ಮೂಲಕ ಶಿವ ದರ್ಶನ; ಪಾಶುಪತವ್ರತವನ್ನು ಶಿವನು ದೇವತೆಗಳಿಗೆ ಉಪದೇಶಿಸಿದನು; ಎಲ್ಲರೂ ಆ ಪಾಶುಪತ ವ್ರತಾಚರಣೆಯಿಂದ ಪಶುತ್ವವನ್ನು ಕಳೆದುಕೊಂಡು ತಮ್ಮ ಸ್ಥಾನಗಳಿಗೆ ಹಿಂತಿರುಗಿದರು; .. ೨೩೦–೨೪೪

ಇವು ಸಾಮಾನ್ಯ ಧರ್ಮಗಳು ; ಮಾರ್ಗಶೀರ್ಷ ಮುಂತಾದ ಮಾಸಕ್ರಮದಲ್ಲಿ ವ್ರತಪೂಜಾಕ್ರಮ ಗಳು ; ಅವುಗಳ ಫಲಶ್ರುತಿ ; .. ೨೯೪–೩೦೮

## ಎಂಬತ್ತೈದನೆಯ ಅಧ್ಯಾಯ—

ಎಲ್ಲ ವ್ರತ ಪೂಜೆಗಳಲ್ಲೂ ಪಂಚಾಕ್ಷರೀ ಜಪವು ಆವ ಶ್ಯಕವಾದುದು ; ಪಂಚಾಕ್ಷರೀ ವಿದ್ಯೆ ; ಪ್ರಳಯ ಕಾಲದಲ್ಲಿ ಪರಮೇಶ್ವರನ ಸ್ವರೂಪ, ಶಿವನೊಬ್ಬನೇ ಇದ್ದು, ಶಿವ, ಶಕ್ತಿ, ರೂಪದಿಂದ, ಜೀವ, ಈಶ್ವರ, ರೂಪದಿಂದ ಅಥವಾ ಪ್ರಕೃತಿ, ಪುರುಷ, ರೂಪದಿಂದ ತೋರುವುದು ; ತ್ರಿಮೂರ್ತಿಗಳು ತ್ರಿಗುಣ ಸಂಬಂಧ ವಿಶೇಷದಿಂದ ಆವಿರ್ಭವಿಸುವುದು ; ಸೃಷ್ಟಿ ಕ್ರಮ , ಬ್ರಹ್ಮನ ಮಾನಸ ಪುತ್ರರಿಗೆ ಶಕ್ತಿದಾನ ಮಾಡಲು ಪ್ರಾರ್ಥನೆ ; ಶಿವನ ಪಂಚ ಮುಖಗಳಿಂದ ಪಂಚಾ ಕ್ಷರೀ ಮಂತ್ರದ ಪ್ರಕಟನ ಉಪದೇಶಗಳು ; ಬ್ರಹ್ಮನು ಅದನ್ನು ಗ್ರಹಿಸಿ ಪುತ್ರರಿಗೆ ಉಪದೇಶ ಮಾಡಿದುದು ; ಅವರು ಅದನ್ನು ಮುಂಜವಾನ್ ಎಂಬ ಪರ್ವತದಲ್ಲಿ ಜಪಿಸಿ ಸಿದ್ಧರಾದುದು ; ಅದರಿಂದ ಲೋಕ, ವೇದ, ಧರ್ಮಗಳ ರಕ್ಷಣೆ ; ಆ ಮಂತ್ರದ ಬೀಜ, ಶಕ್ತಿ, ದೇವತೆ ಗಳು ; ಪ್ರಣವ ಸ್ವರೂಪ ; ನ್ಯಾಸ ಪ್ರಕಾರಗಳು ; ಉತ್ಪತ್ತಿ, ಸ್ಥಿತಿ, ಸಂಹಾರ, ಎಂದು ಮೂರು ಬಗೆಯ ನ್ಯಾಸಗಳು ; ಪ್ರಣವದಿಂದ ಸಂಪುಟೀ ಕರಣ ; ಈ ಮಂತ್ರದಿಂದ ಉಪದೇಶಗಳನ್ನು ಪಡೆಯುವ ಕ್ರಮ ; ಆಮೇಲೆ ಜಪಿಸುವ ಕ್ರಮ ; ಜಪ ಸರಗಳ ಮಣಿ ಗಳು ; ಅವುಗಳಿಂದಾಗುವ ಫಲ ; ಪ್ರಾಣಾಯಾಮದ ಆವಶ್ಯಕತೆ ಮತ್ತು ಫಲ ; ಜಪ ಸಂಖ್ಯೆ, ದಿಕ್ಕುಗಳು ; ಬೆರಳುಗಳು ; ಅಹಿಂಸೆಯಿಂದ ಜಪಯಜ್ಞವು ಶ್ರೇಷ್ಠ ವಾದುದು ; ವಾಚಿಕ, ಉಪಾಂಶು, ಮಾನಸ, ಎಂದು ಜಪದ ಮೂರು ಬಗೆಗಳು ; ಜಪಸಿದ್ಧಿಗೆ ಸದಾಚಾರವು

ಆವಶ್ಯಕ; ವರ್ಣಾಶ್ರಮ ಧರ್ಮಾಚರಣೆಯೇ ಸದಾ ಚಾರವು; ಗ್ರಾಹ್ಯಾಗ್ರಾಹ್ಯಾನ್ನಗಳು; ಪ್ರತಿಗ್ರಹ ವಿವೇಚನೇ; ಬೆಕ್ಕು, ನಾಯಿ, ಗಳಿಂದ ಮನೆಗೆ ಅಶುದ್ಧಿ; ಶುದ್ಧಿಕಾರಕಗಳು; ಗುರುವೇ ಶಿವನು, ಶಿವನೇ ಗುರುವು; ಗುರುಭಕ್ತಿ ಸೇವಾ ಮಹಿಮೆ; ಮಂತ್ರವಿನಿಯೋಗ ಕ್ರಮ; ಗ್ರಹಣಕಾಲದಲ್ಲಿ ಜಪ; ಬ್ರಾಹ್ಮೀ ಸಮಾನ ಮೇಧಾಕಾರಕ; ಹೋಮಕ್ರಮ; ಅಭಿಚಾರಿಕಕರ್ಮ ಪ್ರತೀಕಾರ; ಪ್ರಾಯಶ್ಚಿತ್ತ, ಧರ್ಮರೂಪವಾದ ಜಪ; ಜಪಸಿದ್ಧಿ ಫಲಗಳು; .. ೩೦೯–೩೫೮

ಎಂಬತ್ತಾರನೆಯ ಅಧ್ಯಾಯ—

ಜಪಯಜ್ಞಕ್ಕಿಂತ ಧ್ಯಾನಯಜ್ಞವು ಮೇಲಾದುದು: ಕಾಲಕೂಟವೆಂಬ ವಿಷಹರಣ ಶಕ್ತಿಗಿಂತ ಸಂಸಾರ ವಿಷ ಹರಣ ಸಾಮರ್ಥ್ಯವು ಮಿಗಿಲಾದುದು; ಕಾಮ, ಧರ್ಮ ಅಧರ್ಮಗಳಿಂದ ಸಂಸಾರ ಪ್ರವೃತ್ತಿ; ಅಜ್ಞಾನಿಗಳಾದ ಅಶಕ್ತರಿಗೆ ಪ್ರವೃತ್ತಿಧರ್ಮ, ಸಮರ್ಥರಾದ ಜ್ಞಾನಿಗಳಿಗೆ ನಿವೃತ್ತಿಧರ್ಮ; ನಾರಕೀ, ಸ್ವರ್ಗೀ, ಮಾನವ ಎಂದು ಜೀವರ ಮೂರುಬಗೆ; ಉದ್ಭಿಜ್ಜ, ಸ್ವೇದಜ, ಅಂಡಜ, ಜರಾಯುಜ ಎಂದು ನಾಲ್ಕು ಬಗೆ; ಜ್ಞಾನ ಸನ್ಯಾಸ ಗಳಿಂದಲೇ ಮುಕ್ತಿ ಪ್ರಾಪ್ತಿಯು; ಸಂಸಾರದಲ್ಲಿ ದುಃಖವೇ; ಸುಖಾನುಭವದಿಂದ ಕಾಮ ಶಾಂತವಾಗದು; ದುಃಖಮಿಶ್ರ, ಕ್ಷಯ, ಸಾತಿಶಯ, ದೋಷ ಗಳಿಂದ ಕಾಮ್ಯಫಲಗಳು ಸುಖವಲ್ಲವು; ಬ್ರಹ್ಮ ಪರ್ಯಂತವಾದ ಅಧಿಕಾರವೂ ದುಃಖವೇ; ಪರವಿದ್ಯೆ, ಅಪರವಿದ್ಯೆ; ಅವಸ್ಥಾತ್ರಯದಲ್ಲಿ ತ್ರಿಮೂರ್ತಿಗಳು; ತುರೀಯನೇ ಪರಶಿವನು; ದಹರಾಕಾಶದಲ್ಲಿರುವ ಆತ್ಮನು ಶಿವನೇ: ಪರಮೇಶ್ವರನಿಗೆ ಎಲ್ಲವೂ ಅನ್ನವು; ಕರ್ಮದಿಂದ ಮೋಕ್ಷವಾಗದು: ಜ್ಞಾನದಿಂದ ಮುಕ್ತಿ; ವಿಶ್ವ, ತೈಜಸ, ಪ್ರಾಜ್ಞಾತೀತನಾದ ಆತ್ಮನೇ ಬ್ರಹ್ಮ; ಈ ಅಪರೋಕ್ಷ ಜ್ಞಾನವು ಗುರುವಿನ ಈಕ್ಷಣಾನುಗ್ರಹ

ದಿಂದ; ಜ್ಞಾನಿಯು ಜೀವನ್ಮುಕ್ತನು: ಕರ್ಮಾಭ್ಯಾಸ ವನ್ನು ಬಿಟ್ಟು ಜ್ಞಾನಾಭ್ಯಾಸವನ್ನು ಮಾಡಬೇಕು; ಧ್ಯಾನದಿಂದ ಜ್ಞಾನ; ದೀರ್ಘಗೋಳಾಕಾರವಾದ ದಹ ರಾಕಾಶ, ಶರೀರ, ಅಷ್ಟಮೂರ್ತಿ, ಬ್ರಹಾಂಡ, ಸೂರ್ಯ ಸಂಸ್ಥಾನವನ್ನೇ ಪ್ರತ್ಯೇಕವಾಗಿಟ್ಟುಕೊಂಡು ಪರಶಿವ ಧ್ಯಾನ ಮಾಡಬೇಕು; ಜ್ಞಾನ, ವೈರಾಗ್ಯ, ಅಮಾನಿ ತ್ವಾದಿಗಳು, ಗುಣತ್ರಯಪರಿಹರಣ, ಗುರುಭಕ್ತಿ, ಗಳಿಂದ ಬ್ರಹ್ಮಜ್ಞಾನ ಲಾಭ; ಸಂಸಾರ ಕಾಲಕೂಟ ನಿರ್ಮೂಲನ, ಮೋಕ್ಷಪ್ರಾಪ್ತಿಯಾಗುತ್ತದೆ; ಜ್ಞಾನ ಮಹಿಮೆ, ಪಾಶುಪತ ವ್ರತ ಮಹಾತ್ಮ್ಯ, ಯೋಗ ಸಿದ್ಧಿಯಾಗುತ್ತದೆ; ಫಲಶ್ರುತಿ; .. ೩೫೫—೩೬೨

## ಎಂಬತ್ತೇಳನೆಯ ಅಧ್ಯಾಯ—

ಸನತ್ಕುಮಾರ ಮುಂತಾದ ಮುನಿಗಳು ಪರಮೇಶ್ವರ ನನ್ನು ಕುರಿತು ಇದೆಲ್ಲವೂ ಶಿವಸ್ವರೂಪವಾದರೆ, ಉಮಾಮಹೇಶ್ವರಾದಿ ತ್ರಿಮೂರ್ತಿ ರೂಪದಿಂದಲೂ, ಜೀವೇಶ್ವರ ರೂಪದಿಂದಲೂ, ಪ್ರಕೃತಿಪುರುಷರ ರೂಪ ದಿಂದಲೂ, ಈ ಜಗದ್ವ್ಯವಹಾರವು ಹೇಗೆ? ಎಂದು ಕೇಳಿದರು. ಬಂಧ ಮೋಕ್ಷಗಳೆಲ್ಲವೂ, ಕರ್ತೃತ್ವ, ಭೋಕ್ತೃತ್ವ, ಜನನ, ಮರಣಗಳೆಲ್ಲವೂ ಅಧ್ಯಾ ರೋಪ ಅಪವಾದ ನ್ಯಾಯದಿಂದ ಮಾಯಿಕವೆಂದು ವಿವರಿಸಿದುದು; ಪರಮೇಶ್ವರನು ಭವಾನೀದೇವಿಯನ್ನು ಹಸನ್ಮುಖನಾಗಿ ನೋಡಲು, ಆ ತಾಯಿಯ ಅನುಗ್ರಹ ದಿಂದ ಮಾಯೆಯ ತೆರೆಯು ಹೋಗಿ ಜ್ಞಾನೋದಯ; ಉಮಾಶಂಕರರ ಅಭೇದವನ್ನು ಮನಗಂಡರು; ಎಲ್ಲ ಜೀವರೂ ಭವಾಂಶಜರು; ಉಮಾಶಂಕರ ಪ್ರಸಾದದಿಂದ ಲೇ ನೇರವಾಗಿ ನಿತ್ಯಾನಂದರೂಪವಾದ ಮುಕ್ತಿಯು ಎಲ್ಲರಿಗೂ ಕ್ರಮವಾಗಿ ದೊರೆಯುತ್ತದೆ; ಇದೇ ಶಿವ ಸಾಯುಜ್ಯವು. .. ೩೬೩—೩೬೯

# ಶ್ರೀ ಲಿಂಗಮಹಾಪುರಾಣಂ

## ಸಂಪುಟ ೩.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಸಪ್ತತಿತಮೋಽಧ್ಯಾಯಃ

**॥ ಋಷಯ ಊಚುಃ ॥**

**ಆದಿಸರ್ಗಸ್ತ್ವಯಾ ಸೂತ ಸೂಚಿತೋ ನ ಪ್ರಕಾಶಿತಃ ।**
**ಸಾಂಪ್ರತಂ ವಿಸ್ತರೇಣೈವ ವಕ್ತುಮರ್ಹಸಿ ಸುವ್ರತ ॥ ೧ ॥**

**॥ ಸೂತ ಉವಾಚ ॥**

**ಮಹೇಶ್ವರೋ ಮಹಾದೇವಃ ಪ್ರಕೃತಿಃ ಪುರುಷಸ್ಯ ಚ ।**
**ಪರತ್ವೇ ಸಂಸ್ಥಿತೋ ದೇವಃ ಪರಮಾತ್ಮಾ ಮುನೀಶ್ವರಾಃ ॥ ೨ ॥**

---

॥ ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ ॥

**ಕರ್ಮೈವೇಹ ಜನಸ್ಯ ದುಃಖಸುಖದಂ, ಸತ್ಕರ್ಮ ಕುರ್ವೇ ಸದಾ ।**
**ಸಂಸಿದ್ಧಿಃ ನಿಜಕರ್ಮಣಾ ಜನಕವತ್, ತಸ್ಮೈ ನಮಃ ಕರ್ಮಣೇ ॥**
**ನಾಸ್ತ್ಯನ್ಯತ್ ಪರಸಾಧನಂ ನಿಜಕೃತೇಃ, ಶ್ರದ್ಧಾ ಬಲಂ ಕರ್ಮಣಃ ।**
**ಕರ್ಮಣ್ಯೇವ ಮಮಾಸ್ತು ಧೀಃ, ನ ತು ಫಲೇ, ಹೇ ಕರ್ಮ ಮಾಂ ತಾರಯ ॥**

ಈ ಲೋಕದಲ್ಲಿ ಸುಖದುಃಖಾನುಭವರೂಪವಾದ ಫಲವನ್ನು ನಾವೆಲ್ಲರೂ ಅನುಭವಿಸುತ್ತಿರುತ್ತೇವೆ. ಇದಕ್ಕೆ ಕಾರಣವು ನಾವು ಮಾಡಿರುವ ಕರ್ಮವೇ ಆಗಿದೆ. ಈ ವಿಷಯವನ್ನು ಅಷ್ಟಾವಕ್ರಗೀತೆಯ ಮುನ್ನುಡಿಯಲ್ಲಿ ಪುಟ ೯–೧೧ರಲ್ಲಿ ವಿವರಿಸಲಾಗಿದೆ. ಆದುದರಿಂದ ಪ್ರಾಣಿಗಳ ಸುಖಕ್ಕೂ ದುಃಖಕ್ಕೂ ಅವರ ಕರ್ಮಗಳೇ ಕಾರಣವೆಂದು ಗೊತ್ತಾಗುತ್ತದೆ. ವಿಚಾರಪರನೂ ವಿವೇಕಿಯೂ ಆದ ಮಾನವನು ದುಃಖಕಾರಣ

ವಾದ ದುಷ್ಕರ್ಮಗಳನ್ನು ಬಿಟ್ಟು, ಸುಖಕಾರಣವಾದ ಸತ್ಕರ್ಮಗಳನ್ನೇ ಆಚರಿಸುತ್ತಿರುತ್ತೇನೆಂದು ನಿಶ್ಚಯಿಸಿ ಆಚರಿಸುತ್ತಾನೆ. ಆದರಿಂದ ಅವನು ಈ ಲೋಕದಲ್ಲಿ ಅಭ್ಯುದಯಗಳನ್ನೂ, ಪರಲೋಕಗಳಲ್ಲಿ ಸದ್ಗತಿಯನ್ನೂ ಪಡೆದು ಉತ್ತಮವಾದ ಸುಖವನ್ನು ಅನುಭವಿಸುತ್ತಿರುತ್ತಾನೆ. ಇದಕ್ಕಾಗಿ ಜನ್ಮಗಳನ್ನೂ ಪಡೆಯುತ್ತಿರುತ್ತಾನೆ. ಆದರೂ ಈ ಸುಖಗಳು ಅನಿತ್ಯಗಳೂ, ದುಃಖ ಮಿಶ್ರಗಳೂ, ಸಾತಿಶಯಗಳಾದುದರಿಂದ ಅಸೂಯಾದಿ ದೋಷ ಜನಕಗಳೂ, ಆಗಿವೆ ಎಂದೂ, ಸಂಸಾರವೆಂಬ ಚಿನ್ನದ ಸಂಕೋಲೆಯ ನಿರ್ಬಂಧ ದುಃಖವು ತಪ್ಪದೆಂದೂ, ಅನುಭವದಿಂದ ಮನಗಾಣುತ್ತಾನೆ. ಆಮೇಲೆ ಫಲಕಾಮನೆ ಇಲ್ಲದೆ ದೇವರ ಸೇವಕನಾಗಿ ಕರ್ಮಗಳನ್ನು ಮಾಡುತ್ತಾನೆ. ಆದರಿಂದ ಚಿತ್ತವು ಶುದ್ಧವಾಗುತ್ತದೆ. ಕಡೆಗೆ ಮೋಕ್ಷವೆಂಬ ಪರಮ ಪುರುಷಾರ್ಥದ ಸಿದ್ಧಿಯೂ ಅಂಥವನಿಗೆ ಉಂಟಾಗುತ್ತದೆ. ಇಂತಹ ಉದಾಹರಣೆಗಳೂ ಜನಕ, ನಾರದ, ಶಂಕರ ಮುಂತಾದವರ ಚರಿತ್ರೆಗಳಲ್ಲಿ ಪುರಾಣಗಳಿಂದ ತಿಳಿಯಬರುತ್ತವೆ. ದೇವೀ ಭಾಗವತ ಸ್ಕಂಧ ೧ ಅಧ್ಯಾಯ ೧೬–೧೯ ನೋಡಿ. ಆದುದರಿಂದ ಎಲ್ಲಕ್ಕೂ ಸಾಧನವಾಗಬಲ್ಲ ಈ ಕರ್ಮಕ್ಕೆ, ಎಂದರೆ, ವರ್ಣಾಶ್ರಮ ಧರ್ಮಾನುಷ್ಠಾನಕ್ಕೆ ನಮ್ಮ ಆದರವು ಸಲ್ಲತಕ್ಕದ್ದಾಗಿದೆ. ಅಷ್ಟೇ ಅಲ್ಲದೆ ಎಲ್ಲ ಪುರುಷಾರ್ಥಗಳನ್ನೂ ಸಾಧಿಸಿಕೊಡುವ ಉತ್ತಮವಾದ ಸಾಧನವು ಈ ಕರ್ಮಕ್ಕಿಂತ ಮತ್ತೊಂದಿಲ್ಲವು. ಮತ್ತು ಈ ಕರ್ಮವು ತನ್ನ ಫಲವನ್ನು ಕೊಡುವ ಸಾಮರ್ಥ್ಯವನ್ನು ಪಡೆಯುವಂತಾಗಬೇಕಾದರೆ ಶ್ರದ್ಧೆಯು, ಎಂದರೆ ಗುರೂಪದೇಶ ಶಾಸ್ತ್ರೋಪದೇಶಗಳಲ್ಲಿ ಅಚಲವಾದ ನಂಬಿಕೆಯು ಆವಶ್ಯಕವಾಗಿ ಬೇಕಾಗಿವೆ. ಆದುದರಿಂದ ನನ್ನ ಮನಸ್ಸು ಕರ್ಮಾಚರಣೆಯಲ್ಲಿ ಆಸಕ್ತಿಯುಳ್ಳದ್ದಾಗಿರಲಿ. ಫಲದಲ್ಲಿ ಆಶೆ ಇಲ್ಲದ್ದಾಗಿರಲಿ. ಎಲೈ ನಿಷ್ಕಾಮ ಕರ್ಮಯೋಗವೇ, ನನ್ನನ್ನು ಈ ಸಂಸಾರ ಸಾಗರದಿಂದ ದಾಟಿಸಿ ಕಾಪಾಡು. ಆದುದರಿಂದ ಯಾರೂ ನಿರಾಶರಾಗಬೇಕಾಗಿಲ್ಲವು. ಈ ಕರ್ಮದಿಂದ ಎಲ್ಲರೂ ಸ್ವಪರಹಿತಗಳನ್ನು ಸಾಧಿಸುವಂತಾಗಲಿ.

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತನೆಯ ಅಧ್ಯಾಯವು.

೧. ಋಷಿಗಳು ಹೇಳಿದರು: ಓ ಸೂತಮಹರ್ಷಿಗಳೇ, ತಾವು ಆದಿ ಸೃಷ್ಟಿಯನ್ನು ಸಂಗ್ರಹವಾಗಿ ಮಾತ್ರ ಹೇಳಿದಿರಿ. ಆದರ ಸ್ವರೂಪ

ಅವ್ಯಕ್ತಂ ಚೇಶ್ವರಾ ತ್ತಸ್ಮಾದಭವತ್ಕಾರಣಂ ಪರಂ ।
ಪ್ರಧಾನಂ ಪ್ರಕೃತಿ ಶ್ಚೇತಿ ಯದಾಹು ಸ್ತತ್ವ ಚಿಂತಕಾಃ ॥ ೩ ॥
ಗಂಧ ವರ್ಣ ರಸೈರ್ಹೀನಂ ಶಬ್ದಸ್ಪರ್ಶ ವಿವರ್ಜಿತಂ ।
ಅಜರಂ ಧ್ರುವ ಮಕ್ಷಯ್ಯಂ ನಿತ್ಯಂ ಸ್ವಾತ್ಮ ನ್ಯವಸ್ಥಿತಂ ॥ ೪ ॥
ಜಗದ್ಯೋನಿಂ ಮಹಾಭೂತಂ ಪರಂ ಬ್ರಹ್ಮ ಸನಾತನಂ ।
ವಿಗ್ರಹಃ ಸರ್ವಭೂತಾನಾ ಮೀಶ್ವರಾಜ್ಞಾ ಪ್ರಜೋದಿತಂ ॥ ೫ ॥
ಅನಾದ್ಯಂತ ಮಜಂ ಸೂಕ್ಷ್ಮಂ ತ್ರಿಗುಣಂ ಪ್ರಭವಾವ್ಯಯಂ ।
ಅಪ್ರಕಾಶ ಮವಿಜ್ಞೇಯಂ ಬ್ರಹ್ಮಾಗ್ರೇ ಸಮವರ್ತತ ॥ ೬ ॥

---

ಕ್ರಮವಿವರಗಳನ್ನು ಹೇಳಲಿಲ್ಲ. ಆದ್ದರಿಂದ ದಯೆಯಿಟ್ಟು ಆದರ ವಿಚಾರವನ್ನು ನಮಗೆ ವಿಸ್ತಾರವಾಗಿ ಹೇಳಬೇಕು.

೩–೪. ಸೂತನು ಹೇಳಿದನು: ಎಲ್ಲೈ ಋಷಿಶ್ರೇಷ್ಠರೇ, ಶಿವನು ಪ್ರಕೃತಿಗೂ, ಪುರುಷನಿಗೂ, ನಿಯಾಮಕನಾದ ಸ್ವಾಮಿಯಾಗಿದ್ದಾನೆ. ಆವರೆ ತತ್ವಜ್ಞರಾದ ಸಾಂಖ್ಯರು ಶಿವನಿಗಿಂತಲೂ ಬೇರೆಯಾದ, ಜಗತ್ತಿಗೆ ಕಾರಣವಾದ ಅವ್ಯಕ್ತವಾದ ಪ್ರಕೃತಿಯೊಂದಿದೆ. ಅದಕ್ಕೆ ಪ್ರಧಾನವೆಂತಲೂ ಹೆಸರು. ಎಂದು ಹೇಳುತ್ತಾರೆ. ಇವುಗಳಿಗೂ ಮೂಲಭೂತವಾದ ಪರಬ್ರಹ್ಮವಸ್ತುವು, ಶಬ್ದ, ಸ್ಪರ್ಶ, ಗಂಧ, ರುಚಿ, ಬಣ್ಣ, ಎಂಬ ಭೌತ ಗುಣಗಳೊಂದೂ ಇಲ್ಲದೆ ಇರುವ, ನಾಶವಿಲ್ಲದ, ಸತ್ಯವಾದ ತನ್ನ ಸ್ವರೂಪದಲ್ಲೇ ಸ್ಥಿರವಾಗಿದೆ, ಎಂದು ತಿಳಿಯಬೇಕು.

೫–೬. ಜಗತ್ತು ಸೃಷ್ಟಿಯಾಗುವುದಕ್ಕಿಂತ ಮುಂಚೆ ಈ ಜಗತ್ತಿಗೆ ಮೂಲಕಾರಣವಾಗಿಯೂ, ಉತ್ಪತ್ತಿ ಇಲ್ಲದೆಯೂ, ಸೂಕ್ಷ್ಮವಾಗಿಯೂ, ಸತ್ವ, ರಜಸ್, ತಮಸ್ಸು, ಎಂಬ ಮೂರು ಗುಣಗಳಿಂದ ಕೂಡಿಯೂ, ವಿಕಾರವಿಲ್ಲದೆಯೂ, ಪಂಚೇಂದ್ರಿಯಗಳಿಗೂ, ಮನಸ್ಸಿಗೂ, ಕಾಣಿಸದ, ಸಕಲ ಪ್ರಪಂಚ ಸ್ವರೂಪವಾದ, ಈಶ್ವರನ ಆಜ್ಞೆಯಿಂದ ಪ್ರೇರಿಸಲ್ಪಟ್ಟ, ತಿಳಿಯಲು ಅಶಕ್ಯವಾದ, ಪರಬ್ರಹ್ಮವಸ್ತುವೇ ಇದ್ದಿತು.

ಅಸ್ಯಾತ್ಮನಾ ಸರ್ವಮಿದಂ ವ್ಯಾಪ್ತಂ ತ್ವಾಸೀಚ್ಛಿವೇ ಚ್ಛಯಾ ।
ಗುಣಸಾಮ್ಯೇ ತದಾ ತಸ್ಮಿನ್ ಅವಿಭಾಗೇ ತಮೋಮಯೇ ॥ ೭ ॥

ಸರ್ಗಕಾಲೇ ಪ್ರಧಾನಸ್ಯ ಕ್ಷೇತ್ರಜ್ಞಾಧಿಷ್ಠಿ ತಸ್ಯ ವೈ ।
ಗುಣಭಾವಾ ದ್ವ್ಯಜ್ಯಮಾನೋ ಮಹಾನ್ಪ್ರಾದುರ್ಬಭೂವ ಹ ॥ ೮ ॥

ಸೂಕ್ಷ್ಮೇಣ ಮಹತಾ ಚಾಥ ಅವ್ಯಕ್ತೇನ ಸಮಾವೃತಂ ।
ಸತ್ವೋದ್ರಿಕ್ತೋ ಮಹಾನಗ್ರೇ ಸತ್ತಾ ಮಾತ್ರ ಪ್ರಕಾಶಕಃ ॥ ೯ ॥

ಮನೋ ಮಹಾಂಸ್ತು ವಿಜ್ಞೇಯು ಮೇಕಂ ತತ್ಕಾರಣಂ ಸ್ಮೃತಂ ।
ಸಮುತ್ಪನ್ನಂ ಲಿಂಗಮಾತ್ರಂ ಕ್ಷೇತ್ರಜ್ಞಾಧಿಷ್ಠಿತಂ ಹಿ ತತ್ ॥೧೦॥

ಧರ್ಮಾದೀನಿ ಚ ರೂಪಾಣಿ ಲೋಕತತ್ತ್ವಾರ್ಥ ಹೇತವಃ ।
ಮಹಾನ್ಸೃಷ್ಟಿಂ ವಿಕುರುತೇ ಚೋದ್ಯಮಾನಃ ಸಿಸೃಕ್ಷಯಾ ॥೧೧॥

---

೭–೯. ಶಿವನ ಇಚ್ಛೆಯಂತೆ ಸೃಷ್ಟಿಗೆ ಮುಂಚೆಯೂ ಪರಮಾತ್ಮ ನಿಂದ ಈ ಪ್ರಪಂಚವೆಲ್ಲವೂ, ವ್ಯಾಪಿಸಲ್ಪಟ್ಟಿದ್ದಿತು. ಆಗ ಎಲ್ಲೆಲ್ಲಿಯೂ, ಕತ್ತಲೆ ತುಂಬಿತ್ತು. ಸೃಷ್ಟಿಯ ಪೂರ್ವ ಸಮಯದಲ್ಲಿ ಸತ್ವ,ರಜಸ್ಸು,ತಮೋ ಗುಣಗಳು ಒಂದೇ ಪ್ರಮಾಣದಲ್ಲಿ ಬೆರೆದಿದ್ದವು. ಸೃಷ್ಟಿಯ ಕಾಲದಲ್ಲಿ ಜಗತ್ತಿಗೆ ಆಧಾರಭೂತವಾದ ಬ್ರಹ್ಮವಸ್ತುವಿಗೆ ಪ್ರಕೃತಿಯೊಂದಿಗೆ ಸಂಬಂಧವಾದಾಗ ಸತ್ವರಜಸ್ತಮೋಗುಣ ವೈಷಮ್ಯದಿಂದ ಹೊರಹೊಮ್ಮಿದ ದೊಡ್ಡದಾದ ಮಹತ್ತತ್ತ್ವವು ಉಂಟಾಯಿತು. ಸೃಷ್ಟಿಗೆ ಪೂರ್ವ ದಲ್ಲಿ ಪರಬ್ರಹ್ಮವಸ್ತುವು ಅಗೋಚರವಾಗಿಯೂ, ಸೂಕ್ಷ್ಮವಾಗಿಯೂ, ಮಹತ್ತಾಗಿಯೂ, ಕೇವಲ ಸತ್ವಗುಣದಿಂದ ಕೂಡಿದುದಾಗಿಯೂ, ಇರುವಿಕೆಯನ್ನು ಮಾತ್ರ ತೋರಿಸುವುದಾಗಿಯೂ ಇದ್ದಿತು.

೧೦–೧೨. ಜಗತ್ತಿಗೆ ಕಾರಣವಾದ ವಸ್ತುಗಳಲ್ಲಿ ಸಮಷ್ಟಿಮನಸ್ಸು ಬಹು ಮುಖ್ಯವಾದ ಕಾರಣವೆಂದು ತಿಳಿಯಬೇಕು. ಪರಮೇಶ್ವರನಿಗೆ ಅದು ಸೂಕ್ಷ್ಮಶರೀರವಾಗಿದೆ. ಅದರಿಂದ ಉಂಟಾದ ವ್ಯಷ್ಟಿಲಿಂಗ ಶರೀರ ಗಳಿಗೆ ಜೀವರು ಅಧಿಷ್ಠಾನರಾಗಿರುವರು. ಭಗವಂತನು ಸೃಜ್ಯಮಾನಪ್ರಾಣಿ. ಕರ್ಮಾನುಸಾರವಾಗಿ ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ, ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆ ಕಾರಣವಾದ ವೇದಗಳನ್ನು ಸೃಷ್ಟಿಸಿದನು. ಇಂಥಾ

ಮನೋ ಮಹಾನ್ಮತಿಃ ಬ್ರಹ್ಮ ಪೂರ್ಬುದ್ಧಿಃ ಖ್ಯಾತಿರೀಶ್ವರಃ ।
ಪ್ರಜ್ಞಾಚಿತಿಃ ಸ್ಮೃತಿಃ ಸಂವಿದ್ವಿಶ್ವೇಶ ಶ್ಚೇತಿ ಸ ಸ್ಮೃತಃ ॥೧೨॥

ಮನುತೇ ಸರ್ವಭೂತಾನಾಂ ಯಸ್ಮಾಚ್ಚೇಷ್ಟಾ ಫಲಂ ತತಃ ।
ಸೌಕ್ಷ್ಮ್ಯಾತ್ತೇ ನ ವಿಭಕ್ತಂ ತು ಯೇನ ತನ್ಮನ ಉಚ್ಯತೇ ॥೧೩॥

ತತ್ವಾನಾ ಮಗ್ರಜೋ ಯಸ್ಮಾನ್ಮಹಾಂಶ್ಚ ಪರಿಮಾಣತಃ ।
ವಿಶೇಷೇಭ್ಯೋ ಗುಣೇಭ್ಯೋಽಪಿ ಮಹಾನಿತಿ ತತಃ ಸ್ಮೃತಃ ॥೧೪॥

ಬಿಭರ್ತಿ ಮಾನಂ ಮನುತೇ ವಿಭಾಗಂ ಮನ್ಯತೇಽಪಿ ಚ ।
ಪುರುಷೋ ಭೋಗಸಂಬಂಧಾತ್ತೇನ ಚಾಸೌ ಮತಿಃ ಸ್ಮೃತಃ॥೧೫॥

ಬೃಹತ್ವಾದ್ಬೃಂಹಣತ್ವಾಚ್ಚ ಭಾವಾನಾಂ ಸಕಲಾಶ್ರಯಾತ್ ।
ಯಸ್ಮಾದ್ಧಾರಯತೇ ಭಾವಾನ್ ಬ್ರಹ್ಮ ತೇನ ನಿರುಚ್ಯತೇ ॥೧೬॥

---

ದೊಡ್ಡದಾದ ಸೃಷ್ಟಿಯನ್ನು ಈಶ್ವರನು ಮಾಡಿದನು. ಪರಮಾತ್ಮನೇ, ಮನಸ್ಸು, ಪ್ರಕೃತಿ, ಬುದ್ಧಿ, ಜ್ಞಾನ, ವಿವೇಕ, ಜ್ಞಾಪಕಶಕ್ತಿ, ತಿಳಿವಳಿಕೆ, ವಿಶ್ವಕ್ಕೆ ಅಧಿಪತಿ, ಎಲ್ಲವೂ, ಆಗಿದ್ದಾನೆಂದು ತಿಳಿಯಬೇಕು.

೧೩–೧೫. ಮನಸ್ಸು ಎಲ್ಲಾ ವಸ್ತುಗಳ ಸ್ವಭಾವಗಳನ್ನೂ ತಿಳಿಯುತ್ತದೆ. ಮತ್ತು ಎಲ್ಲಾ ಪ್ರಾಣಿಗಳ ಕ್ರಿಯೆಗಳ ಫಲಗಳನ್ನೂ ನಿಶ್ಚಯಿಸುತ್ತದೆ. ಅಲ್ಲದೇ ಸೂಕ್ಷ್ಮವಾಗಿ ವಿಷಯಗಳನ್ನು ವಿಭಾಗಿಸ ಬಲ್ಲದು. ಆದ್ದರಿಂದಲೇ ಇದಕ್ಕೆ ಮನಸ್ಸು ಎಂದು ಹೆಸರು ಬಂದಿದೆ. ಪ್ರಕೃತಿಯು ಎಲ್ಲಾ ವಸ್ತು ತತ್ವಗಳಲ್ಲಿಯೂ ಮೊದಲನೆಯದು. ಇದು ಅಳತೆಯಲ್ಲಿಯೂ ದೊಡ್ಡದು. ಎಲ್ಲಾ ಸತ್ವ ಮುಂತಾದ ಗುಣಗಳಿಗಿಂತಲೂ ದೊಡ್ಡದಾದುದು. ಆದ್ದರಿಂದಲೇ ಇದಕ್ಕೆ ಮಹಾನ್, ಎಂದು ಹೆಸರು ಬಂದಿದೆ. ಬುದ್ಧಿಯು ವಿಚಾರಗಳನ್ನು ಚೆನ್ನಾಗಿ ಮಾಡಬಲ್ಲದು. ಪ್ರತಿಯೊಂದು ವಿಷಯವನ್ನೂ ವಿಭಾಗಮಾಡಬಲ್ಲದು. ಪುರುಷನಿಗೆ ಪ್ರಪಂಚ ಭೋಗ ವಿಷಯದಲ್ಲಿ ಅರಿವನ್ನುಂಟುಮಾಡಬಲ್ಲದು. ಆದ್ದರಿಂದಲೇ ಇದು ಮತಿ, ಯೆಂದು ಕರೆಯಲ್ಪಡುತ್ತದೆ.

೧೬. ಬಹಳ ದೊಡ್ಡದಾದುದರಿಂದಲೂ, ವಿಸ್ತಾರವಾದ ಪ್ರಪಂಚವನ್ನು ಹೊರಹೊಮ್ಮಿಸುವುದರಿಂದಲೂ, ಸಕಲ ಭೂತಗಳಿಗೂ ಆಶ್ರಯವಾದುದರಿಂದಲೂ, ಬ್ರಹ್ಮವಸ್ತುವಿಗೆ ಬ್ರಹ್ಮ, ಎಂದು ಹೆಸರು ಬಂದಿದೆ.

ಯಃ ಪೂರಯತಿ ಯಸ್ಮಾಚ್ಚ ಕೃತ್ಸ್ನಾನ್ದೇವಾ ನನುಗ್ರಹೈಃ ।
ನಯತೇ ತತ್ತ್ವಭಾವಂ ಚ ತೇನ ಪೂರಿತಿ ಚೋಚ್ಯತೇ ॥೧೭॥

ಬುಧ್ಯತೇ ಪುರುಷಶ್ಚಾತ್ರ ಸರ್ವಾನ್ ಭಾವಾನ್ ಹಿತಂ ತಥಾ ।
ಯಸ್ಮಾದ್ಬೋಧಯತೇ ಚೈವ ಬುದ್ಧಿಸ್ತೇನ ನಿರುಚ್ಯತೇ ॥೧೮॥

ಖ್ಯಾತಿಃ ಪ್ರತ್ಯುಪಭೋಗಶ್ಚ ಯಸ್ಮಾತ್ಸಂವರ್ತತೇ ತತಃ ।
ಭೋಗಸ್ಯ ಜ್ಞಾನನಿಷ್ಠತ್ವಾತ್ತೇನ ಖ್ಯಾತಿ ರಿತಿ ಸ್ಮೃತಃ ॥೧೯॥

ಖ್ಯಾಯತೇ ತದ್ಗುಣೈರ್ವಾಽಪಿ ಜ್ಞಾನಾದಿಭಿರನೇಕಶಃ ।
ತಸ್ಮಾಚ್ಚ ಮಹತಃ ಸಂಜ್ಞಾ ಖ್ಯಾತಿರಿತ್ಯಭಿಧೀಯತೇ ॥೨೦॥

ಸಾಕ್ಷಾತ್ಸರ್ವಂ ವಿಜಾನಾತಿ ಮಹಾತ್ಮಾ ತೇನ ಚೇಶ್ವರಃ ।
ಯಸ್ಮಾತ್ ಜ್ಞಾನಾನುಗಶ್ಚೈವ ಪ್ರಜ್ಞಾ ತೇನ ಸ ಉಚ್ಯತೇ ॥೨೧॥

---

೧೭–೧೯. ಪರಬ್ರಹ್ಮವಸ್ತುವು ಸಕಲ ದೇವತೆಗಳಿಗೂ ಅನುಗ್ರಹ ಮಾಡಿ ಅವರನ್ನು ಪೂರ್ಣರನ್ನಾಗಿ ಮಾಡುತ್ತದೆ. ಮತ್ತು ಎಲ್ಲರನ್ನೂ ಸತ್ಯಸಾಕ್ಷಾತ್ಕಾರದ ದಾರಿಗೆ ಎಳೆಯುತ್ತಾನೆ. ಆದ್ದರಿಂದಲೇ ಇವನಿಗೆ ಪೂಃ ಎಂದು ಹೆಸರು ಬಂದಿದೆ. ಎಲ್ಲಾ ವಿಷಯಗಳನ್ನೂ ಚೆನ್ನಾಗಿ ತಿಳಿಯುವುದರಿಂದಲೂ, ಎಲ್ಲರಿಗೂ ತಿಳಿವಳಿಕೆಯನ್ನುಂಟುಮಾಡುವುದರಿಂದಲೂ, ಬುದ್ಧಿಗೆ ಬುದ್ಧಿ, ಎಂದು ಹೆಸರು ಬಂದಿದೆ. ಮಹತ್ತಾದ ಪ್ರಕೃತಿಗೆ ಖ್ಯಾತಿ, ಎಂಬುದಾಗಿಯೂ, ಮತ್ತೊಂದು ಹೆಸರು. ಏಕೆಂದರೆ ಪುರುಷನಿಗೆ ಇದರ ದೆಸೆಯಿಂದಲೇ ಭೋಗವುಂಟಾಗುವುದು. ಭೋಗವುಂಟಾಗಲು ತಿಳಿವಳಿಕೆ ಕಾರಣ. ಆದ್ದರಿಂದಲೇ ಪ್ರಕೃತಿಗೆ ಖ್ಯಾತಿ, ಎಂದು ಹೆಸರು ಬಂದಿರುವುದು.

೨೦–೨೧. ಮಹತ್ತಾದ ಪ್ರಕೃತಿಯು, ಅದರ ಸ್ವರೂಪವಾದ ಸತ್ತ್ವರಜಸ್ತಮೋಗುಣಗಳಿಂದ ಎಲ್ಲ ಬಗೆಯಲ್ಲೂ ಗೋಚರವಾಗುತ್ತದೆ. ಆದ್ದರಿಂದಲೇ ಇದಕ್ಕೆ ಖ್ಯಾತಿ, ಎಂದು ಹೆಸರು ಬಂದಿದೆ. ಪರಮೇಶ್ವರನು ತಾನೇ ಎಲ್ಲವನ್ನೂ ತಿಳಿಯಬಲ್ಲನು. ಆದ್ದರಿಂದಲೇ ಆವನಿಗೆ ಈಶ್ವರ, ಎಂದು ಹೆಸರು ಬಂದಿದೆ. ಎಲ್ಲಾ ವಿಧವಾದ ತಿಳಿವಳಿಕೆಯುಂಟಾಗಲು ಬುದ್ಧಿಯೇ ಸಹಾಯಕವಾದ್ದರಿಂದ ಇದಕ್ಕೆ ಪ್ರಜ್ಞಾ, ಎಂದು ಹೆಸರು ಬಂದಿದೆ.

ಜ್ಞಾನಾದೀನಿ ಚ ರೂಪಾಣಿ ಬಹುಕರ್ಮ ಫಲಾನಿ ಚ ।
ಚಿನೋತಿ ಯಸ್ಮಾ ದ್ಭೋಗಾರ್ಥಂ ತೇನಾಸೌ ಚಿತಿರುಚ್ಯತೇ ॥೨೨॥

ಸರ್ವಮಾನ ವ್ಯತೀತಾನಿ ತಥೈವಾ ನಾಗತಾನ್ಯಪಿ ।
ಸ್ಮರತೇ ಸರ್ವಕಾರ್ಯಾಣಿ ತೇನಾಸೌ ಸ್ಮೃತಿರುಚ್ಯತೇ ॥೨೩॥

ಕೃತ್ಸ್ನಂ ಚ ವಿಂದತೇ ಜ್ಞಾನಂ ಯಸ್ಮಾನ್ಮಾಹಾತ್ಮ್ಯ ಮುತ್ತಮಂ ।
ತಸ್ಮಾದ್ವಿಂದೇ ರ್ವಿದೇ ಶ್ಚೈವ ಸಂವಿದಿತ್ಯಭಿಧೀಯತೇ ॥೨೪॥

ವಿದ್ಯತೇಽಪಿ ಚ ಸರ್ವತ್ರ ತಸ್ಮಿನ್ಸರ್ವಂ ಚ ವಿಂದತಿ ।
ತಸ್ಮಾತ್ಸಂವಿದಿತಿ ಪ್ರೋಕ್ತೋ ಮಹದ್ಭಿ ರ್ಮುನಿ ಸತ್ತಮಾಃ ॥೨೫॥

ಜಾನಾತೇರ್ಜ್ಞಾನ ಮಿತ್ಯಾಹು ಭಗವಾನ್ ಜ್ಞಾನ ಸಂನಿಧಿಃ ।
ಬಂಧನಾದಿ ಪರೀಭಾವಾ ದೀಶ್ವರಃ ಪ್ರೋಚ್ಯತೇ ಬುಧೈಃ ॥೨೬॥

---

೨೨—೨೪. ಪರಮೇಶ್ವರನು ಜೀವರಿಗೆ ಬೇಕಾದ ಜ್ಞಾನ, ಐಶ್ವರ್ಯ, ಯಶಸ್ಸು, ಮುಂತಾದ ವಿಷಯಗಳನ್ನೂ, ಅವರ ಕರ್ಮಫಲಗಳನ್ನೂ, ಅವರ ಭೋಗಕ್ಕೋಸ್ಕರ ಚಿತಿಯ ಮೂಲಕ ಒದಗಿಸುವುದರಿಂದ ಇದಕ್ಕೆ ಚಿತಿ, ಎಂದು ಹೆಸರು ಬಂದಿದೆ. ಪರಮೇಶ್ವರನು ಈಗಿನ, ಹಿಂದಿನ, ಮತ್ತು ಮುಂದಿನ, ಎಲ್ಲಾ ಕೆಲಸಗಳನ್ನೂ ಜ್ಞಾಪಕ ಶಕ್ತಿಯಿಂದ ತಿಳಿಯುವುದರಿಂದ ಈ ಶಕ್ತಿಗೆ ಸ್ಮೃತಿ, ಎಂದು ಹೆಸರು ಬಂದಿದೆ. ಜೀವರು ಎಲ್ಲಾ ವಿಧವಾದ ತಿಳವಳಿಕೆಯನ್ನೂ ಜ್ಞಾನದ ಮೂಲಕ ಹೊಂದುವುದರಿಂದ ಇದಕ್ಕೆ ಸಂವಿತ್, ಎಂದು ಹೆಸರು ಬಂದಿದೆ.

೨೫—೨೬. ಎಲೈ ಋಷಿಶ್ರೇಷ್ಠರೇ, ಎಲ್ಲಾ ಕಡೆಯಲ್ಲಿರುವುದರಿಂದಲೂ, ಎಲ್ಲಾ ಪದಾರ್ಥಗಳ ತಿಳವಳಿಕೆಯು ಇದರ ಮೂಲಕವೇ ಆಗುವುದರಿಂದಲೂ, ಜ್ಞಾನಕ್ಕೆ ಸಂವಿತ್, ಎಂದು ಹೆಸರು ಬಂದಿದೆ. ಜ್ಞಾನ, ಎಂಬ ಶಬ್ದವು "ಜ್ಞಾ" ಎಂಬ ಧಾತುವಿನಿಂದ ಹುಟ್ಟಿದುದು ಭಗವಂತನು ಜ್ಞಾನಸ್ವರೂಪನು. ಪ್ರಪಂಚ ರೂಪವಾದ ಕಟ್ಟನ್ನು ಬಿಡಿಸುವ ಸಾಮರ್ಥ್ಯವಿರುವುದರಿಂದಲೇ ಭಗವಂತನಿಗೆ ಈಶ್ವರನೆಂದು ಹೆಸರು ಬಂದಿದೆ.

ಪರ್ಯಾಯ ವಾಚಕೈಃ ಶಬ್ದೈ ಸ್ತತ್ತ್ವಮಾದ್ಯ ಮನುತ್ತಮಂ ।
ವ್ಯಾಖ್ಯಾತಂ ತತ್ವಭಾವಜ್ಞೈ ರ್ದೇವ ಸದ್ಭಾವ ಚಿಂತಕೈಃ ॥೨೭॥
ಮಹಾನ್ಸೃಷ್ಟಿಂ ವಿಕುರುತೇ ಚೋದ್ಯಮಾನಃ ಸಿಸೃಕ್ಷಯಾ ।
ಸಂಕಲ್ಪೋಽಧ್ಯವಸಾಯಶ್ಚ ತಸ್ಯ ವೃತ್ತಿದ್ವಯಂ ಸ್ಮೃತಂ ॥೨೮॥
ತ್ರಿಗುಣಾ ದ್ರಜಸೋದ್ರಿಕ್ತಾ ದಹಂಕಾರ ಸ್ತತೋಽಭವತ್ ।
ಮಹತಾ ಚ ವೃತಃ ಸರ್ಗೋ ಭೂತಾದಿ ರ್ಬಾಹ್ಯತಸ್ತು ಸಃ ॥೨೯॥
ತಸ್ಮಾದೇವ ತಮೋದ್ರಿಕ್ತಾ ದಹಂಕಾರಾದ ಜಾಯತ ।
ಭೂತ ತನ್ಮಾತ್ರ ಸರ್ಗಸ್ತು ಭೂತಾದಿಸ್ತಾ ಮಸಸ್ತು ಸಃ ॥೩೦॥

---

೨೭–೨೮. ದೇವರ ಇರುವಿಕೆಯನ್ನು ಸ್ಥಿರಪಡಿಸುವ ತತ್ತ್ವಜ್ಞಾನಿಗಳಿಂದ ಅತಿ ಶ್ರೇಷ್ಠವಾದ ಆತ್ಮತತ್ತ್ವವು ಅದರ ಸ್ವರೂಪವನ್ನು ತಿಳಿಸುವ ಬೇರೆ ಬೇರೆ ಪದಗಳಿಂದ ವಿವರಿಸಲ್ಪಡುತ್ತದೆ. ಪರಮೇಶ್ವರನು ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ಪ್ರೇರಿಸಲ್ಪಟ್ಟವನಾಗಿ ದೊಡ್ಡದಾದ ಸೃಷ್ಟಿಯನ್ನು ವಿಸ್ತಾರವಾಗಿ ಮಾಡುತ್ತಾನೆ. ಈ ಸಮಯದಲ್ಲಿ ಅವನ ಮನಸ್ಸಿನಲ್ಲಿ ಸೃಷ್ಟಿಮಾಡಬೇಕೆಂಬ ಸಂಕಲ್ಪವೂ, ಅದಕ್ಕೆ ಬೇಕಾದ ಮನೋನಿಶ್ಚಯವೂ, ಎಂಬ ಎರಡು ವಿಧವಾದ ಮನಸ್ಸಿನ ವ್ಯಾಪಾರವೂ, ಪ್ರಾಣಿ ಕರ್ಮಾನುಸಾರವಾಗಿ ಉಂಟಾಗುತ್ತದೆಯೆಂದು ತಿಳಿಯಬೇಕು.

೨೯–೩೦. ಸತ್ವರಜಸ್ತಮೋಗುಣಗಳಲ್ಲಿ ರಜೋಗುಣವು ಹೆಚ್ಚಿದಾಗ ಅಹಂಕಾರದ ಸೃಷ್ಟಿಯಾಯಿತು. ಮಹತ್ತಾದ ಪ್ರಕೃತಿಯಿಂದ ಪಂಚಭೂತವೇ ಮೊದಲಾದ ಬಾಹ್ಯ ಸೃಷ್ಟಿಯಾಯಿತು. ಅವೇ ಈ ಗುಣಗಳ ಪೈಕಿ ತಮೋಗುಣವು ಹೆಚ್ಚಿದಾಗ ಅದರ ಸಂಬಂಧವನ್ನು ಅಹಂಕಾರವು ಹೊಂದಿ ಪಂಚಭೂತಗಳೂ ಮತ್ತು ತನ್ಮಾತ್ರಗಳೆಂಬ ಜಗತ್ತಿಗೆ ಮೂಲಭೂತವಾದ ತತ್ವಗಳೂ ಸೃಷ್ಟಿಯಾದವು. ಆದ್ದರಿಂದಲೇ ಈ ಪಂಚಭೂತಗಳು ತಾಮಸ ಸೃಷ್ಟಿ, ಎಂದು ಕರೆಯಲ್ಪಡುತ್ತವೆ. ಪರಮೇಶ್ವರನು

**ಭೂತಾದಿಸ್ತು ವಿಕುರ್ವಾಣಃ ಶಬ್ದಮಾತ್ರಂ ಸಸರ್ಜ ಹ ।**
**ಜ್ಯೋತಿರುತ್ಪದ್ಯತೇ ವಾಯೋಸ್ತದ್ರೂಪಗುಣ ಮುಚ್ಯತೇ ॥೩೧॥**
**ಆಕಾಶಂ ಶಬ್ದಮಾತ್ರಂ ತು ಸ್ಪರ್ಶಮಾತ್ರಂ ಸಮಾವೃಣೋತ್ ।**
**ವಾಯುಶ್ಚಾಪಿ ವಿಕುರ್ವಾಣೋ ರೂಪಮಾತ್ರಂ ಸಸರ್ಜ ಹ ॥೩೨॥**
**ಜ್ಯೋತಿರುತ್ಪದ್ಯತೇ ವಾಯೋಸ್ತದ್ರೂಪಗುಣ ಮುಚ್ಯತೇ ।**
**ಸ್ಪರ್ಶಮಾತ್ರಸ್ತು ವೈ ವಾಯೂ ರೂಪಮಾತ್ರಂ ಸಮಾವೃಣೋತ್॥**
**ಜ್ಯೋತಿಶ್ಚಾಪಿ ವಿಕುರ್ವಾಣಂ ರಸಮಾತ್ರಂ ಸಸರ್ಜ ಹ ।**
**ಸಂಭವಂತಿ ತತೋ ಹ್ಯಾಪಸ್ತಾ ವೈ ಸರ್ವ ರಸಾತ್ಮಿಕಾಃ ॥೩೪॥**
**ರಸಮಾತ್ರಾಸ್ತು ತಾ ಹ್ಯಾಪೋ ರೂಪಮಾತ್ರೋಽಗ್ನಿರಾವೃಣೋತ್।**
**ಆಪಶ್ಚಾಪಿ ವಿಕುರ್ವತ್ಯೋ ಗಂಧಮಾತ್ರಂ ಸಸರ್ಜಿರೇ ॥೩೫॥**

---

ಪಂಚಭೂತಗಳನ್ನು ವಿಸ್ತಾರಪಡಿಸುತ್ತಾ ಶಬ್ದ ತನ್ಮಾತ್ರವನ್ನು ಸೃಷ್ಟಿಮಾಡಿದನು. ಶಬ್ದಕ್ಕೆ ಕಾರಣವಾದ ಆಕಾಶ, ಎಂಬ ರಂಧ್ರ ಆವಕಾಶವನ್ನು ಸೃಷ್ಟಿಮಾಡಿದನು. ಕಾರಣಭೂತಗಳ ಗುಣಗಳೂ ಕಾರ್ಯಭೂತಗಳಲ್ಲಿರುತ್ತವೆ.

೩೨–೩೪. ಪರಮೇಶ್ವರನು ಆಕಾಶದಲ್ಲಿ ಶಬ್ದಮಾತ್ರವನ್ನು ತುಂಬಿದನು. ಮತ್ತು ಅವಾಕ್ಕಾದ ವಾಯುವಿನಲ್ಲಿ ಸ್ಪರ್ಶಗುಣವು ಮಾತ್ರ ಸೃಷ್ಟಿಸಲ್ಪಟ್ಟಿತು. ಹಾಗೆಯೇ ಅಗ್ನಿಯಲ್ಲಿ ರೂಪಗುಣವು ಮಾತ್ರ ಸೃಷ್ಟಿಸಲ್ಪಟ್ಟಿತು. ವಾಯುವಿನಿಂದ ಅಗ್ನಿಯು ಉತ್ಪನ್ನವಾಗುತ್ತದೆ. ಹೀಗೆ ಅಗ್ನಿಗೆ ರೂಪಗುಣವೂ, ವಾಯುವಿಗೆ ಸ್ಪರ್ಶಗುಣವೂ, ಇವೆಯೆಂದು ತಿಳಿಯಬೇಕು. ಪರಮೇಶ್ವರನು ನೀರಿನಲ್ಲಿ ರಸ, ಎಂಬ ಗುಣವನ್ನು ಮಾತ್ರ ಸೃಷ್ಟಿಸಿದನು. ಆದ್ದರಿಂದಲೇ ನೀರು ಎಲ್ಲ ರಸಗಳುಳ್ಳದ್ದಾಗಿದೆ. ಮತ್ತು ಅದು ಅಗ್ನಿಯಿಂದ ಹುಟ್ಟುತ್ತದೆ.

೩೫–೩೭. ನೀರು ರಸಗುಣವುಳ್ಳದ್ದಾಗಿಯೂ, ಅಗ್ನಿಯು ರೂಪಗುಣವುಳ್ಳದ್ದಾಗಿಯೂ, ಇವೆ. ಪರಮೇಶ್ವರನು ನೀರನ್ನು ಸೃಷ್ಟಿಮಾಡುತ್ತಾ ಆದರಿಂದ ಗಂಧ ತನ್ಮಾತ್ರವನ್ನೂ ಸೃಷ್ಟಿಸಿದನು. ಅದರಿಂದ ಜಲವು ವಾಸನೆಯನ್ನು ಕೊಡಲೂ ಕಾರಣವಾಗಿದೆ. ಹೀಗೆ ಪ್ರತಿಯೊಂದು

**ಸಂಘಾತೋ ಜಾಯತೇ ತಸ್ಮಾತ್ತಸ್ಯ ಗಂಧೋ ಗುಣೋ ಮತಃ ।**
**ತಸ್ಮಿಂಸ್ತಸ್ಮಿಂಶ್ಚ ತನ್ಮಾತ್ರಂ ತೇನ ತನ್ಮಾತ್ರತಾ ಸ್ಮೃತಾ ॥೩೬॥**
**ಅವಿಶೇಷ ವಾಚಕತ್ವಾ ದವಿಶೇಷಾ ಸ್ತತ ಸ್ತು ತೇ ।**
**ಪ್ರಶಾಂತ ಘೋರ ಮೂಢತ್ವಾ ದವಿಶೇಷಾ ಸ್ತತಃ ಪುನಃ ॥೩೭॥**
**ಭೂತ ತನ್ಮಾತ್ರ ಸರ್ಗೋಽಯಂ ವಿಜ್ಞೇಯಸ್ತು ಪರಸ್ಪರಂ ।**
**ವೈಕಾರಿಕಾ ದಹಂಕಾರಾ ತ್ಸತ್ತ್ವೋದ್ರಿಕ್ತಾತ್ತು ಸಾತ್ವಿಕಾತ್ ॥೩೮॥**
**ವೈಕಾರಿಕಃ ಸ ಸರ್ಗಸ್ತು ಯುಗಪ ತ್ಸಂಪ್ರವರ್ತತೇ ।**
**ಬುದ್ಧೀಂದ್ರಿಯಾಣಿ ಪಂಚೈವ ಪಂಚ ಕರ್ಮೇಂದ್ರಿಯಾಣಿ ಚ ॥೩೯॥**
**ಸಾಧಕಾನೀಂದ್ರಿಯಾಣಿ ಸ್ಯುಃ ದೇವಾ ವೈಕಾರಿಕಾ ದಶ ।**
**ಏಕಾದಶಂ ಮನಸ್ತತ್ರ ಸ್ವಗುಣೇನೋ ಭಯಾತ್ಮಕಂ ॥೪೦॥**

---

ಭೂತಗಳಲ್ಲಿಯೂ, ಇತರ ಭೂತಗಳ ಅಂಶಗಳೂ, ಪಂಚೀಕರಣ ಕ್ರಮ ದಿಂದ ಇವೆ ಯೆಂದು ತಿಳಿಯಬೇಕು. ಸಾಮಾನ್ಯವಾದ ಭಾವವನ್ನು ತಿಳಿಸುವ, "ಅವಿಶೇಷ" ಎಂಬ ಪದದಿಂದ ತಿಳಿಯಲ್ಪಡುವ, ಅವಿಶೇಷ ಅಥವಾ ಸಾಮಾನ್ಯ, ಎಂಬ ವಸ್ತುವೂ ಮತ್ತೊಂದುಂಟು. ಈ ವಸ್ತುವು ಶಾಂತವಾಗಿಯೂ, ಭಯಂಕರವಾಗಿಯೂ, ಜಡವಾಗಿಯೂ, ಪ್ರಪಂಚದಲ್ಲಿದೆ. ಇದು ಸತ್ವರಜಸ್ತಮೋ ರೂಪವಾದುದು,ಎಂದು ತಿಳಿಯಬೇಕು.

೩೮–೪೦. ಈ ರೀತಿಯಾಗಿ ಪಂಚಭೂತಗಳ ಮತ್ತು ಅದರ ತನ್ಮಾತ್ರಗಳ ಸೃಷ್ಟಿಯು ಒಂದಕ್ಕೊಂದು ಸೇರಿದಂತೆಯೇ ಆಗುತ್ತದೆ. ಸತ್ವ ಗುಣವು ಹೆಚ್ಚಿದುದರ ಫಲವಾಗಿ ಸಾತ್ವಿಕಗುಣವುಳ್ಳ ಅಹಂಕಾರದ ದೆಸೆಯಿಂದ ಪಂಚಭೂತ ವಿಕಾರವಾದ ಇಂದ್ರಿಯ ಸೃಷ್ಟಿಯು ಏಕಕಾಲದಲ್ಲಿ ಆಗುತ್ತದೆ. ಜ್ಞಾನೇಂದ್ರಿಯಗಳು ಐದು ಮತ್ತು ಕರ್ಮೇಂದ್ರಿಯಗಳು ಐದು ಇವೆ ಯೆಂದು ತಿಳಿಯಬೇಕು. ಪಂಚಭೂತ ವಿಕಾರವಾದ ಇಂದ್ರಿಯಗಳು ಹತ್ತೆಂದೂ, ಹನ್ನೊಂದನೆಯದಾದ ಮನಸ್ಸು ಎರಡು ವಿಧವಾದ ಗುಣವನ್ನು ಹೊಂದಿದೆಯೆಂದೂ ತಿಳಿಯಬೇಕು.

ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಂಚಮೀ ।
ಶಬ್ದಾದೀನಾ ಮವಾಪ್ತ್ಯರ್ಥಂ ಬುದ್ಧಿಯುಕ್ತಾನಿ ತಾನಿ ವೈ ॥೪೧॥
ಪಾದೌ ಪಾಯು ರುಪಸ್ಥಶ್ಚ ಹಸ್ತೌ ವಾಗ್ದಶಮೀ ಭವೇತ್ ।
ಗತಿ ರ್ವಿಸರ್ಗೋ ಹ್ಯಾನಂದಃ ಶಿಲ್ಪಂ ವಾಕ್ಯಂ ಚ ಕರ್ಮ ತತ್ ॥೪೨॥
ಆಕಾಶಂ ಶಬ್ದಮಾತ್ರಂ ಚ ಸ್ಪರ್ಶಮಾತ್ರಂ ಸಮಾವಿಶತ್ ।
ದ್ವಿಗುಣಸ್ತು ತತೋ ವಾಯುಃ ಶಬ್ದ ಸ್ಪರ್ಶಾತ್ಮಕೋಽಭವತ್ ॥೪೩॥
ರೂಪಂ ತಥೈವ ವಿಶತಃ ಶಬ್ದಸ್ಪರ್ಶ ಗುಣಾವುಭೌ ।
ತ್ರಿಗುಣಸ್ತು ತತಸ್ತ್ವಗ್ನಿಃ ಸ ಶಬ್ದಸ್ಪರ್ಶ ರೂಪವಾನ್ ॥೪೪॥
ಸ ಶಬ್ದ ಸ್ಪರ್ಶ ರೂಪಂಚ ರಸಮಾತ್ರಂ ಸಮಾವಿಶತ್ ।
ತಸ್ಮಾ ಚ್ಚತುರ್ಗುಣಾ ಆಪೋ ವಿಜ್ಞೇಯಾಸ್ತು ರಸಾತ್ಮಿಕಾಃ ॥೪೫॥

---

೪೧–೪೩. ಕಿವಿಗಳೂ, ಚರ್ಮವೂ, ಕಣ್ಣುಗಳೂ, ನಾಲಿಗೆಯೂ, ಮೂಗೂ, ಈ ಐದೂ ಶಬ್ದವೇ ಮುಂತಾದ್ದನ್ನು ಗ್ರಹಿಸುವುದಕ್ಕಾಗಿ ಜ್ಞಾನೇಂದ್ರಿಯಗಳಾಗಿವೆ. ಇವಲ್ಲದೇ ಕಾಲುಗಳೂ, ವಿಸರ್ಜನ, ಮತ್ತು ಜನನೇಂದ್ರಿಯ ಪ್ರದೇಶಗಳು, ಕೈಗಳು ಹತ್ತನೆಯದಾದ ನಾಲಿಗೆ, ಇವು ಕರ್ಮೇಂದ್ರಿಯಗಳಾಗಿವೆ. ಕರ್ಮೇಂದ್ರಿಯಗಳ ಕೆಲಸಗಳು ನಡಿಗೆ, ಮಲಗಳನ್ನು ವಿಸರ್ಜಿಸುವುದು, ಆನಂದ, ಸಕಾಶಿಯೇ ಮುಂತಾದ ಕೈ ಕೆಲಸಗಳು. ಮಾತನಾಡುವುದು, ಎಂದು ತಿಳಿಯಬೇಕು. ಆಕಾಶವು ಶಬ್ದಗುಣವುಳ್ಳದ್ದಾಗಿಯೂ, ವಾಯುವು ಸ್ವಾಭಾವಿಕವಾಗಿ ಸ್ಪರ್ಶಗುಣವುಳ್ಳದ್ದಾಗಿಯೂ, ಇವೆ. ಆದರೆ ವಾಯುವು ಕಾರಣ ಗುಣದೊಡನೆ ಶಬ್ದಸ್ಪರ್ಶ ಈ ಎರಡು ಗುಣಗಳುಳ್ಳದ್ದಾಗಿದೆ ಎಂದು ತಿಳಿಯಬೇಕು.

೪೪–೪೬. ಶಬ್ದ ಸ್ಪರ್ಶ ಗುಣಗಳೆರಡೂ ರೂಪದೊಂದಿಗೆ ಸೇರಿ ಅಗ್ನಿಯಲ್ಲಿ ಪ್ರವೇಶಿಸುತ್ತವೆ. ಆದ್ದರಿಂದ ಅಗ್ನಿಯು, ಶಬ್ದ, ಸ್ಪರ್ಶ, ರೂಪ, ಎಂಬ ಮೂರು ಗುಣಗಳುಳ್ಳದ್ದೆಂದು ತಿಳಿಯಬೇಕು. ಶಬ್ದ ಸ್ಪರ್ಶ ರೂಪಗಳು ರಸದೊಂದಿಗೆ ಸೇರಿ ಜಲದಲ್ಲಿರುತ್ತವೆ. ಆದ್ದರಿಂದ ನೀರು ಶಬ್ದ ಸ್ಪರ್ಶ, ರೂಪ, ರಸಗಳೆಂಬ ನಾಲ್ಕು ಗುಣಗಳುಳ್ಳದ್ದೆಂದು ತಿಳಿಯ

**ಶಬ್ದಸ್ಪರ್ಶಂ ಚ ರೂಪಂ ಚ ರಸೋ ವೈ ಗಂಧಮಾ ವಿಶತ್ ।**
**ಸಂಗತಾ ಗಂಧಮಾತ್ರೇಣ ಆ ವಿಶಂತೋ ಮಹೀಮಿಮಾಂ ॥೪೬॥**

**ತಸ್ಮಾತ್ಪಂಚ ಗುಣಾ ಭೂಮಿಃ ಸ್ಥೂಲಾ ಭೂತೇಷು ಶಸ್ಯತೇ ।**
**ಶಾಂತಾ ಘೋರಾಶ್ಚ ಮೂಢಾಶ್ಚ ವಿಶೇಷಾಸ್ತೇನ ತೇ ಸ್ಮೃತಾಃ ॥೪೭॥**

**ಪರಸ್ಪರಾನು ಪ್ರವೇಶಾದ್ಧಾರಯಂತಿ ಪರಸ್ಪರಂ ।**
**ಭೂಮೇ ರಂತಸ್ತ್ವಿದಂ ಸರ್ವಂ ಲೋಕಾಲೋಕಾಚಲಾವೃತಂ ॥**

**ವಿಶೇಷಾಶ್ಚೇಂದ್ರಿಯಗ್ರಾಹ್ಯಾ ನಿಯತತ್ವಾಚ್ಚ ತೇ ಸ್ಮೃತಾಃ ।**
**ಗುಣಂ ಪೂರ್ವಸ್ಯ ಸರ್ಗಸ್ಯ ಪ್ರಾಪ್ನುವಂತ್ಯುತ್ತರೋತ್ತರಾಃ ॥೪೯॥**

**ತೇಷಾಂ ಯಾವಚ್ಚ ತದ್ಯಚ್ಚ ಯಚ್ಚ ತಾವದ್ಗುಣಂ ಸ್ಮೃತಂ ।**
**ಉಪಲಭ್ಯಾಪ್ಸು ವೈ ಗಂಧಂ ಕೇಚಿ ದ್ಬ್ರೂಯು ರಪಾಂ ಗುಣಂ ॥೫೦॥**

---

ಬೇಕು. ಶಬ್ದಸ್ಪರ್ಶರೂಪ ರಸಗಳೆಲ್ಲವೂ ಗಂಧದೊಂದಿಗೆ ಸೇರಿ ಭೂಮಿಯಲ್ಲಿ, ಕಾಣುತ್ತವೆ. ಆದ್ದರಿಂದ ಭೂಮಿಯು ಶಬ್ದ ಸ್ಪರ್ಶರೂಪ ರಸ ಗಂಧಗಳೆಂಬ ಐದು ಗುಣಗಳನ್ನೂ ಒಳಗೊಂಡಿದೆ ಎಂದು ತಿಳಿಯಬೇಕು.

೪೭–೪೯. ಆದ್ದರಿಂದ ಐದು ಗುಣಗಳಿಂದ ಕೂಡಿರುವ ಭೂಮಿಯು ಇಂದ್ರಿಯಗಳಿಗೆ ಗೋಚರವಾಗಿಯೂ, ಪಂಚಭೂತಗಳಲ್ಲಿ ವಿಶೇಷ ಪ್ರಶಸ್ತಿಗೆ ಪಾತ್ರವಾಗಿದೆ. ವಿಶೇಷಗಳೆಂಬ ವಸ್ತುಗಳು ಶಾಂತವಾಗಿಯೂ ಘೋರವಾಗಿಯೂ, ಜಡವಾಗಿಯೂ, ಇವೆಯೆಂದು ತಿಳಿಯಬೇಕು. ಪ್ರತಿಯೊಂದು ಭೂತದ ವಿಶೇಷಗಳು ಮತ್ತೊಂದರೊಂದಿಗೆ ಬೆರೆಯುತ್ತವೆ. ಭೂಮಿಯಲ್ಲಿ ಅಡಗಿರುವ ಪರ್ವತವೇ ಮೊದಲಾದ ಸಕಲ ವಸ್ತುಗಳನ್ನೂ ಈ ವಿಶೇಷಗಳು ಪರಸ್ಪರ ಸೇರಿಕೊಂಡು ಧಾರಣಮಾಡಿರುತ್ತವೆ. ಈ ವಿಶೇಷಗಳು ಇಂದ್ರಿಯಗಳಿಗೆ ಗೋಚರವಾದವೂ, ಒಂದು ನಿಯಮಕ್ಕೆ ಒಳಪಟ್ಟವೂ, ಆಗಿವೆ ಎಂದು ತಿಳಿಯಬೇಕು. ಕಾರಣಭೂತಗಳ ಗುಣಗಳನ್ನೂ ಕಾರ್ಯಭೂತಗಳು ಹೊಂದುತ್ತಾ ಇರುತ್ತವೆ.

೫೦–೫೨. ಯಾವ ಯಾವ ಭೂತಗಳಿಗೆ ಎಷ್ಟೆಷ್ಟು ಗುಣಗಳನ್ನು ಹೇಳಿದೆವೋ ಅವು ಅಷ್ಟಷ್ಟೇ ಗುಣಗಳುಳ್ಳದ್ದೆಂದು ತಿಳಿಯಬೇಕು.

ಪೃಥಿವ್ಯಾಮೇವ ತಂ ವಿದ್ಯಾದಪಾಂ ವಾಯೋಶ್ಚ ಸಂಶ್ರಯಾತ್ ।
ಏತೇ ಸಪ್ತ ಮಹಾತ್ಮಾನೋ ಹ್ಯನ್ಯೋನ್ಯಸ್ಯ ಸಮಾಶ್ರಯಾತ್ ॥೫೧॥

ಪುರುಷಾಧಿಷ್ಠಿ ತತ್ವಾಚ್ಚ ಅವ್ಯಕ್ತಾನುಗ್ರಹೇಣ ಚ ।
ಮಹಾದಯೋ ವಿಶೇಷಾಂತಾ ಹ್ಯಂಡ ಮುತ್ಪಾದಯಂತಿ ತೇ ॥೫೨॥

ಏಕಕಾಲ ಸಮುತ್ಪನ್ನಂ ಜಲ ಬುದ್ಬುದ ವಚ್ಚ ತತ್ ।
ವಿಶೇಷೇಭ್ಯೋಽಂಡ ಮಭವನ್ಮಹತ್ತ ದುದ ಕೇ ಶಯಂ ॥೫೩॥

ಅದ್ಭಿ ರ್ದಶ ಗುಣಾಭಿಸ್ತು ಬಾಹ್ಯತೋಽಂಡಂ ಸಮಾವೃತಂ ।
ಆಪೋ ದಶಗುಣೇ ನ್ಯೈತಾ ಸ್ತೇಜಸಾ ಬಾಹ್ಯತೋ ವೃತಾಃ ॥೫೪॥

ತೇಜೋ ದಶಗುಣೇ ನ್ಯೈವ ವಾಯುನಾ ಬಾಹ್ಯತೋ ವೃತಂ ।
ವಾಯು ರ್ದಶಗುಣೇ ನ್ಯೈವ ಬಾಹ್ಯತೋ ನಭಸಾ ವೃತಃ ॥೫೫॥

---

ಕೆಲವರು ನೀರಿನಲ್ಲಿ ಗಂಧವೆಂಬ ಗುಣವನ್ನು ಕಂಡು ನೀರು ಗಂಧ ಗುಣವುಳ್ಳದ್ದೆಂದು ಹೇಳುವರು. ಆದರೆ ಗಂಧವು ಭೂಮಿಯ ಗುಣವೇ ವಿನಾ ನೀರಿನ ಗುಣವಲ್ಲ. ನೀರಿನಲ್ಲಿ ಗಂಧಗುಣ ಕಾಣಲು ವಾಯುವಿನ, ಮತ್ತು ಭೂಮಿಯಸಂಬಂಧವೇ ಕಾರಣವೆಂದು ತಿಳಿಯಬೇಕು. ಈ ಏಳು ಬಗೆಯ ಮಹತ್ತತ್ವದಿಂದ ಅಹಂಕಾರ, ವಿಶೇಷಾಂತವಾದ ಜಗತ್ತಿಗೆ ಮೂಲಭೂತವಾದ ತತ್ವಗಳು ಪರಸ್ಪರ ಸೇರಿ ಪುರುಷನ ಆಶ್ರಯದಲ್ಲಿ ಅವನ ಇಂದ್ರಿಯಾಗೋಚರವಾದ ಸ್ವಭಾವದ ಪ್ರಭಾವದಿಂದ ಬ್ರಹ್ಮಾಂಡವನ್ನು ಸೃಷ್ಟಿಮಾಡುತ್ತವೆ.

೫೩–೫೫. ವಿಶೇಷಗಳೆಂಬ ತತ್ವಗಳಿಂದ ಒಂದೇ ಕಾಲದಲ್ಲಿ ನೀರಿನ ಮೇಲಿನ ಗುಳ್ಳೆಯಂತೆ ನೀರಿನ ಮೇಲಿರುವ ದೊಡ್ಡದಾದ ಬ್ರಹ್ಮಾಂಡವು ಉತ್ಪನ್ನವಾಯಿತು. ಹತ್ತರಷ್ಟು ಹೆಚ್ಚಿದ ನೀರಿನಿಂದ ಬ್ರಹ್ಮಾಂಡವೆಲ್ಲವೂ ಹೊರಭಾಗದ ನೀರಿನಿಂದ ವ್ಯಾಪಿಸಲ್ಪಟ್ಟಿದೆ. ನೀರಿಗಿಂತಲೂ ಹತ್ತರಷ್ಟು ಹೆಚ್ಚಾದ ಅಗ್ನಿಯಿಂದಲೂ, ಬ್ರಹ್ಮಾಂಡವು ಹೊರಗಡೆಯಲ್ಲಿ ವ್ಯಾಪಿಸಲ್ಪಟ್ಟಿದೆ. ಅಗ್ನಿಗಿಂತಲೂ ಹತ್ತರಷ್ಟು ಹೆಚ್ಚಾದ ವಾಯುವಿನಿಂದ ಬ್ರಹ್ಮಾಂಡವು ಹೊರಗಡೆಯಲ್ಲಿ ಸುತ್ತುವರಿಯಲ್ಪಟ್ಟಿದೆ. ವಾಯುವಿಗಿಂತಲೂ ಹತ್ತರಷ್ಟು ಹೆಚ್ಚಾದ ಆಕಾಶದಿಂದಲೂ ಬ್ರಹ್ಮಾಂಡವು ಹೊರಗಡೆಯಲ್ಲಿ ಆವರಿಸಲ್ಪಟ್ಟಿದೆ.

**ಆಕಾಶೇ ನಾವೃತೋ ವಾಯುಃ ಖಂ ತು ಭೂತಾದಿನಾಽಽ ವೃತಂ ।**
**ಭೂತಾದಿ ರ್ಮಹತಾ ಚಾಪಿ ಅವ್ಯಕ್ತೇನಾ ವೃತೋ ಮಹಾನ್ ॥೫೬॥**

**ಶರ್ವಶ್ಚಾಂಡ ಕಪಾಲಸ್ಥೋ ಭವಶ್ಚಾಂಭಸಿ ಸುವ್ರತಾಃ ।**
**ರುದ್ರೋಽಗ್ನಿ ಮಧ್ಯೇ ಭಗವಾನುಗ್ರೋ ವಾಯೌ ಪುನಃ ಸ್ಮೃತಃ ॥**

**ಭೀಮಶ್ಚಾವನಿ ಮಧ್ಯಸ್ಥೋಽಹ್ಯ ಹಂಕಾರೇ ಮಹೇಶ್ವರಃ ।**
**ಬುದ್ಧೌ ಚ ಭಗವಾನೀಶಃ ಸರ್ವತಃ ಪರಮೇಶ್ವರಃ ॥೫೮॥**

**ಏತೈ ರಾವರಣೈ ರಂಡಂ ಸಪ್ತಭಿಃ ಪ್ರಾಕೃತೈರ್ವೃತಂ ।**
**ಏತಾ ಆವೃತ್ಯ ಚಾನ್ಯೋಽನ್ಯ ಮಷ್ಟೌ ಪ್ರಕೃತಯಃ ಸ್ಥಿತಾಃ ॥೫೯॥**

**ಪ್ರಸರ್ಗಕಾಲೇ ಸ್ಥಿತ್ವಾ ತು ಗ್ರಸಂತ್ಯೇತಾಃ ಪರಸ್ಪರಂ ।**
**ಏವಂ ಪರಸ್ಪರೋತ್ಪನ್ನಾ ಧಾರಯಂತಿ ಪರಸ್ಪರಂ ॥೬೦॥**

---

೫೬–೫೮. ವಾಯುವು ಆಕಾಶದಿಂದ ಆವರಿಸಲ್ಪಟ್ಟಿದೆ. ಆಕಾಶವು ಪಂಚಭೂತವೇ ಮೊದಲಾದುದರಿಂದ ತುಂಬಲ್ಪಟ್ಟಿದೆ. ಪಂಚ ಭೂತಗಳು ಮಹತ್ತಾದ ಪ್ರಕೃತಿಯಿಂದಲೂ, ಅವ್ಯಕ್ತನಾದ ಪರಮೇಶ್ವರನಿಂದ ಮಹತ್ತಾದ ಪ್ರಕೃತಿಯೂ, ಕ್ರಮವಾಗಿ ಆವರಿಸಲ್ಪಟ್ಟಿದೆ. ಎಲೈ ಋಷಿ ಶ್ರೇಷ್ಠರೇ, ಬ್ರಹ್ಮಾಂಡ ಕಪಾಲದಲ್ಲಿ ಶಂಕರನಾದ ಶಿವನು ಇರುವನು. ಅಗ್ನಿಯ ಮಧ್ಯದಲ್ಲಿ ರುದ್ರನೂ, ಭಗವಂತನಾದ ಉಗ್ರನೆಂಬ ಶಿವನು ನೀರಿನಲ್ಲಿಯೂ, ಕ್ರಮವಾಗಿರುವರು. ಭಯಂಕರನಾದ ಈಶನು ಭೂಮಿಯ ಮಧ್ಯದಲ್ಲಿಯೂ, ಅಹಂಕಾರದಲ್ಲಿ ಮಹೇಶ್ವರನೂ, ಬುದ್ಧಿಯಲ್ಲಿ ಪೂಜ್ಯನಾದ ಈಶ್ವರನೂ, ಎಲ್ಲಾ ಕಡೆಯಲ್ಲಿಯೂ ಪರಮೇಶ್ವರನೂ ಇರುವರೆಂದು ತಿಳಿಯಬೇಕು.

೫೯–೬೧. ಇಂಥಾ ಪ್ರಕೃತಿ ಸಂಬಂಧವಾದ ಏಳು ಆವರಣಗಳಿಂದ ಬ್ರಹ್ಮಾಂಡವು ಆವರಿಸಲ್ಪಟ್ಟಿದೆ. ಇವನ್ನು ಎಂಟು ವಿಧವಾದ ಪ್ರಕೃತಿಗಳು ಪರಸ್ಪರವಾಗಿಯೂ, ಆವರಿಸಿಕೊಂಡಿವೆ. ಸೃಷ್ಟಿಕಾಲದಲ್ಲಿ ಅನ್ಯೋನ್ಯವಾಗಿ ಹುಟ್ಟಿದ ಇವುಗಳು ಒಂದಕ್ಕೊಂದು ಬೆರೆತು ಬ್ರಹ್ಮಾಂಡವನ್ನು ಧಾರಣ ಮಾಡುತ್ತವೆ. ಅನಂತರ ಪ್ರಳಯ ಕಾಲದಲ್ಲಿ ಒಂದನ್ನೊಂದು ನುಂಗುತ್ತವೆ. ಈ ವಿಕಾರ ಭೂತ

ಆಧಾರಾಧೇಯ ಭಾವೇನ ವಿಕಾರಾಸ್ತೇ ವಿಕಾರಿಷು ।
ಮಹೇಶ್ವರಃ ಪರೋಽವ್ಯಕ್ತಾದಂಡ ಮವ್ಯಕ್ತ ಸಂಭವಂ ॥೬೧॥
ಅಂಡಾಜ್ಜಜ್ಞೇ ಸ ಏವೇಶಃ ಪುರುಷೋಽರ್ಕ ಸಮಪ್ರಭಃ ।
ತಸ್ಮಿನ್ಕಾರ್ಯಸ್ಯ ಕರಣಂ ಸಂಸಿದ್ಧಂ ಸ್ವೇಚ್ಛಯೈವ ತು ॥೬೨॥
ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ ।
ತಸ್ಯ ವಾಮಾಂಗಜೋ ವಿಷ್ಣುಃ ಸರ್ವದೇವ ನಮಸ್ಕೃತಃ ॥೬೩॥
ಲಕ್ಷ್ಮ್ಯಾಃ ದೇವ್ಯಾ ಹ್ಯಭೂದ್ದೇವ ಇಚ್ಛಯಾ ಪರಮೇಷ್ಠಿನಃ ।
ದಕ್ಷಿಣಾಂಗ ಭವೋ ಬ್ರಹ್ಮಾ ಸರಸ್ವತ್ಯಾ ಜಗದ್ಗುರುಃ ॥೬೪॥
ತಸ್ಮಿನ್ನಂಡೇ ಇಮೇ ಲೋಕಾ ಅಂತರ್ವಿಶ್ವಮಿದಂ ಜಗತ್ ।
ಚಂದ್ರಾದಿತ್ಯಾ ಸ ನಕ್ಷತ್ರಾ ಸಗ್ರಹಾ ಸಹ ವಾಯುನಾ ॥೬೫॥

---

ವಾದ ಜಗತ್ತಿಗೂ, ವಿಕಾರಕ್ಕೆ ಆಶ್ರಯಗಳಾದ ಈ ಭೂತಗಳಿಗೂ, ಆಧಾರಾಧೇಯಭಾವವೆಂಬ ಸಂಬಂಧವಿದೆ ಎಂದು ತಿಳಿಯಬೇಕು. ಮಹೇಶ್ವರನು ಅವೆಲ್ಲಕ್ಕಿಂತಲೂ ಶ್ರೇಷ್ಠನು. ಅವ್ಯಕ್ತವಾದ ಅವನ ಅಧಿಷ್ಠಾನ ಸ್ವರೂಪದಿಂದಲೇ ಈ ಬ್ರಹ್ಮಾಂಡವು ಉತ್ಪನ್ನವಾಗಿದೆ.

೬೨-೬೪. ಸೂರ್ಯನಿಗೆ ಸಮನಾದ ತೇಜಸ್ಸುಳ್ಳ ಜಗನ್ನಾಯಕನಾದ ಶಿವನೇ ಪುರುಷನು. ಅವನು ತನ್ನ ಇಚ್ಛೆಯಿಂದಲೇ ಬ್ರಹ್ಮಾಂಡ ರೂಪದಿಂದ ಉತ್ಪನ್ನನಾದನು. ತನ್ನ ಇಚ್ಛೆಯಿಂದಲೇ ಅವನು ಈ ಪ್ರಪಂಚ ರೂಪವಾದ ಕಾರ್ಯಕ್ಕೆ ಕಾರಣನಾದನು. ಅವನೇ ಮೊದಲು ಶರೀರ ಧಾರಣೆ ಮಾಡಿದ ಮನುಷ್ಯನು. ಅವನಿಗೆ ಪ್ರಥಮ ಪುರುಷನೆಂದು ಹೆಸರು. ಅವನ ಎಡಭಾಗದಿಂದ ಎಲ್ಲ ದೇವತೆಗಳಿಗೂ ಪೂಜ್ಯನಾದ ವಿಷ್ಣುವು ಹುಟ್ಟಿದನು. ಬ್ರಹ್ಮನ ಇಚ್ಛೆಯಂತೆ ಲಕ್ಷ್ಮಿಗೆ ಪತಿಯಾಗಿ ನಾರಾಯಣನಾದನು. ಜಗತ್ತಿಗೆ ಗುರುವಾದ ಬ್ರಹ್ಮನು ನಾರಾಯಣನ ಬಲಭಾದಲ್ಲಿ ಹುಟ್ಟಿ ಸರಸ್ವತಿಗೆ ಪತಿಯಾದನು.

೬೫-೬೭. ಈ ಬ್ರಹ್ಮಾಂಡದ ಒಳಗಡೆಯಲ್ಲಿ ಈ ಲೋಕಗಳೆಲ್ಲವೂ, ಸಕಲ ಜಗತ್ತೂ, ಚಂದ್ರಸೂರ್ಯರೂ, ನಕ್ಷತ್ರಗಳೂ, ಗ್ರಹಗಳೂ, ವಾಯುವೂ, ಎಲ್ಲವೂ ಅಡಗಿವೆ. ಎಲ್ಲಾ ಲೋಕಗಳೂ, ಪರ್ವತಗಳೂ

**ಲೋಕಾ ಲೋಕದ್ವಯಂ ಕಿಂಚಿದಂಡೇ ಹ್ಯಸ್ಮಿನ್ ಸಮರ್ಪಿತಂ ।**
**ಯತ್ತು ಸೃಷ್ಟೌ ಪ್ರಸಂಖ್ಯಾತಂ ಮಯಾ ಕಾಲಾಂತರಂ ದ್ವಿಜಾಃ ॥**
**ಏತತ್ಕಾಲಾಂತರಂ ಜ್ಞೇಯಮಹರ್ವೈ ಪಾರಮೇಶ್ವರಂ ।**
**ರಾತ್ರಿ ಶ್ಚೈತಾವತೀ ಜ್ಞೇಯಾ ಪರಮೇಶಸ್ಯ ಕೃತ್ಸ್ನಶಃ ॥೬೭॥**
**ಅಹಸ್ತಸ್ಯ ತು ಯಾ ಸೃಷ್ಟಿಃ ರಾತ್ರಿಶ್ಚ ಪ್ರಳಯಃ ಸ್ಮೃತಃ ।**
**ನಾಹಸ್ತು ವಿದ್ಯತೇ ತಸ್ಯ ನ ರಾತ್ರಿ ರಿತಿ ಧಾರಯೇತ್ ॥೬೮॥**
**ಉಪಚಾರಸ್ತು ಕ್ರಿಯತೇ ಲೋಕಾನಾಂ ಹಿತ ಕಾಮ್ಯಯಾ ।**
**ಇಂದ್ರಿಯಾಣೀಂದ್ರಿಯಾರ್ಥಾ ಶ್ಚ ಮಹಾಭೂತಾನಿ ಪಂಚ ಚ ॥೬೯॥**
**ತಸ್ಮಾತ್ಸರ್ವಾಣಿ ಭೂತಾನಿ ಬುದ್ಧಿಶ್ಚ ಸಹ ದೈವತೈಃ ।**
**ಅಹಸ್ತಿಷ್ಠಂತಿ ಸರ್ವಾಣಿ ಪರಮೇಶಸ್ಯ ಧೀಮತಃ ॥೭೦॥**

---

ಈ ಬ್ರಹ್ಮಾಂಡದಲ್ಲೇ ಅಡಗಿವೆ. ಎಲೈ ಬ್ರಾಹ್ಮಣರೇ, ಪರಮೇಶ್ವರನ ಇಚ್ಛೆಯಂತೆ ಬೇರೆ ಕಾಲದಲ್ಲಿ ಸೃಷ್ಟಿ ಎಲ್ಲವೂ ಇದರಲ್ಲಿ ಅಡಗಿದೆ ಎಂದು ತಿಳಿಯಬೇಕು. ಇದು ಪರಮೇಶ್ವರನಿಗೆ ಸಂಬಂಧಪಟ್ಟ ಬೇರೆ ಕಾಲವಾದ ಹಗಲೆಂದು ತಿಳಿಯಬೇಕು. ರಾತ್ರಿಯೂ ಕೂಡ ಪರಮೇಶ್ವರನಿಗೆ ಪೂರ್ಣವಾಗಿ ಸಂಬಂಧಪಟ್ಟು ಇಷ್ಟೇ ದೀರ್ಘವಾಗಿದೆ ಎಂದು ತಿಳಿಯಿರಿ.

೬೮–೭೦. ಪರಮೇಶ್ವರನ ಸೃಷ್ಟಿಯ ಕಾಲವು ಹಗಲೆಂದೂ, ಪ್ರಳಯ ಕಾಲವು ರಾತ್ರಿ ಎಂದೂ ಹೇಳಲ್ಪಟ್ಟಿವೆ. ಆದರೆ ವಾಸ್ತವವಾಗಿ ಪರಮೇಶ್ವರನಿಗೆ ಹಗಲೂ ಇಲ್ಲ. ರಾತ್ರಿಯೂ ಇಲ್ಲ. ಲೋಕದ ಕ್ಷೇಮಕ್ಕಾಗಿ ಅವನಿಗೆ ಅಹೋರಾತ್ರಿಗಳು ಉಂಟೆಂದು ಕಲ್ಪಿಸಿದ್ದಾರೆ. ವ್ಯವಹಾರಕ್ಕೆ ಅನುಗುಣವಾಗಿ ಪರಮೇಶ್ವರನಿಗೆ ಸಂಬಂಧಪಟ್ಟ ಹಗಲಿನಲ್ಲಿ ಇಂದ್ರಿಯಗಳೂ, ಇಂದ್ರಿಯಗಳಿಂದ ಆಗಬೇಕಾದ ಪ್ರಯೋಜನಗಳೂ, ಪಂಚಮಹಾಭೂತಗಳೂ, ಅಭಿಮಾನಿ ದೇವತೆಗಳಿಂದ ಕೂಡಿದ ಸಕಲ ಭೂತಗಳೂ, ಬುದ್ಧಿಯೂ, ಎಲ್ಲವೂ ಇರುತ್ತವೆಯೆಂದು ತಿಳಿಯಬೇಕು.

ಅಹರಂತೇ ಪ್ರಲೀಯಂತೇ ರಾತ್ರ್ಯಂತೇ ವಿಶ್ವಸಂಭವಃ ।
ಸ್ವಾತ್ಮನ್ಯವಸ್ಥಿತೇ ವ್ಯಕ್ತೇ ವಿಕಾರೇ ಪ್ರತಿ ಸಂಹೃತೇ ॥೭೧॥
ಸಾಧರ್ಮ್ಯೇಣಾವ ತಿಷ್ಠೇತೇ ಪ್ರಧಾನಪುರುಷಾ ವುಭೌ ।
ತಮಃ ಸತ್ತ್ವ ರಜೋಪೇತೌ ಸಮತ್ವೇನ ವ್ಯವಸ್ಥಿತೌ ॥೭೨॥
ಅನುಪೃಕ್ತಾವ ಭೂತಾಂ ತಾ ವೋತ ಪ್ರೋತೌ ಪರಸ್ಪರಂ ।
ಗುಣಸಾಮ್ಯೇ ಲಯೋಜ್ಞೇಯೋ ವೈಷಮ್ಯೇ ಸೃಷ್ಟಿರುಚ್ಯತೇ ॥೭೩॥
ತಿಲೇ ಯಥಾ ಭವೇ ತ್ತೈಲಂ ಘೃತಂ ಪಯಸಿ ವಾ ಸ್ಥಿತಂ ।
ತಥಾ ತಮಸಿ ಸತ್ವೇ ಚ ರಜಸ್ಯನು ಸೃತಂ ಜಗತ್ ॥೭೪॥
ಉಪಾಸ್ಯ ರಜನೀಂ ಕೃತ್ಸ್ನಾಂ ಪರಾಂ ಮಾಹೇಶ್ವರೀಂ ತಥಾ ।
ಅಹ ರ್ಮುಖೇ ಪ್ರವೃತ್ತಶ್ಚ ಪರಃ ಪ್ರಕೃತಿ ಸಂಭವಃ ॥೭೫॥
ಕ್ಷೋಭಯಾಮಾಸ ಯೋಗೇನ ಪರೇಣ ಪರಮೇಶ್ವರಃ ।
ಪ್ರಧಾನಂ ಪುರುಷಂ ಚೈವ ಪ್ರವಿಶ್ಯ ಸ ಮಹೇಶ್ವರಃ ॥೭೬॥

---

೭೧-೭೩. ಜಗತ್ತು ಹಗಲು ಮುಗಿಯಲು ಪ್ರಳಯವನ್ನು ಹೊಂದು ವುದು. ಮತ್ತು ರಾತ್ರಿಮುಗಿಯಲು ಇದು ಪುನಃ ಸೃಷ್ಟಿಯಾಗುವುದು. ಪುರುಷನೂ ಮತ್ತು ಪ್ರಕೃತಿಗಳೆರಡೂ, ತಮ್ಮಿಂದ ವ್ಯಕ್ತವಾದ ಪ್ರಪಂಚ ಪರಿಣಾಮವು ಮುಗಿಯಲು ಸತ್ವ ರಜಸ್ತಮೋಗುಣಗಳ ಹದಪ್ರಮಾಣ ದಲ್ಲಿ ತನ್ನ ಸ್ವರೂಪದಲ್ಲಿ ನಿಲ್ಲುತ್ತಾರೆ. ಸತ್ವ ರಜಸ್ತಮೋಗುಣಗಳು ಹಾಸುಹೊಕ್ಕಿನ ಹಾಗೆ ಜಗತ್ತಿನಲ್ಲಿ ಬೆರೆತು ಹೆಚ್ಚು ಕಮ್ಮಿ ಪ್ರಮಾಣದಲ್ಲಿ ರುವಾಗ ಸೃಷ್ಟಿಯೂ, ಸಮಪ್ರಮಾಣದಲ್ಲಿರುವಾಗ ಪ್ರಳಯವೂ ಆಗು ವುದೆಂದು ತಿಳಿಯಬೇಕು.

೭೪-೭೬. ಎಳ್ಳುಗಳಲ್ಲಿ ಎಣ್ಣೆಯಂತೆಯೂ, ಹಾಲಿನಲ್ಲಿ ತುಪ್ಪ ದಂತೆಯೂ, ಸತ್ವರಜಸ್ತಮೋಗುಣಗಳಲ್ಲಿ ಜಗತ್ತು ಇದೆಯೆಂದು ತಿಳಿಯ ಬೇಕು. ಪರಮೇಶ್ವರನು ರಾತ್ರಿಯೆಲ್ಲವೂ ಶ್ರೇಷ್ಠವಾದ ತನ್ನ ಶಕ್ತಿ ಯನ್ನು ಅನುಸಂಧಾನ ಮಾಡಿ ಹಗಲಲ್ಲಿ ಉತ್ಕೃಷ್ಟವಾದ ಯೋಗದ ಮಹಿಮೆಯಿಂದ, ಪ್ರಕೃತಿಯನ್ನೂ, ಪುರುಷನನ್ನೂ ಒಳಹೊಕ್ಕು, ಅವು ಗಳು ಚಲಿಸುವಂತೆ ಮಾಡಿದನು. ಆದ್ದರಿಂದ ಪ್ರಕೃತಿಯ ಪರಿಣಾಮ ವಾದ ಜಗತ್ತಿನ ಸೃಷ್ಟಿಯಾಯಿತೆಂದು ಹೇಳಲ್ಪಟ್ಟಿದೆ.

ಮಹೇಶ್ವರಾ ತ್ರಯೋ ದೇವಾ ಜಜ್ಞಿರೇ ಜಗದೀಶ್ವರಾತ್ ।
ಶಾಶ್ವತಾಃ ಪರಮಾ ಗುಹ್ಯಾಃ ಸರ್ವಾತ್ಮಾನಃ ಶರೀರಿಣಃ ॥೭೭॥

ಏತ ಏವ ತ್ರಯೋ ದೇವಾ ಏತ ಏವ ತ್ರಯೋ ಗುಣಾಃ ।
ಏತ ಏವ ತ್ರಯೋ ಲೋಕಾ ಏತ ಏವ ತ್ರಯೋಽಗ್ನಯಃ ॥೭೮॥

ಪರಸ್ಪರಾಶ್ರಿತಾ ಹ್ಯೇತೇ ಪರಸ್ಪರ ಮನುವ್ರತಾಃ ।
ಪರಸ್ಪರೇಣ ವರ್ತಂತೇ ಧಾರಯಂತಿ ಪರಸ್ಪರಂ ॥೭೯॥

ಅನ್ಯೋನ್ಯ ಮಿಥುನಾ ಹ್ಯೇತೇ ಅನ್ಯೋನ್ಯ ಮುಪಜೀವಿನಃ ।
ಕ್ಷಣಂ ವಿಯೋಗೋ ನ ಹ್ಯೇಷಾಂ ನ ತ್ಯಜಂತಿ ಪರಸ್ಪರಂ ॥೮೦॥

ಈಶ್ವರಸ್ತು ಪರೋ ದೇವೋ ವಿಷ್ಣುಶ್ಚ ಮಹತಃ ಪರಃ ।
ಬ್ರಹ್ಮಾ ಚ ರಜಸಾ ಯುಕ್ತಃ ಸರ್ಗಾದೌ ಹಿ ಪ್ರವರ್ತತೇ ॥೮೧॥
ಪರಃ ಸ ಪುರುಷೋ ಜ್ಞೇಯಃ ಪ್ರಕೃತಿಃ ಸಾ ಪರಾ ಸ್ಮೃತಾ ॥೮೨॥

---

೭೭–೭೯. ಜಗತ್ತಿಗೆ ಅಧಿಪತಿಯಾದ ಪರಮೇಶ್ವರನಿಂದ ನಿತ್ಯರೂ, ಶ್ರೇಷ್ಠರೂ, ರಹಸ್ಯವಾದವರೂ, ಸರ್ವಪದಾರ್ಥಗಳಿಗೂ ಆತ್ಮಸ್ವರೂಪರಾದವರೂ,ಶರೀರಧಾರಿಗಳೂ ಆದ ಮೂರುದೇವತೆಗಳು ಸೃಷ್ಟಿಮಾಡಲ್ಪಟ್ಟರು. ಇವರೇ ತ್ರಿಮೂರ್ತಿ ದೇವತೆಗಳು. ಸತ್ವ,ರಜಸ್ಸು, ತಮಸ್ಸು,ಇವೇ ಮೂರು ಗುಣಗಳು. ಇವೇ ಮೂರು ಲೋಕಗಳು. ಇವೇ ಮೂರು ಅಗ್ನಿಗಳು. ಇವು ಅನ್ಯೋನ್ಯವಾಗಿ ಸೇರಿಕೊಂಡು ಸಹಾಯಕವಾಗಿ ಇರುತ್ತವೆ. ಯಾವಾಗಲೂ ಇವು ಜೊತೆಯಲ್ಲೇ ಇರುತ್ತವೆ. ಮತ್ತು ಅನ್ಯೋನ್ಯವಾಗಿ ಒತ್ತಾಸೆಯಿಂದ ಜಗತ್ತನ್ನು ಧಾರಣೆಮಾಡುತ್ತವೆ.

೮೦–೮೨. ಇವು ಯಾವಾಗಲೂ ಪರಸ್ಪರ ಸೇರಿಕೊಂಡೇ ಇರುತ್ತವೆ, ಇವುಗಳು ಯಾವಾಗಲೂ ಪ್ರತ್ಯೇಕವಾಗಿರುವುದೇ ಇಲ್ಲ. ಈಶ್ವರನೇ ಎಲ್ಲರಿಗಿಂತಲೂ ಶ್ರೇಷ್ಠನಾದವನು. ವಿಷ್ಣುವು ಪ್ರಕೃತಿಗಿಂತಲೂ ಶ್ರೇಷ್ಠನಾದವನು. ಬ್ರಹ್ಮನು ರಜೋಗುಣದಿಂದ ಕೂಡಿದವನಾಗಿ ಪ್ರಪಂಚವನ್ನು ಸೃಷ್ಟಿಮಾಡುತ್ತಾನೆ. "ಪುರುಷನು" ಅತ್ಯಂತ ಶ್ರೇಷ್ಠನಾದವನೆಂದೂ, "ಪ್ರಕೃತಿಯೂ" ಸರ್ವಶ್ರೇಷ್ಠವಾದುದೆಂದೂ ತಿಳಿಯಬೇಕು.

ಅಧಿಷ್ಠಿತಾ ಸಾ ಹಿ ಮಹೇಶ್ವರೇಣ ।
ಪ್ರವರ್ತತೇ ಚೋದ್ಯ ಮಾನಂ ಸಮಂತಾತ್ ॥
ಅನುಪ್ರವೃತ್ತಸ್ತು ಮಹಾಂಸ್ತದೇನಾಂ ।
ಚಿರ ಸ್ಥಿರ ತ್ವಾದ್ವಿ ಷಯಂ ಶ್ರಿತಃ ಸ್ವಯಂ ॥೮೩॥

ಪ್ರಧಾನಗುಣ ವೈಷಮ್ಯಾ ತ್ಸರ್ಗಕಾಲಃ ಪ್ರವರ್ತತೇ ।
ಈಶ್ವರಾ ಧಿಷ್ಠಿತಾ ತ್ಪೂರ್ವಂ ತಸ್ಮಾತ್ಸದಸ ದಾತ್ಮಕಾತ್ ॥೮೪॥

ಸಂಸಿದ್ಧಃ ಕಾರ್ಯಕರಣೇ ರುದ್ರಶ್ಚಾಗ್ರೇ ಹ್ಯವರ್ತತ ।
ತೇಜಸಾಽ ಪ್ರತಿಮೋ ಧೀಮಾ ನವ್ಯಕ್ತಃ ಸಂಪ್ರಕಾಶಕಃ ॥೮೫॥

ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ ।
ಬ್ರಹ್ಮಾ ಚ ಭಗವಾಂ ಸ್ತಸ್ಮಾಚ್ಚತುರ್ವಕ್ತ್ರಃ ಪ್ರಜಾಪತಿಃ ॥೮೬॥

ಸಂಸಿದ್ಧಃ ಕಾರ್ಯ ಕರಣೇ ತಥಾ ವೈ ಸಮವರ್ತತ ।
ಏಕ ಏವ ಮಹಾದೇವ ಸ್ತ್ರಿಧೈವಂ ಸ ವ್ಯವಸ್ಥಿತಃ ॥೮೭॥

---

೮೩–೮೫. ಪ್ರಕೃತಿಯು ಮಹೇಶ್ವರನಿಂದ ಪ್ರೇರಿಸಲ್ಪಟ್ಟದ್ದಾಗಿ ಪ್ರಾಪಂಚಿಕ ವಿಷಯಗಳನ್ನು ಪುರುಷನ ಉಪಭೋಗಕ್ಕಾಗಿ ಸೃಷ್ಟಿಸುತ್ತದೆ. ಪ್ರಕೃತಿಯಲ್ಲಿ ಸತ್ವ ರಜಸ್ಸು, ತಮೋಗುಣಗಳು ಹೆಚ್ಚು ಕಡಿಮೆ ಪ್ರಮಾಣ ಗಳಲ್ಲಿರುವಾಗ ಸೃಷ್ಟಿಯುಂಟಾಗುತ್ತದೆ. ಪ್ರಕೃತಿಯು ಕಾರಣವಾಗಿ ಇರು ವಿಕೆ, ಇಲ್ಲದೆ ಕಾರ್ಯರೂಪದಲ್ಲಿರುವಿಕೆ ಎಂಬೆರಡರ ಸ್ವರೂಪವನ್ನು ಹೊಂದಿ ಕಾರ್ಯವಾಗಿ ಈಶ್ವರನ ಆಶ್ರಯದಲ್ಲಿರುವಾಗ, ಅವನ ಇಚ್ಛಾಮಾತ್ರ ದಿಂದಲೇ ಸಕಲ ಸಾಧನ ಸಂಪತ್ತುಗಳೂ ಒದಗಿದುದರಿಂದ ಈ ಜಗತ್ತಿನ ಸೃಷ್ಟಿಯಾಯಿತು. ಸೃಷ್ಟಿಯ ಆದಿಯಲ್ಲಿ ರುದ್ರನು ಮಹಾ ತೇಜಸ್ವಿ ಯಾಗಿಯೂ, ಜ್ಞಾನ ಸ್ವರೂಪನಾಗಿಯೂ, ಇಂದ್ರಿಯಗಳಿಗೆ ಅಗೋಚರ ನಾಗಿಯೂ, ಪ್ರಕಾಶ ಸ್ವರೂಪನಾಗಿಯೂ, ರಾರಾಜಿಸುತ್ತಿದ್ದನು

೮೬–೮೮. ಅವನೇ ಮೊದಲು ಶರೀರಧಾರಿಯಾದ ಪುರುಷನೆಂದು ತಿಳಿಯಬೇಕು. ಅವನಿಂದ ನಾಲ್ಕು ಮುಖಗಳುಳ್ಳ, ಪೂಜ್ಯನಾದ, ಪ್ರಾಣಿ ಗಳನ್ನು ಸೃಜಿಸುವ ಬ್ರಹ್ಮನು ಉತ್ಪನ್ನನಾದನು. ತನ್ನ ಇಚ್ಛಾಮಾತ್ರ

ಅಪ್ರತೀಪೇನ ಜ್ಞಾನೇನ ಐಶ್ವರ್ಯೇಣ ಸಮನ್ವಿತಃ ।
ಧರ್ಮೇಣ ಚಾ ಪ್ರತೀಪೇಣ ವೈರಾಗ್ಯೇಣ ಚ ತೇಽನ್ವಿತಾಃ ॥೮೮॥
ಅವ್ಯಕ್ತಾತ್ ಜ್ಞಾಯತೇ ತೇಷಾಂ ಮನಸಾ ಯದ್ಯದೀಹಿತಂ ।
ವಶೀ ಕೃತತ್ವಾತ್ ತ್ರೈಗುಣ್ಯಂ ಸಾಪೇಕ್ಷತ್ವಾತ್ ಸ್ವಭಾವತಃ ॥೮೯॥
ಚತುರ್ಮುಖಸ್ತು ಬ್ರಹ್ಮತ್ವೇ ಕಾಲತ್ವೇ ಚಾಂತಕಃ ಸ್ಮೃತಃ ।
ಸಹಸ್ರ ಮೂರ್ಧಾ ಪುರುಷಸ್ತಿಸ್ರೋಽವಸ್ಥಾಃ ಸ್ವಯಂಭುವಃ ॥೯೦॥
ಬ್ರಹ್ಮತ್ವೇ ಸೃಜತೇ ಲೋಕಾ ನ್ಕಾಲತ್ವೇ ಸಂಕ್ಷಿಪತ್ಯಪಿ ।
ಪುರುಷತ್ವೇ ಹ್ಯುದಾಸೀನಸ್ತಿಸ್ರೋಽವಸ್ಥಾಃ ಪ್ರಜಾಪತೇಃ ॥೯೧॥

---

ದಿಂದಲೇ ಸಕಲ ಪ್ರಪಂಚವನ್ನು ಸೃಷ್ಟಿಮಾಡಲು ಬೇಕಾಗುವ ಸಾಧನ ಸಂಪತ್ತನ್ನು ಒದಗಿಸಿ ಕೊಳ್ಳಬಲ್ಲ ಈಶ್ವರನೊಬ್ಬನೇ ಹೀಗೆ ಮೂರುವಿಧ ವಾಗಿ ಕಾಣಿಸಿಕೊಂಡನು. ಇವನ ಜ್ಞಾನವು ಪ್ರತಿಬಂಧಕ ವಿಲ್ಲದುದು. ಐಶ್ವರ್ಯವು ಅಸಮಾನ ವಾದುದು. ಇವುಗಳು ತಡೆಯಿಲ್ಲದೇ ಇರುವ ಧರ್ಮದಿಂದಲೂ ವೈರಾಗ್ಯದಿಂದಲೂ ಕೂಡಿವೆ.

೮೯–೯೧. ಹೀಗೆ ಮೂರು ವಿಧವಾದ ಸ್ವರೂಪವನ್ನು ಹೊಂದಿದ ಪರ ಮೇಶ್ವರನು ಇಂದ್ರಿಯಾ ಗೋಚರವಾದ ಸ್ವರೂಪನೂ ಹೌದು. ಅವನು ಇಚ್ಛೆ ಮಾಡಿದುದೆಲ್ಲವೂ ನೆರವೇರುತ್ತದೆ. ಏಕೆಂದರೆ ಈಶ್ವರನಿಗೆ ಮೂರು ಗುಣಗಳೂ ಸ್ವಾಧೀನವಾಗಿವೆ. ಪ್ರಕೃತಿಯೂ ಅವನ ಇಚ್ಛೆಗೆ ಅನುಸಾರ ವಾಗಿಯೇ ನಡೆಯುತ್ತದೆ. ಚತುರ್ಮುಖನಾದ ಬ್ರಹ್ಮನು ಸೃಷ್ಟಿಕರ್ತನೂ, ಯಮನ ಸ್ವರೂಪವನ್ನು ಹೊಂದಿ ಜಗನ್ನಾಶಕನೂ, ಆಗಿರುತ್ತಾನೆ. ಈಶ್ವರನು ಸಾವಿರ ಶಿರಸ್ಸುಳ್ಳ ಪುರುಷನೂ ಆಗಿರುತ್ತಾನೆ. ಈ ರೀತಿಯಾಗಿ ಪರಮೇಶ್ವರನಿಗೆ ನಮ್ಮ ದೃಷ್ಟಿಯಿಂದ ಮೂರು ವಿಧವಾದ ಅವಸ್ಥೆಗಳಿವೆ ಯೆಂದು ತಿಳಿಯಬೇಕು. ಈಶ್ವರನು ಬ್ರಹ್ಮನ ಸ್ವರೂಪವನ್ನು ಹೊಂದಿ ಸೃಷ್ಟಿಮಾಡುತ್ತಲೂ, ಯಮನ ಸ್ವರೂಪವನ್ನು ಹೊಂದಿ ನಾಶಮಾಡು ತ್ತಲೂ, ಇರುತ್ತಾನೆ. ಈ ಪುರುಷಸ್ವರೂಪವನ್ನು ಹೊಂದಿ ಉದಾ ಸೀನನಾಗಿಯೂ ಇರುತ್ತಾನೆ. ಈ ರೀತಿಯಾಗಿ ಅವನಿಗೆ ಮೂರುವಿಧವಾದ ಅವಸ್ಥೆಗಳೆಂದು ತಿಳಿಯಬೇಕು.

ಬ್ರಹ್ಮಾ ಕಮಲ ಗರ್ಭಾಭೋ ರುದ್ರಃ ಕಾಲಾಗ್ನಿ ಸನ್ನಿಭಃ ।
ಪುರುಷಃ ಪುಂಡರೀಕಾಕ್ಷೋ ರೂಪಂ ತತ್ಪರಮಾತ್ಮನಃ ॥೯೨॥

ಏಕಧಾ ಸ ದ್ವಿಧಾ ಚೈವ ತ್ರಿಧಾ ಚ ಬಹುಧಾ ಪುನಃ ।
ಮಹೇಶ್ವರಃ ಶರೀರಾಣಿ ಕರೋತಿ ವಿಕರೋತಿ ಚ ॥೯೩॥

ನಾನಾ ಕೃತಿ ಕ್ರಿಯಾರೂಪನಾಮವಂತಿ ಸ್ವ ಲೀಲಯಾ ।
ಮಹೇಶ್ವರಃ ಶರೀರಾಣಿ ಕರೋತಿ ವಿಕರೋತಿ ಚ ॥೯೪॥

ತ್ರಿಧಾ ಯದ್ವರ್ತತೇ ಲೋಕೇ ತಸ್ಮಾತ್ತ್ರಿಗುಣ ಉಚ್ಯತೇ ।
ಚತುರ್ಧಾ ಪ್ರವಿಭಕ್ತತ್ವಾ ಚ್ಚತುರ್ವ್ಯೂಹಃ ಪ್ರಕೀರ್ತಿತಃ ॥೯೫॥

ಯದಾಪ್ನೋತಿ ಯದಾ ದತ್ತೇ ಯಚ್ಚಾತ್ತಿ ವಿಷಯಾನಯಂ ।
ಯಚ್ಚಾಸ್ಯ ಸತತೋ ಭಾವ ಸ್ತಸ್ಮಾದಾತ್ಮಾ ನಿರುಚ್ಯತೇ ॥೯೬॥

---

೯೨–೯೪. ಬ್ರಹ್ಮನು ಕಮಲದ ಒಳಭಾಗದಂತಿರುವನು. ರುದ್ರನು ಪ್ರಳಯ ಕಾಲದ ಅಗ್ನಿಯಂತಿರುವನು. ಪುರುಷನು ಕಮಲದಂತೆ ಕಣ್ಣುಳ್ಳ ವಿಷ್ಣುವಿನಂತಿರುವನು. ಇದೇ ಪರಮಾತ್ಮನ ಸ್ವರೂಪವೆಂದೂ, ಅದು ಒಂದಾಗಿಯೂ, ಎರಡಾಗಿಯೂ, ಮೂರಾಗಿಯೂ, ಅಷ್ಟೇಕೆ? ನಾನಾರೂಪವಾಗಿಯೂ, ಇರುವುದೆಂದು ಭಾವಿಸಬೇಕು. ಮಹೇಶ್ವರನೇ ಶರೀರಗಳನ್ನು ಸೃಷ್ಟಿಮಾಡುವವನೆಂದೂ, ಅದು ವಿಕಾರ ಹೊಂದುವಹಾಗೆ ಮಾಡುವವನೆಂದೂ ತಿಳಿಯಬೇಕು. ಈಶ್ವರನು ಲೀಲೆಯಿಂದಲೇ ಅನೇಕ ವಿಧವಾದ ಆಕಾರ, ಕ್ರಿಯೆ, ರೂಪಗಳುಳ್ಳ ಶರೀರಗಳನ್ನು ಸೃಷ್ಟಿಮಾಡುವವನೂ, ಅದನ್ನು ವಿಕಾರ ಗೊಳಿಸುವವನೂ ಆಗಿದ್ದಾನೆಂದು ತಿಳಿಯಬೇಕು.

೯೫–೯೬. ಗುಣಗಳು ಈ ಪ್ರಪಂಚದಲ್ಲಿ ಮೂರುವಿಧವಾಗಿರುವುದರಿಂದ ಅವಕ್ಕೆ "ತ್ರಿಗುಣ" ಎಂದು ಹೆಸರು ಬಂದಿದೆ. ಅವು ನಾಲ್ಕು ವಿಧವಾಗಿಯೂ ವಿಭಾಗವಾಗುವುದರಿಂದ "ಚತುರ್ವ್ಯೂಹ" ಎಂತಲೂ ಹೆಸರು ಬಂದಿದೆ. ಆತ್ಮನಿಗೆ ಆತ್ಮನೆಂದು ಹೆಸರು ಬರಲು ಕಾರಣವೇನೆಂದರೆ, ಅವನು ತನಗೋಸ್ಕರವೇ ಸಕಲ ಪದಾರ್ಥಗಳನ್ನೂ ಸಂಗ್ರಹಿಸ

ಋಷಿಃ ಸರ್ವಗತತ್ವಾಚ್ಚ ಶರೀರೀ ಸೋऽಸ್ಯ ಯತ್ಪ್ರಭುಃ ।
ಸ್ವಾಮಿತ್ವಮಸ್ಯ ಯತ್ಸರ್ವಂ ವಿಷ್ಣುಃ ಸರ್ವ ಪ್ರವೇಶನಾತ್ ॥೯೭॥
ಭಗವಾನ್ಭಗವದ್ಭಾವಾ ನ್ನಿರ್ಮಲತ್ವಾಚ್ಛಿವಃ ಸ್ಮೃತಃ ।
ಪರಮಃ ಸಂಪ್ರಕೃಷ್ಟತ್ವಾ ದವನಾದೋ ಮಿತಿ ಸ್ಮೃತಃ ॥೯೮॥
ಸರ್ವಜ್ಞಃ ಸರ್ವವಿಜ್ಞಾನಾ ತ್ಸರ್ವಃ ಸರ್ವಮಯೋ ಮತಃ ।
ತ್ರಿಧಾ ವಿಭಜ್ಯ ಚಾ ತ್ಮಾನಂ ತ್ರೈಲೋಕ್ಯೇ ಸಂಪ್ರವರ್ತತೇ ॥೯೯॥
ಸೃಜತೇ ಗ್ರಸತೇ ಚೈವ ರಕ್ಷತೇ ಚ ತ್ರಿಭಿಃ ಸ್ವಯಂ ।
ಆದಿತ್ವಾದಾದಿ ದೇವೋऽಸಾ ದಜಾತತ್ವಾದಜಃ ಸ್ಮೃತಃ ॥೧೦೦॥
ಪಾತಿ ಯಸ್ಮಾತ್ಪ್ರಜಾಃ ಸರ್ವಾಃ ಪ್ರಜಾಪತಿ ರಿತಿ ಸ್ಮೃತಃ ।
ದೇವೇಷು ಚ ಮಹಾನ್ದೇವೋ ಮಹಾದೇವ ಸ್ತತಃ ಸ್ಮೃತಃ ॥೧೦೧॥

---

ತಕ್ಕವನೂ, ಎಲ್ಲಾ ವಿಷಯಗಳನ್ನೂ ಭೋಗಿಸತಕ್ಕವನೂ, ಎಲ್ಲಾ ಭಾವ ವಸ್ತುಗಳಲ್ಲಿಯೂ, ಇರುವ ಸತ್ತೆಯು ಅವನದೇ ಆಗಿರುವುದೇ ಕಾರಣ ವೆಂದು ತಿಳಿಯಬೇಕು. ಎಲ್ಲಾ ಪದಾರ್ಥಗಳಲ್ಲಿಯೂ, ಇರುವುದರಿಂದ ಋಷಿಯೂ, ಶರೀರಕ್ಕೆ ಅಧಿಪತಿಯಾಗಿರುವುದರಿಂದ ಸ್ವಾಮಿಯೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವುದರಿಂದ ವಿಷ್ಣುವೂ, ಪರಮಾತ್ಮನೇ ಆಗಿರುವನೆಂದು ತಿಳಿಯಬೇಕು.

೯೮–೧೦೦. ಪರಮೇಶ್ವರನು ಪೂಜ್ಯಸ್ವರೂಪನಾದುದರಿಂದ ಭಗ ವಂತನೆಂದೂ, ಪವಿತ್ರನಾದುದರಿಂದ ಶಿವನೆಂದೂ, ಕರೆಯಲ್ಪಡುತ್ತಾನೆ. ಅವನು ಸರ್ವಶ್ರೇಷ್ಠನಾದುದರಿಂದ ಪರಮನೆಂದೂ, ರಕ್ಷಣೆ ಮಾಡು ವುದರಿಂದ ಓಂಕಾರ ಸ್ವರೂಪನೆಂದೂ, ಎಲ್ಲವನ್ನೂ ತಿಳಿದಿರುವುದರಿಂದ ಸರ್ವಜ್ಞನೆಂದೂ, ಎಲ್ಲಾ ಪದಾರ್ಥ ಸ್ವರೂಪವೂ ಆದುದರಿಂದ ಸರ್ವ ನೆಂದೂ, ಕರೆಯಲ್ಪಡುತ್ತಾನೆ. ತನ್ನ ಸ್ವರೂಪವನ್ನೇ ಬ್ರಹ್ಮ, ರುದ್ರ, ವಿಷ್ಣು, ಎಂದು ಮೂರು ವಿಧವಾಗಿ ವಿಂಗಡಿಸಿ ಮೂರು ಲೋಕವನ್ನೂ ಸೃಜಿಸುತ್ತಾನೆ. ಅವುಗಳ ನಾಶವನ್ನೂ ಮಾಡುತ್ತಾನೆ. ರಕ್ಷಿಸಿಯೂ ರಕ್ಷಿಸುತ್ತಾನೆ. ಎಲ್ಲಾ ಪದಾರ್ಥಗಳಿಗೂ ಆದಿ ಯಾದುದರಿಂದ ಅವನಿಗೆ ಆದಿ ದೇವನೆಂತಲೂ, ಹುಟ್ಟುವಿಕೆ ಇಲ್ಲದೇ ಇರುವುದರಿಂದ ಅಜ ನೆಂತಲೂ ಹೆಸರು ಬಂದಿದೆ.

೧೦೧. ಈಶ್ವರನಿಗೆ ಪ್ರಜಾರಕ್ಷಕನಾದ್ದರಿಂದ ಪ್ರಜಾಪತಿಯೆಂದೂ,

ಸರ್ವಗತ್ವಾಚ್ಚ ದೇವಾನಾಂ ಅವಶ್ಯತ್ವಾಚ್ಚ ಈಶ್ವರಃ ।
ಬೃಹತ್ವಾಚ್ಚ ಸ್ಮೃತೋ ಬ್ರಹ್ಮಾ ಭೂತತ್ವಾದ್ಭೂತ ಉಚ್ಯತೇ॥೧೦೨॥
ಕ್ಷೇತ್ರಜ್ಞಃ ಕ್ಷೇತ್ರವಿಜ್ಞಾನಾ ದೇಕತ್ವಾ ತ್ಕೇವಲಃ ಸ್ಮೃತಃ ।
ಯಸ್ಮಾ ತ್ಪುರ್ಯಾಂ ಸ ಶೇತೇ ಚ ತಸ್ಮಾತ್ಪುರುಷ ಉಚ್ಯತೇ ॥೧೦೩॥
ಅನಾದಿತ್ವಾಚ್ಚ ಪೂರ್ವತ್ವಾ ತ್ಸ್ವಯಂಭೂರಿತಿ ಸಂ ಸ್ಮೃತಃ ।
ಯಾಜ್ಯತ್ವಾ ದುಚ್ಯತೇ ಯಜ್ಞಃ ಕವಿ ರ್ವಿಕ್ರಾಂತ ದರ್ಶನಾತ್ ॥
ಕ್ರಮಣಃ ಕ್ರಮಣೇ ಯತ್ವಾ ತ್ಪಾಲಕಶ್ಚಾಪಿ ಪಾಲನಾತ್ ।
ಆದಿತ್ಯಸಂಜ್ಞಃ ಕಪಿಲೋ ಹ್ಯಗ್ರಜೋಽಗ್ನಿರಿತಿ ಸ್ಮೃತಃ ॥೧೦೫॥
ಹಿರಣ್ಯ ಮಸ್ಯ ಗರ್ಭೋಽಭೂ ದ್ಧಿರಣ್ಯಸ್ಯಾಪಿ ಗರ್ಭಜಃ ।
ತಸ್ಮಾದ್ಧಿರಣ್ಯ ಗರ್ಭತ್ವಂ ಪುರಾಣೇಽಸ್ಮಿನ್ನಿರುಚ್ಯತೇ ॥೧೦೬॥

---

ದೇವತೆಗಳಿಗೆಲ್ಲರಿಗೂ ಅಧಿ ದೇವತೆಯಾದ್ದರಿಂದ ಮಹಾದೇವನೆಂದೂ ಹೆಸರು ಬಂದಿದೆ.

೧೦೨–೧೦೪. ಈಶ್ವರನು ಎಲ್ಲಾ ಕಡೆಯಲ್ಲಿಯೂ ಇರುವುದರಿಂದಲೂ, ಯಾರಿಗೂ ಅಧೀನನಲ್ಲದುದರಿಂದಲೂ, ಈಶ್ವರನೆಂದೂ, ಬಹುದೊಡ್ಡ ಸ್ವರೂಪವಿರುವುದರಿಂದ ಬ್ರಹ್ಮ ನೆಂದೂ, ಯಾವಾಗಲೂ ಇರುವುದರಿಂದ ಭೂತನೆಂದೂ, ಶರೀರದ ಸ್ವರೂಪವನ್ನು ಚೆನ್ನಾಗಿ ತಿಳಿದಿರುವುದರಿಂದ ಕ್ಷೇತ್ರಜ್ಞನೆಂದೂ, ಒಬ್ಬನೇ ಆಗಿರುವುದರಿಂದ ಕೇವಲನೆಂದೂ, ದೇಹದಲ್ಲಿರುವುದರಿಂದ ಪುರುಷ ನೆಂದೂ, ಆದಿಯಿಲ್ಲದವನೂ. ಎಲ್ಲದಕ್ಕೂ ಮೊದಲಿನವನೂ, ಆದುದರಿಂದ ಸ್ವಯಂಭೂ, ಎಂದೂ, ಯಜ್ಞಕ್ಕೆ ಉಪಾಸ್ಯ ದೇವರಾಗಿರುವುದರಿಂದ ಯಜ್ಞ ನೆಂದೂ, ಒಳ್ಳೆಯ ಅಪರೋಕ್ಷ ದರ್ಶನವನ್ನೂ ಪಡೆದಿರುವುದರಿಂದ ಕವಿ, ಎಂದೂ, ಕರೆಯಲ್ಪಡುತ್ತಾನೆ.

೧೦೫–೧೦೭. ಈಶ್ವರನು ಚಲಿಸುವ ಸ್ವಭಾವವುಳ್ಳವನಾದುದರಿಂದ ಕ್ರಮಣ ನೆಂದೂ, ಲೋಕ ರಕ್ಷಕನಾದುದರಿಂದ ಪಾಲಕನೆಂದೂ

ಸ್ವಯಂಭುವೋಽಪಿ ವೃತ್ತಸ್ಯ ಕಾಲೋ ವಿಶ್ವಾತ್ಮನಸ್ತ್ವಯಃ ।
ನ ಶಕ್ಯಃ ಪರಿಸಂಖ್ಯಾತುಮಪಿ ವರ್ಷ ಶತೈರಪಿ ॥೧೦೭॥
ಕಾಲಸಂಖ್ಯಾ ವಿವೃತ್ತಸ್ಯ ಪರಾರ್ಧೋ ಬ್ರಹ್ಮಣಃ ಸ್ಮೃತಃ ।
ತಾವಚ್ಛೇಷೋಽಸ್ಯ ಕಾಲೋಽನ್ಯಸ್ತಸ್ಯಾಂತೇ ಪ್ರತಿ ಸೃಜ್ಯತೇ॥೧೦೮॥
ಕೋಟಿ ಕೋಟಿ ಸಹಸ್ರಾಣಿ ಅಹರ್ಭೂತಾನಿ ಯಾನಿ ವೈ ।
ಸಮತೀತಾನಿ ಕಲ್ಪಾನಾಂ ತಾವಚ್ಛೇಷಾಃ ಪರೇ ತು ಯೇ ॥
ಯಸ್ತ್ವಯಂ ವರ್ತತೇ ಕಲ್ಪೋ ವಾರಾಹಸ್ತಂ ನಿಬೋಧತ ॥೧೦೯॥
ಪ್ರಥಮಃ ಸಾಂಪ್ರತಸ್ತೇಷಾಂ ಕಲ್ಪೋಽಯಂ ವರ್ತತೇ ದ್ವಿಜಾಃ ।
ಯಸ್ಮಿನ್ ಸ್ವಾಯಂಭೂವಾದ್ಯಾಸ್ತು ಮನವಸ್ತೇ ಚತುರ್ದಶ ॥೧೧೦॥

---

ಕರೆಯಲ್ಪಡುತ್ತಾನೆ. ಶಿವನೇ ಆದಿತ್ಯ, ಎಂಬ ಹೆಸರುಳ್ಳ ಸೂರ್ಯನೂ, ಪ್ರಕಾಶಕನಾದ ಅಗ್ನಿಯ ಸ್ವರೂಪನೂ ಆಗಿದ್ದಾನೆ. ಈಶ್ವರನು ಹಿರಣ್ಯ ಗರ್ಭನು. ಹಿರಣ್ಯದ ಒಳಭಾಗದಲ್ಲಿ ಹುಟ್ಟಿದವನೂ ಆಗಿದ್ದಾನೆ. ಆದುದರಿಂದ ಮೂಲ ಪುರುಷನಾದ ಇವನಿಗೆ ಹಿರಣ್ಯಗರ್ಭನೆಂದು ಹೆಸರು ಬಂದಿದೆ. ವಿಶ್ವಕ್ಕೆಲ್ಲಕ್ಕೂ ಆತ್ಮನಾದ ಬ್ರಹ್ಮನ ಕಾಲದ ಪರಿಮಾಣವನ್ನು ನೂರಾರು ವರ್ಷಗಳು ಯೋಚಿಸಿದರೂ ಅಳತೆ ಮಾಡಲು ಸಾಧ್ಯವಿಲ್ಲ.

೧೦೮–೧೧೦. ಈಗಿರುವ ಬ್ರಹ್ಮನಕಾಲವು "ಪರಾರ್ಧ" ಎಂಬ ಬಹು ದೊಡ್ಡ ಸಂಖ್ಯೆಯ ಪ್ರಮಾಣವುಳ್ಳದ್ದು; ಉಳಿದ ಎರಡನೆಯ ಪರಾರ್ಧದ ಕೊನೆಯಲ್ಲಿ ಜಗತ್ತಿನ ಪ್ರಳಯುವಾಗುವುದು. ಈಗಿರುವ ಕಲ್ಪವನ್ನು ವಾರಾಹ ಕಲ್ಪವೆಂದು ತಿಳಿಯಬೇಕು. ಎಲೈ ಬ್ರಾಹ್ಮಣರೇ, ಪ್ರಸಿದ್ಧ ಕಲ್ಪಗಳಲ್ಲಿ ಮೊದಲನೆಯ ಕಲ್ಪವು ಈಗ ನಡೆಯುತ್ತಲಿದೆ ಯೆಂದು ತಿಳಿಯಿರಿ, ಈ ಕಲ್ಪದಲ್ಲಿ ಸ್ವಾಯಂಭುವ ಮನುವೇ ಮೊದಲಾದ ಹದಿನಾಲ್ಕು ಮನುಗಳಿರುತ್ತಾರೆಂದು ತಿಳಿಯಿರಿ.

ಅತೀತಾ ವರ್ತಮಾನಾಶ್ಚ ಭವಿಷ್ಯಾ ಯೇ ಚ ವೈ ಪುನಃ ।
ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪರ್ವತಾ ॥೧೧೧॥

ಪೂರ್ಣಂ ಯುಗಸಹಸ್ರಂ ವೈ ಪರಿಪಾಲ್ಯಾ ಮಹೇಶ್ವರೈಃ ।
ಪ್ರಜಾಭಿಸ್ತಪಸಾ ಚೈವ ತೇಷಾಂ ಶೃಣುತ ವಿಸ್ತರಂ ॥೧೧೨॥

ಮನ್ವಂತರೇಣ ಚೈಕೇನ ಸರ್ವಾಣ್ಯೇವಾಂತರಾಣಿ ಚ ।
ಕಥಿತಾನಿ ಭವಿಷ್ಯಂತಿ ಕಲ್ಪಃ ಕಲ್ಪೇನ ಚೈವ ಹಿ ॥೧೧೩॥

ಅತೀತಾನಿ ಚ ಕಲ್ಪಾನಿ ಸೋದರ್ಕಾಣಿ ಸಹಾನ್ವಯೈಃ ।
ಅನಾಗತೇಷು ತದ್ವಚ್ಚ ತರ್ಕಃ ಕಾರ್ಯೋ ವಿಜಾನತಾ ॥೧೧೪॥

ಆಪೋ ಹ್ಯಗ್ರೇ ಸಮಭವ ನ್ನಷ್ಟೇ ಚ ಪೃಥಿವೀ ತಲೇ ।
ಶಾಂತ ತಾರೈಕ ನೀರೇಽಸ್ಮಿನ್ನ ಪ್ರಾಜ್ಞಾಯತ ಕಿಂಚನ ॥೧೧೫॥

---

೧೧೧–೧೧೨. ಹಿಂದೆ ಕಳೆದುಹೋದ, ಈಗಿರುವ, ಮುಂದೆ ಬರುವ ಬ್ರಹ್ಮ ಕಲ್ಪಗಳಿಂದಲೇ ಏಳು ದ್ವೀಪಗಳಿಂದಲೂ, ಕುಲ ಪರ್ವತಗಳಿಂದಲೂ ಕೂಡಿದ, ಸಮಸ್ತವಾದ ಭೂಮಂಡಲವೂ ವ್ಯಾಪಿಸಲ್ಪಟ್ಟಿದೆ, ಬೇರೆಬೇರೆ ಈಶ್ವರನಿಂದ ಸಾವಿರಾರು ಯುಗಗಳವರೆಗೂ, ಈ ಭೂಮಂಡಲವು ಆಳಲ್ಪಡುತ್ತದೆ. ಈ ಭೂಭಾಗವು ಪ್ರಜೆಗಳಿಂದಲೂ ಅವರ ತಪಸ್ಸಿನಿಂದಲೂ ಸ್ಥಿರವಾಗಿರುತ್ತದೆ. ಈ ಕಲ್ಪಗಳ ವಿಷಯಗಳನ್ನು ಕೂಲಂಕಷವಾಗಿ ಕೇಳಿರಿ. ಒಂದು ಮನ್ವಂತರದ ವಿಷಯವನು ಹೇಳಿದರೆ ಇತರ ಮನ್ವಂತರಗಳ ವಿಷಯಗಳನ್ನೆಲ್ಲವನ್ನೂ ಹೇಳಿದ ಹಾಗ್ಗಿಯೇ ಆಗುತ್ತದೆ. ಕಲ್ಪಗಳ ವಿಷಯದಲ್ಲಿಯೂ, ಹೀಗೆಯೇ ಊಹಿಸಬೇಕು.

೧೧೪–೧೧೫. ಹಿಂದಿನ ಕಲ್ಪಗಳ ಪ್ರಾರಂಭದಲ್ಲಿಯೂ, ಸಕಲ ಪದಾರ್ಥಗಳೂ ನೀರಿನಲ್ಲಿ ಮುಳುಗಿದ್ದವು. ಮುಂದೆ ಬರುವ ಕಲ್ಪಗಳ ಆದಿಭಾಗದಲ್ಲಿಯೂ, ಹಾಗೆಯೇ ಇರುವುದೆಂದು ತರ್ಕದ ಸಹಾಯದಿಂದ ಊಹಿಸಬಹುದು. ಸಕಲ ಭೂಮಂಡಲವೂ ಪ್ರಳಯ ಹೊಂದಿದಾಗ ಎಲ್ಲವೂ ನೀರಾಗಿದ್ದವು. ನಕ್ಷತ್ರಗಳೂ ಮುಂತಾದ ಸಕಲ ವಸ್ತುಗಳೂ, ನಷ್ಟವಾಗಿ ಎಲ್ಲೆಲ್ಲಿಯೂ ನೀರೇ ತುಂಬಿರುವಾಗ ಪ್ರಪಂಚದಲ್ಲಿ ಯಾವ ವಸ್ತುವೂ ಗೋಚರವಾಗಲಿಲ್ಲ. ಸ್ಥಾವರ ಜಂಗಮಾತ್ಮಕವಾದ ಈ

ಏಕಾರ್ಣವೇ ತದಾ ತಸ್ಮಿನ್ನಷ್ಟೇ ಸ್ಥಾವರ ಜಂಗಮೇ ।
ತದಾ ಭವತಿ ಚ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರ ಪಾತ್ ॥೧೧೬॥
ಸಹಸ್ರ ಶೀರ್ಷಾ ಪುರುಷೋ ರುಕ್ಮವರ್ಣಸ್ತ್ವತೀಂದ್ರಿಯಃ ।
ಬ್ರಹ್ಮಾ ನಾರಾಯಣಾಖ್ಯಸ್ತು ಸುಷ್ವಾಪ ಸಲಿಲೇ ತದಾ ॥೧೧೭॥
ಸತ್ತ್ವೋದ್ರೇಕಾತ್ಪ್ರಬುದ್ಧಸ್ತು ಶೂನ್ಯಂ ಲೋಕ ಮುದ್ವೀಕ್ಷ್ಯ ತ ।
ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ॥
ಆಪೋ ನಾರಾಶ್ಚ ಸೂನವ ಇತ್ಯಪಾಂ ನಾಮ ಶುಶ್ರುಮಃ ।
ಆಪೂರ್ಯ ತಾಭಿರಯನಂ ಕೃತವಾ ನಾತ್ಮನೋ ಯತಃ ॥೧೧೯॥
ಅಪ್ಸು ಶೇತೇ ಯತ ಸ್ತಸ್ಮಾತ್ತತೋ ನಾರಾಯಣಃ ಸ್ಮೃತಃ ।
ಚತುರ್ಯುಗ ಸಹಸ್ರಸ್ಯ ನೈಶಂ ಕಾಲ ಮುಪಾಸ್ಯತಃ ॥೧೨೦॥

---

ಜಗತ್ತು ಪ್ರಳಯವಾಗಿ ಸಮುದ್ರರೂಪವಾಗಿರುವಾಗ ಮಹಾತೇಜಸ್ವಿಯೂ ಸಹಸ್ರ ಪಾದವುಳ್ಳವನೂ, ಸಾವಿರ ಇಂದ್ರಿಯಗಳುಳ್ಳವನೂ ಆಗಿ ಪರಬ್ರಹ್ಮನು ನೀರಿನ ಮಧ್ಯೇ ಕಾಣಿಸಿಕೊಂಡನು.

೧೧೭–೧೧೯. ಸಾವಿರ ಶಿರಸ್ಸುಳ್ಳ, ಚಿನ್ನದ ಬಣ್ಣವುಳ್ಳ, ಇಂದ್ರಿಯಗಳಿಗೆ ಅಗೋಚರನಾದ, ಪುರುಷೋತ್ತಮನಾದ, ನಾರಾಯಣ ಸ್ವರೂಪಿಯಾದ ಬ್ರಹ್ಮನು ಆಗ ನೀರಿನಮೇಲೆ ಮಲಗಿದ್ದನು. ಸತ್ವಗುಣ ಹೆಚ್ಚಾದ್ದರಿಂದ ಅವನು ಎಚ್ಚರಗೊಂಡು ಲೋಕವು ಶೂನ್ಯವಾಗಿರುವುದನ್ನು ಕಂಡನು. ನಾರಾಯಣನ ವಿಷಯದಲ್ಲಿ ಈ ಶ್ಲೋಕವನ್ನು ಹೇಳುತ್ತಾರೆ. ಇದರ ಭಾವಾರ್ಥಕ್ಕೆ ಅನುಸಾರವಾಗಿ ನೀರಿಗೆ ''ನಾರಾ'' ಎಂದೂ, ನರಸೂನು. ಎಂದು ಹೆಸರು ಬಂದಿದೆಯೆಂದೂ, ಹೇಳುತ್ತಾರೆ. ಅಂಥಾ ನೀರಿನಿಂದ ನಾರಾಯಣನ ವಾಸಸ್ಥಾನವು ಮಾಡಲ್ಪಟ್ಟಿದೆ.

೧೨೦–೧೨೩. ಇಂಥಾ ನೀರಿನಲ್ಲಿ ಮಲಗಿರುವುದರಿಂದಲೇ ಇವನಿಗೆ ನಾರಾಯಣನೆಂದು ಹೆಸರು ಬಂದಿತು. ಇವನು ನಾಲ್ಕುಸಾವಿರ ಯುಗ

ಶರ್ವರ್ಯಂತೇ ಪ್ರಕುರುತೇ ಬ್ರಹ್ಮತ್ವಂ ಸರ್ಗ ಕಾರಣಾತ್ ।
ಬ್ರಹ್ಮಾ ತು ಸಲಿಲೇ ತಸ್ಮಿನ್ವಾಯುರ್ಭೂತ್ವಾ ಸಮಾಚರತ್ ॥೧೨೧॥

ನಿಶಾಯಾಮಿವ ಖದ್ಯೋತಃ ಪ್ರಾವೃಟ್ಕಾಲೇ ತತಸ್ತತಃ ।
ತತಸ್ತು ಸಲಿಲೇ ತಸ್ಮಿನ್ ವಿಜ್ಞಾಯಾಂತರ್ಗತಾಂ ಮಹೀಂ ॥೧೨೨॥

ಅನುಮಾನಾದಸಂಮೂಢೋ ಭೂಮೇರುದ್ಧರಣಂ ಪುನಃ ।
ಅಕರೋತ್ತನೂಮನ್ಯಾಂ ಕಲ್ಪಾದಿಷು ಯಥಾ ಪುರಾ ॥೧೨೩॥

ತತೋ ಮಹಾತ್ಮಾ ಭಗವಾನ್ದಿವ್ಯ ರೂಪಮ ಚಿಂತಯತ್ ।
ಸಲಿಲೇನಾ ಪ್ಲುತಾಂ ಭೂಮಿಂ ದೃಷ್ಟ್ವಾ ಸ ತು ಸಮಂತತಃ ॥೧೨೪॥

ಕಿಂನು ರೂಪ ಮಹಂ ಕೃತ್ವಾ ಉದ್ಧರೇಯಂ ಮಹೀಮಿಮಾಂ ।
ಜಲಕ್ರೀಡಾನು ಸದೃಶಂ ವಾರಾಹಂ ರೂಪ ಮಾವಿಶತ್ ॥೧೨೫॥

---

ಗಳ ರಾತ್ರಿ ವೇಳೆಯಲ್ಲಿ ಹೀಗೆ ಮಲಗಿರುತ್ತಾನೆ. ಅನಂತರ ಬ್ರಹ್ಮನ ಸ್ವರೂಪವನ್ನು ಹೊಂದಿ, ಸೃಷ್ಟಿಗೆ ಆರಂಭಿಸುವನು. ಈ ನೀರಿನಲ್ಲಿ ಬ್ರಹ್ಮನು ವಾಯುರೂಪನಾಗಿ ಸಂಚರಿಸುತ್ತಾನೆ. ವರ್ಷಾಕಾಲದ ರಾತ್ರಿ ವೇಳೆಯಲ್ಲಿ ಮಿಂಚಿನ ಹುಳುವಿನಂತೆ ಬ್ರಹ್ಮನು ನೀರಿನಲ್ಲಿ ಸಂಚರಿಸುತ್ತಾ ಅವರೊಳಗೆ ಅಡಗಿದ್ದ ಭೂಮಿಯನ್ನು ಕಂಡನು.

೧೨೩-೧೨೫. ಬ್ರಹ್ಮನು ಈ ರೀತಿಯಾಗಿ ಭೂಮಿಯು ಇರುವುದನ್ನು ಸ್ಪಷ್ಟವಾಗಿ ತಿಳಿದು ಹಿಂದಿನ ಕಲ್ಪಗಳಂತೆಯೇ ಪುನಃ ಭೂಮಿಯ ಉದ್ಧಾರವನ್ನು ಮಾಡಲು ಇಷ್ಟಪಟ್ಟನು. ಅನಂತರದಲ್ಲಿ ಮಹಾತ್ಮನೂ, ಪೂಜ್ಯನೂ, ದೇವಸ್ವರೂಪನೂ ಆದ ಬ್ರಹ್ಮನು ನೀರಿನೊಳಗೆ ಮುಳುಗಿರುವ ಭೂಮಿಯನ್ನು ಉದ್ಧರಿಸಲು ತಾನು ಯಾವ ಸ್ವರೂಪವನ್ನು ಧರಿಸಬೇಕೆಂದು ಯೋಚಿಸಿದನು. ಆಗ ಜಲದಲ್ಲಿ ಆಟವಾಡುವಂತೆ ಕಾರ್ಯ ನಿರ್ವಾಹ ಮಾಡುವುದಕ್ಕೆ ಯೋಗ್ಯವಾದ ವರಾಹರೂಪವನ್ನು ಧರಿಸಿದನು.

ಅಧೃಷ್ಯಂ ಸರ್ವ ಭೂತಾನಾಂ ವಾಙ್ಮಯಂ ಬ್ರಹ್ಮ ಸಂಜ್ಞಿತಂ ।
ಪೃಥಿವ್ಯುದ್ಧರಣಾರ್ಥಾಯ ಪ್ರವಿವೇಶ ರಸಾತಲಂ ॥೧೨೬॥

ಅದ್ಭಿಃ ಸಂಛಾದಿತಾಂ ಭೂಮಿಂ ಸ ತಾಮಾಶು ಪ್ರಜಾಪತಿಃ ।
ಉಪಗಮ್ಯೋ ಜ್ಜಹಾರೈನಾ ಮಾಪಶ್ಚಾಪಿ ಸಮಾವಿಶತ್ ॥೧೨೭॥

ಸಾಮುದ್ರಾ ವೈ ಸಮುದ್ರೇಷು ನಾದೇಯಾಶ್ಚ ನದೀಷು ಚ ।
ರಸಾತಲತಲೇ ಮಗ್ನಾಂ ರಸಾತಲ ಪುಟೇ ಗತಾಂ ॥೧೨೮॥

ಪ್ರಭುರ್ಲೋಕ ಹಿತಾರ್ಥಾಯ ದಂಷ್ಟ್ರಯಾಽಭ್ಯುಜ ಜಹಾರ ಗಾಂ ।
ತತಃ ಸ್ವಸ್ಥಾನ ಮಾನೀಯ ಪೃಥಿವೀಂ ಪೃಥಿವೀಧರಃ ॥೧೨೯॥

ಮುಮೋಚ ಪೂರ್ವವದಸೌ ಧಾರಯಿತ್ವಾ ಧರಾಧರಃ ।
ತಸ್ಯೋಪರಿ ಜಲೌಘಸ್ಯ ಮಹತೀ ನೌ ರಿವ ಸ್ಥಿತಾ ॥೧೩೦॥

ತತ್ಸಮಾ ಹ್ಯುರುದೇಹತ್ವಾ ನ್ನ ಮಹೀ ಯಾತಿ ಸಂಪ್ಲವಂ ।
ತತ ಉತ್ಕ್ಷಿಪ್ಯ ತಾಂ ದೇವೋ ಜಗತಃ ಸ್ಥಾಪನೇ ಚ್ಛಯಾ ॥೧೩೧॥

---

೧೨೬. ಯಾವ ಭೂತಗಳಿಂದಲೂ ಎದುರಿಸಲು ಅಶಕ್ಯವಾದ ವಾಗ್ರೂಪವೂ, ಬ್ರಹ್ಮನೆಂದು ಹೆಸರುಳ್ಳದ್ದೂ ಆದ ರೂಪವನ್ನು ಧರಿಸಿ ಭೂಮಿಯನ್ನುದ್ಧರಿಸಲೋಸುಗ ಪಾತಾಳವನ್ನು ಪ್ರವೇಶಿದನು.

೧೨೭–೧೨೯. ಬ್ರಹ್ಮನು ಜಾಗ್ರತೆಯಾಗಿ ನೀರಿನಲ್ಲಿ ಪ್ರವೇಶಿಸಿ ಅದರಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ಮೇಲಕ್ಕೆತ್ತಿದನು. ಅವನು ಸಮುದ್ರಕ್ಕೆ ಸಂಬಂಧಪಟ್ಟ ನೀರನ್ನು ಸಮುದ್ರಕ್ಕೂ, ನದಿಗೆ ಸಂಬಂಧಪಟ್ಟ ನೀರನ್ನು ನದಿಗೂ, ಸೇರಿಸಿ, ಲೋಕದ ಕ್ಷೇಮಕ್ಕಾಗಿ ಪಾತಾಳದಲ್ಲಿದ್ದ ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಮೇಲಕ್ಕೆತ್ತಿದನು. ಅನಂತರದಲ್ಲಿ ಭೂಮಿಯನ್ನೆತ್ತಿಕೊಂಡು ಅದರ ನಿಜವಾದ ಸ್ಥಳಕ್ಕೆ ತಂದು ಸೇರಿಸಿದನು.

೧೩೦–೧೩೨. ಭೂಮಿಯನ್ನು ಹೊತ್ತುಕೊಂಡಿರುವ ವರಾಹರೂಪಿಯಾದ ಬ್ರಹ್ಮನು ನೀರಿನಮೇಲೆ ಭೂಮಿಯನ್ನು ಹಿಂದಿನಂತೆಯೇ ಇಟ್ಟುಬಿಟ್ಟನು. ನೀರಿನ ಮೇಲುಗಡೆ ಭೂಮಿಯು ದೊಡ್ಡ ಹಡಗೋ ಎಂಬಂತೆ

ಪೃಥಿವ್ಯಾಃ ಪ್ರವಿಭಾಗಾಯ ಮನಶ್ಚಕ್ರೇಽಂಬುಜೇಕ್ಷಣಃ ।
ಪೃಥಿವೀಂ ಚ ಸಮಾಂ ಕೃತ್ವಾ ಪೃಥಿವ್ಯಾಂ ಸೋಽಚಿನೋದ್ಗಿರೀನ್ ॥
ಪ್ರಾಕ್ಸರ್ಗೇ ದಹ್ಯಮಾನೇ ತು ತದಾ ಸಂವರ್ತಕಾಗ್ನಿನಾ ।
ತೇನಾಗ್ನಿನಾ ವಿಶೀರ್ಣಾಸ್ತೇ ಪರ್ವತಾ ಭೂರಿವಿಸ್ತರಾಃ ॥೧೩॥
ಶೈತ್ಯಾ ದೇಕಾರ್ಣವೇ ತಸ್ಮಿನ್ ವಾಯುನಾ ತೇನ ಸಂಹತಾ ।
ನಿಷಿಕ್ತಾ ಯತ್ರ ಯತ್ರಾಸಂ ಸ್ತತ್ರ ತತ್ರಾ ಚಲಾಽಭವನ್ ॥೧೪॥
ತದಾಽಚಲತ್ವಾ ದಚಲಾಃ ಪರ್ವಭಿಃ ಪರ್ವತಾಃ ಸ್ಮೃತಾಃ ।
ಗಿರಯೋ ಹಿ ನಿಗೀರ್ಣತ್ವಾ ಚ್ಛಯಾನತ್ವಾ ಚ್ಛಿಲೋ ಚ್ಚಯಾಃ ॥

---

ಕಾಣುತ್ತಿತ್ತು. ದೊಡ್ಡ ಆಕಾರವುಳ್ಳದ್ದಾಗಿ ಸಮುದ್ರದ ನೀರಿನಷ್ಟು ಪ್ರಮಾಣವುಳ್ಳದ್ದಾಗಿಯೇ ಭೂಮಿಯು ಇರುವುದರಿಂದ ಭೂಮಿಯು ಲಯವಾಗುವುದಿಲ್ಲ. ಕಮಲದಂತೆ ಕಣ್ಣುಳ್ಳ ದೇವರಾದ ಬ್ರಹ್ಮನು ಜಗತ್ತನ್ನು ಸ್ಥಾಪಿಸುವುದಕ್ಕೋಸ್ಕರ ಭೂಮಿಯನ್ನು ವಿಭಾಗಿಸಲು ನಿಶ್ಚಯ ಮಾಡಿದನು. ಭೂಮಿಯನ್ನು ಸಮವಾಗಿ ವಿಭಾಗಮಾಡಿ ಭೂಮಿಯ ಮೇಲೆ ಪರ್ವತಗಳನ್ನು ನಿರ್ಮಿಸಿದನು.

೧೩-೧೫. ಹಿಂದಿನ ಸೃಷ್ಟಿಯು ಪ್ರಳಯಕಾಲದ ಸಂವರ್ತಕ, ಎಂಬ ಹೆಸರಿನ ಅಗ್ನಿಯಿಂದ ಸುಡಲ್ಪಡಲು ಅದೇ ಅಗ್ನಿಯಿಂದ ಹೆಚ್ಚು ವಿಸ್ತಾರವುಳ್ಳ ಪರ್ವತಗಳು ಚೂರು ಚೂರು ಮಾಡಲ್ಪಟ್ಟವು. ಆದರೆ ಶೈತ್ಯದಿಂದ ಒಂದು ಸಮುದ್ರದಲ್ಲಿ ವಾಯುವು ಅವುಗಳನ್ನೆಲ್ಲವನ್ನೂ ಒಟ್ಟು ಗೂಡಿಸಿತು. ಅದು ಎಲ್ಲಿ ರಾಶಿಮಾಡಿತೋ ಅಲ್ಲಿ ಪರ್ವತಗಳುಂಟಾದವು. ಇವು ಚಲಿಸದೇ ಇರುವುದರಿಂದ ಅಚಲಗಳೆಂದೂ, ರಾಶಿಗಳಾಗಿರುವುದರಿಂದ ಪರ್ವತಗಳೆಂದೂ, ಎಷ್ಟೋವಸ್ತುಗಳನ್ನು ನುಂಗಿರುವುದರಿಂದ ಗಿರಿಗಳೆಂದೂ, ಮಲಗಿದ ಹಾಗೆ ಹರಡಿಕೊಂಡಿರುವುದರಿಂದ ಶಿಲೋಚ್ಚಯು, ಗಳೆಂದೂ, ಹೆಸರುಗಳನ್ನು ಹೊಂದಿವೆ.

ತತಸ್ತೇಷು ವಿಕೀರ್ಣೇಷು ಕೋಟಿ ಶೋ ಹಿ ಗಿರಿಷ್ವಥ ।
ವಿಶ್ವಕರ್ಮಾ ವಿಭಜತೇ ಕಲ್ಪಾದಿಷು ಪುನಃ ಪುನಃ ॥೧೩೬॥
ಸ ಸಮುದ್ರಾ ಮಿಮಾಂ ಪೃಥ್ವೀಂ ಸಪ್ತದ್ವೀಪಾಂ ಸ ಪರ್ವತಾಂ ।
ಭೂರಾದ್ಯಾಂ ಶ್ಚತುರೋ ಲೋಕಾ ನ್ಪುನಃ ಸೋಽಥ ವ್ಯಕಲ್ಪಯತ್
ಲೋಕಾ ನ್ಪ್ರಕಲ್ಪ ಯಿತ್ವಾಽಥ ಪ್ರಜಾಸರ್ಗಂ ಸಸರ್ಜ ಹ ।
ಬ್ರಹ್ಮಾ ಸ್ವಯಂಭೂರ್ಭಗವಾ ನ್ಸಿಸೃಕ್ಷುರ್ವಿವಿಧಾಃ ಪ್ರಜಾಃ ॥
ಸಸರ್ಜ ಸೃಷ್ಟಿಂ ಸದ್ರೂಪಾಂ ಕಲ್ಪಾದಿಷು ಯಥಾ ಪುರಾ ।
ತಸ್ಯಾ ಭಿಧ್ಯಾಯತಃ ಸರ್ಗಂ ತದಾ ವೈ ಬುದ್ಧಿಪೂರ್ವಕಂ ॥೧೩೯॥
ಬುದ್ಧ್ಯಾಶ್ಚ ಸಮಕಾಲೇ ವೈ ಪ್ರಾದುರ್ಭೂತ ಸ್ತಮೋಮಯಃ ।
ತಮೋ ಮೋಹೋ ಮಹಾಮೋಹ ಸ್ತಾಮಿಸ್ರ ಶ್ಚಾಂಧ ಸಂಜ್ಞಿತಃ
ಅವಿದ್ಯಾ ಪಂಚ ಪರ್ವೈಷಾ ಪ್ರಾದುರ್ಭೂತಾ ಮಹಾತ್ಮನಃ ।
ಪಂಚಧಾಽವಸ್ಥಿತಃ ಸರ್ಗೋ ಧ್ಯಾಯತಃ ಸೋಽಭಿಮಾನಿನಃ ॥೧೪೧॥

---

೧೩೬–೧೩೮. ಅನಂತರದಲ್ಲಿ ಕೋಟ್ಯಾಂತರ ಪರ್ವತಗಳು ಅಲ್ಲಲ್ಲಿ ಹರಡಿರಲು ದೇವಶಿಲ್ಪಿಯಾದ ವಿಶ್ವಕರ್ಮನು ಕಲ್ಪದ ಪ್ರಾರಂಭದಲ್ಲಿ ಪುನಃ ಪುನಃ ವಿಭಾಗ ಮಾಡುತ್ತಾನೆ. ಬ್ರಹ್ಮನು ಸಮುದ್ರಗಳುಳ್ಳ ಮತ್ತು ಏಳು ದ್ವೀಪಗಳುಳ್ಳ, ಪರ್ವತಗಳುಳ್ಳ, ಭೂಮಿಯೇ ಮೊದಲಾದ ನಾಲ್ಕು ಲೋಕಗಳನ್ನು ಸೃಜಿಸಿದನು. ಹೀಗೆ ಲೋಕಗಳನ್ನು ನಿರ್ಮಿಸಿ ಆಮೇಲೆ ಪ್ರಜೆಗಳ ಸೃಷ್ಟಿಗೆ ಆರಂಭಿಸಿದನು. ತನ್ನಲ್ಲಿ ತಾನೇ ಉದ್ಭವಿಸಿದ ಪೂಜ್ಯನಾದ ಬ್ರಹ್ಮನು ಈ ರೀತಿಯಾಗಿ ಪ್ರಜಾ ಸೃಷ್ಟಿಯಲ್ಲಿ ಆಸಕ್ತನಾದನು.

೧೩೯–೧೪೧. ಬ್ರಹ್ಮನು ಹಿಂದಿನ ಕಲ್ಪಗಳಂತೆಯೇ ಬುದ್ಧಿಪೂರ್ವಕವಾಗಿ ಆಲೋಚಿಸಿದ ತತ್ಕ್ಷಣವೇ ಪ್ರಪಂಚದ ಸೃಷ್ಟಿಯಾಯಿತು. ಇವನು ಭಾವಿಸುತ್ತಿದ್ದಾಗಲೇ ಒಂದು ಅಂಧಕಾರ ರೂಪವಾದ ಮಹಾ ಅಜ್ಞಾನ ವುಂಟಾಯಿತು. ಅದು ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ, ಎಂದು ಐದು ಬಗೆಯಾಯಿತು. ಅತ್ಯಂತ ಕಷ್ಟವಾದ ಮತ್ತು ಕೇವಲ ಅಜ್ಞಾನರೂಪವಾದ ಅವಿದ್ಯೆಯೇ ಈ ಜಗತ್ತಿಗೆ ಬೀಜವು. ಭಗವಂತನು ಸಾಕ್ಷಿಸ್ವರೂಪನಾಗಿರುವಾಗಲೇ ಈ ಅವಿದ್ಯೆಯದೆಸೆಯಿಂದ ಜಗತ್ತಿನ ಸೃಷ್ಟಿಯಾಯಿತು.

ಸಂವೃತ ಸ್ತಮಸಾ ಚೈವ ಬೀಜಾಂಕುರ ವದಾವೃತಃ ।
ಬಹಿರಂತಶ್ಚಾ ಪ್ರಕಾಶಃಸ್ತಬ್ಧೋ ನಿಸ್ಸಂಜ್ಞ ಏವ ಚ ॥೧೪೨॥
ಯಸ್ಮಾತ್ತೇಷಾಂ ವೃತಾ ಬುದ್ಧಿಃ ದುಃಖಾನಿ ಕರಣಾನಿ ಚ ।
ತಸ್ಮಾತ್ತೇ ಸಂವೃತಾತ್ಮಾನೋ ನಗಾ ಮುಖ್ಯಾಃ ಪ್ರಕೀರ್ತಿತಾಃ ॥
ಮುಖ್ಯಸ್ಯ ಚ ತಥಾಭೂತಂ ದೃಷ್ಟ್ವಾ ಬ್ರಹ್ಮಾ ಹ್ಯಸಾಧಕಂ ।
ಅಪ್ರಸನ್ನ ಮನಾಃ ಸೋಽಥ ತತೋಽನ್ಯಂ ಸೋ ಹ್ಯ ಮನ್ಯತ ॥೧೪೪॥
ತಸ್ಯಾಭಿಧ್ಯಾಯತ ಶ್ಚೈವ ತಿರ್ಯಕ್ಸ್ರೋ ತಾ ಹ್ಯ ವರ್ತತ ।
ತಸ್ಮಾತ್ತಿರ್ಯ ಕ್ಪ್ರವೃತ್ತಃ ಸ ತಿರ್ಯ ಕ್ಸ್ರೋತಾ ಸ್ತತಃ ಸ್ಮೃತಃ ॥೧೪೫॥
ಪಶ್ವಾದಯಸ್ತೇ ವಿಖ್ಯಾತಾ ಉತ್ಪಥ ಗ್ರಾಹಿಣೋ ದ್ವಿಜಾಃ ।
ತಸ್ಯಾಭಿ ಧ್ಯಾಯತೋಽನ್ಯಂ ವೈ ಸಾತ್ವಿಕಃ ಸಮವರ್ತತ ॥೧೪೬॥

---

೧೪೨–೧೪೪. ಈ ಜಗತ್ತು ಅವಿದ್ಯೆಯಿಂದ ಆವರಿಸಲ್ಪಟ್ಟಿದೆ. ಬೀಜದಲ್ಲಿ ಮೊಳಕೆಯಂತೆ ಅಜ್ಞಾನದಲ್ಲಿ ಜಗತ್ತು ಅಡಗಿದೆ. ಈ ಅವಿದ್ಯೆಯು ಎಲ್ಲಾ ಕಡೆಯಲ್ಲಿಯೂ ಕತ್ತಲಿನ, ಅಜ್ಞಾನದ, ಸ್ವಭಾವವುಳ್ಳದ್ದು. ಚೈತನ್ಯವಿಲ್ಲದ್ದೂ, ಚಲಿಸದಿರುವುದೂ ಆಗಿದೆಯೆಂದು ತಿಳಿಯಬೇಕು. ಈ ಅಜ್ಞಾನದಿಂದಲೇ ಬುದ್ಧಿ, ಇಂದ್ರಿಯಗಳೂ, ಸರ್ವವಿಧವಾದ ಪ್ರಾಪಂಚಿಕ ದುಃಖಗಳೂ ಎಲ್ಲವೂ ಆವರಿಸಲ್ಪಟ್ಟಿವೆ. ಆದ್ದರಿಂದಲೇ ಈ ಅವಿದ್ಯೆಯೇ ಜಗತ್ತಿಗೆ ಮುಖ್ಯಕಾರಣವೆಂದು ಹೇಳಲ್ಪಟ್ಟಿದೆ. ಈ ಅವಿದ್ಯೆಯ ಸಂಬಂಧದಿಂದ ಬ್ರಹ್ಮನೇ ತನ್ನ ಸ್ವರೂಪವನ್ನು ಮರೆತು ತನ್ನನ್ನೇ ಪ್ರಾಪಂಚಿಕ ಜೀವಾದಿ ವಸ್ತುಗಳೆಂದು ತಿಳಿಯುತ್ತಾ, ಅಶಾಂತಿಯಿಂದ ಕೂಡಿ, ತನ್ನನ್ನು ಬೇರೊಂದು ವಸ್ತುವಾಗಿ ತಿಳಿದನು.

೧೪೫–೧೪೬. ಬ್ರಹ್ಮನು ಹೀಗೆ ಧ್ಯಾನಮಾಡಿದ ಕೂಡಲೆ "ತಿರ್ಯಕ್ ಸ್ರೋತಸ್" ಎಂದು ಕರೆಯಲ್ಪಡುವ ಪಶುಪಕ್ಷಿ ಕೀಟಗಳಸೃಷ್ಟಿಯಾಯಿತು. ಇವು ಒಳಗೂ, ಹೊರಗೂ, ಬಹಿರ್ಮುಖವಾದ ಇಂದ್ರಿಯ ಪ್ರವೃತ್ತಿಯುಳ್ಳವಾದ್ದರಿಂದ "ತಿರ್ಯಕ್ಸ್ರೋತಸ್" ಎಂದು ಕರೆಯಲ್ಪಡುತ್ತವೆ. ಸ್ಥಾವರಗಳಿಗಿಂತ ಮುಂದುವರಿದವುಗಳೆಂದೂ, ಹೇಳಲ್ಪಟ್ಟಿವೆ.

**ಊರ್ಧ್ವಸ್ರೋತಾ ಸ್ತೃತೀಯಸ್ತು ಸ ವೈ ಚೋರ್ಧ್ವಂ ವ್ಯವಸ್ಥಿತಃ।**
**ಯಸ್ಮಾತ್ಪ್ರವರ್ತತೇ ಚೋರ್ಧ್ವ ಮೂರ್ಧ್ವಸ್ರೋತಾ ಸ್ತತಃ ಸ್ಮೃತಃ।**
**ತೇ ಸುಖಪ್ರೀತಿ ಬಹುಳಾ ಬಹಿರಂತಶ್ಚ ಸಂವೃತಾಃ।**
**ಪ್ರಕಾಶಾ ಬಹಿರಂತಶ್ಚ ಊರ್ಧ್ವಸ್ರೋತೋ ಭವಾಃ ಸ್ಮೃತಾಃ ।**
**ತೇ ಸತ್ತ್ವಸ್ಯಚ ಯೋಗೇನ ಸೃಷ್ಟಾಃ ಸತ್ವೋದ್ಭವಾಃ ಸ್ಮೃತಾಃ।**
**ಊರ್ಧ್ವಸ್ರೋತಾ ಸ್ತೃತೀಯೋ ವೈ ದೇವಸರ್ಗಸ್ತು ಸ ಸ್ಮೃತಃ**
**ಪ್ರಕಾಶಾ ದ್ಬಹಿರಂತಶ್ಚ ಊರ್ಧ್ವಸ್ರೋತೋ ದ್ಭವಾಃ ಸ್ಮೃತಾಃ।**
**ತೇ ಊರ್ಧ್ವಸ್ರೋತಸೋ ಜ್ಞೇಯಾ ಸ್ತುಷ್ಟಾತ್ಮಾನೋ ಬುಧೈಃ ಸ್ಮೃತಾಃ ॥೧೫೦॥**

**ಊರ್ಧ್ವ ಸ್ರೋತಸ್ಸು ಸೃಷ್ಟೇಷು ದೇವೇಷು ವರದಃ ಪ್ರಭುಃ।**
**ಪ್ರೀತಿಮಾನ ಭವದ್ಬ್ರಹ್ಮಾ ತತೋಽನ್ಯಂ ಸೋಽಭ್ಯಮನ್ಯತ ॥೧೫೧॥**

---

ಬ್ರಹ್ಮನು ಧ್ಯಾನಿಸಿದ ಕೂಡಲೇ ಸತ್ವಗುಣವು ಹೆಚ್ಚಾದಾಗ ''ಊರ್ಧ್ವ ಸ್ರೋತಸ್'' ಎಂದು ಕರೆಯಲ್ಪಡುವ ದೇವತೆಗಳ ಸೃಷ್ಟಿಯು ಉಂಟಾಯಿತು. ಮೇಲಾಗಿ ಮುಂದುವರಿದ ಇಂದ್ರಿಯ ಪ್ರವೃತ್ತಿಯುಳ್ಳವರಾದುದರಿಂದಲೇ ದೇವತೆಗಳು ''ಊರ್ಧ್ವಸ್ರೋತಸ್'' ಎಂದು ಕರೆಯಲ್ಪಡುತ್ತಾರೆ.

೧೪೮–೧೫೦. ಊರ್ಧ್ವಸ್ರೋತಸ್ಸಾಗಿ ಹುಟ್ಟಿದ ದೇವತೆಗಳು ಎಲ್ಲಾ ಭಾಗದಲ್ಲಿಯೂ, ಸುಖ ಸಂತೋಷಗಳಿಂದ ಕೂಡಿರುತ್ತಾರೆ. ಮತ್ತು ಅವರು ಎಲ್ಲಾ ಕಡೆಯಲ್ಲಿಯೂ ಜ್ಞಾನದಿಂದ ಪ್ರಕಾಶಮಾನರಾಗಿರುತ್ತಾರೆ. ಸತ್ವ ಗುಣವು ಹೆಚ್ಚಾಗಿರುವುದರಿಂದ ಅವರು ಸಾತ್ವಿಕರೆನಿಸಿಕೊಳ್ಳುತ್ತಾರೆ. ಇದೇ ಮೂರನೆಯದಾದ ದೇವಸೃಷ್ಟಿಯು. ಇದು ''ಊರ್ಧ್ವಸ್ರೋತಸ್'' ಎಂದರೆ ಬಹಿರ್ಮುಖ ಮತ್ತು ಅಂತರ್ಮುಖವಾದ ಇಂದ್ರಿಯ ಪ್ರವೃತ್ತಿಯುಳ್ಳದ್ದೆಂದು ಕರೆಯುಲ್ಪಡುತ್ತದೆ.

೧೫೧–೧೫೩. ಲೋಕ ಕ್ಷೇಮವನ್ನುಂಟುಮಾಡುವ ಸ್ವಾಮಿಯು ಊರ್ಧ್ವಸ್ರೋತಸ್ಸುಗಳಾದ ದೇವತೆಗಳನ್ನುಸೃಷ್ಟಿಸಿ ಬಹಳ ಸಂತೋಷಗೊಂಡನು. ಅನಂತರ ಅವನು ಬೇರೇ ವಿಧವಾದ ಸೃಷ್ಟಿಮಾಡಲು ಇಷ್ಟಪಟ್ಟನು. ಈಶ್ವರನು ಬೇರೇ ವಿಧವಾದ ಸೃಷ್ಟಿಯನ್ನು ಮಾಡಲು ಇಷ್ಟ

ಸಸರ್ಜ ಸರ್ಗಮನ್ಯಂ ಹಿ ಸಾಧಕಂ ಪ್ರಭು ರೀಶ್ವರಃ ।
ತತೋಽಭಿ ಧ್ಯಾಯತ ಸ್ತಸ್ಯ ಸತ್ಯಾಭಿ ಧ್ಯಾಯಿನ ಸ್ತದಾ ॥೧೫೨॥

ಪ್ರಾದುರಾಸೀ ತ್ತದಾಽವ್ಯಕ್ತಾ ದರ್ವಾಕ್ ಸ್ರೋತಾಸ್ತು ಸಾಧಕಃ ।
ಯಸ್ಮಾ ದರ್ವಾಕ್ ನ್ಯವರ್ತಂತ ತತೋಽರ್ವಾ ಕ್ಸ್ರೋತಸಸ್ತು ತೇ ॥

ತೇ ಚ ಪ್ರಕಾಶ ಬಹುಳಾ ಸ್ತಮಃ ಪೃಕ್ತಾ ರಜೋಽಧಿಕಾಃ ।
ತಸ್ಮಾತ್ತೇ ದುಃಖ ಬಹುಳಾ ಭೂಯೋ ಭೂಯಶ್ಚ ಕಾರಿಣಃ ॥

ಸಂವೃತಾ ಬಹಿರಂತಶ್ಚ ಮನುಷ್ಯಾಃ ಸಾಧಕಾ ಶ್ಚ ತೇ ।
ಲಕ್ಷಣೈಸ್ತಾರಕಾ ದ್ಯೈಸ್ತೇ ಹ್ಯಷ್ಟಧಾ ತು ವ್ಯವಸ್ಥಿತಾಃ ॥೧೫೫॥

ಸಿದ್ಧಾತ್ಮಾನೋ ಮನುಷ್ಯಾಸ್ತೇ ಗಂಧರ್ವ ಸಹಧರ್ಮಿಣಃ ।
ಇತ್ಯೇಷ ತೈಜಸಃ ಸರ್ಗೋ ನ್ಯೈಕೃತೋ ನವಮಃ ಸ್ಮೃತಃ ॥೧೫೬॥

---

ಪಟ್ಟು ಸತ್ಯಸ್ವರೂಪವನ್ನು ಧ್ಯಾನಿಸಿದನು. ಆಗ ಅವನ ಇಂದ್ರಿಯ ಗೋಚರವಾದ ಸ್ವರೂಪದಿಂದ ಅರ್ವಾಕ್ ಸ್ರೋತಸ್ಸುಗಳಾದ ಮನುಷ್ಯರು ಸೃಷ್ಟಿಸಲ್ಪಟ್ಟರು. ಇವರು ಒಳಗೂ, ಹೊರಗೂ ಇಂದ್ರಿಯ ಪ್ರವೃತ್ತಿಯುಳ್ಳವರಾದುದರಿಂದಲೇ ಅರ್ವಾಕ್ ಸ್ರೋತಸ್ಸುಗಳೆನಿಸಿದ್ದಾರೆ.

೧೫೪–೧೫೬. ಮನುಷ್ಯರು ಪ್ರಕಾಶವುಳ್ಳವರಾದರೂ, ಅಜ್ಞಾನವೆಂಬ ಕತ್ತಲೆಯಿಂದ ಆವರಿಸಲ್ಪಟ್ಟವರೂ, ಹೆಚ್ಚಾಗಿ ರಜೋಗುಣದಿಂದ ಕೂಡಿದವರೂ, ಆಗಿದ್ದಾರೆ. ಆದ್ದರಿಂದಲೇ ಅವರಿಗೆ ದುಃಖವು ಹೆಚ್ಚು. ಪುನಃ ಪುನಃ ಅವರು ಕರ್ಮಗಳನ್ನು ಮಾಡುತ್ತಲೇ ಇರುತ್ತಾರೆ. ಮುಂದು ವರಿಯುವುದರ ಚಿಹ್ನೆಗಳಿಂದ ಕೂಡಿದ ಮನುಷ್ಯರು ಕರ್ಮಮಾಡುವವರೂ, ಒಳಗೂ ಹೊರಗೂ, ಇಂದ್ರಿಯ ಪ್ರವೃತ್ತಿಯುಳ್ಳವರೂ ಆಗಿ, ಎಂಟು ವಿಧವಾಗಿ ವಿಂಗಡಿಸಲ್ಪಟ್ಟಿದ್ದಾರೆ. ಗಂಧರ್ವರಿಗೆ ಸಮನಾದ ಮನುಷ್ಯರು ಸಾಧಕ ಸಿದ್ಧರೆಂದು ತಿಳಿಯಬೇಕು. ಹೀಗೆ ಅಗ್ನಿಗೆ ಸಂಬಂಧಪಟ್ಟ ತೈಜಸ ಸೃಷ್ಟಿಯ ವಿಷಯ ನಿರೂಪಣೆಯಲ್ಲಿ ಅರ್ವಾಕ್ ಸ್ರೋತಸ್ಸುಗಳಾದ ಮನುಷ್ಯರ ಸೃಷ್ಟಿಯು ಒಂಬತ್ತನೆಯದಾಗಿ ಹೇಳಲ್ಪಟ್ಟಿದೆ.

**ಪಂಚಮೋಽನುಗ್ರಹಃ ಸರ್ಗ ಶ್ಚತುರ್ಧಾ ತು ವ್ಯವಸ್ಥಿತಃ ।**
**ವಿಪರ್ಯಯೇಣ ಶಕ್ತ್ಯಾ ಚ ಸಿದ್ಧ್ಯಾ ತುಷ್ಟ್ಯಾ ತಥೈವಚ ॥೧೫೭॥**

**ಸ್ಥಾವರೇಷು ವಿಪರ್ಯಾಸ ಸ್ತಿರ್ಯಗ್ಯೋನಿಷು ಶಕ್ತಿತಃ ।**
**ಸಿದ್ಧಾತ್ಮಾನೋ ಮನುಷ್ಯಾಸ್ತು ಋಷಿ ದೇವೇಷು ಕೃತ್ಸ್ನಶಃ ॥**

**ಇತ್ಯೇಷ ಪ್ರಾಕೃತಃ ಸರ್ಗೋ ವೈಕೃತೋ ನವಮಃ ಸ್ಮೃತಃ ।**
**ಭೂತಾದಿ ಕಾನಾಂ ಭೂತಾನಾಂ ಷಷ್ಠಃ ಸರ್ಗಃ ಸ ಉಚ್ಯತೇ ॥೧೫೯॥**

**ನಿವೃತ್ತಂ ವರ್ತಮಾನಂ ಚ ತೇಷಾಂ ಜಾನಂತಿ ವೈ ಪುನಃ ।**
**ಭೂತಾದಿ ಕಾನಾಂ ಭೂತಾನಾಂ ಸಪ್ತಮಃ ಸರ್ಗ ಏವಚ ॥೧೬೦॥**

**ತೇ ಪರಿಗ್ರಾಹಿಣಃ ಸರ್ವೇ ಸಂವಿಭಾಗ ರತಾಃ ಪುನಃ ।**
**ಸ್ವಾದನಾ ಶ್ಚಾ ಪ್ಯಶೀಲಾಶ್ಚ ಜ್ಞೇಯಾ ಭೂತಾದಿ ಕಾಶ್ಚ ತೇ ॥೧೬೧॥**

---

೧೫೭–೧೫೯. ಬ್ರಹ್ಮನ ಐದನೆಯ ಸೃಷ್ಟಿಯು ನಾಲ್ಕು ವಿಧವಾಗಿದೆ ಯೆಂದು ಹೇಳಲ್ಪಟ್ಟಿದೆ. ಆ ಬಗೆಯು ವ್ಯತ್ಯಾಸ, ಶಕ್ತಿ, ಸಿದ್ಧಿ, ಸಂತೋಷ, ಎಂಬ ನಾಲ್ಕು ಭೇದಗಳಿಂದ ಆದದ್ದು. ಜಡವಾದ ಪದಾರ್ಥಗಳ ಸೃಷ್ಟಿಯು ವ್ಯತ್ಯಾಸದಿಂದಲೂ, ಜೀವಜಂತುಗಳ ಸೃಷ್ಟಿಯು ಶಕ್ತಿ ಯಿಂದಲೂ, ಸಿದ್ಧರಾದ ಮಾನವರದು ಸಿದ್ಧಿಯಿಂದಲೂ, ಋಷಿದೇವತೆ ಗಳದು ಸಂತೋಷದಿಂದಲೂ, ಆದವೆಂದು ಅರಿಯಬೇಕು. ಹೀಗೆ ಪ್ರಕೃತಿಗೆ ಸಂಬಂಧಪಟ್ಟ ಸೃಷ್ಟಿಯು ಒಂಬತ್ತನೆಯದೆಂದು ತಿಳಿಯಬೇಕು. ಭೂತವೇ ಮೊದಲಾದ ಭೌತಿಕ ಸೃಷ್ಟಿಯು ಆರನೆಯದೆಂದು ಹೇಳ ಲ್ಪಟ್ಟಿದೆ.

೧೬೦–೧೬೧. ಏಳನೆಯದಾಗಿ ಸೃಷ್ಟಿಮಾಡಲ್ಪಟ್ಟ ಮಹರ್ಷಿಗಳು ಸಕಲ ಚರಾಚರವರ್ಗದ ಭೂತ ಭವಿಷ್ಯದ್ವರ್ತಮಾನಗಳ ಫಲಾಫಲ ಗಳನ್ನು ತಿಳಿಯ ಬಲ್ಲರು. ಹಿಂದೆ ಹೇಳಿದ ಭೂತವೇ ಮೊದಲಾದ ಸೃಷ್ಟಿ ಸಲ್ಪಟ್ಟ ಸಕಲ ಪ್ರಾಣಿಗಳೂ ಆಶೆಯಿಲ್ಲದೇ ದಾನಾದಿಕರ್ಮಗಳನ್ನು ಮಾಡಿದರೂ, ಅಜ್ಞಾನದ ದೆಸೆಯಿಂದ ಪೂರ್ವಕರ್ಮ ಫಲಗಳನ್ನು ಅನುಭವಿಸುತ್ತಲೇ ಇರುತ್ತವೆ. ಭೂತವೇ ಮೊದಲಾದ ಸಕಲ ಸೃಷ್ಟಿಯೂ,

ವಿಪರ್ಯಯೇಣ ಭೂತಾದಿ ರಶಕ್ತ್ಯಾಚ ವ್ಯವಸ್ಥಿತಃ ।
ಪ್ರಥಮೋ ಮಹತಃ ಸರ್ಗೋ ವಿಜ್ಞೇಯೋ ಬ್ರಹ್ಮಣಃ ಸ್ಮೃತಃ ॥
ತನ್ಮಾತ್ರಾಣಾಂ ದ್ವಿತೀಯಸ್ತು ಭೂತಸರ್ಗಃ ಸ ಉಚ್ಯತೇ ।
ವೈಕಾರಿಕ ಸ್ತೃತೀಯಸ್ತು ಸರ್ಗ ಐಂದ್ರಿಯಿಕಃ ಸ್ಮೃತಃ ॥೧೬೩॥
ಇತ್ಯೇಷ ಪ್ರಾಕೃತಃ ಸರ್ಗಃ ಸಂಭೂತೋ ಬುದ್ಧಿಪೂರ್ವಕಃ ।
ಮುಖ್ಯ ಸರ್ಗ ಶ್ಚತುರ್ಥಶ್ಚ ಮುಖ್ಯಾ ವೈ ಸ್ಥಾವರಾಃ ಸ್ಮೃತಾಃ ॥
ತತೋಽರ್ವಾಕ್ಸ್ರೋತಸಾಂ ಸರ್ಗಃ ಸಪ್ತಮಃ ಸ ತು ಮಾನುಷಃ ।
ಅಷ್ಟಮೋಽನುಗ್ರಹಃ ಸರ್ಗಃ ಸಾತ್ವಿಕ ಸ್ತಾಮಸಶ್ಚ ಸಃ ॥೧೬೫॥
ಪಂಚೈತೇ ವೈಕೃತಾಃ ಸರ್ಗಾಃ ಪ್ರಾಕೃತಾಸ್ತುತ್ರಯಃ ಸ್ಮೃತಾಃ ।
ಪ್ರಾಕೃತೋ ವೈಕೃತ ಶ್ಚೈವ ಕೌಮಾರೋ ನವಮಃ ಸ್ಮೃತಃ ॥೧೬೬॥

---

ಅಜ್ಞಾನದಿಂದಲೂ, ವಿಷ್ಣು ಮಾಯೆಯಿಂದಲೂ ಆವರಿಸಲ್ಪಟ್ಟಿದೆ. ಇಲ್ಲಿಯವರೆಗೆ ಹೇಳಿದ್ದು ಬ್ರಹ್ಮನ ಮೊದಲನೆಯ ಸರ್ಗವೆಂದು (ಹೇಳಬೇಕು) ತಿಳಿಯಬೇಕು.

೧೬೩–೧೬೫. ಪಂಚ ತನ್ಮಾತ್ರಗಳೆಂಬ ಪ್ರಕೃತಿ ವಿಕಾರಗಳ ಸೃಷ್ಟಿಯು ಎರಡನೆಯ ಭೂತಸರ್ಗವೆಂದು ಕರೆಯಲ್ಪಡುತ್ತದೆ. ಇಂದ್ರಿಯ ಸಂಬಂಧವಾದ ಸೃಷ್ಟಿಯು, ವಿಕಾರಿಯಾದ ಮೂರನೆಯ ಸೃಷ್ಟಿಯೆಂದು ಅರಿಯಬೇಕು. ಈ ರೀತಿಯಾಗಿ ಸೃಷ್ಟಿಯಲ್ಲಿ ಬ್ರಹ್ಮನು ಬುದ್ಧಿಪೂರ್ವಕವಾಗಿ ಮಾಡಿದ ಪ್ರಾಕೃತ ಸೃಷ್ಟಿಯ ವಿಷಯವನ್ನು ಹೇಳಿದ ಹಾಗಾಯಿತು. ಬ್ರಹ್ಮನ ಮುಖ್ಯ ಸೃಷ್ಟಿಗಳ ಪೈಕಿ ಸ್ಥಾವರ ಸೃಷ್ಟಿಯೂ, ಒಂದು, ಎಂದು ಹೇಳಲ್ಪಟ್ಟಿದೆ. ಆ ಮೇಲೆ ಅರ್ವಾಕ್ಸ್ರೋತಸ್ಸುಗಳ ಸೃಷ್ಟಿ. ಇದೇ ಏಳನೆಯದಾದ ಮನುಷ್ಯ ಸೃಷ್ಟಿಯೆಂದೂ ಅರಿಯಬೇಕು. ಎಂಟನೆಯ ಸೃಷ್ಟಿಯು, ಸಾತ್ವಿಕ ಮತ್ತು ತಾಮಸ, ಎರಡು ವಿಧವಾಗಿಯೂ, ಇದೆ.

೧೬೬–೧೬೮. ಇವು ಐದೂ ಬ್ರಹ್ಮನ ವಿಕಾರಭೂತಗಳಾದ ಸೃಷ್ಟಿಗಳೆಂಬುದಾಗಿಯೂ, ಪ್ರಕೃತಿ ಸಂಬಂಧವಾದ ಸೃಷ್ಟಿಗಳು ಮೂರೆಂದೂ ತಿಳಿಯಬೇಕು. ಸನಕಾದಿ ಕುಮಾರರ ಸೃಷ್ಟಿಯು ಒಂಬತ್ತನೆಯದೂ, ಪ್ರಾಕೃ

**ಅಬುದ್ಧಿಪೂರ್ವಕಾಃ ಸರ್ಗಾಃ ಪ್ರಾಕೃತಾಸ್ತು ತ್ರಯಃ ಸ್ಮೃತಾಃ ।**
**ಬುದ್ಧಿಪೂರ್ವಂ ಪ್ರವರ್ತಂತೇ ಷಟ್ಪುನ ಬ್ರಹ್ಮಣಸ್ತು ತೇ ॥೧೬೭॥**

**ವಿಸ್ತಾರಾನುಗ್ರಹಃ ಸರ್ಗಃ ಕೀರ್ತ್ಯಮಾನೋ ನಿಬೋಧತ ।**
**ಚತುರ್ಥಾಽವಸ್ಥಿತಃ ಸೋಽಥ ಸರ್ವಭೂತೇಷು ಕೃತ್ಸ್ನಶಃ ॥೧೬೮॥**

**ಇತ್ಯೇತೇ ಪ್ರಾಕೃತಾ ಶ್ಚೈವ ವೈಕೃತಾಶ್ಚ ನವ ಸ್ಮೃತಾಃ ।**
**ಪರಸ್ಪರಾನುರಕ್ತಾಶ್ಚ ಕಾರಣೈಶ್ಚ ಬುದ್ಧೈಃ ಸ್ಮೃತಾಃ ॥೧೬೯॥**

**ಅಗ್ರೇ ಸಸರ್ಜ ವೈ ಬ್ರಹ್ಮಾ ಮಾನಸಾ ನಾತ್ಮನಃ ಸಮಾನ್ ।**
**ಋಭುಃ ಸನತ್ಕುಮಾರಶ್ಚ ದ್ವಾವೇತಾ ವೂರ್ಧ್ವ ರೇತಸೌ ॥೧೭೦॥**

**ಪೂರ್ವೋತ್ಪನ್ನೌ ಪುರಾ ತೇಭ್ಯಃ ಸರ್ವೇಷಾಮಪಿ ಪೂರ್ವಜೌ ।**
**ವ್ಯತೀತೇ ತ್ವಷ್ಟಮೇ ಕಲ್ಪೇ ಪುರಾಣೌ ಲೋಕಸಾಕ್ಷಿಣೌ ॥೧೭೧॥**

---

ತವೂ, ವಿಕಾರವುಳ್ಳದ್ದೂ, ಆಗಿ, ಈ ಎರಡರ ಸ್ವರೂಪವುಳ್ಳ ಸೃಷ್ಟಿಯೆಂದರಿಯಬೇಕು. ಭಗವಂತನು ಬುದ್ಧಿಪೂರ್ವಕವಾಗಿ ಮಾಡದಿರುವ ಪ್ರಾಕೃತ ಸೃಷ್ಟಿಗಳೂ ಮೂರುಂಟು. ಬ್ರಹ್ಮನು ಬುದ್ಧಿಪೂರ್ವಕವಾಗಿ ಮಾಡುವ ಸೃಷ್ಟಿಗಳು ಆರುಂಟು. ಬ್ರಹ್ಮನ ವಿಸ್ತಾರಪಾದ ಅನುಗ್ರಹ, ಎಂಬ ಹೆಸರುಳ್ಳ ಸೃಷ್ಟಿಯ ವಿಷಯವನ್ನು ತಿಳಿಯಿರಿ. ಹೀಗೆ ಬ್ರಹ್ಮನ ಸೃಷ್ಟಿಯು ಭೂತಗಳ ವಿಷಯದಲ್ಲಿ ನಾಲ್ಕು ವಿಧವಾಗಿದೆಯೆಂದು ತಿಳಿಯಬೇಕು.

೧೬೯–೧೭೧. ಹೀಗೆ ಬ್ರಹ್ಮನ ಪ್ರಾಕೃತ ಮತ್ತು ವಿಕಾರವುಳ್ಳ ಸೃಷ್ಟಿಗಳು ಒಂಬತ್ತು, ಎಂದು ತಿಳಿಯಬೇಕು. ಇವು ಕಾರಣಗಳಿಂದ ಕೂಡಿಯೂ, ಅನ್ಯೋನ್ಯವಾಗಿ ಹೊಂದಿಕೊಂಡು ಇವೆಯೆಂದು ತಿಳಿಯಬೇಕು. ಬ್ರಹ್ಮನು ಮೊದಲು ತನಗೆ ಸಮಾನರಾದ ಮಾನಸ ಪುತ್ರರನ್ನು ಸೃಜಿಸಿದನು. ಅವರಲ್ಲಿ ಋಭು, ಸನತ್ಕುಮಾರ, ಇವರು ಬ್ರಹ್ಮಚಾರಿಗಳು. ಇವರು ಎಲ್ಲರಿಗಿಂತಲೂ ಮೊದಲು ಹುಟ್ಟಿದವರೂ, ಪ್ರಪಂಚದ ವಿಷಯವನ್ನೆಲ್ಲವನ್ನೂ ಬಲ್ಲವರೂ, ಹಿಂದಿನ ಎಂಟನೆಯ ಕಲ್ಪದಲ್ಲೇ ಹಳಬರೂ ಆಗಿದ್ದರು

ತೌ ವಾರಾಹೇ ತು ಭೂರ್ಲೋಕೇ ತೇಜಃ ಸಂಕ್ಷಿಪ್ಯ ಧಿಷ್ಠಿತೌ ।
ತಾವುಭೌ ಮೋಕ್ಷ ಕರ್ಮಾಣಾ ವಾರೋಪ್ಯಾತ್ಮಾನ ಮಾತ್ಮನಿ ॥
ಪ್ರಜಾಂ ಧರ್ಮಂ ಚ ಕಾಮಂ ಚ ತ್ಯಕ್ತ್ವಾ ವೈರಾಗ್ಯಮಾ ಸ್ಥಿತೌ ।
ಯಥೋತ್ಪನ್ನ ಸ್ತಥೈವೇಹ ಕುಮಾರಃ ಸ ಇಹೋಚ್ಯತೇ ॥೧೭೩॥
ತಸ್ಮಾತ್ಸನತ್ಕುಮಾರೇತಿ ನಾಮಾಸ್ಯೇಹ ಪ್ರಕೀರ್ತಿತಂ ।
ಸನಂದಂ ಸನಕಂ ಚೈವ ವಿದ್ವಾಂಸಂ ಚ ಸನಾತನಂ ॥೧೭೪॥
ವಿಜ್ಞಾನೇನ ನಿವೃತ್ತಾಸ್ತೇ ವ್ಯವರ್ತಂತ ಮಹೌಜಸಃ ।
ಸಂಬುದ್ಧಾಶ್ಚೈವ ನಾನಾತ್ವೇ ಅಪ್ರವೃತ್ತಾಶ್ಚ ಯೋಗಿನಃ ॥೧೭೫॥
ಅಸೃಷ್ಟ್ವೈವ ಪ್ರಜಾ ಸರ್ಗಂ ಪ್ರತಿಸರ್ಗಂ ಗತಾಃ ಪುನಃ ।
ತತ ಸ್ತೇಷು ವ್ಯತೀತೇಷು ತತೋಽನ್ಯಾನ್ಸಾಧ ಕಾನ್ಸ್ರತಾನ್ ॥೧೭೬॥

---

೧೭೨-೧೭೪. ಅವರು ವರಾಹನಿಂದ ಉದ್ಧಾರಮಾಡಲ್ಪಟ್ಟ ಭೂಲೋಕದಲ್ಲಿ ತಮ್ಮ ತೇಜಸ್ಸನ್ನು ಕಮ್ಮಿಮಾಡಿಕೊಂಡಿದ್ದರು. ಅವರು ಯಾವಾಗಲೂ ಪೃಥಕಾಯರಾಗಿ, ಮೋಕ್ಷಾಭಿಲಾಷಿಗಳಾಗಿ, ಮಕ್ಕಳು, ಧರ್ಮ, ಕಾಮ, ಎಲ್ಲವನ್ನೂ ತೊರೆದು, ವಿರಕ್ತರಾಗಿ ಮೋಕ್ಷಮಾರ್ಗದಲ್ಲಿರುತ್ತಿದ್ದರು. ಹುಟ್ಟಿದಾಗ ಇದ್ದ ಹಾಗೆಯೇ ಕೊನೆಯುವರಿಗೂ ಇದ್ದುದರಿಂದಲೇ ಇವರಿಗೆ ಸನತ್ಕುಮಾರ, ಎಂದು ಹೆಸರು ಬಂದಿತು. ಇವರಲ್ಲದೇ ಸನಂದನೆಂಬುವನೂ ಇವರ ಜೊತೆಯಲ್ಲಿಯೇ ಮಹಾಜ್ಞಾನಿಯಾಗಿಯೂ, ಆತ್ಮಜ್ಞಾನದಲ್ಲಿ ಆಸಕ್ತನಾಗಿಯೂಪುರಾಣ ಮಹರ್ಷಿಯಾಗಿಯೂಇದ್ದನು.

೧೭೫-೧೭೬. ಇವರು ಮಹಾ ತೇಜಸ್ವಿಗಳಾಗಿಯೂ, ನಿವೃತ್ತಿಮಾರ್ಗದಲ್ಲಿದ್ದು ಭೇದಸೃಷ್ಟಿಯಿಲ್ಲದೇ ಯಾವಾಗಲೂ ಯೋಗಿಗಳಾಗಿದ್ದರು. ತಾವು ಸಂತಾನವನ್ನು ಹೊಂದಲು ಅಪೇಕ್ಷಿಸದೇ ಪ್ರತಿ ಸೃಷ್ಟಿಯಲ್ಲಿಯೂ ಇವರು ನಿವೃತ್ತಿಧರ್ಮರಾಗುತ್ತಾರೆ. ಅವರು ನಿವೃತ್ತರಾಗಲು ಬ್ರಹ್ಮನು ಪ್ರಜೆಗಳನ್ನು ಸೃಜಿಸುವ ಸಂಸಾರಿಗಳನ್ನು ಸೃಜಿಸುತ್ತಾನೆ.

ಮಾನಸಾ ನಸೃಜ ದ್ಬ್ರಹ್ಮಾ ಪುನಃ ಸ್ಥಾನಾಭಿ ಮಾನಿನಃ ।
ಆಭೂತ ಸಂಪ್ಲವಾ ವಸ್ಥಾ ಯೈ ರಿಯಂ ವಿಧೃತಾ ಮಹೀ ॥೧೭೭॥
(ಅ) ಅಪೋಽಗ್ನಿಂ ಪೃಥಿವೀಂ ವಾಯು ಮಂತರಿಕ್ಷಂ ದಿವಂ ತಥಾ ।
ಸಮುದ್ರಾಂಶ್ಚ ನದೀಶ್ಚೈವ ತಥಾ ಶೈಲ ವನಸ್ಪತೀನ್ ॥೧೭೮॥
ಓಷಧೀನಾಂ ತಥಾಽತ್ಮಾನೋ ವಲ್ಲೀನಾಂ ವೃಕ್ಷ ವೀರುಧಾಂ ।
ಲತಾಃ ಕಾಷ್ಠಾಃ ಕಲಾಶ್ಚೈವ ಮುಹೂರ್ತಾಃ ಸಂಧಿರಾತ್ರ್ಯಹಾನ್ ॥
ಅರ್ಧಮಾಸಾಂಶ್ಚ ಮಾಸಾಂಶ್ಚ ಅಯನಾಬ್ದ ಯುಗಾನಿ ಚ ।
ಸ್ಥಾನಾಭಿಮಾನಿನಃ ಸರ್ವೇ ಸ್ಥಾನಾಖ್ಯಾ ಶ್ಚೈವ ತೇ ಸ್ಮೃತಾಃ ॥೧೮೦॥
ದೇವಾ ನೃಷೀಂಶ್ಚ ಮಹತೋ ಗದತಸ್ತಾ ನ್ನಿಬೋಧತ ।
ಮರೀಚಿ ಭೃಗ್ವಂಗಿರಸಂ ಪುಲಸ್ತ್ಯಂ ಪುಲಹಂ ಕ್ರತುಂ ॥೧೮೧॥
ದಕ್ಷಮತ್ರಿಂ ವಸಿಷ್ಠಂ ಚ ಸೋಽಸ್ಯ ಜನ್ಮಾನ ಸಾನ್ನವ ।
ನವ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ ॥೧೮೨॥

---

೧೭೭–೧೭೯. ಬ್ರಹ್ಮನು ಪುನಃ ಕೆಲವು ಮಾನಸಪುತ್ರರನ್ನೂ ಸೃಜಿಸಿದನು. ಸ್ಥಿರಸ್ವರೂಪರಾದ ಅವರಿಂದ ಈ ಜಗತ್ತು ಧಾರಣಮಾಡಲ್ಪಟ್ಟಿದೆ. ಅಲ್ಲದೇ ಬ್ರಹ್ಮನು ನೀರನ್ನೂ, ಭೂಮಿಯನ್ನೂ, ಅಗ್ನಿಯನ್ನೂ, ವಾಯುವನ್ನೂ, ಆಕಾಶವನ್ನೂ, ಸಮುದ್ರವನ್ನೂ, ನದಿಗಳನ್ನೂ, ಪರ್ವತಗಳನ್ನೂ, ವನಸ್ಪತಿಗಳನ್ನೂ, ಗಿಡಮೂಲಿಕೆಗಳನ್ನೂ, ಬಳ್ಳಿಗಳನ್ನೂ, ಮರಗಳನ್ನೂ, ಕ್ಷಣ, ಮುಹೂರ್ತ, ರಾತ್ರಿ, ಹಗಲು, ಈ ಮುಂತಾದ ಕಾಲಭಾಗಗಳನ್ನೂ, ವ್ಯವಸ್ಥೆಮಾಡಿದನು.

೧೮೦–೧೮೨. ಅಲ್ಲದೆ ಬ್ರಹ್ಮನು ಪಕ್ಷಗಳನ್ನೂ, ತಿಂಗಳುಗಳನ್ನೂ, ವರ್ಷಗಳನ್ನೂ, ಯುಗಗಳನ್ನೂ, ಸೃಷ್ಟಿಮಾಡಿದನು. ಈ ವಸ್ತುಗಳಿಗೆ ಅಭಿಮಾನಿದೇವತೆಗಳೂ, ಇವಕ್ಕೆ ಬೇರೆ ಬೇರೇ ಸ್ಥಾನಗಳೂ, ಬ್ರಹ್ಮನಿಂದ ಸೃಷ್ಟಿಮಾಡಲ್ಪಟ್ಟವು. ಬ್ರಹ್ಮನು ಮಹಾತ್ಮರಾದ ದೇವತೆಗಳನ್ನೂ, ಋಷಿಗಳನ್ನೂ, ಸೃಷ್ಟಿಸಿದ ವಿಷಯವನ್ನು ಕೇಳಿರಿ. ಮರೀಚಿ, ಭೃಗು, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ, ಎಂಬ ಒಂಬತ್ತು ಮಾನಸ ಬ್ರಹ್ಮರೂ, ಚತುರ್ಮುಖ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟರು. ಇವರೇ ಒಂಬತ್ತು ಬ್ರಹ್ಮಮಾನಸ ಪುತ್ರರು, ಎಂದು ಪುರಾಣದಲ್ಲಿ ನಿಶ್ಚಯಿಸಲ್ಪಟ್ಟಿದೆ.

ಶೇಷಾಂ ಬ್ರಹ್ಮಾತ್ಮಕಾನಾಂ ವೈ ಸರ್ವೇಷಾಂ ಬ್ರಹ್ಮವಾದಿನಾಂ ।
ಸ್ಥಾನಾನಿ ಕಲ್ಪಯಾಮಾಸ ಪೂರ್ವನ ತ್ಪದ್ಮಸಂಭವಃ ॥೧೮೩॥
ತತೋಽಸೃಜ ಚ್ಚ ಸಂಕಲ್ಪಂ ಧರ್ಮಂಚೈವ ಸುಖಾವಹಂ ।
ಸೋಽಸೃಜ ದ್ವ್ಯವಸಾಯಾತ್ತು ಧರ್ಮಂ ದೇವೋ ಮಹೇಶ್ವರಃ ॥
ಸಂಕಲ್ಪಂ ಚೈವ ಸಂಕಲ್ಪಾ ತ್ಸರ್ವ ಲೋಕ ಪಿತಾಮಹಃ ।
ಮಾನಸಶ್ಚ ರುಚಿರ್ನಾಮ ವಿಜಜ್ಞೇ ಬ್ರಹ್ಮಣಃ ಪ್ರಭೋಃ ॥೧೮೫॥
ಪ್ರಾಣಾದ್ಬ್ರಹ್ಮಾಽಸೃಜದ್ದಕ್ಷಂ ಚಕ್ಷುರ್ಭ್ಯಾಂ ಚ ಮರೀಚಿನಂ ।
ಭೃಗುಸ್ತು ಹೃದಯಾಜ್ಜಜ್ಞೇ ಋಷಿಃ ಸಲಿಲ ಜನ್ಮನಃ ॥೧೮೬॥
ಶಿರಸೋಽಂಗಿ ರಸ ಶ್ಚೈವ ಶ್ರೋತ್ರಾದತ್ರಿಂ ತಥಾಽಸೃಜತ್ ।
ಪುಲಸ್ತ್ಯಂ ಚ ತಥೋದಾನಾ ದ್ವ್ಯಾನಾಚ್ಚ ಪುಲಹಂ ಪುನಃ ॥೧೮೭॥
ಸಮಾನಜೋ ವಸಿಷ್ಠಶ್ಚ ಅಪಾನಾ ನ್ನಿರ್ಮಮೇ ಕ್ರತುಂ ।
ಇತ್ಯೇತೇ ಬ್ರಹ್ಮಣಃ ಪುತ್ರಾ ದಿವ್ಯಾ ಏಕಾದಶ ಸ್ಮೃತಾಃ ॥೧೮೮॥

---

೧೮೩–೧೮೫. ಕಮಲದಲ್ಲಿ ಹುಟ್ಟಿದ ಬ್ರಹ್ಮನು ಬ್ರಹ್ಮಜ್ಞಾನಿಗಳಾದ ಈ ಒಂಬತ್ತು ಬ್ರಹ್ಮರಿಗೂ ಬೇರೆ ಬೇರೆ ಸ್ಥಾನಗಳನ್ನು ಕಲ್ಪಿಸಿದನು. ಅನಂತರದಲ್ಲಿ ಅವನು ಸುಖಕ್ಕೆ ಕಾರಣವಾದ ಧರ್ಮವನ್ನೂ, ಪ್ರಪಂಚ ಬೆಳೆಯಬೇಕೆಂಬ ಸಂಕಲ್ಪವನ್ನೂ, ಸೃಷ್ಟಿಮಾಡಿದನು. ಎಲ್ಲಾ ಲೋಕಕ್ಕೂ ತಾತನಾದ ಬ್ರಹ್ಮನು ಸಂಕಲ್ಪದ ಮೂಲಕ ಅಭಿಲಾಷೆ, ಎಂಬುದನ್ನೂ ಹಿಂದೆ ಇದ್ದಂತೆಯೇ ಸೃಜಿಸಿದನು.

೧೮೬–೧೮೮. ಬ್ರಹ್ಮನು ಪ್ರಾಣವಾಯುವಿನಿಂದ ದಕ್ಷನನ್ನೂ, ಕಣ್ಣುಗಳಿಂದ ಮರೀಚಿಯನ್ನೂ, ಮನಸ್ಸಿನಿಂದ ಭೃಗು ಋಷಿಯನ್ನೂ, ಶಿರಸ್ಸಿನಿಂದ ಅಂಗಿರಸ್ಸನ್ನೂ, ಕಿವಿಯಿಂದ ಅತ್ರಿ ಮಹರ್ಷಿಯನ್ನೂ, ಉದಾನ ವಾಯುವಿನಿಂದ ಪುಲಸ್ತ್ಯನನ್ನೂ, ವ್ಯಾನವಾಯುವಿನಿಂದ ಪುಲಹನನ್ನೂ, ಸಮಾನವಾಯುವಿನಿಂದ ವಸಿಷ್ಠ ಮಹರ್ಷಿಯನ್ನೂ, ಅಪಾನ ವಾಯುವಿನಿಂದ ಕ್ರತುವನ್ನೂ ಸೃಷ್ಟಿಮಾಡಿದನು. ಇವರೇ ದೇವಾಂಶ ಸಂಭೂತರಾದ ಬ್ರಹ್ಮನ ಹನ್ನೊಂದು ಜನ ಮಕ್ಕಳೆಂದು ತಿಳಿಯಬೇಕು.

ಧರ್ಮಾದಯಃ ಪ್ರಥಮಜಾಃ ಸರ್ವೇ ತೇ ಬ್ರಹ್ಮಣಃ ಸುತಾಃ ।
ಭೃಗ್ವಾದಯಸ್ತು ತೇ ಸೃಷ್ಟಾ ನನ್ಯೈತೇ ಬ್ರಹ್ಮ ವಾದಿನಃ ॥೧೮೯॥
ಗೃಹಮೇಧಿನಃ ಪುರಾಣಾಸ್ತೇ ಧರ್ಮಸ್ತ್ಯೈಃ ಸಂಪ್ರವರ್ತಿತಃ ।
ತೇಷಾಂ ದ್ವಾದಶ ತೇ ವಂಶಾ ದಿವ್ಯಾ ದೇವಗುಣಾನ್ವಿತಾಃ ॥೧೯೦॥
ಕ್ರಿಯಾವಂತಃ ಪ್ರಜಾವಂತೋ ಮಹರ್ಷಿಭಿ ರಲಂಕೃತಾಃ ।
ಋಭುಃ ಸನತ್ಕುಮಾರಶ್ಚ ದ್ವಾವೇತಾ ವೂರ್ಧ್ವರೇತಸೌ ॥೧೯೧॥
ಪೂರ್ವೋತ್ಪನ್ನೌ ಪರಂ ತೇಭ್ಯಃ ಸರ್ವೇಷಾಮಪಿ ಪೂರ್ವಜೌ ।
ವ್ಯತೀತೇ ತ್ವಷ್ಟಮೇ ಕಲ್ಪೇ ಪುರಾಣೌ ಲೋಕಸಾಕ್ಷಿಣೌ ॥೧೯೨॥
ವಿರಾಜೇತಾ ಮುಭೌ ಲೋಕೇ ತೇಜಃ ಸಂಕ್ಷಿಪ್ಯ ಧಿಷ್ಠಿತೌ ।
ತಾವುಭೌ ಯೋಗ ಕರ್ಮಾಣಾ ವಾರೋ ಪ್ಯಾತ್ಮಾನ ಮಾತ್ಮನಿ ॥

---

೧೮೯–೧೯೧. ಬ್ರಹ್ಮನ ಮಕ್ಕಳ ಪೈಕಿ ಧರ್ಮನೇ ಮೊದಲಾದವರು ಮೊದಲನೆಯವರೆಂದು ತಿಳಿಯಬೇಕು. ಬ್ರಹ್ಮನು ಭೃಗುವೇ ಮೊದಲಾದ ಒಂಬತ್ತು ಜನ ಬ್ರಹ್ಮಜ್ಞಾನಿಗಳೂ, ಗೃಹಸ್ಥರೂ, ಆದ ಬಹಳ ಹಿಂದಿನವರಾದ ಋಷಿಗಳನ್ನು ಸೃಷ್ಟಿಮಾಡಿದನು. ಇವರು ಧರ್ಮಮಾರ್ಗವನ್ನು ಲೋಕಕ್ಕೆ ತೋರಿಸಿದರು. ದೇವತೆಗಳ ಗುಣಗಳನ್ನು ಹೊಂದಿದವೂ, ದೇವಾಂಶ ಸಂಭೂತಗಳೂ, ಆದ ಹನ್ನೆರಡು ವಂಶಗಳು ಈ ಮಹರ್ಷಿಗಳಿಂದ ಉಂಟಾದವು. ಈ ವಂಶಗಳನ್ನು ಸತ್ಕರ್ಮಮಾಡುವವರೂ, ಒಳ್ಳೆಯ ಮಕ್ಕಳನ್ನು ಪಡೆದವರೂ, ಆದ ಮಹರ್ಷಿಗಳು ಅಲಂಕರಿಸಿದರು. ಇವರ ಪೈಕಿ ಋಭು, ಮತ್ತು ಸನತ್ಕುಮಾರ, ಎಂಬಿಬ್ಬರು ಬ್ರಹ್ಮಚಾರಿಗಳಾಗಿದ್ದರು.

೧೯೨–೧೯೪. ಈ ಋಷಿಗಳಿಬ್ಬರೂ ಎಲ್ಲರಿಗಿಂತಲೂ ಮುಂಚೆ ಹುಟ್ಟಿದವರೂ, ಹಿಂದೆ ಕಳೆದ ಎಂಟನೆಯ ಕಲ್ಪದಲ್ಲಿಯೇ ಹಳಬರಾಗಿ ಪ್ರಪಂಚದ ಆಗು ಹೋಗುಗಳನ್ನು ಬಲ್ಲವರೂ ಆಗಿದ್ದರು. ತಮ್ಮ ತೇಜಸ್ಸನ್ನು ಕಡಿಮೆ ಮಾಡಿಕೊಂಡು ಈ ಭೂಲೋಕದಲ್ಲಿ ಅವರು ಪ್ರಕಾಶಿಸಿದರು. ಇವರು ಯಾವಾಗಲೂ ಯೋಗಾಭ್ಯಾಸ ಮಾಡುವವರೂ, ತಮ್ಮಲ್ಲಿ ಸ್ವಸ್ವರೂಪವನ್ನೇ ಧ್ಯಾನದಿಂದ ತಿಳಿಯತಕ್ಕವರೂ, ಮಕ್ಕಳೂ, ಧರ್ಮ, ಕಾಮಾದಿ

ಪ್ರಜಾಂ ಧರ್ಮಂ ಚ ಕಾಮಂ ಚ ತ್ಯಕ್ತ್ವಾ ವೈರಾಗ್ಯ ಮಾಸ್ಥಿತೌ ।
ಯಥೋಽತ್ಪನ್ನಃ ಸ ಏವೇಹ ಕುಮಾರಃ ಸ ಇಹೋಚ್ಯತೇ ॥೧೯೪॥
ತಸ್ಮಾತ್ಸನತ್ಕುಮಾರೇತಿ ನಾಮಾಸ್ಯೇಹ ಪ್ರತಿಷ್ಠಿತಂ ।
ತತೋಽಭಿ ಧ್ಯಾಯತ ಸ್ತಸ್ಯ ಜಜ್ಞಿರೇ ಮಾನಸಾಃ ಪ್ರಜಾಃ ॥೧೯೫॥
ತಚ್ಛರೀರ ಸಮುತ್ಪನ್ನೈಃ ಕಾರ್ಯೈಸ್ತೈಃ ಕಾರಣೈಃ ಸಹ ।
ಕ್ಷೇತ್ರಜ್ಞಾಃ ಸಮವರ್ತಂತ ಗಾತ್ರೇಭ್ಯ ಸ್ತಸ್ಯ ಧೀಮತಃ ॥೧೯೬॥
ತತೋ ದೇವಾಸುರ ಪಿತೃನ್ ಮಾನುಷಾಂಶ್ಚ ಚತುಷ್ಟಯಂ ।
ಸಿಸೃಕ್ಷು ರಂಭಾಂಸ್ಯೇತಾನಿ ಸ್ವಮಾತ್ಮಾನ ಮಯೂಯುಜತ್ ॥
ತತಸ್ತು ಯುಂಜತ ಸ್ತಸ್ಯ ತಮೋಮಾತ್ರ ಸಮುದ್ಭವಂ ।
ಸಮಭಿ ಧ್ಯಾಯತಃ ಸರ್ಗಂ ಪ್ರಯತ್ನೇನ ಪ್ರಜಾಪತೇಃ ॥೧೯೮॥

---

ಗಳನ್ನು ತ್ಯಾಗಮಾಡಿ ವೈರಾಗ್ಯ ಸ್ವಭಾವವುಳ್ಳವರೂ ಆಗಿದ್ದರು. ಹುಟ್ಟಿದಾಗ ಇದ್ದಹಾಗೆಯೇ ಕೊನೆಯುವರೆಗೂ ಇದ್ದುದರಿಂದ ಸನತ್ಕುಮಾರ, ಎಂದು ಒಬ್ಬನಿಗೆ ಹೆಸರು ಬಂದಿತು.

೧೯೫-೧೯೭. ಹೀಗೆ ಆಜನ್ಮ ಬ್ರಹ್ಮಚಾರಿಯಾಗಿದ್ದುದರಿಂದಲೂ ಇವನಿಗೆ ಸನತ್ಕುಮಾರ, ಎಂದು ಹೆಸರು ಬಂದಿತು. ಬ್ರಹ್ಮನು ಧ್ಯಾನ ಮಾಡಲು ಮಾನಸ ಪುತ್ರರು ಜನಿಸಿದರು. ಇವರು ಬ್ರಹ್ಮನ ಅವಯವ ಗಳಿಂದ ಹುಟ್ಟಿದರು. ಹೀಗೆ ಉತ್ಪತ್ತಿಯಾಗುವುದಕ್ಕೆ ತಕ್ಕ ಪೂರ್ವ ಕರ್ಮ ಗಳನ್ನು ಈ ಪುತ್ರರು ಹೊಂದಿದ್ದರು. ಈ ಪುತ್ರರು ಬ್ರಹ್ಮಜ್ಞಾನಿಗಳಾಗಿದ್ದರು. ಅನಂತರದಲ್ಲಿ ಬ್ರಹ್ಮನು ದೇವತೆಗಳು, ರಾಕ್ಷಸರು, ಪಿತೃ ದೇವತೆಗಳು, ಮನುಷ್ಯರು, ಎಂಬ ನಾಲ್ಕು ವಿಧವಾದ ಸೃಷ್ಟಿಯನ್ನು ಮಾಡಲು ತನ್ನ ಮನಸ್ಸನ್ನು ನೀರಿನೊಳಗೆ ಪ್ರವೇಶಿಸುವಂತೆ ಮಾಡಿದನು.

೧೯೮-೨೦೦. ಬ್ರಹ್ಮನ ಮನಸ್ಸು ನೀರಿನೊಳಗೆ ಸೇರಿದ ಕೂಡಲೇ ಉಂಟಾದ, ತಮೋ ಗುಣದಿಂದ ಕೂಡಿದ, ಸೃಷ್ಟಿಯ ವಿಷಯವನ್ನು ಕೇಳಿರಿ. ಆಗ ಬ್ರಹ್ಮನ ತೊಡೆಯಿಂದ ರಾಕ್ಷಸರೆಂಬ ಮಕ್ಕಳು ಹುಟ್ಟಿದರು. ಎಲೈ ಬ್ರಾಹ್ಮಣರೇ, ಅಸು, ಎಂದರೆ ಪ್ರಾಣ ಎಂದರ್ಥ.

**ತತೋಽಸ್ಯ ಜಘನಾ ತ್ಪೂರ್ವ ಮಸುರಾ ಜಜ್ಞಿರೇ ಸುತಾಃ ।**
**ಅಸುಃ ಪ್ರಾಣಃ ಸ್ಮೃತೋ ವಿಪ್ರಾ ಸ್ತಜ್ಜನ್ಮಾನ ಸ್ತತೋಽಸುರಾಃ ॥**

**ಯಯಾ ಸೃಷ್ಟಾಃ ಸುರಾಃ ಸರ್ವೇ ತಾಂ ತನುಂ ಸ ವ್ಯಪೋಹತ ।**
**ಸಾಽಪವಿದ್ಧಾ ತನು ಸ್ತೇನ ಸದ್ಯೋ ರಾತ್ರಿ ರಜಾಯತ ॥೨೦೦॥**

**ಸಾ ತಮೋ ಬಹುಳಾ ಯಸ್ಮಾ ತ್ತತೋ ರಾತ್ರಿ ರ್ನಿಯಾಮಿಕಾ ।**
**ಆವೃತಾ ಸ್ತಮಸಾ ರಾತ್ರೌ ಪ್ರಜಾ ಸ್ತಸ್ಮಾತ್ಸ್ವಪಂತ್ಯುತ ॥೨೦೧॥**

**ಸೃಷ್ಟ್ವಾಽಸುರಾಂಸ್ತತಃ ಸೋ ನ್ಯೈ ತನು ಮನ್ಯಾಮ ಗೃಹ್ಣತ ।**
**ಅವ್ಯಕ್ತಾಂ ಸತ್ತ್ವಬಹುಳಾಂ ತತಸ್ತಾಂ ಸೋಽಭ್ಯ ಪೂಜಯತ್ ॥**

**ತತಸ್ತಾಂ ಯುಂಜತ ಸ್ತಸ್ಯ ಪ್ರಿಯಮಾಸೀ ತ್ಪ್ರಜಾಪತೇಃ ।**
**ತತೋ ಮುಖಾ ತ್ಸಮುತ್ಪನ್ನಾ ದೀವ್ಯತ ಸ್ತಸ್ಯ ದೇವತಾಃ ॥೨೦೩॥**

---

ಅದರಲ್ಲಿ ಉತ್ಪನ್ನರಾದುದರಿಂದಲೇ ಅಸುರರೆಂದು ಹೆಸರು ಬಂದಿದೆ. ಬ್ರಹ್ಮನು ಯಾವಶರೀರದಿಂದ ರಾಕ್ಷಸರನ್ನು ಸೃಷ್ಟಿಸಿದನೋ ಆ ಶರೀರ ವನ್ನು ತ್ಯಾಗಮಾಡಿದನು. ಆ ಶರೀರವು ನಷ್ಟವಾದ ಕೂಡಲೇ ರಾತ್ರಿ ಯುಂಟಾಯಿತು.

೨೦೧-೨೦೩. ರಾತ್ರಿಯು ಹೀಗೆ ಕತ್ತಲಿನಿಂದ ಅವರಿಸಲ್ಪಟ್ಟಿದ್ದ ರಿಂದಲೇ ಬ್ರಹ್ಮನ ನಿಯಮದಂತೆ ಆ ಕಾಲದಲ್ಲಿ ಸಮಸ್ತ ಪ್ರಜೆಗಳೂ ಮಲಗುತ್ತಾರೆ. ಹೀಗೆ ಬ್ರಹ್ಮನು ರಾಕ್ಷಸರನ್ನು ಸೃಷ್ಟಿಮಾಡಿ ಬೇರೇ ಶರೀರವನ್ನು ಪರಿಗ್ರಹಿಸಿದನು. ಈ ಶರೀರವು ಇಂದ್ರಿಯಾಗೋಚರವೂ, ಸಾತ್ವಿಕವಾದುದೂ ಆಗಿತ್ತು. ಬ್ರಹ್ಮನು ಇಂಥಾ ಶರೀರವನ್ನು ಪುರಸ್ಕರಿಸಿದನು. ಬ್ರಹ್ಮನು ಈ ಶರೀರವನ್ನು ಹೊಂದಿದಾಗ ಅವನಿಗೆ ವಿಶೇಷ ಸಂತೋಷವುಂಟಾಯಿತು. ಪ್ರಕಾಶದಿಂದ ವಿನೋದ ಪಡುತ್ತಿರುವ ಬ್ರಹ್ಮನ ಮುಖದಿಂದ ಆಗ ದೇವತೆಗಳು ಹುಟ್ಟಿದರು.

ಯತೋಽಸ್ಯ ದೀವ್ಯತೋ ಜಾತಾ ಸ್ತೇನ ದೇವಾಃ ಪ್ರಕೀರ್ತಿತಾಃ ।
ಧಾತು ರ್ದಿವಿತಿ ಯಃ ಪ್ರೋಕ್ತಃ ಕ್ರೀಡಾಯಾಂ ಸ ವಿಭಾವ್ಯತೇ ॥
ಯಸ್ಮಾ ತ್ತಸ್ಯ ತು ದಿವ್ಯಂತೋ ಜಜ್ಞಿರೇ ತೇನ ದೇವತಾಃ ।
ದೇವಾ ನ್ಸೃಷ್ಟ್ವಾ ಽಥ ದೇವೇಶ ಸ್ತನು ಮನ್ಯಾಮ ಪದ್ಯತ ॥೨೦೫॥
ಉತ್ಸೃಷ್ಟಾ ಸಾ ತನು ಸ್ತೇನ ಸದ್ಯೋಽಹಃ ಸಮಜಾಯತ ।
ತಸ್ಮಾದಹೋ ಧರ್ಮಯುಕ್ತಂ ದೇವತಾಃ ಸಮುಪಾಸತೇ ॥೨೦೬॥
ಸತ್ತ್ವಮಾತ್ರಾ ತ್ಮಿಕಾ ಮೇವ ತತೋಽನ್ಯಾಂ ಸೋಽಭ್ಯಮನ್ಯತ ।
ಪಿತೃ ವ ನ್ಮನ್ಯಮಾನಸ್ಯ ಪುತ್ರಾಂ ಸ್ತಾ ನ್ಧ್ಯಾಯತಃ ಪ್ರಭೋಃ॥೨೦೭॥
ಪಿತರೋ ಹ್ಯುಪ ಪಕ್ಷಾಭ್ಯಾಂ ರಾತ್ರ್ಯಹ್ನೋ ರಂತರೇಽಭವನ್ ।
ತಸ್ಮಾತ್ತೇ ಪಿತರೋ ದೇವಾಃ ಪಿತೃತ್ವಂ ತೇನ ತೇಷು ತತ್ ॥೨೦೮॥

---

೨೦೪. ವಿನೋದ ಪಡುತ್ತಿರುವ ಬ್ರಹ್ಮನ ಮುಖದಿಂದ ಹುಟ್ಟಿದು ವರಿಂದಲೇ ದೇವತೆಗಳೆಂದು ಹೆಸರು ಬಂದಿತು. ದಿವ್, ಎಂಬ ಧಾತುವು ವಿನೋದ ಅಥವಾ ಕ್ರೀಡೆ, ಎಂಬ ಅರ್ಥವನ್ನು ಕೊಡುತ್ತದೆ.

೨೦೫–೨೦೭. ಬ್ರಹ್ಮನು ಈ ಶರೀರವನ್ನೂ ತ್ಯಾಗಮಾಡಲಾಗಿ ಹಗ ಲುಂಟಾಯಿತು. ಆದ್ದರಿಂದ ದೇವತೆಗಳು ಧರ್ಮದಿಂದ ಕೂಡಿದ ಹಗಲನ್ನು ಉಪಾಸಿಸುತ್ತಾರೆ. ಬ್ರಹ್ಮನು ಸತ್ವಗುಣ ಮಾತ್ರವುಳ್ಳ ಬೇರೊಂದು ಶರೀರವನ್ನು ಪರಿಗ್ರಹಿಸಿದನು. ಅನಂತರದಲ್ಲಿ ಅವನು ಮಕ್ಕಳನ್ನು ತಂದೆಯಂತೇ ಭಾವಿಸುತ್ತಿರಲು.

೨೦೮–೨೧೦. ಹಗಲಿರುಳುಗಳ ಮಧ್ಯದಲ್ಲಿ ಬ್ರಹ್ಮನ ರೆಪ್ಪೆಗಳ ಸಮೀಪ ಪ್ರದೇಶದಿಂದ ಪಿತೃದೇವತೆಗಳು ಹುಟ್ಟಿದರು. ಆದ್ದರಿಂದ ಇವ ರಿಗೆ ಪಿತೃದೇವತೆಗಳೆಂದು ಹೆಸರು, ಎಲ್ಲ ಪಿತೃತ್ವವೂ ಇವರಿಗೆ ಬಂದಿತು. ಬ್ರಹ್ಮನು ಪಿತೃದೇವತೆಗಳ ಸೃಷ್ಟಿಯಾದನಂತರ ಆ ಶರೀರವನ್ನು ಪರಿ ತ್ಯಾಗ ಮಾಡಿದನು. ಆಗ ಇದರಿಂದ ಸಾಯಂಕಾಲದ ಸೃಷ್ಟಿಯಾಯಿತು. ಆದ್ದರಿಂದ ಹಗಲು ದೇವತೆಗಳಿಗೆ ಸಂಬಂಧಪಟ್ಟದ್ದೆಂದೂ, ರಾತ್ರಿಯು

ಯಯಾ ಸೃಷ್ಟಾಸ್ತು ಪಿತರಸ್ತನುಂ ತಾಂ ಸ ವ್ಯಪೋಹತ ।
ಸಾಽಪವಿದ್ಧಾ ತನುಸ್ತೇನ ಸದ್ಯಃ ಸಂಧ್ಯಾ ವ್ಯಜಾಯತ ॥೨೦೯॥

ಯಸ್ಮಾದಹ ರ್ದೇವತಾನಾಂ ರಾತ್ರಿರ್ಯಾ ಸಾಽ ಸುರೀ ಸ್ಮೃತಾ ।
ತಯೋ ರ್ಮಧ್ಯೇ ತು ಪೈತ್ರೀ ಯಾ ತನುಃ ಸಾ ತು ಗರೀಯಸೀ ॥

ತಸ್ಮಾದ್ದೇವಾ ಸುರಾಃ ಸರ್ವೇ ಋಷಯೋ ಮಾನವಾಸ್ತಥಾ ।
ಉಪಾಸಂತೇ ಮುದಾ ಯುಕ್ತಾ ರಾತ್ರ್ಯಹ್ನೋ ರ್ಮಧ್ಯಮಾಂ ತನುಂ॥

ತತೋ ಹ್ಯನ್ಯಾಂ ಪುನರ್ಬ್ರಹ್ಮಾ ತನುಂ ವೈ ಸಮುಗೃಹ್ಣತ ।
ರಜೋ ಮಾತ್ರಾತ್ಮಿಕಾ ಯಾಂ ತು ಮನಸಾ ಸೋಽಸೃಜತ್ಪ್ರಭುಃ ॥

ರಜಃ ಪ್ರಿಯಾಂ ಸ್ತತಃ ಸೋಽಥ ಮಾನಸಾ ನಸೃಜ ತ್ಸುತಾನ್ ।
ಮನಸ್ವಿನ ಸ್ತತ ಸ್ತಸ್ಯ ಮಾನವಾ ಜಜ್ಞಿರೇ ಸುತಾಃ ॥೨೧೩॥

---

ರಾಕ್ಷಸರಿಗೆ ಸಂಬಂಧಪಟ್ಟದ್ದೆಂದೂ, ಸಾಯಂಕಾಲವು ಪಿತೃದೇವತೆಗಳಿಗೆ ಸಂಬಂಧಪಟ್ಟದ್ದೆಂದೂ, ಬ್ರಹ್ಮನ ಈ ಮೂರನೆಯ ಶರೀರವು ಅತ್ಯಂತ ಶ್ರೇಷ್ಠವಾದುದೆಂದೂ, ತಿಳಿಯಬೇಕು.

೨೧೧–೨೧೩. ಆದ್ದರಿಂದ ದೇವತೆಗಳೂ, ಮತ್ತು ರಾಕ್ಷಸರೂ, ಋಷಿಗಳು, ಮತ್ತು ಮನುಷ್ಯರೂ ಸಹ ರಾತ್ರಿಗೂ, ಹಗಲಿಗೂ, ಮಧ್ಯ ಕಾಲವಾದ ಸಂಧ್ಯಾ ಎಂಬ ಬ್ರಹ್ಮನ ಈ ಶರೀರವನ್ನು ಬಹಳ ಆನಂದ ದಿಂದ ಪೂಜಿಸುತ್ತಾರೆ. ಇದಾದ ಮೇಲೆ ಬ್ರಹ್ಮನು ಬೇರೊಂದು ಶರೀರ ವನ್ನು ಪರಿಗ್ರಹಿಸಿದನು. ಸ್ವಾಮಿಯಾದ ಬ್ರಹ್ಮನು ರಜೋಗುಣದಿಂದ ಮಾತ್ರವೇ ಕೂಡಿರುವ ಈ ಶರೀರದಲ್ಲಿ ಮನಸ್ಸಿನಿಂದ ಸಂಕಲ್ಪಿಸಿ ರಜೋ ಗುಣದಲ್ಲಿ ವಿಶೇಷ ಮಮತೆಯುಳ್ಳ ಮಾನಸ ಪುತ್ರರನ್ನು ಸೃಷ್ಟಿಸಿದನು. ಸ್ವೇಚ್ಛಾಪ್ರವೃತ್ತರಾದ ಮತ್ತು ಕರ್ಮ ಪ್ರವೃತ್ತಿಯುಳ್ಳ ಮನುಷ್ಯರು ಈ ರೀತಿಯಾಗಿ ಈ ಶರೀರದಿಂದ ಸೃಷ್ಟರಾದರೆಂದು ತಿಳಿಯಬೇಕು.

**ಸೃಷ್ಟ್ವಾ ಪುನಃ ಪ್ರಜಾಶ್ಚಾಪಿ ಸ್ವಾಂ ತನುಂ ತಾಮ ಪೋಹತ ।**
**ಸಾಽಪವಿದ್ಧಾ ತನುಸ್ತೇನ ಜೋತ್ಸ್ನಾ ಸದ್ಯಸ್ತ್ವಜಾಯತ ॥೨೧೪॥**

**ಯಸ್ಮಾದ್ಭವಂತಿ ಸಂಹೃಷ್ಟಾ ಜ್ಯೋತ್ಸ್ನಯಾ ಉದ್ಭವೇ ಪ್ರಜಾಃ ।**
**ಇತ್ಯೇತಾಸ್ತನವಸ್ತೇನ ಹ್ಯಪವಿದ್ಧಾ ಮಹಾತ್ಮನಾ ॥೨೧೫॥**

**ಸದ್ಯೋ ರಾತ್ರ್ಯಹನೀ ಚೈವ ಸಂಧ್ಯಾ ಜ್ಯೋತ್ಸ್ನಾ ಚ ಜಜ್ಞಿರೇ ।**
**ಜ್ಯೋತ್ಸ್ನಾ ಸಂಧ್ಯಾ ಅಹಶ್ಚೈವ ಸತ್ವಮಾತ್ರಾತ್ಮಕಂ ತ್ರಯಂ ॥೨೧೬॥**

**ತಮೋ ಮಾತ್ರಾತ್ಮಿಕಾ ರಾತ್ರಿಃ ಸಾ ವೈ ತಸ್ಮಾನ್ನಿಶಾತ್ಮಿಕಾ ।**
**ತಸ್ಮಾದ್ದೇವಾ ದಿವಾ ತನ್ವಾ ತುಷ್ಟ್ಯಾ ಸೃಷ್ಟಾ ಮುಖಾತ್ತು ವೈ ॥**

**ಯಸ್ಮಾತ್ತೇಷಾಂ ದಿವಾ ಜನ್ಮ ಬಲಿನಸ್ತೇನ ವೈ ದಿವಾ ।**
**ತನ್ವಾ ಯಯಾ ಸುರಾ ರಾತ್ರೌ ಜಘನಾದ ಸೃಜತ್ಪ್ರಭುಃ ॥೨೧೮॥**

---

೨೧೪–೨೧೬. ಹೀಗೆ ಬ್ರಹ್ಮನು ಮಾನವರನ್ನು ಸೃಷ್ಟಿಮಾಡಿ ಆ ಶರೀರವನ್ನೂ ಪರಿತ್ಯಾಗ ಮಾಡಿದನು. ಅದರಿಂದ ಬೆಳದಿಂಗಳುಂಟಾಯಿತು. ಆದ್ದರಿಂದಲೇ ಬೆಳದಿಂಗಳನ್ನು ಕಂಡರೆ ಮನುಷ್ಯರಿಗೆ ಅತ್ಯಂತ ಆನಂದವುಂಟಾಗುವುದು. ಹೀಗೆ ಬ್ರಹ್ಮನು ಕ್ರಮವಾಗಿ ಎಲ್ಲಾ ಶರೀರಗಳನ್ನೂ ಪರಿತ್ಯಾಗಮಾಡಿದನು. ಹೀಗೆ ಬ್ರಹ್ಮನು ಹಗಲಿರುಳುಗಳನ್ನೂ, ಸಾಯಂಕಾಲ, ಮತ್ತು ಬೆಳದಿಂಗಳುಗಳನ್ನೂ, ಸೃಷ್ಟಿಸಿದನು. ಇವುಗಳ ಪೈಕಿ, ಬೆಳದಿಂಗಳು, ಸಾಯಂಕಾಲ, ಹಗಲು ಇವು ಮೂರೂ ಸತ್ವಗುಣದಿಂದ ಕೂಡಿವೆಯೆಂದು ತಿಳಿಯಬೇಕು.

೨೧೭–೨೧೯. ರಾತ್ರಿಯು ಕತ್ತಲೆಯ ಸ್ವರೂಪವುಳ್ಳದ್ದು. ಆದ್ದರಿಂದ ಅದು ''ನಿಶೆ'' ಎನ್ನಿಸಿಕೊಳ್ಳುತ್ತದೆ. ಆದ್ದರಿಂದಲೇ ದೇವತೆಗಳು ಬ್ರಹ್ಮನ ಮುಖದಿಂದ ಹಗಲಿನಲ್ಲಿಯೇ ಸೃಷ್ಟಿಸಲ್ಪಟ್ಟರು. ದೇವತೆಗಳ ಜನ್ಮವು ಹಗಲಿನಲ್ಲಾದ್ದರಿಂದಲೇ ಹಗಲಿಗೆ, 'ದಿವಾ' ಎಂದು ಹೆಸರು. ಸ್ವಾಮಿಯ ತೊಡೆಯಿಂದ ಬಲಿಷ್ಠರಾದ ರಾಕ್ಷಸರ ಸೃಷ್ಟಿಯು ರಾತ್ರಿಯಲ್ಲಾದ್ದರಿಂದಲೇ ರಾತ್ರಿಗೆ ''ನಿಶೆ'' ಎಂದು ಹೆಸರು ಬಂದಿದೆ.

ಪ್ರಾಣೇಭ್ಯೋ ನಿಶಿ ಜನ್ಮಾನೋ ಬಲಿನೋ ನಿಶಿ ತೇನ ತೇ ।
ಏತಾನ್ಯೇವ ಭವಿಷ್ಯಾಣಾಂ ದೇವಾನಾ ಮಸುರೈಃ ಸಹ ॥೨೧೯॥

ಪಿತೃಣಾಂ ಮಾನವಾನಾಂ ಚ ಅತೀತಾನಾಗತೇಷು ವೈ ।
ಮನ್ವಂತರೇಷು ಸರ್ವೇಷು ನಿಮಿತ್ತಾನಿ ಭವಂತಿ ಹಿ ॥೨೨೦॥

ಜ್ಯೋತ್ಸ್ನಾ ರಾತ್ರ್ಯಹನೀ ಸಂಧ್ಯಾ ಚತ್ವಾ ರ್ಯಂಭಾಂಸಿ ತಾನಿ ವೈ ।
ಭಾಂತಿ ಯಸ್ಮಾತ್ತತೋಽಂಭಾಂಸಿ ಶಬ್ದೋಽಯಂ ಸುಮನೀಷಿಭಿಃ ॥

ಭಾತಿರ್ದೀಪ್ತೌ ನಿಗದಿತಃ ಪುನಶ್ಚಾಥ ಪ್ರಜಾಪತಿಃ ।
ಸೋಽಂಭಾಂಸ್ಯೇತಾನಿ ಸೃಷ್ಟ್ವಾ ತು ದೇವ ಮಾನುಷ ದಾನವಾನ್ ॥

ಪಿತೃಂಶ್ಚೈವಾ ಸೃಜತ್ತನ್ವಾ ಆತ್ಮನಾ ವಿವಿಧಾನ್ಪುನಃ ।
ತಾಮು ತ್ಸೃಜ್ಯ ತನುಂ ಜ್ಯೋತ್ಸ್ನಾಂ ತತೋಽನ್ಯಾಂ ಪ್ರಾಪ್ಯ ಸ
ಪ್ರಭುಃ ॥೨೨೩॥

---

ರಾತ್ರಿಯಲ್ಲಿ ಪ್ರಾಣಗಳಿಂದ ಹುಟ್ಟಿದ್ದರಿಂದ ರಾಕ್ಷಸರು ಆಗ ಬಲಿಷ್ಠ ರಾಗಿರುತ್ತಾರೆ. ಹೀಗೆಯೇ ಮುಂದೆ ಬರುವ ದೇವತೆಗಳ ಮತ್ತು ರಾಕ್ಷಸರ ಸೃಷ್ಟಿಯು ನಡೆಯುವುದೆಂದು ತಿಳಿಯಬೇಕು.

೨೨೦–೨೨೨. ಹಿಂದೆ ಕಳೆದ ಮತ್ತು ಮುಂದೆ ಬರುವ ಪಿತೃಗಳೂ, ದೇವತೆಗಳೂ, ಮನುಷ್ಯರೂ, ಮುಂತಾದವರ ಸೃಷ್ಟಿಯೆಲ್ಲವೂ ಹೀಗೆಯೇ ಆಗುವುದೆಂದು ತಿಳಿಯಿರಿ. ವಿದ್ವಾಂಸರು ನೀರನ್ನು ಅಂಭಸ್, ಎಂದು ಕರೆಯುವುದು, ಬೆಳದಿಂಗಳು, ರಾತ್ರಿ, ಹಗಲು, ಸಾಯಂಕಾಲ, ಈ ನಾಲ್ಕು ನೀರಿನಲ್ಲಿ ಪ್ರಕಾಶಮಾನವಾಗಿ ಕಾಣುವುದರಿಂದಲೇ ಎಂದು ತಿಳಿಯ ಬೇಕು. ಭಾ, ಎಂಬ ಧಾತುವಿಗೆ ಬೆಳಗು, ಎಂದರ್ಥ. ಬ್ರಹ್ಮನು ಹೀಗೆ ನೀರಿನಲ್ಲಿ ದೇವ, ಮಾನವ, ರಾಕ್ಷಸರನ್ನು ಸೃಷ್ಟಿಸಿದನು.

೨೨೩–೨೨೬. ಬ್ರಹ್ಮನು ಪುನಃ ಅನೇಕವಿಧರಾದ ಪಿತೃದೇವತೆಗಳನ್ನು ತನ್ನ ಶರೀರದಿಂದ ಸೃಜಿಸಿದನು. ಅನಂತರ ಇವನು ಈ ಬೆಳದಿಂಗಳು ರೂಪವಾದ ಶರೀರವನ್ನು ಪರಿತ್ಯಾಗಮಾಡಿ, ತಮೋಗುಣ, ರಜೋಗುಣ

ಮೂರ್ತಿಂ ತಮೋ ರಜಃ ಪ್ರಾಯಾಂ ಪುನರೇವಾಽಭ್ಯ ಪೂಜಯುತ್ ।
ಅಂಧಕಾರೇ ಕ್ಷುಧಾಽಽ ವಿಷ್ಟಾಂ ಸ್ತತೋಽನ್ಯಾ ನ್ಸೋಽಸೃಜತ್ಪ್ರಭುಃ॥
ತೇನ ಸೃಷ್ಟಾಃ ಕ್ಷುಧಾತ್ಮಾನೋ ಹ್ಯಂಭಾಂಸ್ಯಾ ದಾತುಮುದ್ಯತಾಃ ।
ಅಂಭಾಂಸ್ಯೇತಾನಿ ರಕ್ಷಾಮ ಉಕ್ತವಂ ತಸ್ತು ತೇಷು ಯೇ ॥೨೨೫॥
ರಾಕ್ಷಸಾ ನಾಮ ತೇ ಯಸ್ಮಾ ತ್ಕ್ಷುಧಾಽಽವಿಷ್ಟಾ ನಿಶಾಚರಾಃ ।
ಯೇಽಬ್ರುವ ನ್ಯಕ್ಷಮೋಽಂಭಾಂಸಿ ತೇಷಾಂ ಹೃಷ್ಟಾಃ ಪರಸ್ಪರಂ ॥
ತೇನ ತೇ ಕರ್ಮಣಾ ಯಕ್ಷಾ ಗುಹ್ಯಕಾ ಗೂಢಕರ್ಮಣಾ ।
ರಕ್ಷಣೇ ಕಾಲನೇ ಚಾಪಿ ಧಾತುರೇಷ ವಿಭಾವ್ಯತೇ ॥೨೨೭॥
ಏವಂ ಚ ಯಕ್ಷತಿ ರ್ಧಾತು ರ್ಭಕ್ಷಣೇ ಸ ನಿರುಚ್ಯತೇ ।
ತಂ ದೃಷ್ಟ್ವಾಹ್ಯ ಪ್ರಿಯೇಣಾಽಸ್ಯ ಕೇಶಾಃ ಶೀರ್ಣಾಸ್ತು ಧೀಮತಃ ॥

---

ಗಳಿಂದ, ಕೂಡಿದ ಬೇರೊಂದು ಶರೀರವನ್ನು ಪರಿಗ್ರಹಿಸಿದನು. ಆಗ ಅವನು ಕತ್ತಲೆಯಲ್ಲಿ ಹಸಿವಿನಿಂದ ಬಳಲಿದ ಬೇರೊಂದು ವಿಧವಾದ ಗುಂಪನ್ನು ಸೃಜಿಸಿದನು. ಅವರು ಹಸಿವಿನಿಂದ ಬಳಲಿ ನೀರನ್ನು ಪಾನ ಮಾಡಲು ಹೊರಟರು. ಇವರು ಯಕ್ಷರೆನಿಸಿಕೊಂಡರು. ಮತ್ತೆ ಕೆಲ ವರು, ನಾವು ಈ ನೀರನ್ನೆಲ್ಲವನ್ನೂ ರಕ್ಷಿಸುವೆವು. ಎಂದು ಹೇಳಿದರು. ಹೀಗೆ ನೀರಿನ ರಕ್ಷಣೆಗೆ ಹೊರಟದ್ದರಿಂದಲೇ ಅವರಿಗೆ ರಾಕ್ಷಸರೆಂದು ಹೆಸರು ಬಂದಿದೆ. ಅವರು ರಾತ್ರಿಯವೇಳೆಯಲ್ಲಿ ಸಂಚರಿಸತಕ್ಕ ವರೂ ಆಗಿದ್ದಾರೆ. ಅವರಿಗೆ ಹಸಿವೂ ಹೆಚ್ಚಾಗಿರುತ್ತದೆ.

೨೨೭–೨೨೯. ಭಕ್ಷಣ ರೂಪವಾದ ಕೆಲಸದಿಂದ ಅವರು ಯಕ್ಷ ರೆಂದೂ, ಗುಟ್ಟಾಗಿ ಕೆಲಸ ಮಾಡುವುದರಿಂದ ಬೇರೇ ಕೆಲವರು ಗುಹ್ಯಕ ರೆಂದೂ ಕರೆಯಲ್ಪಡುತ್ತಾರೆ. ಯಕ್ಷ ಧಾತುವು ಭಕ್ಷಣೆ ಎಂಬರ್ಥ ದಲ್ಲೂ, ರಕ್ಷ ಧಾತುವು ಕಾಪಾಡುವುದು ಎಂಬರ್ಥದಲ್ಲೂ ಪ್ರಸಿದ್ಧ ವಾಗಿವೆ. ಹೀಗೆ ಸೃಷ್ಟಿಸಿದ ನೀರಿನ ಪಾನರೂಪವಾದ ಅನಿಷ್ಟದಿಂದ ಕೋಪಗೊಂಡ ಬ್ರಹ್ಮನ ಕೂದಲುಗಳೆಲ್ಲವೂ ಉದುರಿದವು. ಹೀಗೆ ಉದ ರಿದವೂ, ಮೇಲಕ್ಕೆ ಹಾರಿದವೂ, ಆದ ಬ್ರಹ್ಮನ ಕೇಶಗಳು ಮೇಲೆ ಹಾರಿ

ತೇ ಶೀರ್ಣಾ ಶ್ಚೋತ್ಥಿತಾ ಹ್ಯೂರ್ಧ್ವಂ ತೇ ಚೈವಾ ರುರುಧುಃ ಪ್ರಭುಂ
ಹೀನಾಸ್ತ್ವಚ್ಛಿರಸೋ ಬಾಲಾ ಯಸ್ಮಾಚ್ಚೈವಾವ ಸರ್ಪಿಣಃ ॥೨೨೯॥
ವ್ಯಾಲಾತ್ಮಾನಃ ಸ್ಮೃತಾ ಬಾಲಾ ಹೀನತ್ವಾದಹಯಃ ಸ್ಮೃತಾಃ ।
ಪತತ್ವಾತ್ಪನ್ನಗಾ ಶ್ಚೈವ ಸರ್ಪಾಶ್ಚೈವಾವ ಸರ್ಪಣಾತ್ ॥೨೩೦॥
ತಸ್ಯ ಕ್ರೋಧೋದ್ಭವೋ ಯೋಽಸೌ ಅಗ್ನಿಗರ್ಭಃ ಸುದಾರುಣಃ ।
ಸ ತು ಸರ್ಪಾನ್ ಸಹೋತ್ಪನ್ನಾನಾ ವಿವೇಶ ವಿಷಾತ್ಮಕಃ ॥೨೩೧॥
ಸರ್ಪಾನ್ ಸೃಷ್ಟ್ವಾ ತತಃ ಕ್ರುದ್ಧಃ ಕ್ರೋಧಾತ್ಮಾನೋ ವಿನಿರ್ಮಮೇ
ವರ್ಣೇನ ಕಪಿಶೇನೋಗ್ರಾಸ್ತೇ ಭೂತಾಃ ಪಿಶಿತಾಶನಾಃ ॥೨೩೨॥
ಭೂತತ್ವಾತ್ತೇ ಸ್ಮೃತಾ ಭೂತಾಃ ಪಿಶಾಚಾಃ ಪಿಶಿತಾಶನಾತ್ ।
ಪ್ರಸನ್ನಂ ಗಾಯತಸ್ತಸ್ಯ ಗಂಧರ್ವಾ ಜಜ್ಞಿರೇ ಯದಾ ॥೨೩೩॥

---

ಸ್ವಾಮಿಯನ್ನು ಸುತ್ತುಗಟ್ಟಿದವು. ಈ ಕೂದಲುಗಳು ಉದ್ದವಾಗಿಯೂ, ಚಲಿಸತಕ್ಕವೂ ಆಗಿದ್ದವು.

೨೩೦-೨೩೩. ಹೀಗೆ ಉದ್ದವಾಗಿರುವುದರಿಂದಲೇ ಹಾವುಗಳೆಲ್ಲವೂ ವ್ಯಾಲಗಳೆಂದೂ, ಕೂದಲಿಲ್ಲದಿರುವುದರಿಂದಲೇ ಅಹಿಗಳೆಂದೂ, ಹೇಳಲ್ಪಡುತ್ತಿವೆ. ಬೀಳುವುದರಿಂದ ಇವುಗಳಿಗೆ ಪನ್ನಗಗಳೆಂದೂ, ಹರಿಯುವುದರಿಂದ ಸರ್ಪಗಳೆಂದೂ, ಹೆಸರು ಬಂದಿದೆ. ಬ್ರಹ್ಮನ ಕೋಪದಿಂದ ಬಹಳ ಭಯಂಕರವಾದ ಬೆಂಕಿಯು ಉತ್ಪನ್ನವಾಗಿ ವಿಷಸ್ವರೂಪಗಳನ್ನು ಹೊಂದಿ ಹಾವುಗಳೊಳಗೆ ಸೇರಿತು. ಕೋಪಗೊಂಡ ಬ್ರಹ್ಮನು ಹಾವುಗಳನ್ನು ಸೃಷ್ಟಿಮಾಡಿ ಕೋಪಿಷ್ಠಗಳಾದ, ಹೊಂಬಣ್ಣಗಳಿಂದ ಕೂಡಿದ, ಮಾಂಸ ಭಕ್ಷಣಮಾಡುವ, ದೆವ್ವಗಳನ್ನು ಸೃಷ್ಟಿಮಾಡಿದನು. ಇವು ಯಾವಾಗಲೂ ಇರುವುದರಿಂದ ಭೂತಗಳೆಂದೂ, ಮಾಂಸ ಭಕ್ಷಣ ಮಾಡುವುದರಿಂದ ಪಿಶಾಚಿಗಳೆಂದೂ ಕರೆಯಲ್ಪಡುತ್ತವೆ. ಅನಂತರದಲ್ಲಿ ಬ್ರಹ್ಮನು ಸಂತೋಷದಿಂದ ಗಾನಮಾಡುತ್ತಿರಲು ಗಂಧರ್ವರ ಸೃಷ್ಟಿಯಾಯಿತು.

ಧಯತೀ ತ್ಯೇಷ ವೈ ಧಾತುಃ ಪಾನತ್ವೇ ಪರಿಪಠ್ಯತೇ ।
ಧಯಂತೋ ಜಜ್ಞಿರೇ ವಾಚಂ ಗಂಧರ್ವಾಃ ತೇನ ತೇ ಸ್ಮೃತಾಃ ॥

ಅಷ್ಟ ಸ್ವೇತಾಸು ಸೃಷ್ಟಾಸು ದೇವಯೋನಿಷು ಸ ಪ್ರಭುಃ ।
ತತಃ ಸ್ವಚ್ಛಂದತೋಽನ್ಯಾನಿ ವಯಾಂಸಿ ವಯಸಾಽಸೃಜತ್ ॥೨೩೫॥

ಸ್ವೇಚ್ಛಂದತಃ ಸ್ವಚ್ಛಂದಾಂಸಿ ವಯಸಾ ಚ ವಯಾಂಸಿ ಚ ।
ಪಶೂನ್ ಸೃಷ್ಟ್ವಾ ಸ ದೇವೇಶೋಽಸೃಜ ತ್ಪಕ್ಷಿ ಗಣಾನಪಿ ॥೨೩೬॥

ಮುಖತೋಽಜಾಃ ಸ ಸರ್ಜಾಽಥ ವಕ್ಷಸಶ್ಚಾವಯೋಽಸೃಜತ್ ।
ಗಾಶ್ಚೈವಾಽಥೋದರಾದ್ಬ್ರಹ್ಮಾ ಪಾರ್ಶ್ವಾಭ್ಯಾಂ ಚ ವಿನಿರ್ಮಮೇ॥

ಪದ್ಭ್ಯಾಂ ಚಾಶ್ವಾನ್ ಸಮಾತಂಗಾನ್ ರಾಸಭಾನಾ
ವಯಾನ್ಮೃಗಾನ್ ।
ಉಷ್ಟ್ರಾನಶ್ವ ತರಾಂಶ್ಚೈವ ತಥಾಽನ್ಯಾಶ್ಚೈವ ಜಾತಯಃ ॥೨೩೮॥

---

೨೩೪–೨೩೬. "ಧಯತಿ" ಎಂಬ ಧಾತುವು ಕುಡಿಯುವುದು, ಎಂಬ ಅರ್ಥದಲ್ಲಿದೆ. ಬ್ರಹ್ಮನು ಪಾನಮಾಡುತ್ತಾ, ಗಾನ ಮಾಡುತ್ತಾ, ಸೃಷ್ಟಿಸಿದ್ದರಿಂದಲೇ ಇವರಿಗೆ "ಗಂಧರ್ವ" ಎಂದು ಹೆಸರು ಬಂದಿತು. ಸ್ವಾಮಿಯಾದ ಬ್ರಹ್ಮನು ಎಂಟು ವಿಧವಾದ ದೇವಗಣಗಳನ್ನು ಸೃಷ್ಟಿಮಾಡಿ, ಸ್ವೇಚ್ಛೆಯಾಗಿ ಹಾರುತ್ತಾ ಪಕ್ಷಿಗಳನ್ನು ಸೃಷ್ಟಿ ಮಾಡಿದನು. ಸ್ವೇಚ್ಛೆಯಾಗಿದ್ದುದರಿಂದ ಇವುಗಳಿಗೆ "ಸ್ವಚ್ಛಂದಸ್" ಎಂದೂ, ಹಾರುತ್ತಿದ್ದುದರಿಂದ "ವಿಸ್" ಎಂದೂ, ಹೆಸರು ಬಂದಿತು. ಅನಂತರದಲ್ಲಿ ಬ್ರಹ್ಮನು ಪಶುಗಳನ್ನು ಸೃಷ್ಟಿಮಾಡಿ, ಹಕ್ಕಿಗಳ ಗುಂಪನ್ನೂ ಸೃಷ್ಟಿಮಾಡಿದನು.

೨೩೭–೨೩೯. ಅನಂತರದಲ್ಲಿ ಬ್ರಹ್ಮನು ತನ್ನ ಮುಖದಿಂದ ಆಡುಗಳನ್ನೂ, ನಾಭಿಸ್ಥಾನದಿಂದ ಕುರಿಗಳನ್ನೂ, ಹೊಟ್ಟೆಯಿಂದಲೂ ಮತ್ತು ಅದರ ಪಕ್ಕದಿಂದಲೂ ಹಸುಗಳನ್ನೂ, ಕಾಲುಗಳಿಂದ ಕುದುರೆಗಳನ್ನೂ. ಆನೆಗಳನ್ನೂ, ಕತ್ತೆಗಳನ್ನೂ, ಮೃಗಗಳನ್ನೂ, ಒಂಟೆಗಳನ್ನೂ, ಹೇಸರಕತ್ತೆಗಳನ್ನೂ, ಮತ್ತು ಬೇರೆ ವಿಧವಾದ ಪಶುಜಾತಿಗಳನ್ನೂ ಸೃಷ್ಟಿಮಾಡಿ

ಓಷಧ್ಯಃ ಫಲಮೂಲಿನ್ಯೋ ರೋಮಭ್ಯಸ್ತಸ್ಯ ಜಜ್ಞಿರೇ ।
ಏವಂ ಪಶ್ವೌಷಧೀಃ ಸೃಷ್ಟ್ವಾ ಯಯೋಽಯುಜತ್ಸೋಽಧ್ವರೇ ಪ್ರಭುಃ ॥
ಗೌರಜಃ ಪುರುಷೋ ಮೇಷೋ ಹ್ಯಶ್ವೋಽಶ್ವತರ ಗರ್ದಭೌ ।
ಏತಾನ್ಗ್ರಾಮ್ಯಾನ್ಪಶೂನಾಹು ರಾರಣ್ಯಾನ್ಶ್ಚ ನಿಬೋಧತ ॥೨೪೦॥
ಶ್ವಾಪದೋ ದ್ವಿಖುರೋ ಹಸ್ತೀ ವಾನರಾಃ ಪಕ್ಷಿ ಪಂಚಮಾಃ ।
ಉದಕಾಃ ಪಶವಃ ಷಷ್ಠಾಃ ಸಪ್ತಮಾಸ್ತು ಸರೀಸೃಪಾಃ ॥೨೪೧॥
ಮಹಿಷಾ ಗವಯಾ ಕ್ಷಾಶ್ಚ ಪ್ಲವಂಗಾಃ ಶರಭಾ ವೃಕಾಃ ।
ಸಿಂಹಸ್ತು ಸಪ್ತಮ ಸ್ತೇಷಾ ಮಾರಣ್ಯಾಃ ಪಶವಃ ಸ್ಮೃತಾಃ ॥
ಗಾಯತ್ರಂ ಚ ಋಚಂ ಚೈವ ತ್ರಿವೃತ್ಸಾಮ ರಥಂ ತರಂ ।
ಅಗ್ನಿಷ್ಟೋಮಂಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ಮುಖಾತ್ ॥

---

ದನು. ಅವನ ಕೂದಲುಗಳಿಂದ ಗಿಡಮೂಲಿಕೆಗಳು ಸೃಷ್ಟಿಯಾದವು. ಹೀಗೆ ಬ್ರಹ್ಮನು ಪಶುಗಳನ್ನೂ, ಓಷಧಿಗಳನ್ನೂ, ಸೃಷ್ಟಿಮಾಡಿ ಯಾಗಕ್ಕೆ ಪ್ರಾರಂಭಿಸಿದನು.

೨೪೦–೨೪೨. ಎಲೈ ಬ್ರಾಹ್ಮಣರೇ, ಹಸು, ಆಡು, ಪುರುಷ, ಮೃಗ, ಮೇಕೆಗಳು, ಕುದುರೆ, ಹೇಸರಕತ್ತೆ, ಕತ್ತೆ, ಇವುಗಳನ್ನು, ಗ್ರಾಮಕ್ಕೆ ಸಂಬಂಧಪಟ್ಟ, ಪಳಗಿಸಲು ಬರುವ ಪಶುಗಳೆಂದು ತಿಳಿಯಿರಿ. ಇವಲ್ಲದೇ ಕಾಡಿನ ಮೃಗಗಳನ್ನು ಹೇಳುತ್ತೇನೆ. ಸಿಂಹ, ಹುಲಿ, ಆನೆ, ಕೋತಿ, ಹಕ್ಕಿಗಳು, ಜಲಪಕ್ಷಿಗಳು, ಪಶುಗಳು, ಹಾವುಗಳು, ಎಮ್ಮೆಗಳು,ಗವಯ, ಎಂಬ ಗೋವಿನ ಹಾಗಿರುವ ಮೃಗಗಳು, ತೋಳಗಳು ಇವೆಲ್ಲವೂ, ಕಾಡಿಗೆ ಸಂಬಂಧ ಪಟ್ಟವೆಂದು ತಿಳಿಯಿರಿ.

೨೪೩–೨೪೫. ಬ್ರಹ್ಮನು ತನ್ನ ಮೊದಲನೆಯ ಮುಖದಿಂದ ಗಾಯತ್ರಿಯನ್ನೂ, ಋಗ್ವೇದದ ಋಕ್ಕನ್ನೂ, ತ್ರಿವೃತ್, ರಥಂತರ, ಎಂಬ ಸಾಮಗಳನ್ನೂ, ಯಜ್ಞಕ್ಕೆ ಸಂಬಂಧಪಟ್ಟ ಅಗ್ನಿಷ್ಟೋಮ, ಎಂಬ ಯಾಗವನ್ನೂ, ಸೃಷ್ಟಿಸಿದನು. ಅವನು ತನ್ನ ಬಲ ಮುಖದಿಂದ ಯಜುರ್ವೇದದ ಋಕ್ಕು

ಯಜೂಂಷಿ ತ್ರೈಷ್ಟುಭಂ ಛಂದಃ ಸ್ತೋಮಂ ಪಂಚದಶಂ ತಥಾ ।
ಬೃಹತ್ಸಾಮ ತಥೋಕ್ಥ್ಯಂ ಚ ದಕ್ಷಿಣಾ ದ ಸೃಜನ್ಮುಖಾತ್ ॥
ಸಾಮಾನಿ ಜಗತೀಚ್ಛಂದಃ ಸ್ತೋಮಂ ಸಪ್ತದಶಂ ತಥಾ ।
ವೈರೂಪ ಮತಿರಾತ್ರಂ ಚ ಪಶ್ಚಿಮಾ ದಸೃಜನ್ಮುಖಾತ್ ॥೨೪೫॥
ಏಕವಿಂಶ ಮಥರ್ವಾಣ ಮಾಪ್ತೋಽರ್ಯಾಮಾಣ ಮೇವಚ ।
ಅನುಷ್ಟುಭಂ ಸ ವೈರಾಜ ಮುತ್ತರಾದಸೃಜನ್ಮುಖಾತ್ ॥೨೪೬॥
ವಿದ್ಯುತೋಽಶನಿ ಮೇಘಾಂಶ್ಚ ರೋಹಿತೇಂದ್ರಧನೂಂಷಿ ಚ ।
ತೇಜಾಂಸಿ ಚ ಸಸರ್ಜಾದೌ ಕಲ್ಪಸ್ಯ ಭಗವಾನ್ಪ್ರಭುಃ ॥೨೪೭॥
ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯ ಸ್ತಸ್ಯ ಜಜ್ಞಿರೇ ।
ಬ್ರಹ್ಮಣ ಸ್ತು ಪ್ರಜಾ ಸರ್ಗಂ ಸೃಜತೋ ಹಿ ಪ್ರಜಾಪತೇಃ ॥೨೪೮॥
ಸೃಷ್ಟ್ವಾ ಚತುಷ್ಟಯಂ ಪೂರ್ವಂ ದೇವಾಸುರ ನರಾನ್ಪಿತೄನ್ ।
ತತೋಽಸೃಜತ್ಸ ಭೂತಾನಿ ಸ್ಥಾವರಾಣಿ ಚರಾಣಿ ಚ ॥೨೪೯॥

---

ಗಳನ್ನೂ, ತ್ರೈಷ್ಟುಭ ಛಂದಸ್ಸನ್ನೂ, ಹದಿನೈದುಸಲ ಆವೃತ್ತಿಯಾದ ಸಾಮುವನ್ನೂ, ಸೃಷ್ಟಿಸಿದನು. ಅವನು ತನ್ನ ಹಿಂಭಾಗದ ಮುಖದಿಂದ ಜಗತೀಚ್ಛಂದಸ್ಸನ್ನೂ, ಹದಿನೇಳುಸಲ ಆವೃತ್ತಿಯಾಗುವ ಸಾಮುಗಳನ್ನೂ, ವೈರೂಪ, ಅತಿರಾತ್ರಗಳೆಂಬ ಯಾಗಗಳನ್ನೂ, ಸೃಜಿಸಿದನು.

೨೪೬–೨೪೮. ಬ್ರಹ್ಮನ ಉತ್ತರ ಮುಖದಿಂದ ಇಪ್ಪತ್ತೊಂದು,ಅಥರ್ವವೇದ ಅರ್ಯಮನ್, ವೈರಾಜ, ಅನುಷ್ಟುಭ್,ಆಪ್ತೋರ್ಯಾಮಕ್ರತು, ಇವನ್ನು ಸೃಜಿಸಿದನು. ಮಿಂಚನ್ನೂ, ಸಿಡಿಲು, ಮೋಡ, ವಜ್ರಾಯುಧ, ತೇಜಸ್ಸು, ಎಲ್ಲವನ್ನೂ ಕಲ್ಪದ ಆದಿಯಲ್ಲಿ ಸೃಷ್ಟಿಮಾಡಿದನು. ಅವನ ಅವಯವಗಳಿಂದ, ತಾರತಮ್ಯಗಳುಳ್ಳ ನಾನಾಬಗೆಯ ಪ್ರಾಣಿಗಳ ಸೃಷ್ಟಿಯೂ, ಪ್ರಜೆಗಳ ಸೃಷ್ಟಿಯೂ, ಆದವು.

೨೪೯–೨೫೧. ಬ್ರಹ್ಮನು ಹಿಂದೆ ದೇವತೆಗಳು, ಅಸುರರು, ಮನುಷ್ಯರು, ಪಿತೃದೇವತೆಗಳೆಂಬ ನಾಲ್ಕು ಗುಂಪನ್ನು ಸೃಷ್ಟಿಸಿ, ಸ್ಥಾವರ ಜಂಗಮಾತ್ಮಕವಾದ ಈ ಜಗತ್ತನ್ನು ಸೃಜಿಸಿದನು. ಯಕ್ಷರು, ಪಿಶಾಚಿ

ಯಕ್ಷಾನ್ಪಿಶಾಚಾನ್ ಗಂಧರ್ವಾಂಸ್ತಥೈವಾಪ್ಸರಸಾಂ ಗಣಾನ್ ।
ನರ ಕಿನ್ನರ ರಕ್ಷಾಂಸಿ ವಯಃ ಪಶು ಮೃಗೋರಗಾನ್ ॥೨೫೦॥
ಅವ್ಯಯಂಚ ವ್ಯಯಂಚಾಪಿ ಯದಿದಂ ಸ್ಥಾಣು ಜಂಗಮಂ ।
ತೇಷಾಂ ವೈ ಯಾನಿ ಕರ್ಮಾಣಿ ಪ್ರಾಕ್ಸೃಷ್ಟ್ಯಾ ಪ್ರತಿ ಪೇದಿರೇ ॥
ತಾನ್ಯೇವ ಪ್ರತಿಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ।
ಹಿಂಸ್ರಾ ಹಿಂಸ್ರೇ ಮೃದು ಕ್ರೂರೇ ಧರ್ಮಾಧರ್ಮೇ ನೃತಾ ನೃತೇ ॥
ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ।
ಮಹಾ ಭೂತೇಷು ಸೃಷ್ಟೇಷು ಇಂದ್ರಿಯಾರ್ಥೇಷು ಮೂರ್ತಿಷು ॥

---

ಗಳು, ಗಂಧರ್ವರು, ಅಪ್ಸರಸ್ಸುಗಳು, ಮನುಷ್ಯರು, ಕಿನ್ನರರು, ರಾಕ್ಷಸರು, ಪಕ್ಷಿಗಳು, ಪಶುಗಳು, ಮೃಗಗಳು, ಸರ್ಪಗಳು, ಎಂಬ ಎಲ್ಲಾ ಪ್ರಾಣಿಗಳ ಗುಂಪನ್ನೂ ಅನಂತರ ಸೃಷ್ಟಿಸಿದನು. ನಾಶವುಳ್ಳದ್ದೂ, ನಾಶವಿಲ್ಲದಿರುವುದೂ, ಆದ ಸೃಷ್ಟಿಯ ಭಾಗಗಳೆಲ್ಲವೂ, ಸೃಷ್ಟಿಗಿಂತ ಪ್ರಾಚೀನವಾದ ಅನಾದಿ ಪ್ರಾಣಿ ಕರ್ಮಕ್ಕೆ ಅನುಸಾರವಾಗಿ ಫಲಾಫಲಗಳನ್ನು ಹೊಂದುತ್ತವೆ.

೨೫೨–೨೫೪. ಪ್ರಾಣಿಗಳು ಪುನಃ ಪುನಃ ಸೃಷ್ಟಿಸಲ್ಪಡುತ್ತಾ ತಮ್ಮ ಹಿಂದಿನ ಕರ್ಮಗಳ ಫಲಗಳನ್ನೇ ಹೊಂದುತ್ತಿರುತ್ತಾರೆ. ಪ್ರಾಣಿಗಳು ಹಿಂಸಾತ್ಮಕವಾದ ಕರ್ಮಗಳನ್ನೋ ಅಥವಾ ಅಹಿಂಸಾತ್ಮಕವಾದ ಕರ್ಮಗಳನ್ನೋ, ಶಾಂತ, ಅಥವಾ ಕ್ರೂರವಾದ, ಧರ್ಮವಾದ, ಅಥವಾ ಅಧರ್ಮವಾದ, ಸತ್ಯವಾದ, ಅಥವಾ ಅಸತ್ಯವಾದ, ಕರ್ಮಗಳನ್ನೋ ಮಾಡುತ್ತಿರುತ್ತಾರೆ. ತಮ್ಮ ಕರ್ಮಾನುಸಾರವಾದ ಭಾವಗಳನ್ನು ಹೊಂದಿ ಅಂಥಾ ಕರ್ಮಗಳನ್ನು ಮಾಡುವುದರಲ್ಲೇ ಅಭಿಲಾಷೆಯುಳ್ಳವರಾಗಿರುತ್ತಾರೆ. ದೊಡ್ಡ ಸ್ಥಾವರ ಜಂಗಮಾತ್ಮಕವಾದ ಜಗತ್ತನ್ನೂ, ಅದಕ್ಕೆ ಸರಿಹೊಂದುವ ಶರೀರಗಳನ್ನೂ ಸೃಷ್ಟಿಮಾಡಿ, ಬ್ರಹ್ಮನು ಆಯಾಯಾ ಪ್ರಾಣಿಗಳಿಗೆ ಯೋಗ್ಯವಾದ ಕರ್ಮಫಲಗಳನ್ನೂ ನಿಯಮಮಾಡಿದನು.

ವಿನಿಯೋಗಂ ಚ ಭೂತಾನಾಂ ಧಾತ್ರೈವ ವ್ಯದಧಾ ತ್ಸ್ವಯಂ ।
ಕೇಚಿ ತ್ಪೌರುಷಕಾರಂ ತು ಪ್ರಾಹುಃ ಕರ್ಮಸು ಮಾನವಾಃ ॥೨೫೪॥

ದೈವ ಮಿತ್ಯಪರೇ ವಿಪ್ರಾಃ ಸ್ವಭಾವಂ ಭೂತ ಚಿಂತಕಾಃ ।
ಪೌರುಷಂ ಕರ್ಮ ದೈವಂ ಚ ಫಲವೃತ್ತಿ ಸ್ವಭಾವತಃ ॥೨೫೫॥

ನಚೈಕಂ ನ ಪೃಥ ಗ್ಭಾವ ಮಧಿಕಂ ನ ತತೋ ವಿದುಃ ।
ಏಕ ದೇವಂ ಚ ನೈಕಂ ಚ ನಾಮ ಭೇಧೇನ ನಾಪ್ಯುಭೇ ॥೨೫೬॥

ಕರ್ಮಸ್ಥಾ ವಿಷಯಂ ಬ್ರೂಯುಃ ಸತ್ವಸ್ಥಾಃ ಸಮದರ್ಶನಾಃ ।
ನಾಮ ರೂಪಂಚ ಭೂತಾನಾಂ ಕೃತಾನಾಂ ಚ ಪ್ರಪಂಚನಂ ॥೨೫೭॥

---

ಆದರೂ ಕೆಲವರು ಕರ್ಮಕ್ಕಿಂತಲೂ ಪೌರುಷವೇ ಮುಖ್ಯವಾದುದೆಂದು ಹೇಳುತ್ತಾರೆ.

೨೫೫–೨೫೭. ಕೆಲವು ಬ್ರಾಹ್ಮಣರು ಮನುಷ್ಯನ ಕರ್ಮಕ್ಕಿಂತಲೂ ಅದೃಷ್ಟವೇ ಮುಖ್ಯವೆಂದೂ, ಕೆಲವು ತತ್ವಜ್ಞರು ಸ್ವಭಾವವೆಂಬುದೇ ಮನುಷ್ಯನಿಗೆ ಫಲಾಫಲಗಳನ್ನು ಕೊಡುತ್ತದೆಯೆಂದೂ, ಮತ್ತೆ ಕೆಲವರು ಜೀವರಿಗೆ ಫಲಾಫಲಗಳನ್ನು ಉಂಟುಮಾಡುವ ವಿಷಯದಲ್ಲಿ ಪೌರುಷ, ಮನುಷ್ಯನ ಅದೃಷ್ಟ, ಸ್ವಭಾವ ಇವೆಲ್ಲವೂ ಒಟ್ಟಿಗೇ ಸೇರಿ ಕಾರಣವಾಗುವುವೆಂದೂ, ಅಭಿಪ್ರಾಯಪಡುತ್ತಾರೆ. ಆದ್ದರಿಂದ ಈ ಮತದವರು ಇವೆಲ್ಲಕ್ಕೂ ಅತಿರಿಕ್ತನಾದ ಈಶ್ವರನನ್ನು ಕರ್ಮಫಲಕ್ಕೆ ವ್ಯವಸ್ಥಾಪಕನೆಂಬುದಾಗಿ ಹೇಳಿದ ಹಾಗಾಗಿಲ್ಲ. ಎಲ್ಲವನ್ನೂ ಸಮವಾಗಿ ನೋಡುವ ಜ್ಞಾನಿಗಳಾದರೋ ಈ ಪ್ರಪಂಚವು ಮಾಯಿಕವಾದುದರಿಂದ, ಮೇಲೆ ಹೇಳಿದ ನಾಲ್ಕು ಕಾರಣಗಳೂ ಬೇರೆಯಲ್ಲವೆಂದೂ, ಎಲ್ಲವೂ, ಒಂದೇ ಅಜ್ಞಾನ ಎಂದೂ, ಅಭಿಪ್ರಾಯ ಪಡುತ್ತಾರೆ. ಹೆಸರು ಮತ್ತು ರೂಪ, ಇವೆರಡರ ಸ್ವರೂಪವಾಗಿರುವ ಈ ಜಗತ್ತಿನ ಬೆಳವಣಿಗೆಯು ಈಶ್ವರನಿಂದಲೇ ಮಾಡಲ್ಪಟ್ಟಿತು.

ವೇದ ಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ।
ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ವೃತ್ತಯಃ ॥
ಶರ್ವರ್ಯಂತೇ ಪ್ರಸೂತಾನಾಂ ತಾನ್ಯೇ ವೈಭ್ಯೋ ದದಾ ತ್ಯಜಃ ।
ಏವಂ ವಿಧಾಃ ಸೃಷ್ಟಯಸ್ತು ಬ್ರಹ್ಮಣೋಽವ್ಯಕ್ತ ಜನ್ಮನಃ ॥೨೫೯॥
ಶರ್ವ ರ್ಯಂತೇ ಪ್ರದೃಶ್ಯಂತೇ ಸಿದ್ಧಿಮಾಶ್ರಿತ್ಯ ಮಾನಸೀಂ ।
ಏವಂ ಭೂತಾನಿ ಸೃಷ್ಟಾನಿ ಸ್ಥಾವರಾಣಿ ಚರಾಣಿ ಚ ॥೨೬೦॥
ಯದಾಽಸ್ಯ ತಾಃ ಪ್ರಜಾಃ ಸೃಷ್ಟಾ ನ ವ್ಯವರ್ಧಂತ ಸತ್ತಮಾಃ ।
ತಮೋ ಮಾತ್ರಾ ವೃತೋ ಬ್ರಹ್ಮಾ ತದಾ ಶೋಕೇನ ದುಃಖಿತಃ ॥
ತತಃ ಸ ವಿದಧೇ ಬುದ್ಧಿ ಮರ್ಥನಿಶ್ಚಯ ಗಾಮಿನೀಂ ।
ಅಥಾತ್ಮನಿ ಸಮದ್ರಾಕ್ಷೀ ತ್ತಮೋ ಮಾತ್ರಾಂ ನಿಯಾಮಿಕಾಂ ॥
ರಜಃ ಸತ್ವಂ ಪರಿತ್ಯಜ್ಯ ವರ್ತಮಾನಾಂ ಸ್ವಧರ್ಮತಃ ।
ತತಃ ಸ ತೇನ ದುಃಖೇನ ದುಃಖಂ ಚಕ್ರೇ ಜಗತ್ಪತಿಃ ॥೨೬೩॥

---

೨೫೮–೨೬೦. ಈ ಜಗತ್ತಿನ ವಿಸ್ತಾರವನ್ನು ಭಗವಂತನಾದ ಶಿವನು ವೇದಶಬ್ದಗಳಿಂದಲೇ ಮೊದಲು ನಿರ್ಮಾಣ ಮಾಡಿದನು. ಉತ್ಪತ್ತಿಯಿಲ್ಲದ ಬ್ರಹ್ಮನು ರಾತ್ರಿಯ ಕೊನೆಯಭಾಗದಲ್ಲಿ ಸೃಷ್ಟವಾದ ವೇದದ ಋಷಿಗಳಿಗೆ ಯಾವ ಹೆಸರುಗಳೋ ಅದೇ ಹೆಸರುಗಳನ್ನೇ ಜಗತ್ತಿನ ಭಾಗಗಳಿಗೆ ಮೊದಲು ಇಟ್ಟನು. ಇಂದ್ರಿಯಕ್ಕೆ ಕಾಣಿಸದ ಅವ್ಯಕ್ತತತ್ವದಿಂದುಂಟಾದ ಬ್ರಹ್ಮನದೇ ಈ ವಿಧವಾದ ಸೃಷ್ಟಿ, ಎಂದು ತಿಳಿಯಬೇಕು. ಬ್ರಹ್ಮನು ಹೀಗೆ ಸ್ಥಾವರ ಜಂಗಮಾತ್ಮಕವಾದ ಈ ಸೃಷ್ಟಿಯನ್ನು ರಾತ್ರಿಯ ಕೊನೆಯಭಾಗದಲ್ಲಿ ತನ್ನ ಮನಸ್ಸಿನ ಸಂಕಲ್ಪದಂತೆ ನೆರವೇರಿಸಿದನು.

೨೬೧–೨೬೩. ಹೀಗೆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಪ್ರಜೆಗಳು ಸಾತ್ವಿಕರಾಗಿ ವೃದ್ಧಿಹೊಂದದೇ ಇರಲು, ಬ್ರಹ್ಮನು ದುಃಖವೆಂಬ ಕಾರ್ಗತ್ತಲೆಯಿಂದ ಕವಿದು ಬಹು ಸಂಕಟಪಟ್ಟನು. ಅನಂತರ ಬ್ರಹ್ಮನು ಕಾರಣವನ್ನು ತಿಳಿಯಲು ಮನೋನಿಶ್ಚಯವನ್ನು ಮಾಡಿದನು. ಆಗ ಅವನು ಜಗತ್ತೆಲ್ಲವೂ ತಮೋ ಗುಣದಿಂದ ತುಂಬಿ, ಧರ್ಮವನ್ನೂ, ರಜೋಗುಣ, ಸತ್ವಗುಣಗಳನ್ನೂ, ಬಿಟ್ಟು ಅಜ್ಞಾನದಲ್ಲಿ ಬಿದ್ದಿರುವುದನ್ನು ಕಂಡು ಬಹಳ ದುಃಖಪಟ್ಟನು.

ತಮಶ್ಚ ವ್ಯನುದತ್ಪಶ್ಚಾ ದ್ರಜಃ ಸತ್ತ್ವಂ ತಮಾ ವ್ಯಣೋತ್ ।
ತತ್ತಮಃ ಪ್ರತಿನುನ್ನಂ ವೈ ಮಿಥುನಂ ಸಮಜಾಯತ ॥೨೬೪॥

ಅಧರ್ಮ ಸ್ತಮಸೋ ಜಜ್ಞೇ ಹಿಂಸಾ ಶೋಕಾದಜಾಯತ ।
ತತಸ್ತಸ್ಮಿ ನ್ಸಮುದ್ಭೂತೇ ಮಿಥುನೇ ದಾರುಣಾತ್ಮಕೇ ॥೨೬೫॥

ಗತಾಸು ರ್ಭಗವಾನಾಸೀ ತ್ಪ್ರೀತಿ ಶ್ಚೈನ ಮಶಿ (ಶ್ರ)ಯತ್ ।
ಸ್ವಾಂ ತನುಂ ಸ ತತೋ ಬ್ರಹ್ಮಾ ತಾಮ ಪೋಹತ ಭಾಸ್ವರಾಂ ॥

ದ್ವಿಧಾ ಕೃತ್ವಾ ಸ್ವಕಂ ದೇಹ ಮರ್ಧೇನ ಪುರುಷೋ ಭವತ್ ।
ಅರ್ಧೇನ ನಾರೀ ಸಾ ತಸ್ಯ ಶತರೂಪಾ ವ್ಯಜಾಯತ ॥೨೬೭॥

ಪ್ರಕೃತಿಂ ಭೂತ ಧಾತ್ರೀಂ ತಾಂ ಕಾಮಾದ್ವೈ ಸೃಷ್ಟವಾ ನ್ಪ್ರಭುಃ ।
ಸಾ ದಿವಂ ಪೃಥಿವೀಂ ಚೈವ ಮಹಿಮ್ನಾ ವ್ಯಾಪ್ಯ ತಿಷ್ಠಿತಾ ॥೨೬೮॥

---

೨೬೪–೨೬೬. ಹೀಗೆ ಬ್ರಹ್ಮನು ಗೊತ್ತುಮಾಡಿಕೊಂಡಮೇಲೆ ತಮಸ್ಸು ಒತ್ತಲ್ಪಟ್ಟು ಅದರ ಜತೆಗೆ ಸತ್ತ್ವರಜೋಗುಣಗಳು ಸೇರಿದುವು. ಆ ತಮಸ್ಸು ಹೀಗೆ ಅಡಗಲು ರಜಸ್ಸು ಮತ್ತು ಸತ್ತ್ವಗುಣಗಳಿಂದ ದ್ವಂದ್ವ ಉಂಟಾಯಿತು. ತಮಸ್ಸಿನಿಂದ ಅಧರ್ಮ ಹುಟ್ಟಿತು. ಶೋಕದಿಂದ ಹಿಂಸೆಯು ಹುಟ್ಟಿತು. ಹೀಗೆ ಭಯಂಕರವಾದ ಅಧರ್ಮ ಮತ್ತು ಹಿಂಸೆಗಳು ಹುಟ್ಟಲು, ಭಗವತಸಿಗೇ ಅತ್ಯಂತ ವ್ಯಥೆಯಾಗಿ ತನ್ನ ಆ ದೇಹವನ್ನೇ ತ್ಯಾಗಮಾಡಿದನು. ಆಗ ಪ್ರೀತಿಯು ಇವನನ್ನು ಆಶ್ರಯಿಸಿತು. ಬ್ರಹ್ಮನು ಬೆಳಗುತ್ತಿದ್ದ ಆ ದೇಹವನ್ನು ಹೀಗೆ ಮಾರ್ಪಡಿಸಿದನು.

೨೬೭–೨೬೮. ಬ್ರಹ್ಮನು ತನ್ನ ದೇಹವನ್ನು ಎರಡು ಭಾಗವಾಗಿ ಮಾಡಿ ಅರ್ಧಭಾಗ ಪುರುಷನಾಗಿಯೂ, ಅರ್ಧಭಾಗ ಸ್ತ್ರೀಯಾಗಿಯೂ, ಆದನು. ಈ ಭಗವಂತನ ಸ್ತ್ರೀರೂಪವು ನೂರು ಆಕಾರವಾಗಿ ಪರಿಣಮಿಸಿತು. ಸ್ವಾಮಿಯು ಪ್ರಕೃತಿಯನ್ನೂ, ಭೂಮಿಯನ್ನೂ ತನ್ನ ಇಚ್ಛೆಯಂತೆ ಸೃಷ್ಟಿಸಿದನು. ಬ್ರಹ್ಮನ ಶರೀರವು ಸ್ವರ್ಗವನ್ನೂ, ಭೂಮಿ

ಬ್ರಹ್ಮಣಃ ಸಾ ತನುಃ ಪೂರ್ವಾ ದಿವ ಮಾವೃತ್ಯ ತಿಷ್ಠತಿ ।
ಯಾ ತ್ವರ್ಧಾ ತ್ಸೃಜತೋ ನಾರೀ ಶತರೂಪಾ ವ್ಯಜಾಯತ ॥೨೬೯॥
ಸಾ ದೇವೀ ನಿಯತಂ ತಪ್ತ್ವಾ ತಪಃ ಪರಮ ದುಶ್ಚರಂ ।
ಭರ್ತಾರಂ ದೀಪ್ತಯಶಸಂ ಪುರುಷಂ ಪ್ರತ್ಯ ಪದ್ಯತ ॥೨೭೦॥
ಸ ವೈ ಸ್ವಾಯಂಭುವಃ ಪೂರ್ವಂ ಪುರುಷೋ ಮನು ರುಚ್ಯತೇ ।
ತಸ್ಯೈವ ಸಪ್ತತಿ ಯುಗಂ ಮನ್ವಂತರ ಮಿಹೋಚ್ಯತೇ ॥೨೭೧॥
ಲೇಭೇ ಸ ಪುರುಷಃ ಪತ್ನೀಂ ಶತರೂಪಾ ಮಯೋನಿಜಾಂ ।
ತಯಾ ಸಾರ್ಧಂ ಸ ರಮತೇ ತಸ್ಮಾತ್ಸಾ ರತಿ ರುಚ್ಯತೇ ॥೨೭೨॥
ಪ್ರಥಮಃ ಸಂಪ್ರಯೋಗಾತ್ಮಾ ಕಲ್ಪಾದೌ ಸಮಪದ್ಯತ ।
ವಿರಾಜ ಮಸೃಜ ದ್ಬ್ರಹ್ಮಾಸೋಽಭವತ್ಪುರುಷೋ ವಿರಾಟ್ ॥೨೭೩॥

---

ಯನ್ನೂ, ತನ್ನ ಮಹಿಮೆಯಿಂದ ವ್ಯಾಪಿಸಿಕೊಂಡಿದೆ. ಬ್ರಹ್ಮನ ಪೂರ್ವಾರ್ಧವಾದ ಶರೀರವು ಸ್ವರ್ಗವನ್ನು ವ್ಯಾಪಿಸಿಕೊಂಡಿದೆ. ಇನ್ನರ್ಧವಾದ ಸ್ತ್ರೀರೂಪವಾದ ಶರೀರಭಾಗವು ನೂರು ಆಕಾರವುಳ್ಳ ಪ್ರಕೃತಿರೂಪವನ್ನು ಧರಿಸಿದೆ.

೨೭೦–೨೭೨. ಈ ಪ್ರಕೃತಿ ದೇವತೆಯು ಅನೇಕ ವರ್ಷಗಳು ಬಹುಕಷ್ಟವಾದ ತಪಸ್ಸನ್ನು ಮಾಡಿ, ಕೀರ್ತಿಯಿಂದ ಪ್ರಕಾಶಮಾನನಾದ ಪುರುಷನೆಂಬ, ಪತಿಯನ್ನು ಹೊಂದಿದಳು. ಇವನೇ ಸ್ವಾಯಂಭುವ ಮನುವೆಂದು ಕರೆಯಲ್ಪಡುವನು. ಇವನಿಗೆ ಸಂಬಂಧಪಟ್ಟ ಎಪ್ಪತ್ತು ಯುಗಗಳು ಸ್ವಾಯಂಭುವ ಮನ್ವಂತರಗಳೆಂದು ಕರೆಯಲ್ಪಡುತ್ತವೆ. ಪುರುಷನೂ ಕೂಡ ನೂರು ಸ್ವರೂಪವುಳ್ಳ, ಅನ್ಯ ಶರೀರದಲ್ಲಿ ಹುಟ್ಟದೇ ಇರುವ ಈ ಪ್ರಕೃತಿಯೆಂಬ ಹೆಂಡಿತಿಯನ್ನು ಪಡೆದನು. ಮತ್ತು ಇವನು ಅವಳೊಡನೆ ಆಟವಾಡುತ್ತಾನೆ, ರಮಿಸುತ್ತಾನೆ. ಆದ್ದರಿಂದಲೇ ಇವಳಿಗೆ “ ರತಿ ” ಎಂದು ಹೆಸರು ಬಂದಿದೆ.

೨೭೩–೨೭೬. ಕಲ್ಪದ ಆದಿಯಲ್ಲಿ ಬ್ರಹ್ಮನು ರತಿಯೊಂದಿಗೆ ಸಂಬಂಧ ಮಾಡಿ ವಿರಾಟ್ಪುರುಷನನ್ನು ಸೃಷ್ಟಿಸಿದನು. ಇವನು ಜಗತ್ತಿಗೆ ಅಧಿಪತಿ

ಸಮ್ರಾಟ್ಟ ಶತರೂಪಾ ವೈ ವೈರಾಜಃ ಸ ಮನುಃ ಸ್ಮೃತಃ ।
ಸ ವೈರಾಜಃ ಪ್ರಜಾಸರ್ಗಂ ಸಸರ್ಜ ಪುರುಷೋ ಮನುಃ ॥೨೭೪॥

ವೈರಾಜಾ ತ್ಪುರುಷಾ ದ್ವೀರಾ ಚ್ಛತರೂಪಾ ವ್ಯಜಾಯತ ।
ಪ್ರಿಯವ್ರತೋತ್ತಾನಪಾದೌ ಪುತ್ರೌದ್ವೌ ಲೋಕ ಸಂಮತೌ॥೨೭೫॥

ಕನ್ಯೇ ದ್ವೇ ಚ ಮಹಾಭಾಗೇ ಯಾಭ್ಯಾಂ ಜಾತಾ ಇಮಾಃ ಪ್ರಜಾಃ ।
ದೇವೀನಾಮ ತಥಾಽಽಕೂತಿಃ ಪ್ರಸೂತಿ ಶ್ಚೈವ ತೇ ಉಭೇ ॥೨೭೬॥

ಸ್ವಾಯಂಭುವಃ ಪ್ರಸೂತಿಂ ತು ದಕ್ಷಾಯ ಪ್ರದದೌ ಪ್ರಭುಃ ।
ಪ್ರಾಣೋ ದಕ್ಷ ಇತಿ ಜ್ಞೇಯಃ ಸಂಕಲ್ಪೋ ಮನುರುಚ್ಯತೇ ॥

ರುಚೇಃ ಪ್ರಜಾಪತೇಃ ಸೋಽಥ ಆಕೂತಿಂ ಪ್ರತ್ಯಪಾದಯತ್ ।
ಆಕೂತ್ಯಾಂ ಮಿಥುನಂ ಜಜ್ಞೇ ಮಾನಸಸ್ಯ ರುಚೇಃ ಶುಭಂ ॥೨೭೮॥

---

ಯಾಗಿಯೂ, ನೂರು ರೂಪಗಳಲ್ಲಿ ಕಾಣಿಸಬಲ್ಲ ವೈರಾಜಮನು, ಎಂದು ಹೆಸರು ಪಡೆದಿದ್ದಾನೆ. ಈ ವಿರಾಟ್ಪುರುಷನು ಪ್ರಜೆಗಳ ಸೃಷ್ಟಿಯನ್ನು ಮಾಡಿದನು. ವೀರನಾದ ವಿರಾಟ್ಪುರುಷನಿಂದ ಶತರೂಪಾ ಎಂಬುವಳ ಸೃಷ್ಟಿಯಾಯಿತು. ಅಲ್ಲದೇ ಇವನಿಂದ ಹೆಸರುವಾಸಿಗಳಾದ ಪ್ರಿಯವ್ರತ, ಉತ್ತಾನುಪಾದ, ಎಂಬಿಬ್ಬರು ಮಕ್ಕಳು ಹುಟ್ಟಿದರು. ಅಲ್ಲದೇ ಇವರಿಂದ ಇಬ್ಬರು ಮಹಾಪುಣ್ಯಶಾಲಿಗಳಾದ ಹುಡುಗಿಯರು ಹುಟ್ಟಿದರು. ಈ ಕನ್ಯೆಯರಿಂದ ಈ ಪ್ರಜೆಗಳೆಲ್ಲರೂ ಹುಟ್ಟಿದರು. ಈ ಕನ್ಯೆಯರು ಆಕೂತಿದೇವಿ, ಪ್ರಸೂತಿದೇವಿ, ಎಂಬ ಹೆಸರಿನವರು.

೨೭೭–೨೭೮. ಸ್ವಾಯಂಭುವ ಮನುವು, ಪ್ರಸೂತಿ, ಎಂಬ ಕನ್ಯೆಯನ್ನು ದಕ್ಷಬ್ರಹ್ಮನಿಗೆ ಕೊಟ್ಟನು. ಪ್ರಾಣವಾಯುವನ್ನೇ ದಕ್ಷ, ಎಂಬುದಾಗಿಯೂ, ಸಂಕಲ್ಪವನ್ನು ಮನು, ಎಂಬುದಾಗಿಯೂ, ತಿಳಿಯಬೇಕು. ಸ್ವಾಯಂಭುವ ಮನುವು ಆಕೂತೀ, ಎಂಬ ಕನ್ಯೆಯನ್ನು ರುಚಿ, ಎಂಬ ಬ್ರಹ್ಮನಿಗೆ ಕೊಟ್ಟನು. ಮಾನಸ ಪುತ್ರನಾದ ರುಚಿಯಿಂದ ಆಕೂತಿಯಲ್ಲಿ ಮಿಥುನ, ಎಂಬುವನ ಜನನವಾಯಿತು. ಅಲ್ಲದೇ ಇವನಿಂದ ಯಜ್ಞ, ಮತ್ತು ದಕ್ಷಿಣಾ, ಎಂಬ ಪುತ್ರ, ಪುತ್ರಿಯರು ಅವಳಿಜವಳಿಗಳಾಗಿ ಹುಟ್ಟಿದರು. ಯಜ್ಞನಿಂದ ದಕ್ಷಿಣೆಯಲ್ಲಿ ಹನ್ನೆರಡು ಮಕ್ಕಳು ಹುಟ್ಟಿದರು.

ಯಜ್ಞಶ್ಚ ದಕ್ಷಿಣಾ ಚೈವ ಯಮಲೌ ಸಂಬಭೂವತುಃ ।
ಯಜ್ಞಸ್ಯ ದಕ್ಷಿಣಾಯಾಂ ತು ಪುತ್ರಾ ದ್ವಾದಶ ಜಜ್ಞಿರೇ ॥೨೭೯॥
ಯಾಮಾ ಇತಿ ಸಮಾಖ್ಯಾತಾ ದೇವಾಃ ಸ್ವಾಯಂಭುವೇಽಂತರೇ ।
ಏತಸ್ಯ ಪುತ್ರಾ ಯಜ್ಞಸ್ಯ ತಸ್ಮಾದ್ಯಾಮಾಶ್ಚ ತೇ ಸ್ಮೃತಾಃ ॥೨೮೦॥
ಅಜಿತ ಶ್ಚೈವ ಶುಕ್ರಶ್ಚ ಗಣೌ ದ್ವೌ ಬ್ರಹ್ಮಣಾ ಕೃತೌ ।
ಯಾಮಾಃ ಪೂರ್ವಂ ಪ್ರಜಾತಾ ಯೇ ತೇಽಭವಂಸ್ತು ದಿವೌ ಕಸಃ ॥
ಸ್ವಾಯಂಭುವ ಸುತಾಯಾಂ ತು ಪ್ರಸೂತ್ಯಾಂ ಲೋಕಮಾತರಃ ।
ತಸ್ಯಾಂ ಕನ್ಯಾಶ್ಚತುರ್ವಿಂಶ ದ್ದಕ್ಷ ಸ್ತ್ವಜನ ಯತ್ಪ್ರಭುಃ ॥೨೮೨॥
ಸರ್ವಾಸ್ತಾಶ್ಚ ಮಹಾಭಾಗಾಃ ಸರ್ವಾಃ ಕಮಲ ಲೋಚನಾಃ ।
ಭೋಗವತ್ಯಶ್ಚ ತಾಃ ಸರ್ವಾಃ ಸರ್ವಾಸ್ತಾ ಯೋಗ ಮಾತರಃ ॥

---

೨೮೦–೨೮೨. ಸ್ವಾಯಂಭುವ ಮನ್ವಂತರದಲ್ಲಿ ಈ ದೇವತೆಗಳು ಯಾಮಾ, ಎಂದು ಪ್ರಖ್ಯಾತರಾಗಿದ್ದರು. ಸ್ವಾಯಂಭುವ ಮನುವಿನ ಸಂತತಿಯವರೂ, ಯಜ್ಞನ ಮಕ್ಕಳೂ, ಆದ್ದರಿಂದಲೇ ಇವರಿಗೆಯಾಮ, ಎಂದು ಹೆಸರು ಬಂದಿತು. ಬ್ರಹ್ಮನಿಂದ ಅಜಿತ, ಶುಕ್ರ, ಎಂಬ ಎರಡು ದೇವಗಣಗಳು ಹುಟ್ಟಿದರು. ಯಾಮ, ಎಂಬುವರಿಗಿಂತ ಮುಂಚೆ ಹುಟ್ಟಿದ್ದರಿಂದಲೇ ಅವರಿಗೆ ದಿವೌಕಸ, ಅಥವಾ ಸ್ವರ್ಗವಾಸಿಗಳಾದ ದೇವತೆಗಳು ಎಂದು ಹೆಸರು ಬಂದಿತು. ಸ್ವಾಯಂಭುವನ ಮಗಳಾದ ಪ್ರಸೂತಿಯಲ್ಲಿ ಲೋಕಕ್ಕೆ ಮಾತೃಗಳಾದ ಇಪ್ಪತ್ತುನಾಲ್ಕು ಕನ್ಯೆಯರು ದಕ್ಷಬ್ರಹ್ಮನಿಂದ ಉತ್ಪನ್ನರಾದರು.

೨೮೩–೨೮೫. ಈ ಎಲ್ಲಾ ಕನ್ಯೆಯರೂ ಮಹಾ ಪುಣ್ಯಶಾಲಿಗಳೂ. ಕಮಲದಂತೆ ಕಣ್ಣುಳ್ಳವರೂ, ಸುಖಪ್ರಿಯರೂ, ಯೋಗಶಾಲಿಗಳಾದ ತಾಯಿಯರೂ, ಆಗಿದ್ದರು. ಎಲ್ಲರೂ ಪ್ರಪಂಚಕ್ಕೆ ತಾಯಿಯರೂ, ಬ್ರಹ್ಮ ಜ್ಞಾನಿಗಳೂ, ಆಗಿದ್ದರು. ಶ್ರದ್ಧೆ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ,

ಸರ್ವಾಶ್ಚ ಬ್ರಹ್ಮವಾದಿನ್ಯಃ ಸರ್ವಾ ವಿಶ್ವಸ್ಯ ಮಾತರಃ ।
ಶ್ರದ್ಧಾ ಲಕ್ಷ್ಮೀಃ ಧೃತಿ ಸ್ತುಷ್ಟಿಃ ಪುಷ್ಟಿ ರ್ಮೇಧಾ ಕ್ರಿಯಾ ತಥಾ ॥
ಬುದ್ಧಿ ರ್ಲಜ್ಜಾ ವಪುಃ ಶಾಂತಿಃ ಸಿದ್ಧಿಃ ಕೀರ್ತಿ ಸ್ತ್ರಯೋದಶ ।
ಪತ್ನ್ಯರ್ಥಂ ಪ್ರತಿ ಜಗ್ರಾಹ ಧರ್ಮೋ ದಾಕ್ಷಾಯಣೀಃ ಪ್ರಭುಃ ॥
ದಾರಾಣ್ಯೇತಾನಿ ವೈ ತಸ್ಯ ವಿಹಿತಾನಿ ಸ್ವಯಂಭುವಾ ।
ತಾಭ್ಯಃ ಶಿಷ್ಟಾ ಯವೀಯಸ್ಯ ಏಕಾದಶ ಸುಲೋಚನಾಃ ॥೨೮೬॥
ಸತೀ ಖ್ಯಾತ್ಯಥ ಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ।
ಸಂನತಿಶ್ಚಾ ನಸೂಯಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ॥೨೮೭॥
ತಾ ಸ್ತಥಾ ಪ್ರತ್ಯಪದ್ಯಂತ ಪುನರನ್ಯೇ ಮಹರ್ಷಯಃ ।
ರುದ್ರೋ ಭೃಗು ರ್ಮರೀಚಿಶ್ಚ ಅಂಗಿರಾಃ ಪುಲಹಃ ಕ್ರತುಃ ॥೨೮೮॥
ಪುಲಸ್ತ್ಯೋಽತ್ರಿರ್ವಸಿಷ್ಠಶ್ಚ ಪಿತರೋಽಗ್ನಿಸ್ತ ಥೈವಚ ।
ಸತೀಂ ಭವಾಯ ಪ್ರಾಯಚ್ಛತ್ ಖ್ಯಾತಿಂ ಚ ಭೃಗವೇ ತತಃ॥೨೮೯॥

---

ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ, ಕೀರ್ತಿ, ಎಂದು ಈ ಹದಿಮೂರು ಜನ ಸ್ತ್ರೀಯರ ಹೆಸರೆಂದು ತಿಳಿಯಬೇಕು. ಧರ್ಮ, ಎಂಬ ಸ್ವಾಮಿಯು ದಕ್ಷಬ್ರಹ್ಮನ ಪುತ್ರಿಯರಾದ ಇವರನ್ನು ಪತ್ನಿಯರನ್ನಾಗಿ ಸ್ವೀಕರಿಸಿದನು.

೨೮೬—೨೮೮. ಸ್ವಾಯಂಭುವ ಮನುವಿನಿಂದ ಹೀಗೆ ಅವನಿಗೆ ಕನ್ಯೆಯರು ಕೊಡಲ್ಪಟ್ಟರು. ಸುಂದರವಾದ ಕಣ್ಣುಳ್ಳ ಕಿರಿಯವರಾದ ಉಳಿದ ಈ ಹನ್ನೊಂದು ಜನ ಸ್ತ್ರೀಯರು, ಸತೀ, ಖ್ಯಾತಿ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸಂನತಿ, ಅನಸೂಯಾ, ಊರ್ಜಾ, ಸ್ವಾಹಾ, ಸ್ವಧಾ, ಎಂಬ ಹೆಸರುಳ್ಳವರಾಗಿದ್ದರು. ಇವರನ್ನು ರುದ್ರ, ಮರೀಚಿ, ಭೃಗು, ಅಂಗಿರಸ್, ಪುಲಹ, ಕ್ರತು, ಎಂಬ ಮಹರ್ಷಿಗಳೂ, ಇನ್ನೂ ಕೆಲವು ಮುಂದೆ ಹೇಳುವ ಮಹರ್ಷಿಗಳೂ, ಸ್ವೀಕಾರಮಾಡಿದರು. ಹೇಗೆಂದರೆ,

೨೮೯—೨೯೧. ಬ್ರಹ್ಮನು ಪುಲಸ್ತ್ಯ, ಅತ್ರಿ, ವಸಿಷ್ಠ, ಪಿತೃದೇವತೆಗಳೂ, ಅಗ್ನಿ, ಇವರುಗಳಿಗೆ ತನ್ನ ಕನ್ಯೆಯರನ್ನು ಕೊಟ್ಟನು. ಇವನು

ಮರೀಚಯೇ ಚ ಸಂಭೂತಿಂ ಸ್ಮೃತಿ ಮಂಗಿರಸೇ ದದೌ ।
ಪ್ರೀತಿಂ ಚೈವ ಪುಲಸ್ತ್ಯಾಯ ಕ್ಷಮಾಂ ವೈ ಪುಲಹಾಯ ಚ ॥೨೯೦॥
ಕ್ರತವೇ ಸಂನತಿಂ ನಾಮ ಅನಸೂಯಾಂ ತಥಾಽತ್ರಯೇ ।
ಊರ್ಜಾಂ ದದೌ ವಸಿಷ್ಠಾಯ ಸ್ವಾಹಾ ಮಪ್ಯಗ್ನಯೇ ದದೌ ॥
ಸ್ವಧಾಂ ಚೈವ ಪಿತೃಭ್ಯಸ್ತು ತಾಸ್ವಪತ್ಯಾನಿ ಬೋಧತ ।
ಏತಾಃ ಸರ್ವಾ ಮಹಾಭಾಗಾಃ ಪ್ರಜಾ ಸ್ವನು ಸ್ಮೃತಾಃ ಸ್ಥಿತಾಃ ॥
ಮನ್ವಂತರೇಷು ಸರ್ವೇಷು ಯಾವದಾಭೂತ ಸಂಪ್ಲವಂ ।
ಶ್ರದ್ಧಾ ಕಾಮಂ ವಿಜಜ್ಞೇ ವೈ ದರ್ಪೋ ಲಕ್ಷ್ಮ್ಯಾಃ ಸುತಃ ಸ್ಮೃತಃ ॥
ಧೃತ್ಯಾಸ್ತು ನಿಯಮಃ ಪುತ್ರಸ್ತುಷ್ಟ್ಯಾಃ ಸಂತೋಷ ಏವಚ ।
ಪುಷ್ಟ್ಯಾ ಲೋಭಃ ಸುತಶ್ಚಾಪಿ ಮೇಧಾ ಪುತ್ರಃ ಶ್ರುತ ಸ್ತಥಾ॥೨೯೪॥
ಕ್ರಿಯಾಯಾಮಭವತ್ಪುತ್ರೋ ದಂಡಃ ಸಮಯ ಏವಚ ।
ಬುದ್ಧ್ಯಾಂ ಬೋಧಃ ಸುತಸ್ತದ್ವ ತ್ಪ್ರಮಾದೋಽಪ್ಯಪಜಾಯತ ॥

---

ಸತಿಯನ್ನು ಶಿವನಿಗೂ, ಭೃಗುವಿಗೆ ಖ್ಯಾತಿಯನ್ನೂ, ಸಂಭೂತಿಯನ್ನು ಮರೀಚಿಗೂ, ಅಂಗಿರಸ್ಸಿಗೆ ಸ್ಮೃತಿಯನ್ನೂ, ಪುಲಸ್ತ್ಯನಿಗೆ ಪ್ರೀತಿಯನ್ನೂ, ಪುಲಹನಿಗೆ ಕ್ಷಮೆಯನ್ನೂ, ಕ್ರತುವಿಗೆ ಸಂನತಿಯನ್ನೂ, ಅತ್ರಿಗೆ ಅನಸೂಯೆಯನ್ನೂ, ವಸಿಷ್ಠನಿಗೆ ಊರ್ಜೆಯನ್ನೂ, ಅಗ್ನಿಗೆ ಸ್ವಾಹಾದೇವಿಯನ್ನೂ, ಮದುವೆ ಮಾಡಿಕೊಟ್ಟನು.

೨೯೨–೨೯೪. ಸ್ವಾಯಂಭುವ ಮನುವು ಸ್ವಧೆಯನ್ನು ಪಿತೃದೇವತೆಗಳಿಗೆ ಕೊಟ್ಟನು. ಈ ಕನ್ಯೆಯರಲ್ಲಿ ಹುಟ್ಟಿದ ಮಕ್ಕಳುಗಳ ವಿಷಯವನ್ನು ಕೇಳಿರಿ. ಈ ಕನ್ಯೆಯರೆಲ್ಲರೂ ಬಹಳ ಭಾಗ್ಯವತಿಯರಾಗಿ ಎಲ್ಲರ ಪ್ರಶಂಸೆಗೂ ಭೂತಗಳ ಪ್ರಳಯವು ಆಗುವವರೆಗೂ, ಎಲ್ಲಾ ಮನ್ವಂತರಗಳಲ್ಲಿಯೂ ಶ್ರೇಷ್ಠರೆನಿಸಿದ್ದರು. ಶ್ರದ್ಧೆಯು ಕಾಮನನ್ನು ಪ್ರಸವಿಸಿದಳು. ದರ್ಪನು ಲಕ್ಷ್ಮಿಯ ಮಗನೆಂದು ತಿಳಿಯಬೇಕು. ನಿಯಮನು ಧೃತಿಯ ಮಗನು. ಸಂತೋಷನು ತುಷ್ಟಿಯ ಮಗನು.

ಲಜ್ಜಾಯಾಂ ವಿನಯಃ ಪುತ್ರೋ ವ್ಯವಸಾಯೋ ವಸೋಃ ಸುತಃ ।
ಕ್ಷೇಮಃ ಶಾಂತಿ ಸುತ ಶ್ಚಾಪಿ ಸುಖಂ ಸಿದ್ಧೇ ರ್ವ್ಯಜಾಯತ ॥
ಯಶಃ ಕೀರ್ತಿಸುತ ಶ್ಚಾಪಿ ಇತ್ಯೇತೇ ಧರ್ಮಸೂನವಃ ।
ಕಾಮಸ್ಯ ಹರ್ಷಃ ಪುತ್ರೋ ವೈ ದೇವ್ಯಾಂ ಪ್ರೀತ್ಯಾಂ ವ್ಯಜಾಯತ ॥
ಇತ್ಯೇಷ ವೈ ಸುತೋ ದರ್ಕಃ ಸರ್ಗೋ ಧರ್ಮಸ್ಯ ಕೀರ್ತಿತಃ ।
ಜಜ್ಞೇ ಹಿಂಸಾ ತ್ವ ಧರ್ಮಾ ದ್ವೈ ನಿಕೃತಿಂ ಚಾನೃತಂ ಸುತಂ ॥೨೯೮॥
ನಿಕೃತ್ಯಾಂ ತು ದ್ವಯಂ ಜಜ್ಞೇ ಭಯಂ ನರಕ ಏವಚ ।
ಮಾಯಾ ಚ ವೇದನಾ ಚಾಪಿ ಮಿಥುನ ದ್ವಯ ಮೇತಯೋಃ॥೨೯೯॥
ಭೂಯೋ ಜಜ್ಞೇಽಥ ವೈ ಮಾಯಾ ಮೃತ್ಯುಂ ಭೂತಾಪ ಹಾರಿಣಂ
ವೇದನಾಯಾಃ ಸುತಶ್ಚಾಪಿ ದುಃಖಂ ಜಜ್ಞೇ ಚ ರೌರವಃ ॥೩೦೦॥

---

ಲೋಭನು ಪುಷ್ಟಿಯ ಮಗನಾಗಿಯೂ, ಶ್ರುತನು ಮೇಧೆಯ ಮಗನಾಗಿಯೂ, ಇದ್ದರು.

೨೯೫–೨೯೭. ಕ್ರಿಯೆಯಲ್ಲಿ ದಂಡ, ಸಮಯ, ಎಂಬಿಬ್ಬರು ಮಕ್ಕಳಾದರು. ಬುದ್ಧಿಯಲ್ಲಿ ಬೋಧ, ಪ್ರಮಾದ, ಎಂಬಿಬ್ಬರು ಮಕ್ಕಳಾದರು. ಲಜ್ಜೆಯಲ್ಲಿ ವಿನಯನೆಂಬ ಮಗನೂ, ವಸುವಿಗೆ ವ್ಯವಸಾಯನೆಂಬ ಮಗನೂ, ಆದರು. ಶಾಂತಿಗೆ ಕ್ಷೇಮನೆಂಬ ಮಗನೂ, ಸಿದ್ಧಿಗೆ ಸುಖನೆಂಬ ಮಗನೂ, ಹುಟ್ಟಿದರು. ಕೀರ್ತಿಯಲ್ಲಿ ಯಶ, ಎಂಬ ಮಗನೂ ಆದನು. ಕಾಮನಿಗೆ ಪ್ರೀತಿದೇವಿಯಲ್ಲಿ ಹರ್ಷನೆಂಬ ಮಗನಾದನು. ಇವರೆಲ್ಲರೂ ಧರ್ಮನ ಮಕ್ಕಳೆಂದು ತಿಳಿಯಬೇಕು.

೨೯೮–೩೦೦. ಈ ರೀತಿ ಧರ್ಮನ ಒಳ್ಳೆಯ ಮಕ್ಕಳಿಂದ ಸಂತಾನಾಭಿವೃದ್ಧಿಯಾಯಿತು. ಅಧರ್ಮದಿಂದ, ಹಿಂಸೆಯಲ್ಲಿ, ನಿಕೃತಿ, ಅನೃತ, ಎಂಬಿಬ್ಬರು ಮಕ್ಕಳಾದರು ನಿಕೃತಿಯಲ್ಲಿ ಭಯ, ನರಕ, ಎಂಬಿಬ್ಬರು ಮಕ್ಕಳಾದರು. ಇವರಿಗೆ ಮಾಯಾ, ವೇದನಾ, ಎಂಬಿಬ್ಬರು ಪತ್ನಿಯರಿದ್ದರು. ಪ್ರಾಣಿಗಳನ್ನು ಹಾಳುಮಾಡುವ ಮೃತ್ಯುವನ್ನು ಮಾಯೆಯು ಜನಿಸಿದಳು. ವೇದನೆಯ ಮಗನಾದ ರೌರವನು ಅತ್ಯಂತ ಕಷ್ಟದಿಂದ ದುಃಖಕರನಾಗಿ ಹುಟ್ಟಿದನು.

**ಮೃತ್ಯೋರ್ವ್ಯಾಧಿ ಜರಾಶೋಕ ಕ್ರೋಧಾ ಸೂಯಾಶ್ಚ ಜಜ್ಞಿರೇ।**
**ದುಃಖೋ ತ್ತರಾಃ ಸುತಾ ಹ್ಯೇತೇ ಸರ್ವೇಚಾಧರ್ಮ ಲಕ್ಷಣಾಃ ॥**

**ನೈಷಾಂ ಭಾರ್ಯಾಸ್ತು ಪುತ್ರಾಶ್ಚ ಸರ್ವೇ ಹ್ಯೇತೇಽಪರಿಗ್ರಹಾಃ ।**
**ಇತ್ಯೇಷ ತಾಮಸಃ ಸರ್ಗೋ ಜಜ್ಞೇ (ಽ) ಧರ್ಮನಿಯಾಮಕಃ ॥**

**ಪ್ರಜಾಃ ಸೃಜೇತಿ ವ್ಯಾದಿಷ್ಟೋ ಬ್ರಹ್ಮಣಾ ನೀಲಲೋಹಿತಃ ।**
**ಸೋಽಭಿಧ್ಯಾಯ ಸತೀಂ ಭಾರ್ಯಾಂ ನಿರ್ಮಮೇ ಹ್ಯಾತ್ಮ ಸಂಭವಾನ್**

**ನಾಧಿಕಾ ನ್ನ ಚ ಹೀನಾಂಸ್ತಾ ನ್ಮಾನಸಾ ನಾತ್ಮನಃ ಸಮಾನ್ ।**
**ಸಹಸ್ರಂ ಹಿ ಸಹಸ್ರಾಣಾಂ ಸೋಽಸೃಜತ್ಕೃತ್ತಿ ವಾಸಸಃ ॥೩೦೪॥**

**ತುಲ್ಯಾ ನೇವಾತ್ಮನಃ ಸರ್ವಾನ್ ರೂಪ ತೇಜೋಬಲ ಶ್ರುತೈಃ ।**
**ಪಿಂಗಲಾ ನ್ಸನಿಷಂಗಾಂಶ್ಚ ಸ ಕಪರ್ದಾ ನ್ಸಲೋಹಿತಾನ್ ॥೩೦೫॥**

---

೩೦೧–೩೦೩. ಮೃತ್ಯುವಿನಿಂದ, ವ್ಯಾಧಿ, ಜರಾ, ಶೋಕ, ಕ್ರೋಧ, ಅಸೂಯಾ, ಎಂಬುವರು ಹುಟ್ಟಿದರು. ಇವರೆಲ್ಲರೂ, ಕಷ್ಟವನ್ನುಂಟು ಮಾಡುವವರೂ, ಅಧರ್ಮಕ್ಕೆ ಕಾರಣ, ಫಲ, ರೂಪರೂ, ಆಗಿದ್ದರು. ಇವರಿಗೆ ಮಕ್ಕಳಾಗಲೀ, ಹೆಂಡತಿಯರಾಗಲೀ, ಪರಿವಾರಗಳಾಗಲಿ, ಇರಲಿಲ್ಲ. ಹೀಗೆ ತಮೋಗುಣದಿಂದ ಕೂಡಿದ ಸೃಷ್ಟಿಯು ಅಧರ್ಮ ಪ್ರಚುರವಾಗಿತ್ತು. ಎಂದು ತಿಳಿಯಬೇಕು. ಬ್ರಹ್ಮನಿಂದ ಪ್ರಜೆಗಳನ್ನು ಸೃಷ್ಟಿಸು, ಎಂದು ಅಪ್ಪಣೆಮಾಡಲ್ಪಟ್ಟ ರುದ್ರನು ತನ್ನ ಪತ್ನಿಯಾದ ಸತಿಯೊಂದಿಗೆ ಧ್ಯಾನ ಮಾಡಿ ಮಕ್ಕಳನ್ನು ಪಡೆದನು.

೩೦೪–೩೦೬. ಈಶ್ವರನು ತನಗಿಂತಲೂ ಹೆಚ್ಚುಕಮ್ಮಿಯಿಲ್ಲದೇ ತನಗೆ ಎಲ್ಲಾ ವಿಧದಲ್ಲಿಯೂ ಸಮಾನರಾದ ಚರ್ಮವನ್ನು ಧರಿಸಿರುವ ಹತ್ತು ಲಕ್ಷಜನ ಮಕ್ಕಳನ್ನು ಸೃಜಿಸಿದನು. ಅವರು ಅವನಿಗೆ, ರೂಪ, ತೇಜಸ್ಸು, ಶಕ್ತಿ, ಶಾಸ್ತ್ರಜ್ಞಾನ, ಇವುಗಳಲ್ಲಿ ಸಮರಾಗಿಯೂ, ಹೊಂಬಣ್ಣದವರಾಗಿಯೂ, ಬತ್ತಳಿಕೆಯುಳ್ಳವರಾಗಿಯೂ, ಜಟಾಧಾರಿಗಳಾಗಿಯೂ, ಕಪ್ಪಾದ ಕತ್ತುಳ್ಳವರಾಗಿಯೂ, ವಿಶೇಷ ಜ್ಞಾನವುಳ್ಳವರಾಗಿಯೂ, ಹಸುರಾದ ಕೇಶವುಳ್ಳವರಾಗಿಯೂ, ಕೇವಲ ಕಣ್ಣಿನಿಂದ ನೋಡೋಣದರಿಂದಲೇ ಶತ್ರುಗಳನ್ನು ನಾಶಮಾಡುವವರಾಗಿಯೂ, ರುಂಡಧಾರಿ

ವಿಶಿಷ್ಟಾನ್ ಹರಿಕೇಶಾಂಶ್ಚ ದೃಷ್ಟಿ ಘ್ನಾಂಶ್ಚ ಕಪಾಲಿನಃ ।
ಮಹಾರೂಪಾ ನ್ವಿರೂಪಾಂಶ್ಚ ವಿಶ್ವರೂಪಾ ನ್ಸ್ವರೂಪಿಣಃ ॥೩೦೬॥

ರಥಿನ ಶ್ಚರ್ಮಿಣ ಶ್ಚೈವ ವರ್ಮಿಣಶ್ಚ ವರೂಥಿನಃ ।
ಸಹಸ್ರ ಶತ ಬಾಹೂಂಶ್ಚ ದಿವ್ಯಾ ನ್ಭೌಮಾಂತರಿಕ್ಷಗಾನ್ ॥೩೦೭॥

ಸ್ಥೂಲ ಶೀರ್ಷಾ ನಷ್ಟದಂಷ್ಟ್ರಾ ನ್ದ್ವಿಜಿಹ್ವಾಂಸ್ತ್ರಿಲೋಚನಾನ್
ಅನ್ನಾದಾ ನ್ಪಿಶಿತಾಶಾಂಶ್ಚ ಆಜ್ಯಪಾನ್ಸೋಮ ಪಾನಪಿ ॥೩೦೮॥

ಮೀಢುಷೋಽತಿ ಕಪಾಲಾಂಶ್ಚ ಶಿತಿಕಂಠೋರ್ಧ್ವರೇತಸಃ ।
ಹವ್ಯಾದಾ ನ್ಶ್ರುತ ಧರ್ಮಾಂಶ್ಚ ಧರ್ಮಿಣೋಽಹ್ಯಥ ಬರ್ಹಿಣಃ ॥

---

ಗಳಾಗಿಯೂ, ಮಹಾರೂಪವಂತರಾಗಿಯೂ, ವಿವಿಧ ರೂಪಿಗಳಾಗಿಯೂ, ಪ್ರಪಂಚ ಸ್ವರೂಪಿಗಳಾಗಿಯೂ, ವಿಶಿಷ್ಟ ಸ್ವರೂಪವುಳ್ಳವರಾಗಿಯೂ ಇದ್ದರು.

೩೦೭-೩೧೦. ಈ ಮಕ್ಕಳು ರಥದಮೇಲೆ ಕೂರುವವರಾಗಿಯೂ, ಯುದ್ಧಕವಚಧಾರಿಗಳಾಗಿಯೂ, ಗುರಾಣಿಯನ್ನು ಹಿಡಿದಿರುವವರಾಗಿಯೂ, ಸೈನ್ಯವುಳ್ಳವರಾಗಿಯೂ, ಲಕ್ಷ ತೋಳುಳ್ಳವರಾಗಿಯೂ, ಸ್ವರ್ಗೀಯರಾಗಿಯೂ, ಭೂಮಿ, ಆಕಾಶ, ಎರಡು ಲೋಕಗಳಲ್ಲೂ ಸಂಚರಿಸಬಲ್ಲರಾಗಿಯೂ, ಇದ್ದರು. ಅಲ್ಲದೇ ಇವರು ದೊಡ್ಡ ತಲೆಗಳುಳ್ಳವರಾಗಿಯೂ, ಎಂಟು ಕೋರೆದಾಡಿಗಳುಳ್ಳವರಾಗಿಯೂ, ಎರಡು ನಾಲಗೆಗಳುಳ್ಳವರಾಗಿಯೂ, ಮೂರು ಕಣ್ಣುಳ್ಳವರಾಗಿಯೂ, ಇದ್ದರು. ಅಲ್ಲದೇ ಇವರು ಅನ್ನವನ್ನೂ, ಮಾಂಸವನ್ನೂ, ತುಪ್ಪವನ್ನೂ, ಸೋಮವೆಂಬ ಮದ್ಯವನ್ನೂ ಸೇವಿಸುತ್ತಲೂ, ವೀರ್ಯವಂತರಾಗಿ ದೊಡ್ಡರುಂಡಗಳನ್ನು ಒಡಿದು ಕಪ್ಪಾದ ಕತ್ತಿನಿಂದ ಕೂಡಿ ಬ್ರಹ್ಮಚಾರಿಗಳಾಗಿದ್ದರು. ಇವರು ಹವಿಸ್ಸನ್ನು ಸೇವಿಸುತ್ತಲೂ, ಧರ್ಮಜ್ಞರಾಗಿಯೂ, ಧರ್ಮಮಾಡುತ್ತಲೂ, ನವಿಲುಗರಿಗಳಿಂದ ಅಲಂಕರಿಸಿಕೊಂಡೂ, ಇರುತ್ತಿದ್ದರು. ಇವರು ಕೂರುತ್ತಲೂ,ಓಡುತ್ತಲೂ,ಇರುವ ಐದು ಭೂತಗಳನ್ನು ಸ್ವಾಧೀನದಲ್ಲಿರಿಸಿ,ಪಾತ

ಆಸೀನಾ ನ್ಧಾವತ ಶ್ಚೈವ ಪಂಚ ಭೂತಾನ್ಸಹಸ್ರ ಶಃ ।
ಅಧ್ಯಾಪಿನೋಽಧ್ಯಾಯಿನಶ್ಚ ಜಪತೋ ಯುಂಜತ ಸ್ತಥಾ ॥೩೧೦॥
ಧೂಮವಂತೋ ಜ್ವಲಂತಶ್ಚ ನದೀಮಂತೋಽತಿದೀಪ್ತಿನಃ ।
ವೃದ್ಧಾನ್ಬುದ್ಧಿ ಮತಶ್ಚೈವ ಬ್ರಹ್ಮಿಷ್ಠಾನ್ ಶುಭದರ್ಶನಾನ್॥೩೧೧॥
ನೀಲಗ್ರೀವಾನ್ ಸಹಸ್ರಾಕ್ಷಾನ್ ಸರ್ವಾಂಶ್ಚಾಥ ಕ್ಷಮಾಕರಾನ್ ।
ಅದೃಶ್ಯಾಸ್ಸರ್ವ ಭೂತಾನಾಂ ಮಹಾಯೋಗಾನ್ಮಹೌಜಸಃ ॥೩೧೨॥
ಭ್ರಮಂತೋಽಭಿದ್ರವಂತಶ್ಚ ಪ್ಲವಂತಶ್ಚ ಸಹಸ್ರಶಃ ।
ಅಯಾತ ಯಾಮಾನ ಸೃಜದ್ರುದ್ರಾನೇ ತಾನ್ಸುರೋತ್ತಮಾನ್ ॥
ಬ್ರಹ್ಮಾದೃಷ್ಟ್ವಾಽ ಬ್ರವೀದೇನಂ ಮಾಸ್ರಾಕ್ಷೀರೀ ದೃಶೀಃ ಪ್ರಜಾಃ ।
ಸಷ್ಟವ್ಯಾ ನಾತ್ಮನ ಸ್ತುಲ್ಯಾಃ ಪ್ರಜಾ ದೇವ ನಮೋಽಸ್ತುತೇ ॥

---

ಹೇಳುತ್ತಲೂ, ಅನೇಕಬಗೆಗಳಿಂದ ಪಾರಾಯಣ ಜಪ ಮಾಡುತ್ತಲೂ, ಯೋಗಾಭ್ಯಾಸಮಾಡುತ್ತಲೂ ಇದ್ದರು.

೩೧೧-೩೧೫. ಇವರು ಹೊಗೆಯನ್ನು ಕಾರುವವರಾಗಿಯೂ, ಬೆಂಕಿಯ ಉರಿಗಳನ್ನು ಹೊರಗೆಡವುವರಾಗಿಯೂ, ನದಿಗಳಿಂದ ಕೂಡಿದವರಾಗಿಯೂ, ಬಹಳ ಪ್ರಕಾಶಮಾನರಾಗಿಯೂ,ವಯೋಜ್ಞಾನವೃದ್ಧರಾಗಿಯೂ, ಬುದ್ಧಿವಂತರಾಗಿಯೂ, ಬ್ರಹ್ಮಜ್ಞಾನಿಗಳಾಗಿಯೂ, ಮಂಗಳಕರವಾದ ಸ್ವರೂಪವುಳ್ಳವರಾಗಿಯೂ, ಕಪ್ಪಾದ ಕತ್ತುಳ್ಳವರಾಗಿಯೂ, ಸಾವಿರ ಕಣ್ಣುಳ್ಳವರಾಗಿಯೂ ಇದ್ದರು. ಈ ರುದ್ರಗಣಗಳು ದಯಾಗುಣವುಳ್ಳವರಾಗಿಯೂ, ಎಲ್ಲರ ಕಣ್ಣಿಗೆ ಕಾಣಿಸದವರಾಗಿಯೂ, ಮಹಾಯೋಗಿಗಳಾಗಿಯೂ, ಮಹಾತೇಜಸ್ವಿಗಳಾಗಿಯೂ, ಆತ್ಮಾನಂದದಿಂದ ಚಲಿಸುತ್ತಲೂ, ಓಡುತ್ತಲೂ, ಹಾರುತ್ತಲೂ, ಸಾವಿರಾರು ಬಗೆಯಾಗಿ ಕುಣಿಯುತ್ತಲೂ, ಇದ್ದರು. ಇಂಥಾ ಸುರಶ್ರೇಷ್ಠರಾದ ರುದ್ರಶ್ರೇಷ್ಠರಾದ ಮತ್ತು ರುದ್ರಸ್ವರೂಪರಾದ ಇವರನ್ನು ಶಿವನು ಸೃಷ್ಟಿಸಿದನು. ಬ್ರಹ್ಮನು ಶಿವನನ್ನು ಕುರಿತು " ಇಂಥಾ ನಿನಗೆ ಸಮಾನರಾದ ಮಕ್ಕಳನ್ನು ಸೃಷ್ಟಿಸಬೇಡ! ಓ

ಅನ್ಯಾಃ ಸೃಜ ತ್ವಂ ಭದ್ರಂ ತೇ ಪ್ರಜಾ ವೈ ಮೃತ್ಯುಸಂಯುತಾಃ ।
ನಾರಪ್ಸ್ಯಂತೇ ಹಿ ಕರ್ಮಾಣಿ ಪ್ರಜಾ ವಿಗತ ಮೃತ್ಯವಃ ॥೩೧೫॥
ಏವಮುಕ್ತೋಽ ಬ್ರವೀದೇನಂ ನಾಹಂ ಮೃತ್ಯು ಜರಾಽನ್ವಿತಾಃ ।
ಪ್ರಜಾಃ ಸ್ರಕ್ಷ್ಯಾಮಿ ಭದ್ರಂ ತೇ ಸ್ಥಿತೋಽಹಂ ತ್ವಂ ಸೃಜ ಪ್ರಜಾಃ
ಏತೇ ಯೇ ವೈ ಮಯಾ ಸೃಷ್ಟಾ ವಿರೂಪಾ ನೀಲಲೋಹಿತಾಃ ।
ಸಹಸ್ರಾಣಾಂ ಸಹಸ್ರಂ ತು ಆತ್ಮನೋ ನಿಸ್ಸೃತಾಃ ಪ್ರಜಾಃ ॥೩೧೭॥
ಏತೇ ದೇವಾ ಭವಿಷ್ಯಂತಿ ರುದ್ರಾ ನಾಮ ಮಹಾಬಲಾಃ ।
ಪೃಥಿವ್ಯಾ ಮಂತರಿಕ್ಷೇ ಚ ದಿಕ್ಷು ಚೈವ ಪರಿಶ್ರಿತಾಃ ॥೩೧೮॥

---

ಸ್ವಾಮಿಯೇ, ಇಂಥಾವರ ಸೃಷ್ಟಿಯು ಬೇಡ. ನಿನಗೆ ನಮಸ್ಕಾರವಿರಲಿ, ಎಂದು ಬಿನ್ನೈಸಿದನು. ಬ್ರಹ್ಮನು ಮಾತನ್ನು ಮುಂದುವರಿಸುತ್ತಾ ಇಂತೆಂದನು. ಓ ಸ್ವಾಮಿಯಾದ ಶಿವನೇ, ಬೇರೇ ವಿಧವಾದ ಸಾವಿನ ಸ್ವಭಾವವುಳ್ಳ ಮಕ್ಕಳನ್ನು ಸೃಜಿಸು. ನಿನಗೆ ಮಂಗಳವಾಗಲಿ. ಹೀಗೆ ಸಾವಿಲ್ಲದ ಮಕ್ಕಳನ್ನು ಸೃಜಿಸಿದರೆ ಇವರು ಕರ್ಮಮಾಡುವುದನ್ನೇ ಬಿಟ್ಟು ಬಿಟ್ಟಾರು! ಎಂದು ಪ್ರಾರ್ಥಿಸಿದನು.

೩೧೬–೩೧೮. ಹೀಗೆ ಬ್ರಹ್ಮನ ಮಾತನ್ನು ಕೇಳಿದ ಶಿವನು "ನಾನು ಸಾವು ಮುಪ್ಪುಗಳಿಂದ ಕೂಡಿದ ಪ್ರಜೆಗಳನ್ನು ಸೃಷ್ಟಿಸಲು ಇಷ್ಟಪಡ ವುದಿಲ್ಲ. ನಿನಗೆ ಮಂಗಳವಾಗಲಿ. ನೀನೇ ಅಂಥಾ ಪ್ರಜೆಗಳನ್ನು ಸೃಜಿಸು." ಎಂದು ತಿಳಿಸಿದನು. ಮತ್ತು ಶಿವನು ಈಗ ಸೃಷ್ಟರಾಗಿರುವ ಕುರೂಪಿ ಗಳೂ, ಕಪ್ಪಾದಕತ್ತುಳ್ಳವರೂ, ಆಗಿರುವ ಮತ್ತು ನನ್ನಿಂದಲೇ ಸೃಷ್ಟಿ ಸಲ್ಪಟ್ಟ, ಈ ಲಕ್ಷಮಕ್ಕಳು, ರುದ್ರರು, ಎಂಬ ಹೆಸರಿನಿಂದ ಮಹಾ ಬಲ ಶಾಲಿಗಳಾಗಿ, ಭೂಮಿ, ಆಕಾಶ, ದಿಕ್ಕುಗಳು, ಎಲ್ಲಾ ಕಡೆಯಲ್ಲೂ ಇರುವರು, ಎಂದು ಗೊತ್ತುಮಾಡಿದನು.

**ಶತರುದ್ರಾಃ ಸಮಾತ್ಮಾನೋ ಭವಿಷ್ಯಂತೀತಿ ಯಾಜ್ಞಿಕಾಃ ।**
**ಯಜ್ಞಭಾಜೋ ಭವಿಷ್ಯಂತಿ ಸರ್ವ ದೇವಗಣೈಃ ಸಹ ॥೩೧೯॥**
**ಮನ್ವಂತರೇಷು ಯೇ ದೇವಾ ಭವಿಷ್ಯಂತೀಹ ಭೇದತಃ ।**
**ಸಾರ್ಧಂ ತೈರಿಜ್ಯಮಾನಾ ಸ್ತೇ ಸ್ಥಾಸ್ಯಂತೀಹಾಯುಗಕ್ಷಯಾತ್ ॥**
**ಏವ ಮುಕ್ತ ಸ್ತದಾ ಬ್ರಹ್ಮಾ ಮಹಾದೇವೇನ ಧೀಮತಾ ।**
**ಪ್ರತ್ಯುವಾಚ ನಮಸ್ಕೃತ್ಯ ಹೃಷ್ಯಮಾಣಃ ಪ್ರಜಾಪತಿಃ ॥೩೨೧॥**
**ಏವಂ ಭವತು ಭದ್ರಂ ತೇ ಯಥಾ ತೇ ವ್ಯಾಹೃತಂ ವಿಭೋ ।**
**ಬ್ರಹ್ಮಣಾ ಸಮನುಜ್ಞಾತೇ ತಥಾ ಸರ್ವ ಮಭೂತ್ಕಿಲ ॥೩೨೨॥**
**ತತಃ ಪ್ರಭೃತಿ ದೇವೇಶೋ ನಚಾ ಸೂಯತ ವೈ ಪ್ರಜಾಃ ।**
**ಊರ್ಧ್ವರೇತಾಃ ಸ್ಥಿತಃ ಸ್ಥಾಣುರ್ಯಾವದಾ ಭೂತ ಸಂಪ್ಲವಂ॥೩೨೩**
**ಯಸ್ಮಾದುಕ್ತಂ ಸ್ಥಿತೋಽಸ್ಮೀತಿ ತಸ್ಮಾತ್ಸ್ಥಾಣು ರಿತಿ ಸ್ಮೃತಃ ।**
**ಏಷ ದೇವೋ ಮಹಾದೇವಃ ಪುರುಷೋಽರ್ಕಸಮದ್ಯುತಿಃ ॥೩೨೪॥**

---

೩೧೯-೩೨೨. ಇವರಲ್ಲಿ ನೂರು ರುದ್ರರು ನನಗೆ ಸಮರಾಗಿ ಯಜ್ಞಗಳಲ್ಲಿ ಅಧಿದೇವತೆಗಳಾಗುವರು. ಇತರ ದೇವತೆಗಳಂತೆ ಇವರೂ ಯಜ್ಞದಲ್ಲಿ ಆರಾಧನೆಗೆ ಪಾತ್ರರಾಗುವರು. ಬೇರೇ ಮನ್ವಂತರಗಳಲ್ಲಿ ಯಾವ ದೇವತೆಗಳಿದ್ದರೋ ಅವರೊಂದಿಗೆ ಇವರೂ ಯಜ್ಞದ ಹವಿಸ್ಸುದ್ರವ್ಯಗಳನ್ನು ಸ್ವೀಕರಿಸುತ್ತಾ ಯುಗ ಮುಗಿಯುವವರೆಗೂ ಇರುವರು. ಶಿವನು ಈ ರೀತಿಯಾಗಿ ಬ್ರಹ್ಮನಿಗೆ ತಿಳಿಸಲು, ಅವನನ್ನು ಬ್ರಹ್ಮನು ನಮಸ್ಕರಿಸಿ ಸಂತೋಷಗೊಂಡು, ಓ ಸ್ವಾಮಿಯೇ, ಹಾಗೆಯೇ ಆಗಲಿ, ಎಂದು ಹೇಳಿದನು. ಅನಂತರ ಬ್ರಹ್ಮನ ಆಜ್ಞೆಯ ಪ್ರಕಾರ ಇತರ ಸೃಷ್ಟಿಯಾಯಿತು.

೩೨೩-೩೨೪. ಅನಂತರ ಶಿವನು ಪ್ರಜೆಗಳನ್ನು ಸೃಷ್ಟಿಸಲೇ ಇಲ್ಲ. ಪ್ರಳಯ ಕಾಲದವರೆಗೂ ಬ್ರಹ್ಮಚಾರಿಯಾಗಿ ಸುಮ್ಮನಿದ್ದುದರಿಂದ ಅವನಿಗೆ "ಸ್ಥಾಣು" ಎಂದು ಹೆಸರು ಬಂದಿತು. "ನಾನು ಸುಮ್ಮನೇ ಇರುತ್ತೇನೆ." ಎಂದು ಶಿವನು ಹೇಳಿದ್ದರಿಂದಲೇ ಅವನಿಗೆ "ಸ್ಥಾಣು" ಎಂದು ಹೆಸರು ಬಂದಿತು. ಈ ಪರಶಿವನು ಸೂರ್ಯನಂತೆ ಮಹಾತೇಜ

**ಅರ್ಧನಾರೀ ನರವಪುಸ್ತೇಜಸಾ ಜ್ವಲನೋ ಪಮಃ ।**
**ಸ್ವೇಚ್ಛಯಾsಸೌ ದ್ವಿಧಾ ಭೂತಃ ಪೃಥಕ್ ಸ್ತ್ರೀ ಪುರುಷಃ ಪೃಥಕ್ ॥**
**ಸ ಏವೈಕಾದಶಾರ್ಧೇನ ಸ್ಥಿತೋsಸೌ ಪರಮೇಶ್ವರಃ ।**
**ತತ್ರ ಯಾ ಸಾ ಮಹಾಭಾಗಾ ಶಂಕರಸ್ಯಾರ್ಧಕಾಯಿನೀ ॥೧೨೬॥**

**ಪ್ರಾಗುಕ್ತಾ ತು ಮಹಾದೇವೀ ಸ್ತ್ರೀಸ್ವೈವೇಹ ಸತೀ ಹ್ಯಭೂತ್ ।**
**ಹಿತಾಯ ಜಗತಾಂ ದೇವೀ ದಕ್ಷೇಣಾರಾಧಿತಾ ಪುರಾ ॥೧೨೭॥**

**ಕಾರ್ಯಾರ್ಥಂ ದಕ್ಷಿಣಂ ತಸ್ಯಾಃ ಶುಕ್ಲಂ ವಾಮಂ ತಥಾಸಿತಂ ।**
**ಆತ್ಮಾನಂ ವಿಭಜಸ್ವೇತಿ ಪ್ರೋಕ್ತಾ ದೇವೇನ ಶಂಭುನಾ ॥೧೨೮॥**

**ಸಾ ತಥೋಕ್ತಾ ದ್ವಿಧಾಭೂತಾ ಶುಕ್ಲಾ ಕೃಷ್ಣಾಚ ವೈ ದ್ವಿಜಾಃ ।**
**ತಸ್ಯಾ ನಾಮಾನಿ ವಕ್ಷ್ಯಾಮಿ ಶೃಣ್ವಂತು ಚ ಸಮಾಹಿತಾಃ ॥೧೨೯॥**

---

ಸ್ತ್ರೀಯೂ, ಮಹಾದೇವನೂ, ಅರ್ಧಗಂಡಸು ಮತ್ತು ಅರ್ಧಹೆಂಗಸು ಆಗಿ, ಅಗ್ನಿಯಂತೆ ಪ್ರಕಾಶಮಾನನೂ ಆಗಿದ್ದನು. ಅನಂತರದಲ್ಲಿ ತನ್ನ ಇಚ್ಛೆಯಂತೆಯೇ ಸ್ತ್ರೀಸ್ವರೂಪದ ಆಕಾರ ಬೇರೆ, ಪುರುಷಸ್ವರೂಪದ ಆಕಾರ ಬೇರೆಯಾಗಿರುವಂತೆ ಮಾಡಿದನು.

೧೨೬. ಆದರೆ ಪರಮೇಶ್ವರನು ತನ್ನ ಹನ್ನೊಂದನೇ ಒಂದು ಭಾಗದ ಅರ್ಧದ ಸ್ವರೂಪದಲ್ಲಿ ಶಂಕರನ ಅರ್ಧಾಂಗಿಯಾದ, ಮಹಾಪುಣ್ಯಶಾಲಿನಿಯಾದ ಪಾರ್ವತಿಯು ನೆಲಸಿದ್ದಳು.

೧೨೭–೧೨೯. ಹಿಂದೆ ಹೇಳಲ್ಪಟ್ಟ ಮಹಾದೇವಿಯೇ ಈಶ್ವರ ಪತ್ನಿಯಾದ ಪಾರ್ವತಿಯು. ಇವಳು ದಕ್ಷಬ್ರಹ್ಮನಿಂದ ಲೋಕಕ್ಷೇಮಕ್ಕಾಗಿ ಪೂಜಿಸಲ್ಪಟ್ಟಳು. ಈಶ್ವರನಿಂದ ಯಾವುದೋ ಒಂದು ಮಹತ್ಕಾರ್ಯಕ್ಕಾಗಿ ನೀನು ನಿನ್ನ ಬಲಭಾಗದ ದೇವಿಯನ್ನು ಬೆಳ್ಳಗೂ, ಎಡಭಾಗದ ದೇವಿಯನ್ನು ಕಪ್ಪಗೂ, ಎರಡು ವಿಧವಾಗಿ ವಿಭಾಗಮಾಡಿಕೋ, ಎಂದು ಇವಳು ಅಪ್ಪಣೆ ಮಾಡಲ್ಪಟ್ಟಳು. ಹೀಗೆ ಹೇಳಲ್ಪಟ್ಟ ಪಾರ್ವತಿಯು ಬೆಳ್ಳಗೂ, ಕಪ್ಪಗೂ, ತನ್ನ ಶರೀರವನ್ನು ವಿಭಾಗಮಾಡಿಕೊಂಡಳೆಂದು ಅರಿಯಿರಿ. ಇನ್ನು ಮುಂದೆ ಇವಳ ಹೆಸರುಗಳನ್ನು ಹೇಳುವೆನು ಕೇಳಿರಿ.

ಸ್ವಾಹಾ ಸ್ವಧಾ ಮಹಾವಿದ್ಯಾ ಮೇಧಾ ಲಕ್ಷ್ಮೀಃ ಸರಸ್ವತೀ ।
ಸತೀ ದಾಕ್ಷಾಯಣೀ ವಿದ್ಯಾ ಇಚ್ಛಾಶಕ್ತಿಃ ಕ್ರಿಯಾತ್ಮಿಕಾ ॥೩೩೦॥
ಅಪರ್ಣಾ ಚೈಕಪರ್ಣಾ ಚ ತಥಾ ಚೈ ವೈಕ ಪಾಟಲಾ ।
ಉಮಾ ಹೈಮವತೀ ಚೈವ ಕಲ್ಯಾಣೀ ಚೈಕ ಮಾತೃಕಾ ॥೩೩೧॥
ಖ್ಯಾತಿಃ ಪ್ರಜ್ಞಾ ಮಹಾಭಾಗಾ ಲೋಕೇ ಗೌರೀತಿ ವಿಶ್ರುತಾ ।
ಗಣಾಂಬಿಕಾ ಮಹಾದೇವೀ ನಂದಿನೀ ಜಾತವೇದಸೀ ॥೩೩೨॥
ಏಕರೂಪ ಮಥೈ ತಸ್ಯಾಃ ಪೃಥಗ್ದೇಹ ವಿಭಾವನಾತ್ ।
ಸಾವಿತ್ರೀ ವರದಾ ಪುಣ್ಯಾ ಪಾವನೀ ಲೋಕ ವಿಶ್ರುತಾ ॥೩೩೩॥
ಆಜ್ಞಾ ಆವೇಶಿನೀ ಕೃಷ್ಣಾ ತಾಮಸೀ ಸಾತ್ವಿಕೀ ಶಿವಾ ।
ಪ್ರಕೃತಿ ರ್ವಿಕೃತಾ ರೌದ್ರೀ ದುರ್ಗಾ ಭದ್ರಾ ಪ್ರಮಾಥಿನೀ ॥೩೩೪॥

---

೩೩೦–೩೩೩. ಪಾರ್ವತಿಗೆ ಸ್ವಾಹೇ, ಸ್ವಧೇ, ಮಹಾವಿದ್ಯೇ, ಮೇಧಾ, ಲಕ್ಷ್ಮೀ, ಸರಸ್ವತೀ, ಸತೀ, ದಾಕ್ಷಾಯಣೀ, ವಿದ್ಯಾ, ಇಚ್ಛಾ, ಶಕ್ತಿ, ಕ್ರಿಯಾ, ಅಪರ್ಣಾ, ಏಕಪರ್ಣಾ, ಏಕಪಾಟಲಾ, ಉಮಾ, ಹೈಮವತೀ, ಕಲ್ಯಾಣೀ, ಏಕಮಾತೃಕಾ, ಖ್ಯಾತಿ, ಪ್ರಜ್ಞಾ, ಮಹಾಭಾಗಾ, ಗೌರೀ, ಗಣಾಂಬಿಕಾ, ಮಹಾದೇವೀ, ನಂದಿನೀ, ಜಾತವೇದಸೀ ಎಂದು ಅನೇಕ ಹೆಸರುಗಳಿವೆ. ಇವಳ ದೇಹವು ಒಂದೇ ಆದರೂ, ಅನೇಕರೂಪಗಳಾಗಿ ಭಾವಿಸಸಲ್ಪಟ್ಟಿರುವುದರಿಂದ ಅನೇಕ ಹೆಸರುಗಳುಂಟಾಗಿವೆ. ಆದ್ದರಿಂದ ಇವಳು ಸಾವಿತ್ರೀ, ವರದಾ, ಪುಣ್ಯಾ, ಪಾವನೀ, ಲೋಕವಿಶ್ರುತಾ, ಎಂಬುದಾಗಿಯೂ, ಕರೆಯಲ್ಪಡುವಳು.

೩೩೪–೩೩೬. ಪಾರ್ವತಿಗೆ ಆಜ್ಞೆ, ಆವೇಶಿನೀ, ಕೃಷ್ಣಾ, ತಾಮಸೀ ಸಾತ್ವಿಕೀ, ಶಿವಾ, ಪ್ರಕೃತಿ, ವಿಕೃತಾ, ರೌದ್ರೀ, ದುರ್ಗಾ, ಭದ್ರಾ, ಪ್ರಮಾಥಿನೀ, ಕಾಲರಾತ್ರೀ, ಮಹಾಮಾಯಾ, ರೇವತೀ, ಭೂತ

ಕಾಲರಾತ್ರಿ ರ್ಮಹಾಮಾಯಾ ರೇವತೀ ಭೂತನಾಯಿಕಾ ।
ದ್ವಾಪರಾಂತ ವಿಭಾಗೇ ಚ ನಾಮಾನೀಮಾನಿ ಸುವ್ರತಾಃ ॥೩೩೫॥

ಗೌತಮೀ ಕೌಶಿಕೀ ಚಾರ್ಯಾ ಚಂಡೀ ಕಾತ್ಯಾಯನೀ ಸತೀ ।
ಕುಮಾರೀ ಯಾದವೀ ದೇವೀ ವರದಾ ಕೃಷ್ಣಪಿಂಗಳಾ ॥೩೩೬॥

ಬರ್ಹಿರ್ಧ್ವಜಾ ಶೂಲಧರಾ ಪರಮಾ ಬ್ರಹ್ಮಚಾರಿಣೀ ।
ಮಹೇಂದ್ರೋಪೇಂದ್ರ ಭಗಿನೀ ದೃಷದ್ವತ್ಯೇಕ ಶೂಲಧೃಕ್ ॥೩೩೭॥

ಅಪರಾಜಿತಾ ಬಹುಭುಜಾ ಪ್ರಗಲ್ಭಾ ಸಿಂಹ ವಾಹಿನೀ ।
ಶುಂಭಾದಿದೈತ್ಯಹಂತ್ರೀ ಚ ಮಹಾಮಹಿಷ ಮರ್ದಿನೀ ॥೩೩೮॥

ಅಮೋಘಾ ವಿಂಧ್ಯನಿಲಯಾ ವಿಕ್ರಾಂತಾ ಗಣನಾಯಿಕಾ ।
ದೇವ್ಯಾನಾಮ ವಿಕಾರಾಣಿ ಇತ್ಯೇತಾನಿ ಯಥಾಕ್ರಮಂ ॥೩೩೯॥

ಭದ್ರಕಾಲ್ಯಾ ಮಯೋಕ್ತಾನಿ ಸಮ್ಯಕ್ಫಲ ಪ್ರದಾನಿ ಚ ।
ಯೇ ಪಠಂತಿ ನರಾ ಸ್ತೇಷಾಂ ವಿದ್ಯತೇ ನ ಚ ಪಾತಕಂ ॥೩೪೦॥

---

ನಾಯಿಕಾ, ಎಂಬುದಾಗಿ ಹೆಸರುಗಳು ದ್ವಾಪರಯುಗದ ಕೊನೆಯ ಭಾಗದ ಕಾಲದಲ್ಲಿ ಬಂದಿದ್ದವು. ಅಲ್ಲದೇ ಇವಳಿಗೆ ಗೌತಮೀ, ಕೌಶಿಕೀ, ಚಂಡೀ, ಕಾತ್ಯಾಯನೀ, ಸತೀ, ಕುಮಾರೀ, ಯಾದವೀ, ದೇವೀ, ವರದಾ, ಕೃಷ್ಣ ಪಿಂಗಳಾ, ಎಂಬುದಾಗಿಯೂ, ಹೆಸರುಗಳು ಉಂಟು.

೩೩೭–೩೩೯. ಪಾರ್ವತಿಯು ಬರ್ಹಿರ್ಧ್ವಜಳೆಂದೂ, ಶೂಲಧರಾ, ಪರಮಾ, ಬ್ರಹ್ಮಚಾರಿಣೀ, ಮಹೇಂದ್ರೋಪೇಂದ್ರಭಗಿನೀ, ದೃಷದ್ವತೀ ಏಕಶೂಲಧಾರಿಣೀ, ಅಪರಾಜಿತಾ, ಬಹುಭುಜಾ, ಪ್ರಗಲ್ಭಾ, ಸಿಂಹವಾಹಿನೀ ಶುಂಭಾದಿ ದೈತ್ಯಹಂತ್ರೀ, ಮಹಾಮಹಿಷಮರ್ದಿನೀ, ಅಮೋಘಾ, ವಿಂಧ್ಯನಿಲಯಾ, ವಿಕ್ರಾಂತಾ, ಗಣನಾಯಿಕಾ, ಹೀಗೆ ಅನೇಕ ನಾಮ ಗಳನ್ನು ಕ್ರಮವಾಗಿ ಪಡೆದಿದ್ದಾಳೆ.

೩೪೦–೩೪೧. ಹೀಗೆ ಮಂಗಳಕರಳಾದ ಕಾಳೀಸ್ವರೂಪಳಾದ ಪಾರ್ವ ತಿಯ ಈ ಶುಭನಾಮಗಳು ಉತ್ತಮ ಫಲಗಳನ್ನು ಕೊಡತಕ್ಕವುಗಳಾಗಿವೆ.

**ಅರಣ್ಯೇ ಪರ್ವತೇ ವಾಽಪಿ ಪುರೇ ವಾಽಪ್ಯಥವಾ ಗೃಹೇ ।**
**ರಕ್ಷಾ ಮೇತಾಂ ಪ್ರಯುಂಜೀತ ಜಲೇ ವಾಽಥ ಸ್ಥಲೇಽಪಿವಾ॥೩೪೧॥**
**ವ್ಯಾಘ್ರ ಕುಂಭೀ ನ ಚೋರೇಭ್ಯೋ ಭಯಸ್ಥಾನೇ ವಿಶೇಷತಃ ।**
**ಆಪತ್ಸ್ವಪಿ ಚ ಸರ್ವಾಸು ದೇವ್ಯಾ ನಾಮಾನಿ ಕೀರ್ತಯೇತ್ ॥೩೪೨॥**
**ಆರ್ಯಕಗ್ರಹ ಭೂತೈಶ್ಚ ಪೂತನಾ ಮಾತೃಭಿಸ್ತಥಾ ।**
**ಅಭ್ಯರ್ಥಿತಾನಾಂ ಬಾಲಾನಾಂ ರಕ್ಷಾಮೇತಾಂ ಪ್ರಯೋಜಯೇತ್ ॥**
**ಮಹಾದೇವೀ ಕಲೇ ದ್ವೇ ತು ಪ್ರಜ್ಞಾಶ್ರೀಶ್ಚ ಪ್ರಕೀರ್ತಿತೇ ।**
**ಆಭ್ಯಾಂ ದೇವೀಸಹಸ್ರಾಣಿಯೈರ್ವ್ಯಾಪ್ತ ಮಖಿಲಂ ಜಗತ್ ॥೩೪೪॥**
**ಅನಯಾ ದೇವದೇವೋಽಸೌ ಸತ್ಯಾ ರುದ್ರೋ ಮಹೇಶ್ವರಃ ।**
**ಆತಿಷ್ಠತ್ ಸರ್ವಲೋಕಾನಾಂ ಹಿತಾಯ ಪರಮೇಶ್ವರಃ ॥೩೪೫॥**

---

ಈ ನಾಮಗಳನ್ನು ಪಠಿಸುವ ಮನುಷ್ಯರಿಗೆ ಪಾಪ ವಿಮೋಚನೆಯಾಗುತ್ತದೆ. ಈ ಮಂಗಳನಾಮ ರೂಪವಾದ ರಕ್ಷಣೆಯಿಂದ ಕಾಡಿನಲ್ಲಾಗಲೀ, ಪರ್ವತದಲ್ಲಾಗಲೀ ಪಟ್ಟಣದಲ್ಲಾಗಲಿ, ಮನೆಯಲ್ಲಾಗಲಿ, ನೀರಿನಲ್ಲಾಗಲಿ, ಭೂಮಿಯಲ್ಲಾಗಲೀ ಮನುಷ್ಯನಿಗೆ ಭಯವಿರಲಾರದು. ಹುಲಿಗಳೂ, ಕಳ್ಳರೂ, ಸಲಗ, ಮುಂತಾದವರಿಂದ ಭಯಪ್ರಾಪ್ತವಾದಾಗಲೂ, ಅಥವಾ ಇನ್ನೆಂಥಾ ವಿಪತ್ತು ಬಂದಾಗಲೂ, ಮನುಷ್ಯನು ಈ ದೇವಿಯ ನಾಮಗಳನ್ನು ಪಠಿಸಬೇಕು.

೩೪೩–೩೪೫. ಆರ್ಯಕಗ್ರಹ, ಭೂತಗಳು, ಪೂತಣಿಯಂತಹ ತಾಯಿಯರು ಇವರಿಂದ ಪೀಡಿಸಲ್ಪಟ್ಟ ಎಳೆಯ ಶಿಶುಗಳಿಗೂ, ಕಷ್ಟನಿವಾರಣೆಗಾಗಿ, ಈ ದೇವೀನಾಮರೂಪವಾದ "ರಕ್ಷಣೆಯನ್ನು" ಉಪಯೋಗಿಸಬೇಕು. ಮಹಾದೇವಿಯು ಎರಡು ವಿಧವಾದ ಕಲಾಸ್ವರೂಪಳಾಗಿ ಪ್ರಜ್ಞೇ, ಲಕ್ಷ್ಮೀ, ಎಂಬುದಾಗಿ ಎರಡು ವಿಧವಾಗಿ ಕರೆಯಲ್ಪಡುತ್ತಾಳೆ. ಈ ಎರಡು ವಿಧವಾದ ದೇವೀ ಸ್ವರೂಪದಿಂದ ಸಾವಿರಾರು ದೇವಿಯರು ಹುಟ್ಟಿದರು. ಇವರಿಂದ ಈ ಪ್ರಪಂಚವೆಲ್ಲವೂ ವ್ಯಾಪಿಸಲ್ಪಟ್ಟಿದೆ. ಪರಮೇಶ್ವರನಾದ ರುದ್ರನು ದೇವಿಯರಿಗೆಲ್ಲರಿಗೂ ದೇವರಾಗಿ ಪಾರ್ವತೀದೇವಿಯೊಂದಿಗೆ ಸಕಲ ಲೋಕದ ಕ್ಷೇಮಕ್ಕಾಗಿ ಇದ್ದನು.

**ರುದ್ರಃ ಪಶುಪತಿಶ್ಚಾಸೀ ತ್ಪುರಾ ದಗ್ಧಂ ಪುರತ್ರಯಂ ।**
**ದೇವಾಶ್ಚ ಪಶವಃ ಸರ್ವೇ ಬಭೂವು ಸ್ತಸ್ಯ ತೇಜಸಾ ॥೩೪೬॥**
**ಯಃ ಪಠೇಚ್ಛೃಣುಯಾದ್ವಾಽಪಿ ಆದಿಸರ್ಗ ಕ್ರಮಂ ಶುಭಂ ।**
**ಸ ಯಾತಿ ಬ್ರಹ್ಮಣೋ ಲೋಕಂ ಶ್ರಾವಯೇದ್ವಾ ದ್ವಿಜೋತ್ತಮಾನ್॥**

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸೃಷ್ಟಿವಿಸ್ತಾರ ವರ್ಣನಂ
ನಾಮ ಸಪ್ತತಿತಮೋಽಧ್ಯಾಯಃ

---

೩೪೬–೩೪೭. ಹೀಗೆ ರುದ್ರನು ಪಶು (ಜೀವ) ಗಳಿಗೆ ಪತಿಯಾಗಿಯೂ, ಇದ್ದನು. ಇವನಿಂದ ಮೂರು ರಾಕ್ಷಸರ ಪಟ್ಟಣಗಳು ಸುಡಲ್ಪಟ್ಟವು. ಇವನ ತೇಜಸ್ಸಿನಿಂದ ದೇವತೆಗಳೆಲ್ಲರೂ ಪಶುಗಳಾದರು. ಹೀಗೆ ಪ್ರಪಂಚ ಮೊದಲು ಸೃಷ್ಟಿಯಾದ ಕ್ರಮವನ್ನು ಬಹಳ ಮಂಗಳಕರವೆಂದು ತಿಳಿದು, ಯಾವನು ಈ ಭಾಗವನ್ನು ಓದುವನೋ, ಅಥವಾ ಬ್ರಾಹ್ಮಣ ಶ್ರೇಷ್ಠರಿಗೆ ಹೇಳುವನೋ, ಅವನು ಬ್ರಹ್ಮಲೋಕವನ್ನು ಹೊಂದುವನೆಂದು ತಿಳಿಯಬೇಕು.

ಇಲ್ಲಿಗೆ ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸೃಷ್ಟಿಯ ವಿಸ್ತಾರವನ್ನು
ವರ್ಣಿಸಿರುವ ಎಪ್ಪತ್ತನೆಯ ಅಧ್ಯಾಯವು ಮುಗಿಯಿತು.



अथ श्री लिंगमहापुराणे पूर्वभागे
एकसप्ततितमोऽध्यायः

॥ ऋषय ऊचुः ॥

सामासा द्विस्तराच्चैव सर्गः प्रोक्त स्त्वया शुभः ।
कथं पशुपति श्चासी त्पुरं दग्धुं महेश्वरः ॥ ೧ ॥

कथं च पशव श्चास न्देवाः स ब्रह्मकाः प्रभो ।
मयस्य तपसा पूर्वं सुदुर्गं निर्मितं पुरम् ॥ ೨ ॥

हैमं च राजतं दिव्य मयस्मय मनुत्तमम् ।
सुदुर्गं देवदेवेन दग्ध मित्येव नः श्रुतम् ॥ ೩ ॥

कथं ददाह भगवान् भग नेत्र निपातनः ।
एके नेषु निपातेन दिव्येनापि तथा कथम् ॥ ೪ ॥

---

ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತೊಂದನೆಯ ಅಧ್ಯಾಯವು.

೧-೪. ಋಷಿಗಳು ಹೇಳಿದರು:—ಓ ಸೂತಮಹರ್ಷಿಗಳೇ, ತಾವು ಸಂಕ್ಷೇಪವಾಗಿಯೂ, ಮತ್ತು ವಿಸ್ತಾರವಾಗಿಯೂ, ಮಂಗಳಕರವಾದ ಆದಿ ಸೃಷ್ಟಿಯ ಕ್ರಮವನ್ನು ತಿಳಿಸಿದಿರಿ. ಆದರೆ ಮಹೇಶ್ವರನು ತ್ರಿಪುರಗಳದಹನವನ್ನು ಹೇಗೆಮಾಡಿದನು? ಸ್ವಾಮಿಯಾದ ಈಶ್ವರನಿಗೆ ಬ್ರಹ್ಮನೇ ಮೊದಲಾದ ದೇವತೆಗಳು ಪಶುಗಳಾದ ಬಗೆ ಹೇಗೆ? ಮಯನಿಂದ ತಪಸ್ಸುಮಾಡಿ, ಅನಂತರ ಒಳ್ಳೆಯ ಕೋಟೆ ಕೊತ್ತಲುಗಳಿರುವ ಮತ್ತು ಚಿನ್ನದಿಂದ ಮಾಡಿರುವ ಮತ್ತು ಬೆಳ್ಳಿಯಿಂದಲೂ ನಿರ್ಮಿಸಿರುವ, ದೇವಲೋಕದವರೆಗೂ ಹಬ್ಬಿ ಆಶ್ಚರ್ಯವನ್ನುಂಟುಮಾಡುವ, ತ್ರಿಪುರವು ಕಟ್ಟಲ್ಪಟ್ಟಿತ್ತು. ಅದು ಈಶ್ವರನಿಂದ ಸುಡಲ್ಪಟ್ಟಿತೆಂದು ಕೇಳಿದ್ದೇವೆ. ಈಶ್ವರನು ತನ್ನ ಒಂದೇ ದಿವ್ಯವಾದ ಬಾಣದಿಂದ ಈ ಪಟ್ಟಣಗಳನ್ನು ಸುಟ್ಟ ಬಗೆ ಹೇಗೆ?

ವಿಷ್ಣೋನೋ ತ್ಪಾದಿತ್ಯೈರ್ಭೂತೈ ರ್ನ ದಗ್ಧಂ ತತ್ಪುರ ತ್ರಯಂ।
ಪುರಸ್ಯ ಸಂಭವಃ ಸರ್ವೋ ವರಲಾಭಃ ಪುರಾ ಶ್ರುತಃ ॥೫॥
ಇದಾನೀಂ ದಹನಂ ಸರ್ವಂ ವಕ್ತುಮರ್ಹಸಿ ಸುವ್ರತ।
ತೇಷಾಂ ತದ್ವಚನಂ ಶ್ರುತ್ವಾ ಸೂತಃ ಪೌರಾಣಿಕೋತ್ತಮಃ ॥೬॥
ಯಥಾ ಶ್ರುತಂ ತಥಾ ಪ್ರಾಹ ವ್ಯಾಸಾದ್ವಿ ಶ್ವಾರ್ಥಸೂಚಕಾತ್।

॥ ಸೂತ ಉವಾಚ ॥

ತ್ರೈಲೋಕ್ಯಸ್ಯಾಸ್ಯ ಶಾಪಾದ್ಧಿ ಮನೋವಾಕ್ಕಾಯ ಸಂಭವಾತ್॥೭॥
ನಿಹತೇ ತಾರಕೇ ದೈತ್ಯೇ ತಾರಪುತ್ರೇ ಸ ಬಾಂಧವೇ।
ಸ್ಕಂದೇನ ವಾ ಪ್ರಯುತ್ನೇನ ತಸ್ಯ ಪುತ್ರಾ ಮಹಾಬಲಾಃ ॥೮॥
ವಿದ್ಯುನ್ಮಾಲೀ ತಾರಕಾಕ್ಷಃ ಕಮಲಾಕ್ಷಶ್ಚ ವೀರ್ಯವಾನ್।
ತಪಸ್ತೇಪು ರ್ಮಹಾತ್ಮಾನೋ ಮಹಾಬಲ ಪರಾಕ್ರಮಾಃ ॥೯॥

---

೫—೮. ವಿಷ್ಣುವು ಸೃಷ್ಟಿಮಾಡಿದ ಭೂತಗಳಿಂದಲೂ, ತ್ರಿಪುರ ದಹನವನ್ನು ಮಾಡಲು ಸಾಧ್ಯವಾಗಲಿಲ್ಲ. ಅದೂ ಅಲ್ಲದೇ ತ್ರಿಪುರವು ದೇವರ ವರದಿಂದ ಸೃಷ್ಟಿಸಲ್ಪಟ್ಟಿತು. ಎಂದು ಕೇಳಿದ್ದೇವೆ. ಈಗ ತ್ರಿಪುರದಹನವಾದ ಬಗೆಯನ್ನು ದಯವಿಟ್ಟು ಹೇಳಿ. ಅವರ ಮಾತನ್ನು ಪೌರಾಣಿಕರಲ್ಲಿ ಶ್ರೇಷ್ಠನಾದ ಸೂತಮಹರ್ಷಿಯು ಕೇಳಿ. ಪ್ರಪಂಚದ ವಿಷಯಗಳನ್ನೆಲ್ಲವನ್ನೂ ಚೆನ್ನಾಗಿ ಅರಿತಿದ್ದ ವ್ಯಾಸಮಹರ್ಷಿಗಳಿಂದ ಸೂತನು ಕೇಳಿದ್ದಂತೆಯೇ ಎಲ್ಲವನ್ನೂ ಹೇಳಲು ಪ್ರಾರಂಭಿಸಿದನು. ಸೂತನು ಹೇಳಿದನು :—ತ್ರಿಪುರ ದಹನವಾಗಲು, ಕಾಯಿಕ, ಮಾನಸಿಕ, ವಾಚಿಕವಾದ, ಮಹಾದೋಷಗಳಿಂದ ಪ್ರಾಪ್ತವಾದ ದೇವಶಾಪವೇ ಕಾರಣವು. ಷಣ್ಮುಖನು ಬಂಧುಗಳಿಂದೊಡಗೂಡಿದ ತಾರಕಾಸುರನನ್ನು ಸಂಹಾರ ಮಾಡಿದನು. ಆದರೂ ಇವನ ಮಕ್ಕಳು ಬಹಳ ಬಲಿಷ್ಠರಾಗಿದ್ದರು.

೯—೧೨. ಇವನಿಗೆ ವಿದ್ಯುನ್ಮಾಲೀ 'ತಾರಕಾಕ್ಷ' ಕಮಲಾಕ್ಷ, ಎಂಬ ಮೂವರು ಮಕ್ಕಳಾಗಿದ್ದರು. ಈ ಮಹಾತ್ಮರಾದ ರಾಕ್ಷಸರು, ಬಹಳ ಬಲಿಷ್ಠ

ತಪ ಉಗ್ರಂ ಸಮಾಸ್ಥಾಯ ನಿಯಮೇ ಪರಮೇ ಸ್ಥಿತಾಃ ।
ತಪಸಾ ಕರ್ಶಯಾ ಮಾಸು ರ್ದೇಹಾನ್ ಸ್ವಾನ್ದಾನ ವೋತ್ತಮಾಃ
ತೇಷಾಂ ಪಿತಾಮಹಃ ಪ್ರೀತೋ ವರದಃ ಪ್ರದದೌ ವರಂ ।

॥ ದೈತ್ಯಾ ಊಚುಃ ॥

ಅವಧ್ಯತ್ವಂಚ ಸರ್ವೇಷಾಂ ಸರ್ವಭೂತೇಷು ಸರ್ವದಾ ॥೧೧॥
ಸಹಿತಾ ವರಯಾ ಮಾಸುಃ ಸರ್ವಲೋಕ ಪಿತಾಮಹಂ ।
ತಾನಬ್ರವೀತ್ತದಾ ದೇವೋ ಲೋಕಾನಾಂ ಪ್ರಭುರವ್ಯಯಃ ॥೧೨॥
ನಾಸ್ತಿ ಸರ್ವಾಮರತ್ವಂ ವೈ ನಿವರ್ತಧ್ವಮತೋಽಸುರಾಃ ।
ಅನ್ಯಂ ವರಂ ವೃಣೀಧ್ವಂ ವೈ ಯಾದೃಶಂ ಸಂಪ್ರರೋಚತೇ ॥೧೩॥
ತತಸ್ತೇ ಸಹಿತಾ ದೈತ್ಯಾಃ ಸಂಪ್ರಧಾರ್ಯ ಪರಸ್ಪರಂ ।
ಬ್ರಹ್ಮಾಣ ಮಬ್ರುವ ನ್ದೈತ್ಯಾಃ ಪ್ರಣಿಪತ್ಯ ಜಗದ್ಗುರುಂ ॥೧೪॥

---

ರಾಗಿದ್ದು ತಪಸ್ಸನ್ನುಮಾಡಲು ಪ್ರಾರಂಭಿಸಿದರು. ಅವರು ಬಹಳ ನಿಯಮದಿಂದ ಉಗ್ರ ತಪಸ್ಸನ್ನು ಮಾಡಿ ತಮ್ಮ ದೇಹವೆಲ್ಲವನ್ನೂ ಕೃಶವಾಗುವಂತೆ ಮಾಡಿದಿರು. ಬ್ರಹ್ಮನು ಇವರ ತಪಸ್ಸಿನಿಂದ ಪ್ರೀತನಾಗಿ ವರವನ್ನು ಕೊಡಲು ಸಿದ್ಧನಾದನು. ರಾಕ್ಷಸರು ಹೇಳಿದರು:—ನಮಗೆಲ್ಲರಿಗೂ ಯಾರಿಂದಲೂ ಸಾವು ಸಂಭವಿಸದಿರುವ ಹಾಗೆ ತಾವು ದಯವಿಟ್ಟು ವರವನ್ನು ನೀಡಬೇಕು. ಹೀಗೇ ಒಟ್ಟಿಗೆ ಪ್ರಾರ್ಥಿಸಿದ ರಾಕ್ಷಸರಿಗೆ ಬ್ರಹ್ಮನು ಮುಂದೆ ಹೇಳುವ ರೀತಿಯಲ್ಲಿ ತಿಳಿಸಿದನು.

೧೩. ಎಲೈ ರಾಕ್ಷಸರೇ, ಯಾರಿಂದಲೂ ಸಾವಿಲ್ಲದಿರುವಿಕೆಯನ್ನು ಕೊಡಲು ಅಸಾಧ್ಯ. ಆದ್ದರಿಂದ ಈ ಅಭಿಲಾಷೆಯನ್ನು ಬಿಟ್ಟು ನಿಮಗೆ ಇಷ್ಟ ಬಂದ ಬೇರೇ ಯಾವ ವರವನ್ನು ಬೇಕಾದರೂ ಕೇಳಿ. ನೀಡುವೆನು.

೧೪-೧೮. ಅನಂತರದಲ್ಲಿ ಆ ರಾಕ್ಷಸರೆಲ್ಲರೂ ಒಟ್ಟುಗೂಡಿ, ಪರಸ್ಪರ ಯೋಚನೆ ಮಾಡಿಕೊಂಡು ಲೋಕಕ್ಕೆ ತಂದೆಯಾದ ಬ್ರಹ್ಮನನ್ನು ನಮಸ್ಕರಿಸಿ ಹೀಗೆಂದರು.—ಓ ಲೋಕಾಧಿಪತಿಯೂ, ಜಗದ್ಗುರುವೂ ಆದ

ವಯಂ ಪುರಾಣಿ ತ್ರೀಣ್ಯೇವ ಸಮಾಸ್ಥಾಯ ಮಹೀಮಿಮಾಂ ।
ವಿಚರಿಷ್ಯಾಮ ಲೋಕೇಶ ತ್ವತ್ಪ್ರಸಾದಾತ್ ಜಗದ್ಗುರೋ ॥೧೫॥
ತಥಾ ವರ್ಷ ಸಹಸ್ರೇಷು ಸಮೇಷ್ಯಾಮಃ ಪರಸ್ಪರಂ ।
ಏಕೀಭಾವಂ ಗಮಿಷ್ಯಂತಿ ಪುರಾಣ್ಯೇತಾನಿ ಚಾನಘ ॥೧೬॥
ಸಮಾಗತಾನಿ ಚೈತಾನಿ ಯೋಹನ್ಯಾ ದ್ಭಗವಂ ಸ್ತದಾ ।
ಏಕೇನೈವೇಷುಣಾ ದೇವಃ ಸ ನೋ ಮೃತ್ಯುರ್ಭವಿಷ್ಯತಿ ॥೧೭॥
ಏವಮುಸ್ತ್ವಿತಿ ತಾನ್ದೇವಃ ಪ್ರತ್ಯುಕ್ತ್ವಾ ಪ್ರಾವಿಶದ್ದಿವಂ ।
ತತೋ ಮಯಃ ಸ್ವತಪಸಾ ಚಕ್ರೇ ವೀರಃ ಪುರಾಣ್ಯಥ ॥೧೮॥
ಕಾಂಚನಂ ದಿವಿ ತತ್ರಾಸೀ ದಂತರಿಕ್ಷೇ ಚ ರಾಜತಂ ।
ಆಯಸಂ ಚಾ ಭವದ್ಭೂಮೌ ಪುರಂ ತೇಷಾಂ ಮಹಾತ್ಮನಾಂ ॥೧೯॥

---

ಸ್ವಾಮಿಯೇ, ನಿಮ್ಮ ಅನುಗ್ರಹದಿಂದ ನಾವು ಮೂರೇ ಮೂರು ಪಟ್ಟಣಗಳಲ್ಲಿ ವಾಸಮಾಡುತ್ತಾ ಈ ಭೂ ಲೋಕದಲ್ಲಿ ಸ್ವೇಚ್ಛೆಯಾಗಿ ಸಂಚರಿಸೋಣ ಮತ್ತು ನಾವೆಲ್ಲರೂ ಒಟ್ಟಿಗೆ ಸಾವಿರಾರು ವರ್ಷಗಳು ಬಾಳೋಣ, ಈ ಮೂರು ಪಟ್ಟಣಗಳೂ, ಯಾವಾಗಲೂ ಒಟ್ಟಾಗಿರೋಣ, ಹೀಗೆ ಒಟ್ಟಿಗಿರುವ ಪಟ್ಟಣಗಳನ್ನು ಯಾವ ಭಗವಂತನು ಒಂದೇ ಬಾಣದಿಂದ ನಾಶ ಮಾಡಬಲ್ಲನೋ ಅವನೇ ನಮಗೆ ಮೃತ್ಯುವಾಗಲಿ, ಎಂದು ಬೇಡಿದರು. ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ಸ್ವರ್ಗವನ್ನು ಸೇರಿದನು. ಅನಂತರದಲ್ಲಿ ವೀರನಾದ ಮಯನು ತನ್ನ ತಪಸ್ಸಿನಿಂದ ಮೂರು ಪಟ್ಟಣಗಳನ್ನು ನಿರ್ಮಿಸಿದನು.

೧೯–೨೧. ಆಗ ಸ್ವರ್ಗದ ಸಮೀಪದಲ್ಲಿ ಚಿನ್ನದಿಂದ ಮಾಡಿದ ಪಟ್ಟಣವೂ, ಅಂತರಿಕ್ಷದಲ್ಲಿ ಬೆಳ್ಳಿಯಿಂದ ಮಾಡಿದ ಪಟ್ಟಣವೂ, ಭೂಮಿಯಲ್ಲಿ ಕಬ್ಬಿಣದಿಂದ ಮಾಡಿದ ಪಟ್ಟಣವೂ, ಈ ರಾಕ್ಷಸರಿಂದ ನಿರ್ಮಿಸ

ಏಕೈಕಂ ಯೋಜನ ಶತಂ ವಿಸ್ತಾರಾಯಾ ಮತಃ ಸಮಂ ।
ಕಾಂಚನಂ ತಾರಕಾಕ್ಷಸ್ಯ ಕಮಲಾಕ್ಷಸ್ಯ ರಾಜತಂ ॥೨೦॥

ವಿದ್ಯುನ್ಮಾಲೇಃ ಶ್ಚಾಯಸಂ ವೈ ತ್ರಿವಿಧಂ ದುರ್ಗಮುತ್ತಮಂ ।
ಮಯಶ್ಚ ಬಲವಾಂಸ್ತತ್ರ ದೈತ್ಯದಾನವ ಪೂಜಿತಃ ॥೨೧॥

ಹೈರಣ್ಯೇ ರಾಜತೇ ಚೈವ ಕೃಷ್ಣಾಯಸಮಯೇ ತಥಾ ।
ಆಲಯಂ ಚಾ ತ್ಮನಃ ಕೃತ್ವಾ ತತ್ರಾಽಸ್ತೇ ಬಲವಾಂಸ್ತದಾ ॥೨೨॥

ಏವಂ ಬಭೂವು ರ್ದೈತ್ಯಾನಾ ಮತಿದುರ್ಗಾಣಿ ಸುವ್ರತಾಃ ।
ಪುರಾಣಿ ತ್ರೀಣಿ ವಿಪ್ರೇಂದ್ರಾ ಸ್ತ್ರೈಲೋಕ್ಯ ಮಿವ ಚಾಪರಂ ॥೨೩॥

ಪುರತ್ರಯೇ ತದಾ ಜಾತೇ ಸರ್ವೇ ದೈತ್ಯಾ ಜಗತ್ರಯೇ ।
ಪುರತ್ರಯಂ ಪ್ರವಿಶ್ಯೈವ ಬಭೂವುಸ್ತೇ ಬಲಾಧಿಕಾಃ ॥೨೪॥

ಕಲ್ಪದ್ರುಮ ಸಮಾಕೀರ್ಣಂ ಗಜ ವಾಜಿ ಸಮಾಕುಲಂ ।
ನಾನಾಪ್ರಾಸಾದ ಸಂಕೀರ್ಣಂ ಮಣಿಜಾಲೈಃ ಸಮಾವೃತಂ ॥೨೫॥

---

ಲ್ಪಟ್ಟವು. ಪ್ರತಿಯೊಂದು ಪಟ್ಟಣವೂ ಉದ್ದ ಅಗಲಗಳಲ್ಲಿ ಸಮವಾಗಿ ನೂರುಯೋಜನದಷ್ಟು ವಿಸ್ತಾರವುಳ್ಳದ್ದಾಗಿತ್ತು. ತಾರಕಾಕ್ಷನ ಪಟ್ಟಣವು ಚಿನ್ನದ್ದಾಗಿಯೂ, ಕಮಲಾಕ್ಷನ ಪಟ್ಟಣವು ಬೆಳ್ಳಿಯದಾಗಿಯೂ, ವಿದ್ಯುನ್ಮಾಲಿಯ ಪಟ್ಟಣವು ಕಬ್ಬಿಣದ್ದಾಗಿಯೂ. ಉತ್ತಮವಾದ ಕೋಟೆ ಕೊತ್ತಲುಗಳಿಂದ ಕೂಡಿದ್ದವು. ಬಲಿಷ್ಠನಾದ ಮಯನು ಇಲ್ಲಿ ದೈತ್ಯರು ಮತ್ತು ರಾಕ್ಷಸರಿಂದ ಪೂಜಿಸಲ್ಪಟ್ಟಿದ್ದನು.

೨೨-೨೫. ಬಲಿಷ್ಠನಾದ ಮಯನು ಚಿನ್ನದಿಂದ, ಬೆಳ್ಳಿಯಿಂದ, ಮತ್ತು ಕಪ್ಪು ಕಬ್ಬಿಣದಿಂದ ಮಾಡಿದ, ಪಟ್ಟಣಗಳಲ್ಲಿ ವಾಸಮಾಡುತ್ತಾ ಇದ್ದನು. ಎಲೈ ಬ್ರಾಹ್ಮಣ ಶ್ರೇಷ್ಠರೇ, ಪ್ರವೇಶಿಸಲು ಬಹಳ ಕಷ್ಟವಾದ ದುರ್ಗಗಳಿಂದ ಕೂಡಿದ ಈ ರಾಕ್ಷಸರ ಪಟ್ಟಣಗಳು ಈ ರೀತಿಯಾಗಿದ್ದವು. ಈ ಮೂರು ಪಟ್ಟಣಗಳೂ, ಇನ್ನೊಂದು ಮೂರು ಲೋಕಗಳೋ, ಎಂಬಂತೆ ಇದ್ದುವು. ಹೀಗೆ ಮೂರು ಪಟ್ಟಣಗಳು ನಿರ್ಮಿಸಲ್ಪಡಲು, ಈ ಮೂವರು ಬಲಿಷ್ಠರಾದ ರಾಕ್ಷಸರೂ, ಈ ಪಟ್ಟಣಗಳಲ್ಲಿದ್ದುಕೊಂಡೇ, ಲೋಕ ಭಯಂಕರರಾಗಿದ್ದರು. ಈ ಪಟ್ಟಣಗಳು ಕಲ್ಪವೃಕ್ಷಗಳಿಂದಲೂ, ಲೆಕ್ಕ

ಸೂರ್ಯ ಮಂಡಲ ಸಂಕಾಶೈ ರ್ವಿಮಾನೈ ರ್ವಿಶ್ವತೋ ಮುಖೈಃ ।
ಪದ್ಮರಾಗಮಯೈಃ ಶುಭ್ರೈಃ ಶೋಭಿತಂ ಚಂದ್ರ ಸನ್ನಿಭೈಃ ॥೨೬॥
ಪ್ರಾಸಾದೈ ರ್ಗೋಪುರೈರ್ದಿವ್ಯೈಃ ಕೈಲಾಸ ಶಿಖರೋ ಪಮೈಃ ।
ಶೋಭಿತಂ ತ್ರಿಪುರಂ ತೇಷಾಂ ಪೃಥಕ್ಪೃಥಗನುತ್ತಮೈಃ ॥೨೭॥
ದಿವ್ಯ ಸ್ತ್ರೀಭಿಃ ಸು ಸಂಪೂರ್ಣಂ ಗಂಧರ್ವೈಃ ಸಿದ್ಧಚಾರಣೈಃ ।
ರುದ್ರಾಲಯೈಃ ಪ್ರತಿಗೃಹಂ ಸಾಗ್ನಿಹೋತ್ರೈರ್ದ್ವಿಜೋತ್ತಮಾಃ ॥
ವಾಪೀ ಕೂಪ ತಟಾಕೈಶ್ಚ ದೀರ್ಘಿಕಾಭಿಶ್ಚ ಸರ್ವತಃ ।
ಮತ್ತ ಮಾತಂಗ ಯೂಥೈಶ್ಚ ತುರಂಗೈಶ್ಚ ಸುಶೋಭನೈಃ ॥೨೯॥
ರಥೈಶ್ಚ ವಿವಿಧಾಕಾರೈ ರ್ವಿಚಿತ್ರೈ ರ್ವಿಶ್ವತೋ ಮುಖೈಃ ।
ಸಭಾ ಪ್ರಪಾದಿಭಿಶ್ಚೈವ ಕ್ರಿಡಾಸ್ಥಾನೈಃ ಪೃಥಕ್ಪೃಥಕ್ ॥೩೦॥

---

ವಿಲ್ಲದಷ್ಟು ಆನೆ ಕುದುರೆಗಳಿಂದಲೂ, ಅನೇಕ ಉಪ್ಪರಿಗೇ ಮನೆಗಳಿಂದಲೂ, ಮಣಿಯಿಂದಮಾಡಿದ ಗೋಪುರಗಳಿಂದಲೂ ಪ್ರಕಾಶಿಸುತ್ತಿದ್ದುವು.

೨೬-೨೯. ಸೂರ್ಯಮಂಡಲಕ್ಕೆ ಸಮಾನವಾದ, ವಿಶಾಲವಾದ, ವಿಮಾನಗಳಿಂದಲೂ, ಪದ್ಮರಾಗ ಮಣಿಗಳಿಂದ ಪೂರ್ಣವಾದ ಬೆಳ್ಳಗಿರುವ ಚಂದ್ರನಿಗೆ ಸಮಾನವಾದ, ಕೈಲಾಸಶಿಖರಕ್ಕೆ ಸಮಾನವಾದ, ದಿವ್ಯವಾದ ಉಪ್ಪರಿಗೇ ಮನೆಗಳು, ಮತ್ತು ಗೋಪುರಗಳಿಂದಲೂ, ಒಂದಕ್ಕೊಂದಕ್ಕೆ ಸೇರಿದಂತೇ ಅತಿಶ್ರೇಷ್ಠಗಳಾದ ಮಹಡಿಯ ಮನೆಗಳಿಂದಲೂ ಈ ತ್ರಿಪುರವು ಶೋಭಿಸುತ್ತಿತ್ತು. ಅಲ್ಲದೇ ಈ ತ್ರಿಪುರವು ಸ್ವರ್ಗೀಯ ಸ್ತ್ರೀಯರಿಂದಲೂ, ತುಂಬಿತ್ತು. ಎಲ್ಲಿ ಬ್ರಾಹ್ಮಣ ಶ್ರೇಷ್ಠರೇ, ಶಿವನ ಮಂದಿರಗಳಿಂದಲೂ, ಗಂಧರ್ವರು, ಮತ್ತು ಸಿದ್ಧರು, ಮತ್ತು ಚಾರಣ ಎಂಬ ದೇವತೆಗಳ ಪ್ರಭೇದಗಳಿಂದಲೂ, ಪ್ರತಿ ಮನೆಯಲ್ಲಿಯೂ, ಅಗ್ನಿಹೋತ್ರಗಳಿಂದಲೂ, ಭಾವಿ, ಕೆರೆ, ಕುಂಟೆ, ಎಲ್ಲಾ ಕಡೆಯಲ್ಲಿಯೂ, ಸರೋವರಗಳು ಮತ್ತು ಮದಿಸಿದ ಆನೆಗಳ ಹಿಂಡುಗಳೂ, ಸುಂದರವಾದ ಕುದುರೆಗಳೂ, ಇವುಗಳಿಂದ ತ್ರಿಪುರವು ಬಹಳ ಸೊಗಸಾಗಿತ್ತು.

೩೦-೩೪. ತ್ರಿಪುರವು ಅನೇಕ ವಿಧವಾದ ಆಕಾರವುಳ್ಳ, ಬಹು ವಿಶಾಲ

ವೇದಾಧ್ಯಯನ ಶಾಲಾಭಿ ರ್ವಿವಿಧಾಭಿಃ ಸಮಂತತಃ ।
ಅಧೃಷ್ಯಂ ಮನಸಾಽಪ್ಯನ್ಯೈ ರ್ಮಯಸ್ಯೈವ ಚ ಮಾಯಯಾ ॥೩೦
ಪತಿವ್ರತಾಭಿಃ ಸರ್ವತ್ರ ಸೇವಿತಂ ಮುನಿಪುಂಗವಾಃ ।
ಕೃತ್ವಾಽಪಿ ಸುಮಹತ್ಪಾಪ ಮಪಾಪೈಃ ಶಂಕರಾರ್ಚನಾತ್ ॥೩೧॥
ದೈತ್ಯೇಶ್ವರೈ ರ್ಮಹಾಭಾಗೈಃ ಸದಾರೈಃ ಸಸುತೈರ್ದ್ವಿಜಾಃ ।
ಶ್ರೌತಸ್ಮಾರ್ತಾರ್ಥ ಧರ್ಮಜ್ಞೈ ಸ್ತದ್ಧರ್ಮ ನಿರತೈಃ ಸದಾ ॥೩೨॥
ಮಹಾದೇವೇತರಂ ತ್ಯಕ್ತ್ವಾ ದೇವಂ ತಸ್ಯಾರ್ಚನೇ ಸ್ಥಿತೈಃ ।
ವ್ಯೂಢೋರಸ್ಕೈ ರ್ವೃಷಸ್ಕಂಧೈಃ ಸರ್ವಾಯುಧ ಧರೈಃ ಸದಾ ॥೩೪॥
ಸರ್ವದಾ ಕ್ಷುಭಿತೈಶ್ಚೈವ ದಾವಾಗ್ನಿ ಸದೃಶೇಕ್ಷಣೈಃ ।
ಪ್ರಶಾಂತೈಃ ಕುಪಿತೈಶ್ಚೈವ ಕುಬ್ಜೈರ್ವಾಮನ ಕೈಸ್ತಥಾ ॥೩೫॥

---

ವಾದ ನಾನಾಬಗೆಯ ರಥಗಳಿಂದಲೂ, ಅನೇಕ ಸಭಾಶಾಲೆಗಳು, ಪಾನ ಶಾಲೆಗಳು ಮತ್ತು ಭಿನ್ನಭಿನ್ನವಾದ ಆಟದ ಶಾಲೆಗಳಿಂದಲೂ, ಅನೇಕ ಬಗೆಯ ವೇದಾಧ್ಯಯನದ ಪಾಠಶಾಲೆಗಳಿಂದಲೂ ಕೂಡಿ, ಮಯನ ಮಾಯೆಯಿಂದ ನಿರ್ಮಿತವಾದ ಈ ತ್ರಿಪುರವು ಇತರರಿಗೆ ಮನಸ್ಸಿನಿಂದಲೂ ಪ್ರವೇಶಿಸಲು ಅಶಕ್ಯವಾಗಿತ್ತು. ಎಲೈ ಋಷಿಶ್ರೇಷ್ಠರೇ, ಈ ತ್ರಿಪುರವು ಎಲ್ಲೆಡೆಯಲ್ಲೂ ಪತಿವ್ರತಾ ಸ್ತ್ರೀಯರಿಗೆ ಆವಾಸಸ್ಥಾನವಾಗಿತ್ತು. ಎಷ್ಟೇ ಪಾಪಗಳನ್ನು ಮಾಡಿದ್ದರೂ, ಶಿವನ ಪೂಜೆಯಿಂದ ಪಾಪವಿಲ್ಲದೆ ಮಹಾ ಪುಣ್ಯವಂತರಾದ, ಹೆಂಡಿತಿ ಮಕ್ಕಳಿಂದ ಕೂಡಿದ. ರಾಕ್ಷಸಾಧಿಪತಿಗಳಿಂದ ಈ ತ್ರಿಪುರವು ಶ್ಲಾಘ್ಯವಾಗಿತ್ತು. ಶ್ರೌತ ಮತ್ತು ಸ್ಮಾರ್ತ ಕರ್ಮಗಳ ಜ್ಞಾನವನ್ನು ಪಡೆದಿದ್ದ, ಮತ್ತು ಅದರಂತೆಯೇ ನೆಡೆಯುತ್ತಿದ್ದ, ಈಶ್ವರನ ಪೂಜೆಯಲ್ಲದೇ ಬೇರೊಂದನ್ನು ಮಾಡದೇ ಇದ್ದ, ದೊಡ್ಡವಕ್ಷಸ್ಥಲಗಳನ್ನೂ, ಎತ್ತಿನಂತೇ ಹೆಗಲನ್ನೂ ಹೊಂದಿದ್ದ, ಸಮಸ್ತ ಆಯುಧ ಧಾರಿಗಳಾದ, ಶೂರರಿಂದಲೂ ಈ ತ್ರಿಪುರವು ಶೋಭಿಸುತ್ತಿತ್ತು.

೩೫–೩೬. ಯಾವಾಗಲೂ ಹಸಿದಿದ್ದುದರಿಂದಲೇ ಕಾಡುಕಿಚ್ಚಿಗೆ ಸಮಾನವಾದ ಕಣ್ಣುಗಳುಳ್ಳ, ಶಾಂತರೂ, ಮತ್ತು ಕೋಪಗೊಂಡವರೂ,

ನೀಲೋತ್ಪಲದಲಪ್ರಖ್ಯೈ ರ್ನೀಲ ಕುಂಚಿತ ಮೂರ್ಧಜೈಃ।
ನೀಲಾದ್ರಿ ಮೇರು ಸಂಕಾಶೈ ರ್ನೀರದೋಪಮ ನಿಸ್ವನೈಃ
ಮಯೇನ ರಕ್ಷಿತೈಃ ಸರ್ವೈಃ ಶಿಕ್ಷಿತೈರ್ಯುದ್ಧ ಲಾಲಸೈಃ ॥೩೬॥
ಅಥ ಸಮರ ರತೈಃ ಸದಾ ಸಮಂತಾ ।
ಚ್ಛಿವಪದ ಪೂಜನಯಾ ಸುಲಬ್ಧವೀರ್ಯೈಃ ॥
ರವಿ ಮರುದಮರೇಂದ್ರ ಸನ್ನಿಕಾಶೈಃ ।
ಸುರಮಥನೈಃ ಸುದೃಢೈಃ ಸು ಸೇವಿತಂ ತತ್ ॥೩೭॥
ಸೇಂದ್ರಾ ದೇವಾ ದ್ವಿಜಶ್ರೇಷ್ಠಾ ದ್ರುಮಾ ದಾವಾಗ್ನಿನಾ ಯಥಾ ।
ಪುರತ್ರಯಾಗ್ನಿನಾ ದಗ್ಧಾ ಹ್ಯಭವನ್ ದೈತ್ಯ ವೈಭವಾತ್ ॥೩೮॥
ಅಭಿವಂದ್ಯ ತದಾ ಪ್ರಾಹು ಸ್ತ್ವಮು ಪ್ರತಿಮ ವರ್ಚಸಂ ।
ಅಥೈವಂ ತೇ ತದಾ ದಗ್ಧಾ ದೇವಾ ದೇವೇಶ್ವರಂ ಹರಿಂ ॥೩೯॥

---

ಆದ, ಗೂನರೂ ಮತ್ತು ಕುಳ್ಳರೂ ಆದ, ಕನ್ನೈದಿಲೆಗೆ ಸಮಾನವಾದ ಕಪ್ಪುಗೂ ತೆಳ್ಳಗೂ ಸೊಂಪಾಗಿರುವ ಕೂದಲುಳ್ಳ, ನೀಲ ಪರ್ವತ ಮತ್ತು ಮೇರು ಪರ್ವತಗಳಿಗೆ ಸಮಾನರಾದ, ಮೇಘದಂತೆ ಘರ್ಜನೆ ಶಬ್ದವನ್ನು ಮಾಡುವ, ಯುದ್ಧದಲ್ಲಿ ಅಭಿಲಾಷೆಯುಳ್ಳ, ಚೆನ್ನಾಗಿ ತಯಾರಾಗಿದ್ದ ಭಟರು ಮಯನಿಂದ ಈ ತ್ರಿಪುರದಲ್ಲಿ ಚೆನ್ನಾಗಿ ಪೋಷಿಸಲ್ಪಡುತ್ತಿದ್ದರು.

೩೭–೩೯. ಈ ತ್ರಿಪುರದಲ್ಲಿ ಯುದ್ಧದಲ್ಲಿ ವಿಶೇಷ ಆಸಕ್ತಿಯುಳ್ಳವರೂ, ಶಿವಪಾದ ಪೂಜೆಯಿಂದ ಹೆಚ್ಚಾದ ಬಲವನ್ನು ಸಂಪಾದಿಸಿದವರೂ, ಸೂರ್ಯ, ದೇವತೆಗಳೂ, ದೇವೇಂದ್ರ ಇವರಿಗೆ ಸಮಾನರೂ, ದೇವತೆಗಳನ್ನು ನಾಶಮಾಡಲು ಶಕ್ತರೂ, ದೃಢಕಾಯರೂ ಆದ ಸೈನಿಕರು ಹೆಚ್ಚಾಗಿದ್ದರು. ಎಲೈ ಬ್ರಾಹ್ಮಣ ಶ್ರೇಷ್ಠರೇ, ರಾಕ್ಷಸರ ಪ್ರತಾಪದಿಂದ ತ್ರಿಪುರದ ಬೆಂಕಿಯಿಂದ, ಕಾಡುಕಿಚ್ಚಿನಿಂದ ಮರದಂತೆ, ಇಂದ್ರನೇ ಮೊದಲಾದ ಅನೇಕ ದೇವತೆಗಳು, ಕಾಡಿಸಲ್ಪಡುತ್ತಿದ್ದರು. ದೇವತೆಗಳು ಈರೀತಿಯಾಗಿ ರಾಕ್ಷಸರ ಭಾಧೆಗೆ ಒಳಗಾಗಿ, ದಾರಿತೋಚದೇ ದೇವತೆಗಳಿಗೆ ಅಧಿಪತಿ

ಸೋऽಪಿ ನಾರಾಯಣಃ ಶ್ರೀಮಾನ್ ಚಿಂತಯಾಮಾಸ ಚೇತಸಾ ।
ಕಿಂ ಕಾರ್ಯಂ ದೇವಕಾರ್ಯೇಷು ಭಗವಾನಿತಿ ಸಪ್ರಭುಃ ॥೪೦॥
ತದಾ ಸಸ್ಮಾರ ವೈ ಯಜ್ಞಂ ಯಜ್ಞಮೂರ್ತಿಃ ಜನಾರ್ದನಃ ।
ಯಜ್ವಾ ಯಜ್ಞ ಭುಗೀಶಾನೋ ಯಜ್ವನಾಂ ಫಲದಃ ಪ್ರಭುಃ॥೪೧॥
ತತೋ ಯಜ್ಞಃ ಸ್ಮೃತಸ್ತೇನ ದೇವಕಾರ್ಯಾರ್ಥ ಸಿದ್ಧಯೇ ।
ದೇವಂ ತೇ ಪುರುಷಂ ಚೈವ ಪ್ರಣೇಮುಸ್ತು ಷ್ಟುವುಸ್ತದಾ ॥೪೨॥
ಭಗವಾನಪಿ ತಂ ದೃಷ್ಟ್ವಾ ಯಜ್ಞಂ ಪ್ರಾಹ ಸನಾತನಂ ।
ಸನಾತನ ಸ್ತದಾ ಸೇಂದ್ರಾ ನ್ದೇವಾನಾಲೋಕ್ಯ ಚಾऽಚ್ಯುತಃ ॥೪೩॥

॥ ಶ್ರೀ ವಿಷ್ಣುರುವಾಚ ॥

ಅನೇನೋ ಪಸದಾ ದೇವಾ ಯಜಧ್ವಂ ಪರಮೇಶ್ವರಂ ।
ಪುರತ್ರಯ ವಿನಾಶಾಯ ಜಗತ್ರಯ ವಿಭೂತಯೇ ॥೪೪॥

---

ಯಾದ ವಿಷ್ಣುವನ್ನು ಸಮೀಪಿಸಿ ಅವನಿಗೆ ನಮಸ್ಕರಿಸಿ ಮಹಾತೇಜಸ್ವಿ ಯಾದ ಅವನಿಗೆ ತಮ್ಮಿಷ್ಟಗಳನ್ನು ಬಿನ್ನೈಸಿದರು.

೪೦–೪೨ ಲಕ್ಷ್ಮೀಪತಿಯಾದ ನಾರಾಯಣನೂ ಸಹ ಈಗ ದೇವತೆಗಳ ಕಷ್ಟಗಳನ್ನು ನಿವಾರಣೆ ಮಾಡುವುದು ಹೇಗೆಂದು ಯೋಚಿಸಿದನು. ಆಗ ನಾರಾಯಣನು ಯಾಗಕ್ಕೆ ಆರಾಧ್ಯದೇವತೆಯಾದ ದೇವನನ್ನು ಸ್ಮರಿಸಿದನು. ಯಾಗಪ್ರಿಯನೂ, ದೇವತೆಗಳಿಗೆ ಸ್ವಾಮಿಯೂ ಆದ ಆ ದೇವನೇ ಈ ದೇವತೆಗಳ ಕಾರ್ಯವನ್ನು ಈಡೇರಿಸಬಲ್ಲನೆಂದು ನಂಬಿದನು. ನಾರಾಯಣನೇ ಯಾಗಕ್ಕೆ ಅಧಿದೇವತೆಯಾದ ಪುರುಷನನ್ನು ಧ್ಯಾನಿಸಲು, ಇತರ ದೇವತೆಗಳೂ ಇವನೊಡನೇ ಯಜ್ಞಪುರುಷನ ಸ್ತೋತ್ರವನ್ನು ಮಾಡಿದರು. ಮತ್ತು ಅಲ್ಲಿಗೆ ಬಂದ ಆ ಉಪಸದ್ಯಜ್ಞದೇವನಿಗೆ ನಮಸ್ಕಾರವನ್ನು ಮಾಡಿದರು.

೪೩–೪೫ ಪೂಜ್ಯನಾದ ನಾರಾಯಣನು ಆಗ ಪ್ರಾಚೀನನಾದ ಆಯಜ್ಞದೇವನನ್ನು ನೋಡಿ ದೇವತೆಗಳ ಕಷ್ಟಗಳನ್ನು ಅರಿಕೆಮಾಡಿದನು.' ಅನಂತರ

॥ ಸೂತ ಉವಾಚ ॥

ಅಥ ತಸ್ಯ ವಚಃ ಶ್ರುತ್ವಾ ದೇವದೇವಸ್ಯ ಧೀಮತಃ ।
ಸಿಂಹನಾದಂ ಮಹತ್ಕೃತ್ವಾ ಯಜ್ಞೇಶಂ ತುಷ್ಟುವುಃ ಸುರಾಃ ॥೪೫॥
ತತಃ ಸಂಚಿಂತ್ಯ ಭಗವಾನ್ ಸ್ವಯಮೇವ ಜನಾರ್ದನಃ ।
ಪುನಃ ಪ್ರಾಹ ಸ ಸರ್ವಾಂಸ್ತಾಂ ಸ್ತ್ರಿಗಶಾಂ ಸ್ತ್ರಿದಶೇಶ್ವರಃ ॥೪೬॥
ಹತ್ವಾ ದಗ್ಧ್ವಾಚ ಭೂತಾನಿ ಭುಕ್ತ್ವಾಚಾಽನ್ಯಾಯತೋಽಪಿವಾ ।
ಯಜೇದ್ಯದಿ ಮಹಾದೇವ ಮಪಾ ಪ್ಲೋ ನಾಽತ್ರ ಸಂಶಯಃ ॥೪೭॥
ಅಪಾಪಾ ನೈವ ಹಂತವ್ಯಾಃ ಪಾಪಾ ಏವ ನ ಸಂಶಯಃ ।
ಹಂತವ್ಯಾಃ ಸರ್ವಯತ್ನೇನ ಕಥಂ ವಧ್ಯಾಃ ಸುರೋತ್ತಮಾಃ ॥೪೮॥
ಅಸುರಾ ದುರ್ಮದಾಃ ಪಾಪಾ ಅಪಿ ದೇವೈರ್ಮಹಾಬಲೈಃ ।
ತಸ್ಮಾನ್ನ ವಧ್ಯಾ ರುದ್ರಸ್ಯ ಪ್ರಭಾವಾತ್ಪರಮೇಷ್ಠಿನಃ ॥೪೯॥

---

ನಾರಾಯಣನು ದೇವತೆಗಳ ಕಡೆಗೆ ನೋಡಿ ಈ ರೀತಿ ಹೇಳಿದನು :– ಎಲೈ ದೇವತೆಗಳೇ, ಪರಮೇಶ್ವರನನ್ನು ಯಾಗಮಾಡುವುದರ ಮೂಲಕ ಸಂತೋಷ ಪಡಿಸಿ. ಇದರಿಂದ ಭಗವಂತನು ತ್ರಿಪುರನಾಶವನ್ನು ಮಾಡುವುದರ ಮೂಲಕ ಮೂರು ಲೋಕಕ್ಕೂ ಕ್ಷೇಮವನ್ನುಂಟುಮಾಡುವನು. ಸೂತನು ಹೇಳಿದನು :– ದೇವಾಧಿದೇವನಾದ, ಮೇಧಾವಿಯಾದ, ವಿಷ್ಣುವಿನ ಮಾತನ್ನು ಕೇಳಿ, ದೇವತೆಗಳು ಸಿಂಹದಂತೆ ಗರ್ಜನೆಮಾಡಿದರು. ಮತ್ತು ಯಜ್ಞಕ್ಕೆ ಸ್ವಾಮಿಯಾದ ಶಿವನನ್ನು ಸ್ತೋತ್ರಮಾಡಿದರು.

೪೬–೪೯. ಅನಂತರದಲ್ಲಿ ನಾರಾಯಣನು ಸ್ವಾಂತವಾಗಿಯೇ ಆಲೋಚಿಸಿ ಪುನಃ ದೇವಶ್ರೇಷ್ಠರನ್ನು ಕುರಿತು ಹೀಗೆ ಹೇಳಿದನು :—ಯಾರೇ ಆಗಲಿ ಪ್ರಾಣಿಗಳನ್ನು ಹಿಂಸಿಸಿ, ಕೊಂದು, ತಿಂದು, ಅನ್ಯಾಯವಾದ ಮಾರ್ಗದಲ್ಲಿ ನಡೆದರೂ, ಶಿವನಪೂಜೆ ಮಾಡಿದರೆ, ಅವರ ಅಂಥಾ ಮಹಾಪಾಪಗಳೂ ತೊಲಗುತ್ತವೆಯೆಂಬುದರಲ್ಲಿ ಸಂದೇಹವಿಲ್ಲ. ಪಾಪಿಷ್ಠರಲ್ಲದವರನ್ನು ಕೊಲ್ಲುವುದು ಯೋಗ್ಯವಲ್ಲ. ಪಾಪಿಷ್ಠರು ಮಾತ್ರವೇ ಸರ್ವಪ್ರಯತ್ನದಿಂದಲೂ, ನಾಶಮಾಡಲ್ಪಡಲು ಅರ್ಹರು. ಹೀಗಿರುವಾಗ ಈ ರಾಕ್ಷಸ ಶ್ರೇಷ್ಠರು ಹೇಗೆ ವಧೆಗೆ ಅರ್ಹರು ? ರಾಕ್ಷಸರು ಅಹಂಕಾರಿಗಳೂ ಪಾಪಿಷ್ಠರೂ ಆದರೂ, ಮತ್ತು ದೇವತೆಗಳು ಮಹಾ ಬಲಶಾಲಿಗಳಾಗಿ

ಕೋಽಹಂ ಬ್ರಹ್ಮಾಽಥವಾ ದೇವಾ ದೈತ್ಯಾ ದೇವಾರಿ ಸೂದನಾಃ ।
ಮುನಯಶ್ಚ ಮಹಾತ್ಮಾನಃ ಪ್ರಸಾದೇನ ವಿನಾ ಪ್ರಭೋಃ ॥೫೦॥

ಯಃ ಸಪ್ತವಿಂಶಕೋ ನಿತ್ಯಃ ಪರಾತ್ಪರತರಃ ಪ್ರಭುಃ ।
ವಿಶ್ವಾಮರೇಶ್ವರೋ ವಂದ್ಯೋ ವಿಶ್ವಾಧಾರೋ ಮಹೇಶ್ವರಃ ॥೫೧॥

ಸ ಏವ ಸರ್ವದೇವೇಶಃ ಸರ್ವೇಷಾ ಮಪಿ ಶಂಕರಃ ।
ಲೀಲಯಾ ದೇವ ದೈತ್ಯೇಂದ್ರ ವಿಭಾಗ ಮಕರೋದ್ಧರಃ ॥೫೨॥

ತಸ್ಯಾಂಶಮೇಕಂ ಸಂಪೂಜ್ಯ ದೇವಾ ದೇವತ್ವಮಾಗತಾಃ ।
ಬ್ರಹ್ಮಾ ಬ್ರಹ್ಮತ್ವ ಮಾಪನ್ನೋ ಹ್ಯಹಂ ವಿಷ್ಣುತ್ವ ಮೇವಚ ॥೫೩॥

ತಮಪೂಜ್ಯ ಜಗತ್ಯಸ್ಮಿನ್ ಕಃ ಪುಮಾ ನ್ಸಿದ್ಧಿಮಿಚ್ಛತಿ ।
ತಸ್ಮಾತ್ತೇನ್ನೈವ ಹಂತವ್ಯಾ ಲಿಂಗಾರ್ಚನ ವಿಧೇರ್ಬಲಾತ್ ॥೫೪॥

---

ದ್ದರೂ, ಬ್ರಹ್ಮನ ವರದ ಬಲವುಳ್ಳ ರಾಕ್ಷಸರನ್ನು ರುದ್ರನು ನಾಶ ಮಾಡಲು ಆಗುವುದಿಲ್ಲ.

೫೦–೫೩. ಶಿವನ ಪ್ರಸಾದವಿಲ್ಲದಿದ್ದರೆ ನಾನು ಯಾರು? ಬ್ರಹ್ಮ ತಾನೇ ಯಾರು ? ರಾಕ್ಷಸರೆಲ್ಲಿ ? ಶತ್ರುನಾಶಕರಾದ ದೈತ್ಯರೆಲ್ಲಿರುವರು ? ಋಷಿಗಳೂ, ಮಹಾತ್ಮರಾದ ತಪಸ್ವಿಗಳೂ, ಎಲ್ಲಿರುವರು ? ಸ್ವಾಮಿಯಾದ ಶಿವನು (ಪಕೃತಿ) ಮಹತ್, ಅಹಂಕಾರ, ಬುದ್ಧಿ, ಮನಸ್ಸು, ಚಿತ್ತ, ಪಂಚ ಭೂತಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚಪ್ರಾಣಗಳು, ಜೀವ, ಈಶ್ವರ, ಎಂಬ ಇಪ್ಪತ್ತೇಳು ತತ್ವಗಳ ಸ್ವರೂ ಪನು, ಜೀವರುಗಳಿಗೆ ಅಧಿಪತಿಯೂ ಮತ್ತು ಅವರ ಸ್ವರೂಪನೂ, ನಿತ್ಯನೂ, ಅತ್ಯಂತ ಉತ್ಕೃಷ್ಟವಾದ ವಸ್ತುವೂ, ಪ್ರಪಂಚಕ್ಕೂ, ದೇವತೆಗಳಿಗೂ ಅಧಿ ಪತಿಯೂ, ಜಗದ್ವಂದ್ಯನೂ, ಜಗತ್ತಿಗೆ ಆಧಾರನೂ, ಮಹೇಶ್ವರನೂ, ಸರ್ವ ದೇವತೆಗಳಿಗೂ ಅಧಿಪತಿಯೂ, ಶಂಕರನೂ ಆಗಿದ್ದಾನೆ. ಶಿವನೇ ದೇವತೆ ಗಳೂ, ರಾಕ್ಷಸರೂ, ಎಂಬ ಜಾತಿಗಳವಿಭಾಗವನ್ನು ಸೃಷ್ಟಿಮಾಡಿದವನೂ, ಆಗಿದ್ದಾನೆ. ಅವನ ಒಂದು ಅಂಶವನ್ನು ಆರಾಧನೆಮಾಡಿ ದೇವತೆಗಳು ದೇವತ್ವದ ಪಟ್ಟವನ್ನು ಏರಿದರು. ಬ್ರಹ್ಮನು ಬ್ರಹ್ಮನಪಟ್ಟವನ್ನೂ ನಾನು ವಿಷ್ಣುವಿನ ಪಟ್ಟವನ್ನೂ, ಕ್ರಮವಾಗಿ ಏರಿದೇವೇಂದು ತಿಳಿಯಿರಿ.

೫೪–೫೬. ಆ ಭಗವಂತನಾದ ಶಿವನನ್ನು ಭಜಿಸದೇ ಯಾವ ಮನು

ಧರ್ಮನಿಷ್ಠಾಶ್ಚ ತೇ ಸರ್ವೇ ಶ್ರೌತ ಸ್ಮಾರ್ತವಿಧೌ ಸ್ಥಿತಾಃ ।
ತಥಾಽಪಿ ಯಜಮಾನೇನ ರೌದ್ರೇಣೋಪಸದಾ ಪ್ರಭುಂ ।
ರುದ್ರಮಿಷ್ಟ್ವಾ ಯಥಾನ್ಯಾಯಂ ಜೇಷ್ಯಾಮೋ ದೈತ್ಯಸತ್ತಮಾನ್ ॥
ಸತಾರಕಾಕ್ಷೇಣ ಮಯೇನ ಗುಪ್ತಂ ।
ಸ್ವಸ್ಥಂ ಚ ಗುಪ್ತಂ ಸ್ಫಟಿಕಾಭಮೇಕಂ ॥
ಕೋ ನಾಮ ಹಂತುಂ ತ್ರಿಪುರಂ ಸಮರ್ಥೋ ।
ಮುಕ್ತ್ವಾ ತ್ರಿನೇತ್ರಂ ಭಗವಂತಮೇಕಂ ॥೫೬॥

॥ ಸೂತ ಉವಾಚ ॥

ಏವ ಮುಕ್ತ್ವಾ ಹರಿ ಶ್ಚೇಷ್ಟ್ವಾ ಯಜ್ಞೇನೋಪಸದಾ ಪ್ರಭುಂ ।
ಉಪವಿಷ್ಟೋ ದದರ್ಶಾಥ ಭೂತಸಂಘಾ ನ್ಸಹಸ್ರಶಃ ॥೫೭॥
ಶೂಲಶಕ್ತಿಗದಾ ಹಸ್ತಾನ್ ಟಂಕೋಪಲ ಶಿಲಾಯುಧಾನ್ ।
ನಾನಾ ಪ್ರಹರಣೋಪೇತಾನ್ ನಾನಾ ವೇಷ ಧರಾಂ ಸ್ತದಾ ॥೫೮॥

---

ಷ್ಯನು ಕಾರ್ಯಸಿದ್ಧಿಯನ್ನು ಪಡೆದಾನು ? ಲಿಂಗಪೂಜೆಯ ಪ್ರಭಾವದಿಂದ ಅವನು ಸಂತೋಷಗೊಂಡು, ಅವನಿಂದಲೇ ಈ ರಾಕ್ಷಸರು ಕೊಲ್ಲಲ್ಪಡಬೇಕು. ಈ ರಾಕ್ಷಸರೂ ಸಹ ಧಾರ್ಮಿಕರಾಗಿಯೂ, ಶ್ರೌತ, ಸ್ಮಾರ್ತ, ಕರ್ಮಗಳನ್ನು ಮಾಡುವವರಾಗಿಯೂ ಇದ್ದಾರೆ. ಆದರೂ ರುದ್ರಪುತ್ರನನ್ನು ಯಾಜಮಾನನನ್ನಾಗಿ ಇಟ್ಟುಕೊಂಡು, ಸ್ವಾಮಿಯಾದ ರುದ್ರನನ್ನು ಯಾಗದ ಮೂಲಕ ಸಂತೋಷಪಡಿಸಿ, ರಾಕ್ಷಸ ಶ್ರೇಷ್ಠರನ್ನು ಗೆಲ್ಲೋಣ. ತಾರಕಾಕ್ಷನೊಡನೆ ಸೇರಿದ ಮಯನಿಂದ, ರಕ್ಷಿಸಲ್ಪಟ್ಟ, ಭದ್ರವಾಗಿರುವ, ಸ್ಫಟಿಕದ ಕಲ್ಲಿನಂತೆ ಸ್ವಚ್ಛವಾಗಿರುವ ತ್ರಿಪುರವನ್ನು ಪೂಜ್ಯನಾದ, ಮೂರು ಕಣ್ಣುಳ್ಳ ಶಿವನನ್ನು ಬಿಟ್ಟರೆ ಇನ್ನುಯಾರು ನಾಶಮಾಡಲು ಸಮರ್ಥರು ?

೫೭–೫೮. ಸೂತನು ಹೇಳಿದನು:—ಹೀಗೆ ನಾರಾಯಣನು ಹೇಳಿ, ದೇವತೆಗಳೊಂದಿಗೆ ಯಾಗಮಾಡಿ, ಸ್ವಾಮಿಯಾದ ಶಿವನನ್ನು ಸಂತೋಷಪಡಿಸಿದನು. ಆಗ ಅವನು ಸಾವಿರಾರು ಭೂತಗಳು ತನ್ನ ಮುಂದೆ ಬಂದು ನಿಂತಿದ್ದುದನ್ನು ನೋಡಿದನು. ಅವರು ಶೂಲ, ಶಕ್ತ್ಯಾಯುಧ, ಗದೆ,

ಕಾಲಾಗ್ನಿ ರುದ್ರ ಸಂಕಾಶಾ ನ್ಕಾಲರುದ್ರೋಪಮಾಂಸ್ತದಾ ।
ಪ್ರಾಹ ದೇವೋ ಹರಿಃ ಸಾಕ್ಷಾತ್ಪ್ರಣಿಪತ್ಯ ಸ್ಥಿತಾ ನ್ಪ್ರಭುಃ ॥೫೯॥

॥ ವಿಷ್ಣುರುವಾಚ ॥

ದಗ್ಧ್ವಾ ಭಿತ್ವಾ ಚ ಭುಕ್ತ್ವಾ ಚ ಗತ್ವಾ ದೈತ್ಯ ಪುರತ್ರಯಂ ।
ಪುನರ್ಯಥಾ ಗತಂ ವೀರಾ ಗಂತುಮರ್ಹಥ ಭೂತಯೋ ॥೬೦॥

ತತಃ ಪ್ರಣಮ್ಯ ದೇವೇಶಂ ಭೂತಸಂಘಾಃ ಪುರತ್ರಯಂ ।
ಪ್ರವಿಶ್ಯ ನಷ್ಟಾಸ್ತೇ ಸರ್ವೇ ಶಲಭಾ ಇವ ಪಾವಕಂ ॥೬೧॥

ತತಸ್ತು ನಷ್ಟಾ ಸ್ತೇ ಸರ್ವೇ ಭೂತಾ ದೇವೇಶ್ವರಾಜ್ಞಯಾ ।
ನನೃತು ರ್ಮುಮುದುಶ್ಚೈವ ಜಗು ರ್ದೈತ್ಯಾಃ ಸಹಸ್ರಶಃ ॥೬೨॥

---

ಇವುಗಳನ್ನು ಕೈಯ್ಯಲ್ಲಿ ಹಿಡಿದಿದ್ದರು. ಮತ್ತು ಅವರು ಉಳಿ, ಕಲ್ಲುಬಂಡೆ, ಕಲ್ಲಿನ ಆಯುಧಗಳು, ಇವುಗಳನ್ನೂ, ಇನ್ನೂ ಅನೇಕ ಬಗೆಯ ಆಯುಧಗಳನ್ನೂ ಹಿಡಿದುಕೊಂಡು, ಅನೇಕ ವಿಧವಾದ ವೇಷಗಳನ್ನು ಹಾಕಿಕೊಂಡು, ಪ್ರಳಯ ಕಾಲದ ಬೆಂಕಿಗೆ ಸಮಾನರಾಗಿಯೂ, ಪ್ರಳಯ ಕಾಲದ ರುದ್ರರಿಗೆ ಸಮರಾಗಿಯೂ, ವಿಷ್ಣುವನ್ನು ನಮಸ್ಕರಿಸುತ್ತಾ ನಿಂತಿದ್ದರು. ಸ್ವಾಮಿಯಾದ ವಿಷ್ಣುವು ಅವರನ್ನು ಕುರಿತು ಹೀಗೆಂದನು.

೬೦–೬೨. ವಿಷ್ಣುವು ಹೇಳಿದನು :—ಎಲೈ ಭೂತಗಳಿರಾ, ರಾಕ್ಷಸರ ಈ ಮೂರು ಪಟ್ಟಣಗಳಿಗೆ, ಹೋಗಿ ಒಡೆದು, ಸುಟ್ಟು, ಅವರನ್ನು ತಿಂದು, ನೀವು ಬಂದದಾರಿಯನ್ನೇ ಹಿಡಿಯಿರಿ. ಆಗ ಭೂತಗಳ ಸಮೂಹವು ದೇವತೆಗಳಿಗೆ ಒಡೆಯನಾದ ನಾರಾಯಣನನ್ನು ನಮಸ್ಕರಿಸಿ, ತ್ರಿಪುರವನ್ನು ಪ್ರವೇಶಿಸಿ, ಬೆಂಕಿಯಲ್ಲಿ ಪತಂಗದ ಹುಳುವಿನಂತೆ ಅಲ್ಲಿಯೇ ಭಸ್ಮವಾದರು. ದೇವೇಶನ ಅಪ್ಪಣೆಯಂತೆ ಆ ಭೂತಗಳು ತ್ರಿಪುರವನ್ನು ಹೊಕ್ಕು ನಾಶವನ್ನು ಹೊಂದಲು, ರಾಕ್ಷಸರು ಸಾವಿರಗಟ್ಟಲೆಯಲ್ಲಿ ಕುಣಿದು ನಲಿಯುತ್ತಾ ಹಾಡು ಹೇಳುತ್ತಿದ್ದರು.

ತುಷ್ಟುವು ರ್ದೇವದೇವೇಶಂ ಪರಮಾತ್ಮಾನ ಮೀಶ್ವರಂ ।
ತತಃ ಪರಾಜಿತಾ ದೇವಾ ಧ್ವಸ್ತವೀರ್ಯಾಃ ಕ್ಷಣೇನ ತು ॥೬೩॥
ಸೇಂದ್ರಾಃ ಸಂಗಮ್ಯ ದೇವೇಶ ಮುಪೇಂದ್ರಂ ಧಿಷ್ಠಿತಾ ಭಯಾತ್ ।
ತಾ ನ್ದೃಷ್ಟ್ವಾ ಚಿಂತಯಾಮಾಸ ಭಗವಾನ್ಪುರುಷೋತ್ತಮಃ ॥೬೪॥
ಕಿಂಕೃತ್ಯಮಿತಿ ಸಂತಪ್ತಃ ಸಂತಪ್ತಾ ನ್ಸೇಂದ್ರಕಾ ನ್ಸುರಾನ್ ।
ಕಥಂ ತು ತೇಷಾಂ ದೈತ್ಯಾನಾಂ ಬಲಂ ಹತ್ವಾ ಪ್ರಯತ್ನತಃ ॥೬೫॥
ದೇವಕಾರ್ಯಂ ಕರಿಷ್ಯಾಮಿ ಪ್ರಸಾದಾ ತ್ಪರಮೇಷ್ಠಿನಃ ।
ಪಾಪಂ ವಿಚಾರತೋ ನಾಸ್ತಿ ಧರ್ಮಿಷ್ಠಾನಾಂ ನ ಸಂಶಯಃ ॥೬೬॥
ತಸ್ಮಾ ದ್ದೈತ್ಯಾ ನ ವಧ್ಯಾಸ್ತೇ ಭೂತ್ಯೈಶ್ಚೋಪ ಸದೋದ್ಭವೈಃ ।
ಪಾಪಂ ನುದತಿ ಧರ್ಮೇಣ ಧರ್ಮೇ ಸರ್ವಂ ಪ್ರತಿಷ್ಠಿತಂ ॥೬೭॥
ಧರ್ಮಾದೈಶ್ವರ್ಯ ಮಿತ್ಯೇಷಾ ಶ್ರುತಿರೇಷಾ ಸನಾತನೀ ।
ದೈತ್ಯಾಶ್ಚೈ ತೇಹಿ ಧರ್ಮಿಷ್ಠಾಃ ಸರ್ವೇ ತ್ರಿಪುರವಾಸಿನಃ ॥೬೮॥

---

೬೩–೬೫. ರಾಕ್ಷಸರು ದೇವಾಧಿದೇವನಾದ, ಪರಮೇಶ್ವರನಾದ, ಶಿವನನ್ನು ಸ್ತೋತ್ರಮಾಡಿದರು. ಅನಂತರ ದೇವತೆಗಳು ಸೋತು ಹೋಗಿ ಕ್ಷಣಕಾಲದಲ್ಲಿಯೇ ನಿರ್ವೀರ್ಯರಾದರು. ದೇವತೆಗಳು ಇಂದ್ರನೊಡನೆ ಭಯಗೊಂಡು ಪುನಃ ನಾರಾಯಣನನ್ನೇ ಆಶ್ರಯಿಸಿದರು. ಪುರುಷೋತ್ತಮನಾದ ವಿಷ್ಣುವು ಅವರನ್ನು ನೋಡಿ ಚಿಂತಾಕ್ರಾಂತನಾದನು. ಅವನು ದುಃಖ ಪಡುತ್ತಿರುವ ಇಂದ್ರಾದಿ ದೇವತೆಗಳ ಕಾರ್ಯವನ್ನು ಹೇಗೆ ನಿರ್ವಹಿಸಲಿ? ಎಂದು ಚಿಂತೆಗೊಳಗಾದನು. ರಾಕ್ಷಸರ ಬಲವನ್ನು ಹೇಗೆ ನಾಶಮಾಡಲಿ ? ಎಂದು ನಾರಾಯಣನು ಯೋಚಿಸ ತೊಡಗಿದನು.

೬೬–೬೮. ಬ್ರಹ್ಮನ ಪ್ರಸಾದದಿಂದ ನಾನು ದೇವತೆಗಳ ಕಾರ್ಯವನ್ನು ನಿರ್ವಹಿಸುವ ಬಗೆ ಹೇಗೆ? ವಿಚಾರಮಾಡಿದರೆ ಧರ್ಮಮಾಡುವವರಿಗೆ ಪಾಪವಿಲ್ಲವೆಂಬುದು ಗೊತ್ತಾಗಿರುತ್ತದೆ. ಆದ್ದರಿಂದ ಉಪಸದ್ಯಾಗದಿಂದ

**ತಸ್ಮಾದವಧ್ಯತಾಂ ಪ್ರಾಪ್ತಾ ನಾಽನ್ಯಥಾ ದ್ವಿಜಪುಂಗವಾಃ ।**
**ಕೃತ್ವಾಽಪಿ ಸುಮಹತ್ಪಾಪಂ ರುದ್ರಮಭ್ಯರ್ಚಯಂತಿ ಯೇ ॥೬೯॥**
**ಮುಚ್ಯಂತೇ ಪಾತಕೈಃ ಸರ್ವೈಃ ಪದ್ಮಪತ್ರಮಿವಾಂಭಸಾ ।**
**ಪೂಜಯಾ ಭೋಗಸಂಪತ್ತಿಃ ಅವಶ್ಯಂ ಜಾಯತೇ ದ್ವಿಜಾಃ ॥೭೦॥**
**ತಸ್ಮಾತ್ತೇ ಭೋಗಿನೋ ದೈತ್ಯಾ ಲಿಂಗಾರ್ಚನಪರಾಯಣಾಃ ।**
**ದೈತ್ಯಾನಾಂ ದೇವಕಾರ್ಯಾರ್ಥಂ ಜೇಷ್ಯೇಽಹಂ ತ್ರಿಪುರಂ ಕ್ಷಣಾತ್॥**
**ತಸ್ಮಾತ್ಕೃತ್ವಾ ಧರ್ಮವಿಘ್ನಮಹಂ ದೇವಾಃ ಸ್ವಮಾಯಯಾ ।**

**॥ ಸೂತ ಉವಾಚ ॥**

**ವಿಚಾರ್ಯೈವಂ ತತಸ್ತೇಷಾಂ ಭಗವಾನ್ಪುರುಷೋತ್ತಮಃ ।**
**ಕರ್ತುಂ ವ್ಯವಸಿತಶ್ಚಾಭೂದ್ಧರ್ಮವಿಘ್ನಂ ಸುರಾರಿಣಾಂ ॥೭೧॥**

---

ಉತ್ಪನ್ನರಾದ ಭೂತಗಳಿಂದಲೂ ದೈತ್ಯರು ನಾಶಮಾಡಲ್ಪಡಲಿಲ್ಲ. ಧರ್ಮದಿಂದ ಪಾಪವು ತೊಲಗುವುದು. ಧರ್ಮದಿಂದಲೇ ಎಲ್ಲವೂ ನಿಂತಿರುವುದು ಧರ್ಮದಿಂದಲೇ ಐಶ್ವರ್ಯ ಪ್ರಾಪ್ತಿಯು ಎಂದು ಪ್ರಾಚೀನವಾದ ವೇದವು ಸಾರುತ್ತಿದೆ. ತ್ರಿಪುರದಲ್ಲಿ ವಾಸಮಾಡುವ ಎಲ್ಲಾ ರಾಕ್ಷಸರೂ ಧರ್ಮ ಮಾಡುವವರು. ಎಲೈ ಬ್ರಾಹ್ಮಣಶ್ರೇಷ್ಠರೇ, ಆದ್ದರಿಂದಲೇ ಈ ರಾಕ್ಷಸರು ಕೊಲ್ಲಲ್ಪಡಲಾರರು. ಏಕೆಂದರೆ ಅವರು ಬೇಕಾದಷ್ಟು ಪಾಪಮಾಡಿದ್ದರೂ ಈಶ್ವರ ಪೂಜೆಯನ್ನು ಮಾಡುತ್ತಾರೆ.

೭೦–೭೧. ಇವರು ಪಾಪಮಾಡಿದರೂ ಧರ್ಮಮಾಡುವುದರಿಂದ ಕಮಲದ ಎಲೆಯ ಮೇಲಿನ ನೀರಿನ ತೊಟ್ಟುಗಳಂತೆ ಪಾಪಸಂಬಂಧವುಳ್ಳವರಾಗಿಲ್ಲ. ಎಲೈ ಬ್ರಾಹ್ಮಣರೇ, ಈಶ್ವರಪೂಜೆಯಿಂದ ಬೇಕಾದಷ್ಟು ಭೋಗಗಳೂ ಖಂಡಿತವಾಗಿ ಲಭಿಸುತ್ತವೆ. ಆದ್ದರಿಂದಲೇ ಲಿಂಗಪೂಜೆಯನ್ನು ಮಾಡುತ್ತಾ ರಾಕ್ಷಸರು ಅನೇಕ ಭೋಗಗಳನ್ನು ಅನುಭವಿಸುತ್ತಿದ್ದಾರೆ. ಎಲೈ ದೇವತೆಗಳೇ, ಆದ್ದರಿಂದ ನಾನು ನನ್ನ ಮಾಯೆಯಿಂದ ರಾಕ್ಷ

ಅಸೃಜಚ್ಚ ಮಹಾತೇಜಾಃ ಪುರುಷಂ ಚಾತ್ಮಸಂಭವಂ ।
ಮಾಯೀ ಮಾಯಾಮಯಂ ತೇಷಾಂ ಧರ್ಮವಿಘ್ನಾರ್ಥಮಚ್ಯುತಃ

ಶಾಸ್ತ್ರಂಚ ಶಾಸ್ತಾ ಸರ್ವೇಷಾ ಮಕರೋ ತ್ಕಾಮರೂಪಧೃಕ್ ।
ಸರ್ವ ಸಂಮೋಹನಂ ಮಾಯೀ ದೃಷ್ಟಪ್ರತ್ಯಯಸಂಯುತಂ ॥೭೪॥

ಏತತ್ಸಾಂಗ ಭವಾಯ್ಯೈವ ಪುರುಷಾಯೋಽಪದೃಶ್ಯ ತು ।
ಮಾಯೀ ಮಾಯಾ ಮಯಂ ಶಾಸ್ತ್ರಂ ಗ್ರನ್ಥಷೋಡಶ ಲಕ್ಷಕಂ ॥

ಶ್ರೌತಸ್ಮಾರ್ತ ವಿರುದ್ಧಂ ಚ ವರ್ಣಾಶ್ರಮ ವಿವರ್ಜಿತಂ ।
ಇಹೈವ ಸ್ವರ್ಗ ನರಕಂ ಪ್ರತ್ಯಯಂ ನಾಽನ್ಯಥಾ ಪುನಃ ॥೭೬॥

ತಚ್ಛಾಸ್ತ್ರ ಮುಪದಿಶ್ಯೈವ ಪುರುಷಾಯಾಚ್ಯುತಃ ಸ್ವಯಂ ।
ಪುರತ್ರಯ ವಿನಾಶಾಯ ಪ್ರಾಹೈನಂ ಪುರುಷೋ ಹರಿಃ ॥೭೭॥

---

ಸರ ಧರ್ಮಾಚರಣೆಗೆ ವಿಘ್ನವನ್ನುಮಾಡಿ ನಿಮಗೆ ಸೌಕರ್ಯಕ್ಕಾಗಿ ಒಂದು ಕ್ಷಣಕಾಲದಲ್ಲಿಯೇ ತ್ರಿಪುರವನ್ನು ಜಯಿಸುವೆನು. ಸೂತನು ಹೇಳಿದನು :– ಪುರುಷೋತ್ತಮನಾದ ವಿಷ್ಣುವು ಹೀಗೆ ವಿಚಾರಮಾಡಿ ರಾಕ್ಷಸರ ಧರ್ಮಾಚರಣೆಗೆ ವಿಘ್ನವನ್ನು ತಂದೊಡ್ಡಲು ನಿಶ್ಚೈಸಿದನು.

೭೩–೭೭. ಬಹಳ ತೇಜಸ್ವಿಯಾದ ಶ್ರೀ ನಾರಾಯಣನು ರಾಕ್ಷಸರ ಧರ್ಮಕಾರ್ಯದ ವಿಘ್ನಕ್ಕಾಗಿ ತನ್ನ ಮಾಯಾ ಸ್ವರೂಪದಿಂದ ಮಾಯಾವಿಯಾದ ಒಬ್ಬ ಪುರುಷನನ್ನು ಸೃಷ್ಟಿಸಿದನು. ಅನೇಕ ರೂಪಗಳನ್ನು ಧರಿಸಲು ಶಕ್ತನಾದ, ಮಾಯಾ ಸ್ವರೂಪವನ್ನರಿತಿರುವ, ನಾರಾಯಣನು ಮೋಹಗೊಳಿಸುವ, ಕಣ್ಣಿಗೆ ಕಾಣುವ, ಪ್ರಪಂಚವನ್ನು ಮಾತ್ರವೇ ನಂಬುವ ಜನರಿಗೆ ಪ್ರಿಯವಾದ ಶಾಸ್ತ್ರವನ್ನೂ ತತ್ಕ್ಷಣ ರಚಿಸಿದನು. ವಿಷ್ಣುವು ತನ್ನ ಶರೀರದಿಂದ ಉದ್ಭವಿಸಿದ ಪುರುಷನಿಗೆ ಹದಿನಾರು ಲಕ್ಷ ಶ್ಲೋಕಗಳಿಂದ ಕೂಡಿದ, ಬಹಳ ವಿಸ್ತಾರವಾದ ಈ ಮಾಯಾ ಶಾಸ್ತ್ರವನ್ನು ಉಪದೇಶಮಾಡಿದನು. ಈ ಮಾಯಾಶಾಸ್ತ್ರವು ಶ್ರೌತಸ್ಮಾರ್ತ ವರ್ಣಾಶ್ರಮ ಧರ್ಮಗಳಿಗೆ ವಿರುದ್ಧವಾಗಿಯೂ ಇತ್ತು. ಈ ಶಾಸ್ತ್ರವನ್ನು ನಂಬಿದವರು ಈ ಪ್ರಪಂಚದಲ್ಲೇ ಸ್ವರ್ಗ ಮತ್ತು ನರಕಗಳಿವೆ

**ಗಂತುಮರ್ಹಸಿ ನಾಶಾಯ ಭೋ ತೂರ್ಣಂ ಪುರವಾಸಿನಾಂ ।**
**ಧರ್ಮಾಸ್ತಥಾ ಪ್ರಣಶ್ಯಂತು ಶ್ರೌತಸ್ಮಾರ್ತಾ ನ ಸಂಶಯಃ ॥೭೮॥**
**ತತಃ ಪ್ರಣಮ್ಯ ತಂ ಮಾಯೀ ಮಾಯಾಶಾಸ್ತ್ರ ವಿಶಾರದಃ ।**
**ಪ್ರವಿಶ್ಯ ತತ್ಪುರಂ ತೂರ್ಣಂ ಮುನಿ ರ್ಮಾಯಾಂ ತದಾಽಕರೋತ್॥**
**ಮಾಯಯಾ ತಸ್ಯ ತೇ ದೈತ್ಯಾಃ ಪುರತ್ರಯ ನಿವಾಸಿನಃ ।**
**ಶ್ರೌತಂ ಸ್ಮಾರ್ತಂ ಚ ಸಂತ್ಯಜ್ಯ ತಸ್ಯ ಶಿಷ್ಯಾ ಸ್ತದಾಽಭವನ್ ॥೮೦॥**
**ತತ್ಯಜುಶ್ಚ ಮಹಾದೇವಂ ಶಂಕರಂ ಪರಮೇಶ್ವರಂ ।**
**ನಾರದೋಽಪಿ ತದಾ ಮಾಯೀ ನಿಯೋಗಾ ನ್ಮಾಯಿನಃ ಪ್ರಭೋಃ॥**
**ಪ್ರವಿಶ್ಯ ತತ್ಪುರಂ ತೇನ ಮಾಯಿನಾ ಸಹ ದೀಕ್ಷಿತಃ ।**
**ಮುನಿಃ ಶಿಷ್ಯೈಃ ಪ್ರಶಿಷ್ಯೈಶ್ಚ ಸಂವೃತಃ ಸರ್ವತಃ ಸ್ವಯಂ ॥೮೨॥**

---

ಯೆಂಬುದಾಗಿಯೂ, ಇದು ವಿನಾ ಬೇರೆ ಪ್ರಪಂಚವಿಲ್ಲವೆಂದೂ ನಂಬುವರು. ನಾರಾಯಣನು ತಾನಾಗಿಯೇ ಈ ಶಾಸ್ತ್ರವನ್ನು ಈ ಮಾಯಾಸ್ವರೂಪನಾದ ಪುರುಷನಿಗೆ ಉಪದೇಶಮಾಡಿದನು. ಅನಂತರ ಶ್ರೀ ವಿಷ್ಣುವು ಈ ಪುರುಷನಿಗೆ ತ್ರಿಪುರವನ್ನು ನಾಶಮಾಡಲು ಹೋಗೆಂದು ಅಪ್ಪಣೆ ಮಾಡಿದನು.

೭೮–೮೦. ಎಲೈ ಪುರುಷನೇ, ತ್ರಿಪುರವಾಸಿಗಳ ನಾಶಕ್ಕಾಗಿ ಜಾಗ್ರತೆಯಾಗಿ ನೀನು ಹೋಗಬೇಕು. ಹಾಗಾದರೆ ಅಲ್ಲಿರುವ ಶ್ರೌತ ಸ್ಮಾರ್ತಧರ್ಮಗಳೆಲ್ಲವೂ ನಾಶವಾಗುವುದರಲ್ಲಿ ಸಂದೇಹವಿಲ್ಲ. ಆಗ ಮಾಯಾ ಶಾಸ್ತ್ರದಲ್ಲಿ ಪಂಡಿತನಾದ, ಮಾಯಾವಿಯಾದ, ಪುರುಷನು ವಿಷ್ಣುವಿಗೆ ನಮಸ್ಕರಿಸಿ, ತ್ರಿಪುರವನ್ನು ಶೀಘ್ರವಾಗಿಹೊಕ್ಕು, ಅಲ್ಲಿ ತನ್ನ ಮಾಯೆಯನ್ನು ಬೀಸಿದನು. ಈ ಪುರುಷನ ಮಾಯೆಯಿಂದ ತ್ರಿಪುರವಾಸಿಗಳಾದ ರಾಕ್ಷಸರೆಲ್ಲರೂ ತಂತಮ್ಮ ಶ್ರೌತಸ್ಮಾರ್ತ ಕರ್ಮಗಳನ್ನು ಬಿಟ್ಟು ಈ ಪುರುಷನಿಗೆ ಶಿಷ್ಯರಾದರು.

೮೧–೮೩. ತ್ರಿಪುರವಾಸಿಗಳಾದ ರಾಕ್ಷಸರು ಮಹಾದೇವನಾದ ಪರಮೇಶ್ವರನ ಪೂಜೆಯನ್ನು ಬಿಟ್ಟುಬಿಟ್ಟರು. ಆಗ ಮಾಯಿಯಾದ ವಿಷ್ಣು

ಸ್ತ್ರೀ ಧರ್ಮಂ ಚಾಕರೋತ್ ಸ್ತ್ರೀಣಾಂ ದುಶ್ಚಾರ ಫಲ ಸಿದ್ಧಿದಂ ।
ಚಕ್ರುಸ್ತಾಃ ಸರ್ವದಾ ಲಬ್ಧ್ವಾ ಸದ್ಯ ಏವ ಫಲಂ ಸ್ತ್ರಿಯಃ ॥೮೩॥
ಜನಾಸಕ್ತಾ ಬಭೂವುಸ್ತಾ ವಿನಿಂದ್ಯ ಪತಿದೇವತಾಃ ।
ಅದ್ಯಾಪಿ ಗೌರವಾತ್ತಸ್ಯ ನಾರದಸ್ಯ ಕಲೌ ಮುನೇಃ ॥೮೪॥
ನಾರ್ಯಶ್ಚರಂತಿ ಸಂತ್ಯಜ್ಯ ಭರ್ತೄನ್ ಸ್ವೈರಂ ವೃಥಾಽಧರ್ಮಾಃ ।
ಸ್ತ್ರೀಣಾಂ ಮಾತಾ ಪಿತಾ ಬಂಧುಃ ಸಖಾ ಮಿತ್ರಂಚ ಬಾಂಧವಃ॥೮೫
ಭರ್ತಾ ಏವ ನ ಸಂದೇಹ ಸ್ತಥಾಽಪ್ಯಾ ಸಹ ಮಾಯಯಾ ।
ಕೃತ್ವಾಽಪಿ ಸುಮಹತ್ಪಾಪಂ ಯಾ ಭರ್ತುಃ ಪ್ರೇಮ ಸಂಯುತಾ ॥
ಪ್ರಾಪ್ನುಯಾ ತ್ಪರಮಂ ಸ್ವರ್ಗಂ ನರಕಂ ಚ ವಿಪರ್ಯಯಾತ್ ।
ಪುರೈಕಾ ಮುನಿ ಶಾರ್ದೂಲಾಃ ಸರ್ವಧರ್ಮಾನ್ ಸದಾ ಪತಿಂ ॥

---

ವಿನಿಂದ ಅಪ್ಪಣೆಮಾಡಲ್ಪಟ್ಟ ನಾರದನೂ ಸಹ ಆ ಮಾಯಾ ಪುರುಷನನ್ನು ಹಿಂಬಾಲಿಸಿದನು. ತ್ರಿಪುರದಲ್ಲಿ ಮಾಯಾ ಪುರುಷನೊಂದಿಗೆ ನಾರದನೂ ತನ್ನ ಶಿಷ್ಯ ಮತ್ತು ಅವರ ಶಿಷ್ಯರೊಂದಿಗೆ ಕೂಡಿದವನಾಗಿ ಮಾಯಾ ಶಾಸ್ತ್ರಪ್ರಚಾರದಲ್ಲಿ ಆಸಕ್ತನಾದನು. ಈ ಮಾಯಾ ಪುರುಷನು ಸ್ತ್ರೀಯರಿಗೆ ವ್ಯಭಿಚಾರವು ಧರ್ಮವೆಂದು ತಿಳಿಯುವ ಹಾಗೆ ಮಾಡಿದನು. ಸ್ತ್ರೀಯರು ಹೀಗೆ ಕೆಟ್ಟ ಚಾಳಿಗಳನ್ನು ನಡೆಯಿಸುವವರಾಗಿ ಅದರ ಫಲವನ್ನು ತಕ್ಷಣ ದಲ್ಲಿಯೇ ಅನುಭವಿಸಿದರು.

೮೪–೮೭. ಸ್ತ್ರೀಯರು ತಮ್ಮ ದೇವರಂಥಾ ಪತಿಗಳನ್ನು ನಿಂದಿಸುತ್ತಾ ಪರಪುರುಷರಲ್ಲಿ ಪ್ರೀತಿಯನ್ನು ತೋರಿಸಿದರು. ಈ ಕಲಿಯುಗ ದಲ್ಲಿ ನಾರದ ಮುನಿಯ ಅಭಿಪ್ರಾಯವನ್ನು ಮೆಚ್ಚಿ ಸ್ತ್ರೀಯರು ತಮ್ಮ ಪತಿಗಳನ್ನು ಬಿಟ್ಟು ಅಧರ್ಮಪರರಾಗಿ ಸ್ವೇಚ್ಛೆಯಾಗಿ ನೆಡೆಯುತ್ತಾರೆ. ಸ್ತ್ರೀಯರಿಗೆ ಯಾವಾಗಲೂ ತಮ್ಮ ತಮ್ಮ ಪತಿಗಳೇ ತಾಯಿ, ತಂದೆ, ನೆಂಟ, ಸ್ನೇಹಿತ, ಎಲ್ಲವೂ ಆಗಿದ್ದಾರೆ. ಆದರೂ ಮಾಯೆಯಿಂದ ಈ ರೀತಿ ನಡೆವಳಿಯಲ್ಲಿ ವ್ಯತ್ಯಾಸವಾಯಿತು. ಯಾವ ಸ್ತ್ರೀಯು ಎಷ್ಟೇ ಪಾಪಿಷ್ಠಳಾಗಿದ್ದಾಗ್ಯೂ ತನ್ನ ಗಂಡನಲ್ಲಿಯೇ ನಿಜವಾದ ಭಕ್ತಿಯನ್ನು ತೋರಿಸುತ್ತಾಳೆಯೋ ಅವಳಿಗೆ ಸ್ವರ್ಗ ಪ್ರಾಪ್ತಿಯಾಗುವುದು. ಹಾಗಿಲ್ಲದಿದ್ದರೆ ನರಕವನ್ನು ಹೊಂದುವಳು. ಎಲೈ ಋಷಿಶ್ರೇಷ್ಠರೇ, ಹಿಂದೆ ಒಬ್ಬಳು ತನ್ನ ಗಂಡನನ್ನು ಬಿಟ್ಟು ಎಲ್ಲಾ ಧರ್ಮವನ್ನೂ ಆಚರಿಸಿದರೂ ದುರ್ಗತಿಯನ್ನೇ ಪಡೆದಳು.

**ಸಂತ್ಯಜ್ಯಾಽಪೂಜಯನ್ ನ್ಯಾಸ್ಥೇ್ಯೋ ದೇವಾನ ನ್ಯಾನ್ಜಗದ್ಗುರೂನ್ ।**
**ತಾಃ ಸ್ವರ್ಗಲೋಕಮಾಸಾದ್ಯ ಮೋದಂತೇ ವಿಗತ ಜ್ವರಾಃ ॥೮೮॥**
**ನರಕಂ ಚ ಜಗಾಮಾಽನ್ಯಾ ತಸ್ಮಾದ್ಭರ್ತಾ ಪರಾ ಗತಿಃ ।**
**ತಥಾಽಪಿ ಭರ್ತ್ನ್ಯಾನ್ ಸ್ವಾಂಸ್ತ್ಯಕ್ತ್ವಾ ಬಭೂವುಃ ಸ್ವೈರ ವೃತ್ತಯಃ ॥**
**ಮಾಯಯಾ ದೇವದೇವಸ್ಯ ವಿಷ್ಣೋಸ್ತಸ್ಯಾಜ್ಞಯಾ ಪ್ರಭೋಃ ।**
**ಅಲಕ್ಷ್ಮೀಶ್ಚ ಸ್ವಯಂ ತಸ್ಯ ನಿಯೋಗಾತ್ತ್ರಿಪುರಂ ಗತಾ ॥೯೦॥**
**ಯಾ ಲಕ್ಷ್ಮೀಸ್ತಪಸಾ ತೇಷಾಂ ಲಬ್ಧಾ ದೇವೇಶ್ವರಾ ದಜಾತ್ ।**
**ಬಹಿರ್ಗತಾ ಪರಿತ್ಯಜ್ಯ ನಿಯೋಗಾ ದ್ಬ್ರಹ್ಮಣಃ ಪ್ರಭೋಃ ॥೯೧॥**
**ಬುದ್ಧಿ ಮೋಹಂ ತಥಾ ಭೂತಂ ವಿಷ್ಣುಮಾಯಯಾ ವಿನಿರ್ಮಿತಂ ।**
**ತೇಷಾಂ ದತ್ವಾ ಕ್ಷಣಂ ದೇವಃ ತಾಸಾಂ ಮಾಯೀ ಚ ನಾರದಃ ॥**

---

೮೮–೯೦. ಬೇರೆ ಕೆಲವು ಪತಿವ್ರತಾ ಸ್ತ್ರೀಯರಾದರೋ ಜಗತ್ತಿನಲ್ಲಿ ತಮಗೆ ಶ್ರೇಷ್ಠ ವಸ್ತುಗಳಾದ ತಮ್ಮ ಪತಿಗಳನ್ನೇ ಪೂಜಿಸಲು, ದುಃಖ ವಿಮುಕ್ತರಾಗಿ ಸ್ವರ್ಗ ಲೋಕದಲ್ಲಿ ಆನಂದದಿಂದಿದ್ದರು. ಇನ್ನೊಬ್ಬ ಳಾದರೋ ನರಕವನ್ನು ಹೊಂದಿದಳು. ಆದ್ದರಿಂದ ಸ್ತ್ರೀಗೆ ಗಂಡನೇ ಶ್ರೇಷ್ಠನಾದ ರಕ್ಷಕನೆಂದು ತಿಳಿಯಬೇಕು. ಹೀಗಿದ್ದರೂ ಆಗ ತ್ರಿಪುರ ದಲ್ಲಿ ತಂತಮ್ಮ ಗಂಡಂದಿರನ್ನೇ ಬಿಟ್ಟು ಸ್ತ್ರೀಯರು ಸ್ವೇಚ್ಛಾವೃತ್ತಿಯುವ ರಾದರು. ಇದಕ್ಕೆ ದೇವಾಧಿದೇವನಾದ ವಿಷ್ಣುವಿನ ಮಾಯೆಯೇ ಕಾರಣವು. ಅಲ್ಲದೇ ಭಗವದಿಚ್ಛೆಯಂತೆ ತ್ರಿಪುರದ ರಾಜ್ಯಲಕ್ಷ್ಮಿಯೂ ಕಳೆ ಗುಂದುತ್ತಾ ಬಂದಳು.

೯೧–೯೨. ತ್ರಿಪುರದ ರಾಕ್ಷಸರು ತಪಸ್ಸಿನಿಂದ ಉತ್ಪತ್ತಿರಹಿತನಾದ ಬ್ರಹ್ಮನನ್ನು ಸಂತೋಷಪಡಿಸಿ ಯಾವ ರಾಜ್ಯ ಲಕ್ಷ್ಮಿಯನ್ನು ಸಂಪಾದಿ ಸಿದ್ದರೋ ಅದು ಭಗವಂತನ ಮಾಯೆಯಿಂದ ಆ ಪಟ್ಟಣವನ್ನು ಬಿಟ್ಟು ಹೊರಟು ಹೋಯಿತು. ಮಾಯಾವಿಯಾದ ನಾರದನು ವಿಷ್ಣುಮಾಯೆ ಯಿಂದ ಉಂಟಾದ ಆ ಮೋಹಕವಾದ ಮಾಯೆಯ ಬಲೆಯಿಂದ ಕ್ಷಣಕಾಲ ಈ ರೀತಿಯಾಗಿ ತ್ರಿಪುರವಾಸಿಗಳಿಗೆ ಬುದ್ಧಿಮೋಹವನ್ನು ಉಂಟು ಮಾಡಿದನು.

ಸುಖಾಸೀನೌ ಹ್ಯಸಂಭ್ರಾಂತೌ ಧರ್ಮ ವಿಘ್ನಾರ್ಥಮವ್ಯಯೌ ।
ಏವಂ ನಷ್ಟೇ ತದಾ ಧರ್ಮೇ ಶ್ರೌತಸ್ಮಾರ್ತೇ ಸುಶೋಭನೇ ॥೯೩॥
ಪಾಷಂಡೇ ಖ್ಯಾಪಿತೇ ತೇನ ವಿಷ್ಣುನಾ ವಿಶ್ವಯೋನಿನಾ ।
ತ್ಯಕ್ತೇ ಮಹೇಶ್ವರೇ ದೈತ್ಯೈ ಸ್ತ್ಯಕ್ತೇ ಲಿಂಗಾರ್ಚನೇ ತಥಾ ॥೯೪॥
ಸ್ತ್ರೀಧರ್ಮೇ ನಿಖಿಲೇ ನಷ್ಟೇ ದುರಾಚಾರೇ ವ್ಯವಸ್ಥಿತೇ ।
ಕೃತಾರ್ಥ ಇವ ದೇವೇಶೋ ದೇವೈಃ ಸಾರ್ಧಮುಮಾಪತಿಂ ॥೯೫॥
ತಪಸಾ ಪ್ರಾಪ್ಯ ಸರ್ವಜ್ಞಂ ತುಷ್ಟಾವ ಪುರುಷೋತ್ತಮಃ ।

॥ ಶ್ರೀ ಭಗವಾನುವಾಚ ॥

ಮಹೇಶ್ವರಾಯ ದೇವಾಯ ನಮಸ್ತೇ ಪರಮಾತ್ಮನೇ ॥೯೬॥
ನಾರಾಯಣಾಯ ಶರ್ವಾಯ ಬ್ರಹ್ಮಣೇ ಬ್ರಹ್ಮರೂಪಿಣೇ ।
ಶಾಶ್ವತಾಯ ಹ್ಯನಂತಾಯ ಅವ್ಯಕ್ತಾಯ ಚ ತೇ ನಮಃ ॥೯೭॥

---

೯೩–೯೫. ಹೀಗೆ ತ್ರಿಪುರದಲ್ಲಿ ಧರ್ಮಕಾರ್ಯಕ್ಕೆ ವಿಘ್ನವನ್ನು ತಂದೊಡ್ಡಿ ಮಾಯಾವಿಗಳಾದ ನಾರದನೂ ಮತ್ತು ಮಾಯಾ ಪುರುಷನೂ ಸುಖವಾಗಿ ನಿರಾತಂಕವಾಗಿ ಸ್ಥಿರವಾಗಿದ್ದರು. ಈ ರೀತಿ ಮಂಗಳಕರ ವಾದ ಶ್ರೌತಸ್ಮಾರ್ತಧರ್ಮಗಳು ತ್ರಿಪುರದಲ್ಲಿ ನಷ್ಟವಾಗಲು, ಪ್ರಪಂಚಕ್ಕೆ ಕಾರಣನಾದ ವಿಷ್ಣುವಿನಿಂದ ಆ ಪಟ್ಟಣಗಳಲ್ಲಿ ನೀಚವ್ಯಾಪಾರಗಳಲ್ಲಿ ಮೋಹವುಂಟಾಗುವಂತೆ ಮಾಡಲ್ಪಡಲಾಗಿ, ಅಲ್ಲಿನ ಪಟ್ಟಣಿಗರೆಲ್ಲರೂ ಮಹೇಶ್ವರನ ಪೂಜೆಯನ್ನೂ, ಲಿಂಗಪೂಜೆಯನ್ನು ಬಿಟ್ಟು ಬಿಟ್ಟರು. ಸ್ತ್ರೀಯರು ತಮ್ಮ ಧರ್ಮಗಳನ್ನು ಬಿಟ್ಟು ದುರಾಚಾರಿಗಳಾದರು. ಹೀಗೆ ತನ್ನ ಪ್ರಯತ್ನವು ಫಲಿಸಲು ವಿಷ್ಣುವು ತೃಪ್ತನಾಗಿ ಭಗವಂತನಾದ ಶಿವನನ್ನು ದೇವತೆಗಳೊಂದಿಗೆ ಧ್ಯಾನಿಸಿದನು.

೯೬–೯೯. ವಿಷ್ಣುವು ಸರ್ವಜ್ಞನಾದ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಸ್ತೋತ್ರ ಮಾಡಿದನು. ಶ್ರೀ ವಿಷ್ಣುವು ಹೇಳಿದನು :–ಮಹೇಶ್ವರನೂ, ಬ್ರಹ್ಮಸ್ವರೂಪನೂ, ನಿತ್ಯನೂ, ನಾಶರಹಿತನೂ, ಪಂಚೇಂದ್ರಿಯ ಮತ್ತು ಮನಸ್ಸು, ಇವುಗಳಿಗೂ ಅಗೋಚರನೂ, ಆದ ಶಿವನಿಗೆ ನಮಸ್ಕಾರ

॥ ಸೂತ ಉವಾಚ ॥

ಏವಂ ಸ್ತುತ್ವಾ ಮಹಾದೇವಂ ದಂಡವತ್ಪ್ರಣಿಪತ್ಯ ಚ ।
ಜಜಾಪ ರುದ್ರಂ ಭಗವಾನ್ಕೋಟಿವಾರಂ ಜಲೇ ಸ್ಥಿತಃ ॥೯೮॥
ದೇವಾಶ್ಚ ಸರ್ವೇ ತೇ ದೇವಂ ತುಷ್ಟುವುಃ ಪರಮೇಶ್ವರಂ ।
ಸೇಂದ್ರಾಃ ಸಸಾಧ್ಯಾಃ ಸಯಮಾಃ ಸರುದ್ರಾಃ ಸಮರುದ್ಗಣಾಃ ॥

॥ ದೇವಾ ಊಚು ॥

ನಮಃ ಸರ್ವಾತ್ಮನೇ ತುಭ್ಯಂ ಶಂಕರಾಯಾರ್ತಿಹಾರಿಣೇ ।
ರುದ್ರಾಯ ನೀಲರುದ್ರಾಯ ಕದ್ರುದ್ರಾಯ ಪ್ರಚೇತಸೇ ॥೧೦೦॥
ಗತಿರ್ನಃ ಸರ್ವದಾಽಸ್ಮಾಭಿ ರ್ವಂದ್ಯೋ ದೇವಾರಿ ಮರ್ದನಃ ।
ತ್ವಮಾದಿ ಸ್ತ್ವಮನಂತಶ್ಚ ಅನಂತಶ್ಚಾಕ್ಷಯಃ ಪ್ರಭುಃ ॥೧೦೧॥
ಪ್ರಕೃತಿಃ ಪುರುಷಃ ಸಾಕ್ಷಾತ್ಸ್ರಷ್ಟಾ ಹರ್ತಾ ಜಗದ್ಗುರೋ ।
ತ್ರಾತಾ ನೇತಾ ಜಗತ್ಯಸ್ಮಿನ್ದ್ವಿಜಾನಾಂ ದ್ವಿಜವತ್ಸಲ ॥೧೦೨॥

---

ಮಾಡುವೆನು. ಸೂತನು ಹೇಳಿದನು :–ವಿಷ್ಣುವು ಹೀಗೆ ಶಿವನನ್ನು ಸ್ತೋತ್ರಮಾಡಿ, ಸಾಷ್ಟಾಂಗ ಪ್ರಣಾಮವನ್ನೂ ಮಾಡಿ ನೀರಿನಲ್ಲಿ ನಿಂತು ಒಂದು ಕೋಟಿಸಲ ರುದ್ರಸೂಕ್ತವನ್ನು ಜಪಿಸಿದನು. ಇತರ ದೇವತೆಗಳೂ ಇಂದ್ರ,ಸಾಧ್ಯರೆಂಬ ದೇವತೆಗಳ ಪಂಗಡದವರು, ಯಮ, ರುದ್ರ, ಮತ್ತು ಇತರ ದೇವತೆಗಳು, ಇವರೊಡನೆ ಸ್ತೋತ್ರವನ್ನು ಮಾಡಿದರು.

೧೦೦–೧೦೨. ದೇವತೆಗಳು ಹೇಳಿದರು :–ಓ ಶಿವನೇ, ನೀನು ಲೋಕಕ್ಕೆ ಕ್ಷೇಮವನ್ನುಂಟುಮಾಡುವವನೂ, ಲೋಕದ ಕಷ್ಟಗಳನ್ನು ನಿವಾರಿಸುವವನೂ, ಸರ್ವಸ್ವರೂಪನೂ ಆಗಿದ್ದೀಯೆ. ರುದ್ರನಾಗಿ, ನೀಲ ರುದ್ರ ಸ್ವರೂಪನಾದ, ಕದ್ರುದ್ರಸ್ವರೂಪನೂ ಆದ, ವರುಣ ಸ್ವರೂಪನೂ ಆದ, ನೀನು ನಮಗೆ ಯಾವಾಗಲೂ ರಕ್ಷಕನು. ದೇವತೆಗಳಿಗೆ ಶತ್ರುಗಳಾದ ರಾಕ್ಷಸರನ್ನು ನಾಶಮಾಡುವ ನೀನು ನಾವು ನಮಸ್ಕರಿಸಲು ಯೋಗ್ಯವಾದ ಪರತತ್ವವು. ನೀನು ಎಲ್ಲದಕ್ಕೂ ಮೊದಲಿನವನೂ, ಎಲ್ಲದಕ್ಕೂ ಕೊನೆಯೂ, ನಾಶರಹಿತನೂ, ಲೋಕೇಶನೂ, ಆಗಿದ್ದೀಯೆ.

ವರದೋ ವಾಙ್ಮಯೋ ವಾಚ್ಯೋ ವಾಚ್ಯ ವಾಚಕ ವರ್ಜಿತಃ ।
ಯಾಜ್ಯೋ ಮುಕ್ತ್ಯರ್ಥ ಮೀಶಾನೋ ಯೋಗಿಭಿ ಯೋಗ
ವಿಭ್ರಮೈಃ ॥೧೦೩॥

ಹೃತ್ಪುಂಡರೀಕ ಸುಷಿರೇ ಯೋಗಿನಾಂ ಸಂಸ್ಥಿತಃ ಸದಾ ।
ವದಂತಿ ಸೂರಯಃ ಸಂತಂ ಪರಂ ಬ್ರಹ್ಮ ಸ್ವರೂಪಿಣಂ ॥೧೦೪॥

ಭವಂತಂ ತತ್ತ್ವಮಿತ್ಯಾರ್ಯಾ ಸ್ತೇಜೋರಾಶಿಂ ಪರಾತ್ಪರಂ ।
ಪರಮಾತ್ಮಾನ ಮಿತ್ಯಾಹು ರಸ್ಮಿನ್ಜಗತಿ ತದ್ವಿಭೋ ॥೧೦೫॥

ದೃಷ್ಟಂ ಶ್ರುತಂ ಸ್ಥಿತಂ ಸರ್ವಂ ಜಾಯಮಾನಂ ಜಗದ್ಗುರೋ ।
ಅಣೋ ರಲ್ಪತರಂ ಪ್ರಾಹು ರ್ಮಹತೋಽಪಿ ಮಹತ್ತರಂ ॥೧೦೬॥

---

ನೀನು ಪ್ರಕೃತಿ ಸ್ವರೂಪನೂ, ಪುರುಷನೂ. ತಾನಾಗಿಯೇ ಸೃಷ್ಟಿಕರ್ತನೂ ಜಗನ್ನಾಶಕನೂ, ಜಗತ್ತಿಗೆ ತಂದೆಯೂ, ಜಗದ್ರಕ್ಷಕನೂ, ಜಗತ್ತನ್ನು ನಡೆಸುವವನೂ, ಬ್ರಾಹ್ಮಣರಲ್ಲಿ ಅತ್ಯಂತ ಪ್ರೀತಿಯುಳ್ಳವನೂ ಆಗಿದ್ದೀಯೆ.

೧೦೩–೧೦೫. ನೀನು ವರವನ್ನು ನೀಡುವವನೂ, ವಾಕ್ಸ್ವರೂಪನೂ, ಪರಬ್ರಹ್ಮಸ್ವರೂಪನೂ,ಶಬ್ದದ ಅರ್ಥ ಸ್ವರೂಪನೂ, ನಿನ್ನ ಸ್ವರೂಪವನ್ನು ತಿಳಿಸುವ ಅರ್ಥವಾಗಲಿ, ಶಬ್ದವಾಗಲಿ ಇಲ್ಲದಿರುವಷ್ಟು ಗಹನ ಸ್ವಭಾವ ವುಳ್ಳವನೂ, ಯಾಗಕ್ಕೆ ಆರಾಧ್ಯ ದೇವತೆಯೂ. ಯೋಗಿಗಳಿಂದ ತಮ್ಮ ಯೋಗ ಮಹಿಮೆಯಿಂದ ಮುಕ್ತಿಗೋಸ್ಕರ ಆರಾಧಿಸಲ್ಪಡತಕ್ಕವನೂ, ಆಗಿದ್ದೀಯೆ. ಯಾವಾಗಲೂ ಯೋಗಿಗಳ ಮನಸ್ಸೆಂಬ ಕಮಲದ ಆಕಾಶ ದಲ್ಲಿ ವಾಸಿಸುವವನೂ,ವಿದ್ವಾಂಸರಿಂದ ಸಾಕ್ಷಾತ್ಪರಬ್ರಹ್ಮಸ್ವರೂಪನೆಂದು ಕರೆಯಲ್ಪಡುವವನೂ,ನಿತ್ಯನೂ ಆಗಿದ್ದೀಯೆ. ಆರ್ಯರು ನಿನ್ನನ್ನೇ ಪರತತ್ವ ಸ್ವರೂಪನಾದ, ತೇಜೋರಾಶಿಯಾದ ಪರಾತ್ಪರ ವಸ್ತುವೆಂದು ತಿಳಿಯು ವರು. ಓ ಸ್ವಾಮಿಯೇ, ಜಗತ್ತಿನಲ್ಲಿ ನಿನ್ನನ್ನೇ ಪರಮಾತ್ಮನೆಂದು ಕರೆಯುತ್ತಾರೆ.

೧೦೬–೧೦೮. ಓ ಜಗತ್ತಿಗೆ ತಂದೆಯಾದ ಶಿವನೇ, ಜಗತ್ತಿನಲ್ಲಿ ಕಂಡದ್ದು, ಕೇಳದ್ದು, ಇರುವುದು, ಮುಂದೆ ಹುಟ್ಟುವುದು, ಎಲ್ಲವೂ

**ಸರ್ವತಃ ಪಾಣಿಪಾದಂ ತ್ವಾಂ ಸರ್ವತೋಽಕ್ಷಿ ಶಿರೋಮುಖಂ ।**
**ಸರ್ವತಃ ಶ್ರುತಿ ಮಲ್ಲೋಕೇ ಸರ್ವ ಮಾವೃತ್ಯ ತಿಷ್ಠಸಿ ॥೧೦೭॥**

**ಮಹಾದೇವ ಮನಿರ್ದೇಶ್ಯಂ ಸರ್ವಜ್ಞಂ ತ್ವಾಮನಾಮಯಂ ।**
**ವಿಶ್ವರೂಪಂ ವಿರೂಪಾಕ್ಷಂ ಸದಾಶಿವ ಮನಾಮಯಂ ॥೧೦೮॥**

**ಕೋಟಿ ಭಾಸ್ಕರ ಸಂಕಾಶಂ ಕೋಟಿ ಶೀತಾಂಶು ಸನ್ನಿಭಂ ।**
**ಕೋಟಿ ಕಾಲಾಗ್ನಿ ಸಂಕಾಶಂ ಷಡ್ವಿಂಶಕ ಮನೀಶ್ವರಂ ॥೧೦೯॥**

**ಪ್ರವರ್ತಕಂ ಜಗತ್ಯಸ್ಮಿ ನ್ಪ್ರಕೃತೇಃ ಪ್ರಪಿತಾಮಹಂ ।**
**ವದಂತಿ ವರದಂ ದೇವಂ ಸರ್ವಾವಾಸಂ ಸ್ವಯಂಭುವಂ ॥೧೧೦॥**

**ಶ್ರುತಯಃ ಶ್ರುತಿಸಾರಂ ತ್ವಾಂ ಶ್ರುತಿಸಾರ ವಿದೋ ಜನಾಃ ॥೧೧೧॥**

**ಅದೃಷ್ಟ ಮಸ್ಮಾಭಿ ರನೇಕ ಮೂರ್ತೇ ।**
**ವಿನಾ ಕೃತಂ ಯದ್ಭವತಾಽಥಲೋಕೇ ॥**
**ತ್ವಮೇವ ದೈತ್ಯಾಸ್ಸುರ ಭೂತಸಂಘಾ ।**
**ದ್ದೇವಾನ್ನರಾ ನ್ಸ್ಥಾವರ ಜಂಗ ಮಾಂಶ್ಚ ॥೧೧೨॥**

---

ನೀನೇ ಆಗಿದ್ದೀಯೆ. ನೀನು ಅತ್ಯಂತ ಸಣ್ಣ ಪರಮಾಣುವಿಗಿಂತಲೂ, ಸಣ್ಣ ವನೂ, ಅತ್ಯಂತ ದೊಡ್ಡವಸ್ತುವಿಗಿಂತಲೂ ದೊಡ್ಡವನೂ, ಆಗಿದ್ದೀಯೆ. ನೀನು ಎಲ್ಲಾ ಕಡೆಯಲ್ಲಿಯೂ ಚಾಚಿದ ಅತಿದೀರ್ಘವಾದ ಕೈಕಾಲುಗಳುಳ್ಳ ವನೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ಕಣ್ಣು, ತಲೆ ಭುಜವುಳ್ಳವನೂ, ಎಲ್ಲಾ ಕಡೆಯಲ್ಲಿಯೂ ಕಿವಿಯುಳ್ಳವನೂ, ಎಲ್ಲವನ್ನೂ ಆವರಿಸಿಕೊಂಡಿರು ವವನೂ ಆಗಿದ್ದೀ. ನೀನು ಮಹಾದೇವನೂ, ಯಾವುದಕ್ಕೂ ಗೋಚರ ವಾಗದವನೂ, ಸರ್ವಜ್ಞನೂ, ರೋಗರಹಿತನೂ, ಪ್ರಪಂಚಸ್ವರೂಪನೂ, ವಿರೂಪಾಕ್ಷನೂ, ಸದಾಶಿವನೂ, ಮನೋರೋಗವಿಲ್ಲದವನೂ ಆಗಿರುವೆ.

೧೦೯-೧೧೨. ನೀನು ಕೋಟಿಸೂರ್ಯಪ್ರಕಾಶವುಳ್ಳವನೂ, ಕೋಟಿ ಚಂದ್ರನಿಗೆ ಸಮಾನನೂ,ಕೋಟಿ ಪ್ರಳಯ ಕಾಲದ ಅಗ್ನಿಗೆ ಸಮಾನನೂ, ನೀನಲ್ಲದೇ ಬೇರೊಬ್ಬನೊಡೆಯನಿಲ್ಲದವನೂ, ಈ ಪ್ರಪಂಚ ಸೃಷ್ಟಿಗೆ ಮೂಲಕಾರಣನಾದ ಪ್ರಕೃತಿಗೆ ಪ್ರೇರಕನೂ, ಈ ಜಗತ್ತಿನ ತಂದೆಗಳಿಗೆಲ್ಲಾ ಮೊದಲನೆಯ ತಂದೆಯೂ, ವರದಾನಮಾಡುವನೂ, ಎಲ್ಲಾ ಪ್ರಾರ್ಥನೆ

ಪಾಹಿ ನಾಽನ್ಯಗತಿಃ ಶಂಭೋ ವಿನಿಹತ್ಯಾಽಸುರೋತ್ತಮಾನ್ ।
ಮಾಯಯಾ ಮೋಹಿತಾಃ ಸರ್ವೇ ಭವತಃ ಪರಮೇಶ್ವರ ॥೧೧೩॥

ಯಥಾ ತರಂಗಾ ಲಹರೀ ಸಮೂಹಾ ।
ಯುಧ್ಯಂತಿ ಚಾಽನ್ಯೋನ್ಯ ಮಪಾಂ ನಿಧೌ ಚ ॥
ಜಲಾಶ್ರಯಾ ದೇವ ಜಡೀ ಕೃತಾಶ್ಚ ।
ಸುರಾ ಸುರಾ ಸ್ತದ್ವದಜಸ್ಯ ಸರ್ವಂ ॥೧೧೪॥

॥ ಸೂತ ಉವಾಚ ॥

ಯ ಇದಂ ಪ್ರಾತರುತ್ಥಾಯ ಶುಚಿರ್ಭೂತ್ವಾ ಜಪೇನ್ನರಃ ।
ಶೃಣುಯಾದ್ವಾ ಸ್ತವಂ ಪುಣ್ಯಂ ಸರ್ವಕಾಮ ಮವಾಪ್ನುಯಾತ್ ॥

---

ಗಳಿಗೂ ಆವಾಸಸ್ಥಾನನೂ, ತಾನೇ ಹುಟ್ಟಿದವನೂ ಆಗಿದ್ದೀಯೆ. ಉಪನಿಷತ್ತುಗಳು ಮತ್ತು ವೇದಗಳು ಇವುಗಳನ್ನು ಚೆನ್ನಾಗಿ ಗ್ರಹಿಸಿರುವ ಋಷಿಗಳು, ನಿನ್ನನ್ನೇ ವೇದೋಪನಿಷತ್ತುಗಳಿಗೆ ತಿರುಳಾದ ಪರಾತ್ಪರ ವಸ್ತುವೆಂದು ಹೇಳುತ್ತಾರೆ. ಓ ಪರಶಿವನೇ, ಅನೇಕ ರೂಪವುಳ್ಳ ನಿನ್ನಿಂದ ಸೃಷ್ಟಿಸಲ್ಪಡದ ವಸ್ತುವೊಂದೂ ನಮಗೆ ಗೊತ್ತಿಲ್ಲ. ನೀನೇ ರಾಕ್ಷಸರನ್ನೂ, ದೇವತೆಗಳನ್ನೂ, ಪ್ರಾಣಿವರ್ಗವನ್ನೂ, ಮನುಷ್ಯರನ್ನೂ, ಚರಾಚರ ವಸ್ತುಗಳನ್ನೂ ಸೃಷ್ಟಿಮಾಡಿದ್ದೀಯೆ.

೧೧೩–೧೧೪. ಓ ಶಂಭುವೇ, ನಮಗೆ ನೀನಲ್ಲದೇ ಮತ್ತೊಬ್ಬರು ರಕ್ಷಕರಿಲ್ಲ. ಆದ್ದರಿಂದ ಈ ರಾಕ್ಷಸಾಧಿಪತಿಗಳನ್ನು ನೀನು ನಾಶಮಾಡಿ ನಮ್ಮನ್ನು ದಯವಿಟ್ಟು ಕಾಪಾಡಬೇಕು. ಓ ಪರಮೇಶ್ವರನೇ, ನಿನ್ನ ಮಾಯೆಯಿಂದ ಇವರೆಲ್ಲರೂ ಮೋಹಗೊಂಡಿದ್ದಾರೆ. ಅಲೆಗಳು ಹೇಗೆ ತಂತಮ್ಮಲ್ಲಿಯೇ ಸಮುದ್ರದಲ್ಲಿ ಯುದ್ಧಮಾಡುತ್ತಾ ಆ ನೀರಿನ ಸಂಬಂಧದಿಂದಲೇ ತಣ್ಣಗೆ ಶಾಂತವಾಗುವುವೋ, ಹಾಗೆಯೇ ನಿನ್ನ ಪ್ರಭಾವದಿಂದ, ದೇವತೆಗಳೂ ಮತ್ತು ರಾಕ್ಷಸರೂ ಯುದ್ಧವನ್ನು ಕೊನೆಗಾಣಿಸುವರು. ಸೂತನು ಹೇಳಿದನು :– ಯಾವ ಮನುಷ್ಯನು ಬೆಳಿಗ್ಗೆ ಎದ್ದು, ಶುದ್ಧನಾಗಿ ಈ ಸ್ತೋತ್ರ ನಾಮಗಳನ್ನು ಜಪಿಸುವನೋ, ಅಥವಾ ಈ

ಸ್ತುತಸ್ತ್ವೇವಂ ಸುರೈರ್ವಿಷ್ಣೋರ್ಜಪೇನ ಚ ಮಹೇಶ್ವರಃ ।
ಸೋಮಃ ಸೋಮಾಮಥಾಽಲಿಂಗ್ಯ ನಂದಿ ದತ್ತಕರಃ ಸ್ಮಯನ್ ॥
ಪ್ರಾಹ ಗಂಭೀರಯಾ ವಾಚಾ ದೇವಾನಾಲೋಕ್ಯ ಶಂಕರಃ ।
ಜ್ಞಾತಂ ಮಯೇದಮಧುನಾ ದೇವಕಾರ್ಯಂ ಸುರೇಶ್ವರಾಃ ॥೧೧೭॥
ವಿಷ್ಣೋರ್ಮಾಯಾಬಲಂ ಚೈವ ನಾರದಸ್ಯ ಚ ಧೀಮತಃ ।
ತೇಷಾಮಧರ್ಮನಿಷ್ಠಾನಾಂ ದೈತ್ಯಾನಾಂ ದೇವಸತ್ತಮಾಃ ॥೧೧೮
ಪುರತ್ರಯ ವಿನಾಶಂ ಚ ಕರಿಷ್ಯೇಽಹಂ ಸುರೋತ್ತಮಾಃ ।

॥ ಸೂತ ಉವಾಚ ॥

ಅಥ ಸ ಬ್ರಹ್ಮಕಾ ದೇವಾಃ ಸೇಂದ್ರೋಪೇಂದ್ರಾಃ ಸಮಾಗತಾಃ ॥
ಶ್ರುತ್ವಾ ಪ್ರಭೋಸ್ತದಾ ವಾಕ್ಯಂ ಪ್ರಣೇಮುಸ್ತುಷ್ಟುವುಶ್ಚ ತೇ ।
ಅಪ್ಯೇತದಂತರಂ ದೇವೀ ದೇವಮಾಲೋಕ್ಯ ವಿಸ್ಮಿತಾ ॥೧೨೦॥

---

ಪುಣ್ಯಕರವಾದ ಸ್ತೋತ್ರವನ್ನು ಕೇಳುವನೋ ಅವನು ಎಲ್ಲಾ ಇಷ್ಟಾರ್ಥಗಳನ್ನೂ ಪಡೆಯುವನು.

೧೧೬–೧೧೯. ವಿಷ್ಣುವಿನಿಂದಲೂ, ಮತ್ತು ದೇವತೆಗಳಿಂದಲೂ, ಈ ರೀತಿಯಾಗಿ ಶಿವನು ಸ್ತೋತ್ರ ಮಾಡಲ್ಪಟ್ಟು, ಸಂತೋಷದಿಂದ ಪಾರ್ವತಿಯನ್ನು ಆಲಿಂಗಿಸಿ, ನಂದೀಶ್ವರನಮೇಲೆ ಕುಳಿತು ಕೃಪೆಯಿಂದ ಮುಗುಳುನಗೆ ನಗುತ್ತಾ, ದೇವತೆಗಳ ಕಡೆ ನೋಡುತ್ತಾ ಗಂಭೀರವಾದ ಮಾತಿನಿಂದ ಈ ರೀತಿ ಹೇಳಿದನು. ಎಲೈ ದೇವಶ್ರೇಷ್ಠರೇ, ನಿಮಗೆ ಮಾಡಬೇಕಾದ ಕೆಲಸವು ನನಗೆ ಚೆನ್ನಾಗಿ ಈಗ ಗೊತ್ತಾಯಿತು. ನಾನು ವಿಷ್ಣುವಿನ ಮಾಯಾ ಶಕ್ತಿಯನ್ನೂ, ಜ್ಞಾನಿಯಾದ ನಾರದನ ಮಾಯೆಯನ್ನೂ, ಉಪಯೋಗಿಸಿ, ಅಧರ್ಮಾಚರಣೆಯನ್ನು ಮಾಡುತ್ತಿರುವ ರಾಕ್ಷಸರ ವಿನಾಶದ ಮೂಲಕ ತ್ರಿಪುರವನ್ನು ನಾಶಮಾಡುವೆನು. ಸೂತನು ಹೇಳಿದನು :– ಅನಂತರದಲ್ಲಿ, ಇಂದ್ರ, ಉಪೇಂದ್ರ, ಮತ್ತು ಬ್ರಹ್ಮ ಇವರೊಡನೆ ಸಮಸ್ತ ದೇವತೆಗಳೂ ಮಿಳಿತರಾದರು.

೧೨೦–೧೨೪. ದೇವತೆಗಳು ಸ್ವಾಮಿಯಾದ ಶಿವನ ಮಾತನ್ನು ಕೇಳಿ ಬಹಳ ಸಂತೋಷಪಟ್ಟರು. ಮತ್ತು ಅವನನ್ನು ಸ್ತೋತ್ರಮಾಡಿದರು.

**ಲಿಲಾಂಬುಜೇನ ಚಾಹತ್ಯ ಕಲಮಾಹ ವೃಷಧ್ವಜಂ ।**
**॥ ದೇವ್ಯುವಾಚ ॥**
**ಕ್ರೀಡಮಾನಂ ವಿಭೋ ಪಶ್ಯ ಷಣ್ಮುಖಂ ರವಿ ಸನ್ನಿಭಂ ॥೧೨೧॥**
**ಪುತ್ರಂ ಪುತ್ರವತಾಂ ಶ್ರೇಷ್ಠ ಭೂಷಿತಂ ಭೂಷಣೈಃ ಶುಭೈಃ ।**
**ಮುಕುಟೈಃ ಕಟಕೈಶ್ಚೈವ ಕುಂಡಲೈರ್ವಲಯೈಃ ಶುಭೈಃ ॥೧೨೨॥**
**ನೂಪುರೈಶ್ಛನ್ನ ವಾರೈಶ್ಚ ತಥಾ ಹ್ಯುದರ ಬಂಧನೈಃ ।**
**ಕಿಂಕಿಣೀಭಿ ರನೇಕಾಭಿ ರ್ಹೇಮ್ನೈರಶ್ವತ್ಥ ಪತ್ರಕೈಃ ॥೧೨೩॥**
**ಕಲ್ಪಕ ದ್ರುಮಜೈಃ ಪುಷ್ಪೈಃ ಶೋಭಿತೈ ರಲಕೈಃ ಶುಭೈಃ ।**
**ಹಾರೈ ರ್ವಾರಿಜ ರಾಗಾದಿ ಮಣಿಚಿತ್ರೈ ಸ್ತಥಾಂಗದೈಃ ॥೧೨೪॥**
**ಮುಕ್ತಾಫಲ ಮಯೈರ್ಹಾರೈಃ ಪೂರ್ಣಚಂದ್ರ ಸಮಪ್ರಭೈಃ ।**
**ತಿಲಕೈಶ್ಚ ಮಹಾದೇವ ಪಶ್ಯ ಪುತ್ರಂ ಸುಶೋಭನಂ ॥೧೨೫॥**

---

ಈ ಮಧ್ಯದಲ್ಲಿ ಪಾರ್ವತೀ ದೇವಿಯು, ಪತಿಯಾದ ಈಶ್ವರನನ್ನು ನೋಡಿ ಮುಗುಳು ನಗೆ ನಕ್ಕಳು. ಅವಳು ತನ್ನ ಪತಿಯನ್ನು ಲೀಲಾರ್ಥವಾದ ಕಮಲದಿಂದ ಪ್ರೀತಿಯಿಂದ ಹೊಡೆದು, ಧರ್ಮವೃಷಭವೇ ಬಾವುಟವಾಗುಳ್ಳ ಈಶ್ವರನನ್ನು ಕುರಿತು ಮಧುರವಾಗಿ ನುಡಿದಳು. ದೇವಿಯು ಹೇಳಿದಳು:- ಓ ಸ್ವಾಮಿಯೇ, ಸೂರ್ಯನಿಗೆ ಸಮನಾದ, ತೇಜಸ್ವಿಯಾಗಿ ಈ ಆಟವಾಡುತ್ತಿರುವ ಷಣ್ಮುಖನನ್ನು ನೋಡು. ಓ ಪ್ರಶಸ್ತ ಪುತ್ರನನ್ನು ಪಡೆದ ಪತಿಯೇ, ಷಣ್ಮುಖನು ಮಂಗಳಕರವಾದ ಅಲಂಕಾರಗಳಿಂದ ಶೋಭಿಸುತ್ತಿದ್ದಾನೆ. ಇವನು ಕಿರೀಟಗಳಿಂದಲೂ, ವಂಕಿಗಳಿಂದಲೂ, ಹತ್ತು ಕಡಕಿನಿಂದಲೂ, ಸೊಗಸಾದ ಬಳೆಗಳಿಂದಲೂ, ಕಾಲ್ಕಡಗಗಳಿಂದಲೂ, ಉದರಕ್ಕೆ ಭೂಷಣವಾದ ಉಡಿಗೆಜ್ಜೆಗಳಿಂದಲೂ, ಅನೇಕ ಗೆಜ್ಜೆಗಳಿಂದಲೂ, ಚಿನ್ನದಿಂದ ಮಾಡಿದ, ಅಶ್ವತ್ಥಾಕಾರವಾದ ಎಲೆಗಳಿಂದಲೂ, ಕಲ್ಪ ವೃಕ್ಷದ ಹುವ್ವುಗಳಿಂದಲೂ, ಮಂಗಳಕರವಾದ ತಿಲಕಗಳಿಂದಲೂ, ಪದ್ಮರಾಗವೇ ಮೊದಲಾದ ಬೆಲೆಬಾಳುವ ಮಣಿಗಳಿಂದ ಶೋಭಿತವಾದ ಹಾರಗಳಿಂದಲೂ, ಸೊಗಸಾದ ತೋಳಿಗೆ ಹಾಕುವ ಆಭರಣಗಳಿಂದಲೂ, ಪ್ರಕಾಶಿಸುತ್ತಾನೆ.

೧೨೫-೧೨೮. ಷಣ್ಮುಖನು ಪೂರ್ಣ ಚಂದ್ರನಂತಿರುವ ಮುತ್ತಿನ



13

ಅಂಕಿತಂ ಕುಂಕುಮಾದ್ಯೈಶ್ಚ ವೃತ್ತಂ ಭಸಿತ ನಿರ್ಮಿತಂ ।
ವಕ್ತ್ರವೃಂದಂಚ ಪಶ್ಯೇಶ ವೃಂದಂ ಕಾಮಲಕಂ ಯಥಾ ॥೧೨೬॥
ನೇತ್ರಾಣಿ ಚ ವಿಭೋ ಪಶ್ಯ ಶುಭಾನಿ ತ್ವಂ ಶುಭಾನಿ ಚ ।
ಅಂಜನಾನಿ ವಿಚಿತ್ರಾಣಿ ಮಂಗಲಾರ್ಥಂ ಚ ಮಾತೃಭಿಃ ॥೧೨೭॥
ಗಂಗಾದಿಭಿಃ ಕೃತ್ತಿಕಾದ್ಯೈಃ ಸ್ವಾಹಯಾ ಚ ವಿಶೇಷತಃ ।
ಇತ್ಯೇವಂ ಲೋಕ ಮಾತುಶ್ಚ ವಾಗ್ಭಿಃ ಸಂಬೋಧಿತಃ ಶಿವಃ ॥೧೨೮॥
ನ ಯಯೌ ತೃಪ್ತಿಮೀಶಾನಃ ಪಿಬನ್ಸ್ಕಂದಾ ನನಾ ಮೃತಂ ।
ನ ಸಸ್ಮಾರ ಚ ತಾ ನ್ದೇವಾ ನ್ದೈತ್ಯ ಶಸ್ತ್ರನಿಪೀಡಿತಾನ್ ॥೧೨೯॥
ಸ್ಕಂದ ಮಾಲಿಂಗ್ಯ ಚಾ ಘ್ರಾಯ ನೃತ್ಯ ಪುತ್ರೇ ತ್ಯುವಾಚ ಹ ।
ಸೋಽಪಿ ಲೀಲಾಲಸೋ ಬಾಲೋ ನನರ್ತಾರ್ತಿ ಹರಃ ಪ್ರಭುಃ ॥
ನಾಗಾಶ್ಚ ನನೃತುಃ ಸರ್ವೇ ದೇವಾಃ ಸೇಂದ್ರ ಪುರೋಗಮಾಃ ।
ತುಷ್ಟುವು ರ್ಗಣಪಾಃ ಸ್ಕಂದಂ ಮುಮೋದಾಂಬಾ ಚ ಮಾತರಃ ॥
ಸಹೈವ ನನೃತುಶ್ಚಾನ್ಯೇ ಸಹ ತೇನ ಗಣೇಶ್ವರಾಃ ।
ತ್ರೈಲೋಕ್ಯ ಮಖಿಲಂ ತತ್ರ ನನರ್ತೇ ಶಾಜ್ಞಯಾ ಕ್ಷಣಂ ॥೧೩೨॥

---

ಹಾರಗಳಿಂದಲೂ, ಸೊಗಸಾದ ತಿಲಕಗಳಿಂದಲೂ, ಪ್ರಕಾಶಿಸುತ್ತಿದ್ದಾನೆ. ಇವನಿಗೆ ವಿಭೂತಿ ಮಿಶ್ರವಾದ ಕುಂಕುಮವನ್ನು ಗುಂಡಾಗಿ ಹಣೆಯಲ್ಲಿ ಹಚ್ಚಿದ್ದಾರೆ. ಇವನ ಆರು ಮುಖಗಳೂ, ದುಂಡಗಿರುವ ಕಮಲದಂತೆ ಇವೆ. ಓ ಸ್ವಾಮಿಯೇ ಇವನ ಮಂಗಳಕರವಾದ ಕಣ್ಣುಗಳನ್ನು ನೋಡು. ಇವನ ತಾಯಿಯರು ಇವನ ಕಣ್ಣುಗಳಿಗೆ ಮಂಗಳಾರ್ಥವಾಗಿ ಹಚ್ಚಿರುವ ಸೊಗಸಾದ ಕಪ್ಪುಗಳನ್ನು ನೋಡು. ಇದನ್ನು ಹಚ್ಚಿದವರು ಗಂಗೇ, ಕೃತ್ತಿಕೆ, ಮೊದಲಾದವರು. ವಿಶೇಷವಾಗಿ ಸ್ವಾಹೆಯೇ ಹಚ್ಚಿದವಳು. ಈ ರೀತಿಯಾಗಿ ಶಿವನನ್ನು ಕುರಿತು ಲೋಕಮಾತೆಯಾದ ಪಾರ್ವತಿಯು ಹೇಳಿದಳು.

೧೨೯—೧೩೨. ಷಣ್ಮುಖನ ಮುಖದರ್ಶನದ ಅಮೃತವನ್ನು ಎಷ್ಟು ಪಾನಮಾಡಿದರೂ, ಶಿವನಿಗೆ ತೃಪ್ತಿಯೇ ಆಗಲಿಲ್ಲ. ಈ ಸಂದರ್ಭದಲ್ಲಿ ದೈತ್ಯರಬಾಧೆಗೆ ಒಳಗಾದ ದೇವತೆಗಳನ್ನು ಸ್ಮರಿಸಲೇ ಇಲ್ಲ. ಶಿವನು

ಸಸೃಜುಃ ಪುಷ್ಪವರ್ಷಾಣಿ ಜಗುರ್ಗಂಧರ್ವ ಕಿನ್ನರಾಃ ।
ನೃತ್ಯಾಽಮೃತಂ ತದಾ ಪೀತ್ವಾ ಪಾರ್ವತೀ ಪರಮೇಶ್ವರೌ ॥
ಅವಾಪತು ಸ್ತದಾ ತೃಪ್ತಿಂ ನಂದಿನಾ ಚ ಗಣೇಶ್ವರಾಃ ॥೧೩೩॥

ತತಃ ಸ ನಂದೀ ಸಹ ಷಣ್ಮುಖೇನ ।
ತಥಾಚ ಸಾರ್ಧಂ ಗಿರಿರಾಜ ಪುತ್ರ್ಯಾ ॥
ವಿವೇಶ ದಿವ್ಯಂ ಭವನಂ ಭವೋಽಪಿ ।
ಯಥಾಂಬುದೋಽನ್ಯಾಂಬುದ ಮಂಬುದಾಭಃ ॥೧೩೪॥

ದ್ವಾರಸ್ಯ ಪಾರ್ಶ್ವೇ ತೇ ತಸ್ಥು ರ್ದೇವಾ ದೇವಸ್ಯ ಧೀಮತಃ ।
ತುಷ್ಟುವುಶ್ಚ ಮಹಾದೇವಂ ಕಿಂಚಿದುದ್ವಿಗ್ನ ಚೇತಸಃ ॥೧೩೫॥

ಕಿಂತು ಕಿಂತ್ವಿತಿಚಾನ್ಯೋಽನ್ಯಂ ಪ್ರೇಕ್ಷ್ಯ ಚೈತತ್ಸಮಾಕುಲಾಃ ।
ಪಾಪಾವಯ ಮಿತಿಹ್ಯನ್ಯೇ ಅಭಾಗ್ಯಾಶ್ಚೇತಿ ಚಾಪರೇ ॥೧೩೬॥

---

ಷಣ್ಮುಖನನ್ನು ಆಲಿಂಗಿಸಿ, ಎಲೈ ಮಗುವೇ, ನರ್ತನಮಾಡು. ಎಂದು ಹೇಳಿದನು. ಆಟದಲ್ಲಿ ಇಷ್ಟವುಳ್ಳ, ಬಾಲಕನಾದ, ಜನಗಳ ಕಷ್ಟಗಳನ್ನು ನಾಶಮಾಡುವ, ಸ್ವಾಮಿಯಾದ ಷಣ್ಮುಖನೂ ಸಹ ಬಹಳ ಸಂತೋಷದಿಂದ ನರ್ತನ ಮಾಡಿದನು. ಇತರ ಗಣಾಧಿಪತಿಗಳೂ ಸಹ ಅವನ ಜೊತೆಯ ಲ್ಲಿಯೇ ಕುಣಿದರು. ಈಶ್ವರನ ಅಪ್ಪಣೆಯಂತೆ ಮೂರು ಲೋಕವೂ ಕುಣಿ ಯಿತು. ಸರ್ಪಗಳೂ ಕುಣಿದವು. ಇಂದ್ರನನ್ನು ಮುಂದೆ ಮಾಡಿಕೊಂಡು ಸಕಲ ದೇವತೆಗಳೂ ಕುಣಿದರು. ಗಣಪತಿಗಳು ಷಣ್ಮುಖನನ್ನು ಸ್ತೋತ್ರ ಮಾಡಿದರು. ತಾಯಿಯಾದ ಪಾರ್ವತಿಯು ಸಂತೋಷಗೊಂಡಳು. ಕೃತ್ತಿಕಾದೇವಿಯೇ ಮೊದಲಾದ ತಾಯಿಯರೂ ಸಂತೋಷಗೊಂಡರು.

೧೩೩–೧೩೬. ದೇವತೆಗಳು ಹೂಮಳೆ ಗರೆದರು, ಗಂಧರ್ವರೂ, ಮತ್ತು ಕಿನ್ನರರೂ, ಹಾಡಿದರು. ಪಾರ್ವತೀ ಪರಮೇಶ್ವರರು ನೃತ್ಯದ ಅಮೃತವನ್ನು ಪಾನಮಾಡಿ ಬಹಳ ತೃಪ್ತಿಗೊಂಡರು. ಗಣಪತಿಗಳು ನಂದೀಶ್ವರರೊಡನೆ ಸಂತೋಷಗೊಂಡರು. ಅನಂತರ ನಂದೀಶ್ವರನೂ, ಷಣ್ಮುಖನೂ, ಪಾರ್ವತಿಯೂ, ದಿವ್ಯವಾದ ಮಂದಿರವನ್ನು ಪ್ರವೇಶಿಸಿ ದರು. ಸೂರ್ಯನಂತೆ ಕಾಂತಿಯುಳ್ಳ ಶಿವನು ತನಗೆ ಸಮಾನವಾಗಿ ಶುಭ್ರ ಕಾಂತಿಯುಳ್ಳ ಕೈಲಾಸದ ಮನೆಯನ್ನು ಒಂದು ಮೇಘವು ಇನ್ನೊಂದು

ಭಾಗ್ಯವಂತಶ್ಚ ದೈತ್ಯೇಂದ್ರಾ ಇತಿಚಾಽನ್ಯೇ ಸುರೇಶ್ವರಾಃ ।
ಪೂಜಾ ಫಲ ಮಿಮಂ ತೇಷಾ ಮಿತ್ಯನ್ಯೇ ನೇತಿ ಚಾಪರೇ ॥೧೩೭॥
ಏತಸ್ಮಿನ್ನಂತರೇ ತೇಷಾಂ ಶ್ರುತ್ವಾ ಶಬ್ದಾ ನನೇಕಶಃ ।
ಕುಂಭೋದರೋ ಮಹಾತೇಜಾ ದಂಡೇನಾಽತಾಡಯ ತ್ಸುರಾನ್ ॥
ದುದ್ರುವು ಸ್ತೇ ಭಯಾವಿಷ್ಟಾ ದೇವಾ ಹಾಹೇತಿ ವಾದಿನಃ ।
ಅಪತನ್ಮುನಯ ಶ್ಚಾನ್ಯೇ ದೇವಾಶ್ಚ ಧರಣೀ ತಲೇ ॥೧೩೯॥
ಅಹೋ ವಿಧೇ ರ್ಬಲಂ ಚೇತಿ ಮುನಯಃ ಕಶ್ಯಪಾದಯಃ ।
ದೃಷ್ಟ್ವಾಽಪಿ ದೇವ ದೇವೇಶಂ ದೇವಾನಾಂ ಚಾಸುರ ದ್ವಿಷಾಂ ॥೧೪೦
ಅಭಾಗ್ಯಾ ನ್ನ ಸಮಾಪ್ತಂತು ಕಾರ್ಯಮಿತ್ಯಪರೇ ದ್ವಿಜಾಃ ।
ಪ್ರೋಚು ರ್ನಮಃ ಶಿವಾಯೇತಿ ಪೂಜ್ಯ ಚಾಲ್ಪತರಂ ಹೃದಿ ॥೧೪೧॥

---

ಮೇಘವನ್ನು ಹೀಗೆ ಸೇರುವುದೋ ಹಾಗೆಯೇ ಪ್ರವೇಶಿಸಿದನು. ಜ್ಞಾನಿಯಾದ ಶಿವನ ಮಂದಿರದ ಎರಡು ಕಡೆಗಳಲ್ಲಿಯೂ, ಬಾಗಿಲಿನ ಹತ್ತಿರ ದೇವತೆಗಳು ನಿಂತರು! ಆದರೆ ಸ್ವಲ್ಪ ಕಳವಳಗೊಂಡು ಮಹಾದೇವನನ್ನು ಸ್ತುತಿಸಿದರು. ತಂತಮ್ಮಲ್ಲಿಯೇ ನೋಡಿಕೊಳ್ಳುತ್ತಾ ಬಹಳ ಕಳವಳಗೊಂಡವರಾಗಿ, ದೇವತೆಗಳು, ನಾವು ಪಾಪಿಷ್ಠರೂ, ಅದೃಷ್ಟಹೀನರೂ, ಆಗಿದೇವೆ! ಎಂದು ಕೆಲವರು ಹೇಳಿಕೊಂಡರು.

೧೩೭–೧೪೧. ದೇವತೆಗಳಲ್ಲಿ ಕೆಲವರು, ರಾಕ್ಷಸಾಧಿಪತಿಗಳು ಪುಣ್ಯಶಾಲಿಗಳೆಂದೂ, ಇವರು ತಾವು ಮಾಡಿದ ಪೂಜೆಯ ಒಳ್ಳೆಯ ಫಲವನ್ನು ಭವಿಸುತ್ತಿದ್ದಾರೆಂದೂ, ಮತ್ತೆ ಕೆಲವು ದೇವತೆಗಳೂ ಹೇಳುತ್ತಿದ್ದರು. ಈ ಸಂದರ್ಭದಲ್ಲಿ ಈ ದೇವತೆಗಳ ಧ್ವನಿಯನ್ನು ಅನೇಕಾವೃತ್ತಿ ಕೇಳಿ, ಬಹಳ ತೇಜಸ್ವಿಯಾದ, ಕುಂಭೋದರನೆಂಬ ರಾಕ್ಷಸನು, ಇವರನ್ನು ದೊಣ್ಣೆಯಿಂದ ಹೊಡೆದನು. ದೇವತೆಗಳು, ಅಯ್ಯೋ, ಎನ್ನುತ್ತಾ ಭಯಗ್ರಸ್ತರಾದರು. ಇತರ ಋಷಿಗಳೂ ಕೆಳಗೆ ಬಿದ್ದರು. ದೇವತೆಗಳೂ ಭೂಮಿಯಮೇಲೆ ಬಿದ್ದರು. ಅಯ್ಯೋ ದುರದೃಷ್ಟದ ಮಹಿಮೆಯಿದು! ಎಂದು ಕಾಶ್ಯಪಾದಿ ಋಷಿಗಳು ಹೇಳಿದರು. ಇತರ ಬ್ರಾಹ್ಮ

**ತತಃ ಕಪರ್ದೀ ನಂದೀಶೋ ಮಹಾದೇವ ಪ್ರಿಯೋ ಮುನಿಃ ।**
**ಶೂಲೀ ಮಾಲೀ ತಥಾ ಹಾಲೀ ಕುಂಡಲೀ ವಲಯೀ ಗದೀ ॥೧೪೨॥**
**ವೃಷ ಮಾರುಹ್ಯ ಸುಶ್ವೇತಂ ಯಯೌ ತಸ್ಯೈಜ್ಞಯಾ ತದಾ ।**
**ತತೋ ವೈ ನಂದಿನಂ ದೃಷ್ಟ್ವಾ ಗಣಃ ಕುಂಭೋದರೋಽಪಿ ಸಃ ॥**
**ಪ್ರಣಮ್ಯ ನಂದಿನಂ ಮೂರ್ಧ್ನಾ ಸಹ ತೇನ ತ್ವರನ್ಯಯೌ ।**
**ನಂದೀ ಭಾತಿ ಮಹಾತೇಜಾ ವೃಷ ಪೃಷ್ಠೇ ವೃಷಧ್ವಜಃ ॥೧೪೪॥**
**ಸಗಣೋ ಗಣಸೇನಾನಿ ರ್ಮೇಘಪೃಷ್ಠೇ ಯಥಾ ಭವಃ ।**
**ದಶಯೋಜನ ವಿಸ್ತೀರ್ಣಂ ಮುಕ್ತಾಜಾಲೈ ರಲಂಕೃತಂ ॥೧೪೫॥**
**ಸಿತಾತ ಪತ್ರಂ ಶೈಲಾದೇ ರಾಕಾಶಮಿವ ಭಾತಿ ತತ್ ।**
**ತತ್ರಾಂತ ರ್ಬದ್ಧ ಮಾಲಾ ಸಾ ಮುಕ್ತಾಫಲ ಮಯೀ ಶುಭಾ ॥೧೪೬**

---

ಣರು, ದೇವತೆಗಳು, ದೇವದೇವನಾದ ಶಿವನನ್ನು ಸಂದರ್ಶಿಸಿದಾಗ್ಯೂ ಇವರ ದುರದೃಷ್ಟವಿನ್ನೂ ತಪ್ಪಿಲ್ಲ! ಎಂದು ಕೊಂಡರು. ಇವರೆಲ್ಲರೂ ಮನಸ್ಸಿನಲ್ಲಿಯೇ, ಓಂ ನಮಃ ಶಿವಾಯ ಎಂಬ ಮಂತ್ರವನ್ನು ಜಪಿಸಿದರು.

೧೪೨. ಅನಂತರ ಜಟಾಧಾರಿಯಾದ, ಶಿವನಿಗೆ ಅತ್ಯಂತ ಪ್ರಿಯನಾದ ಋಷಿಯೂ ಆದ, ಸಂದೀಶ್ವರನು, ಶೂಲ, ಮಾಲೆ, ಹಾರ, ಕುಂಡಲಗಳು, ಬಳೆಗಳು, ವಿಷ, ಮದ್ಯ, ಗದೆ, ಇವುಗಳನ್ನು ಧರಿಸಿದವನಾಗಿ,

೧೪೩. ಅಲ್ಲದೆ ಸಕಲ ಭೂಷಣ, ಆಯುಧಗಳಿಂದ ಸಮೇತನಾಗಿ ಬಹಳ ಬೆಳ್ಳಗಿರುವ ಎತ್ತಿನ ಮೇಲೆ ಹತ್ತಿ, ಈಶ್ವರಾಜ್ಞೆಯಂತೆ ಹೊರಟನು. ಆಗ ಕುಂಭೋದರನು ನಂದೀಶ್ವರನನ್ನು ನೋಡಿ, ಅವನೂ ತನ್ನ ಗುಂಪನ್ನು ಕಟ್ಟಿಕೊಂಡು ಬಂದನು.

೧೪೪–೧೪೬. ಕುಂಭೋದರನು ನಂದೀಶ್ವರನನ್ನು ನಮಸ್ಕರಿಸಿ ಅವನನ್ನು ಜಾಗ್ರತೆಯಾಗಿ ಹಿಂಬಾಲಿಸಿದನು. ಧರ್ಮವೇ ಬಾವುಟವಾಗುಳ್ಳ, ಬಹಳ ತೇಜಸ್ವಿಯಾದ ನಂದೀಶ್ವರನು ಎತ್ತಿನ ಬೆನ್ನಿನಮೇಲೆ ಶೋಭಿಸುತ್ತಿದ್ದನು. ಮೇಘ ಸ್ವರೂಪನಾದ ವಿಷ್ಣುವಿನ ಬೆನ್ನಿನ ಮೇಲೆ ಶಿವನಂತೆ ಗಣಗಳೊಡನೆ ಗಣೇಶ್ವರನಾದ ನಂದೀಶ್ವರನು ಪ್ರಕಾಶಿಸಿದನು. ಅವನ

**ಗಂಗಾಽಽಕಾಶಾನ್ನಿಪತಿತಾ ಭಾತಿ ಮೂರ್ಧ್ನಿ ವಿಭೋರ್ಯಥಾ ।**
**ಅಥ ದೃಷ್ಟ್ವಾ ಗಣಾಧ್ಯಕ್ಷಂ ದೇವದುಂದುಭಯಃ ಶುಭಾಃ ॥೧೪೭॥**
**ನಿಯೋಗಾ ದ್ವಜ್ರಿಣಃ ಸರ್ವೇ ವಿನೇದು ರ್ಮುನಿ ಪುಂಗವಾಃ ।**
**ತುಷ್ಟುವು ಶ್ಚ ಗಣೇಶಾನಂ ವಾಗ್ಭಿರಿಷ್ಟಪ್ರದಂ ಶುಭಂ ॥೧೪೮॥**
**ಯಥಾ ದೇವಾ ಭಯಂ ದೃಷ್ಟ್ವಾ ಪ್ರೀತಿ ಕಂಟಕಿತ ತ್ವಚಃ ।**
**ನಿಯೋಗಾ ದ್ವಜ್ರಿಣೋ ಮೂರ್ಧ್ನಿ ಪುಷ್ಪವರ್ಷಂ ಚ ಖೇಚರಾಃ ॥**

---

ಮೇಲೆ ಹತ್ತುಯೋಜನದಷ್ಟು ವಿಸ್ತಾರವುಳ್ಳದ್ದೂ, ಮುತ್ತುಗಳ ಸಮೂಹದಿಂದ ಕೂಡಿದ್ದೂ, ಆದ ಬಿಳಿಯ ಛತ್ರಿಯು ಪರ್ವತದಮೇಲೆ ಆಕಾಶದಂತೆ ಪ್ರಕಾಶಿಸಿತು. ಆ ಶ್ವೇತ ಛತ್ರಿಯಲ್ಲಿ ಮಂಗಳಕರವಾದ ಮುತ್ತುಗಳ ಸಮೂಹವು ಒಳಗಣ ಮಾಲೆಯು ಆ ಹಾರದಲ್ಲಿ ಪೋಣಿಸಲ್ಪಟ್ಟಿತ್ತು.

೧೪೭–೧೪೯. ಸ್ವಾಮಿಯಾದ ಶಿವನಮೇಲೆ ಆಕಾಶದಿಂದ ಬೀಳುವ ಗಂಗೆಯಂತೆ ಗಣಾಧಿಪತಿಯ ಮೇಲೆ ಶ್ವೇತಚ್ಛತ್ರಿಯು ಕಾಣಿಸುತ್ತಿತ್ತು. ಈ ಸೇನಾಧಿಪತಿಯನ್ನು ನೋಡಿ, ಮಂಗಳಕರವಾದ ದೇವದುಂದುಭಿಗಳು ಮೊಳಗಿದವು. ಎಲೈ ಋಷಿಶ್ರೇಷ್ಠರೇ, ಇಂದ್ರನ ಅಪ್ಪಣೆಯಂತೆ ಎಲ್ಲಾ ನಕ್ಷತ್ರಗಳಿಂದ ಚಂದ್ರನಂತೆ, ಪುಷ್ಪಗಳಿಂದ ನಂದೀಶ್ವರನು ಶೋಭಿಸಿದನು. ದೇವತೆಗಳು ಇಂದ್ರೋಪೇಂದ್ರರೊಡನೆ, ಹೀಗೆ ಶೋಭಿಸುತ್ತಿದ್ದ, ಸೇನಾನಾಯಕನಾದ ನಂದೀಶ್ವರನು, ಎರಡನೆಯ ಶಿವನೋ ಎಂಬಂತಿದ್ದುದನ್ನು ಕಂಡು ಸ್ತೋತ್ರಮಾಡಲಾರಂಭಿಸಿದರು. ಸ್ವಾಮಿಯಾದ ಶಿವನಮೇಲೆ ಆಕಾಶದಿಂದ ಬೀಳುವ ಗಂಗೆಯಂತೆ ಗಣಾಧಿಪತಿಯಮೇಲೆ ಶ್ವೇತಛತ್ರಿಯು ಕಾಣಿಸುತ್ತಿತ್ತು. ಈ ಸೇನಾಧಿಪತಿಯನ್ನು ನೋಡಿ, ಮಂಗಳಕರವಾದ ದೇವದುಂದುಭಿಗಳು ಮೊಳಗಿದವು. ಎಲೈ ಋಷಿಶ್ರೇಷ್ಠರೇ, ಇಂದ್ರನ ಅಪ್ಪಣೆಯಂತೆ ಎಲ್ಲಾ ಸ್ವರ್ಗಲೋಕವಾಸಿಗಳು ನಲಿದಾಡಿದರು. ಎಲ್ಲರೂ ತಮ್ಮ ಇಷ್ಟಾರ್ಥವನ್ನು ನೆರವೇರಿಸುವ ಗಣನಾಯಕನನ್ನು ಸೊಗಸಾದ ಮಾತುಗಳಿಂದ ಸ್ತೋತ್ರಮಾಡಿ ನಲಿದಾಡಿದರು.

**ವವೃಷುಶ್ಚ ಸುಗಂಧಾಢ್ಯಂ ನಂದಿನೋ ಗಗನೋದಿತಂ ।**
**ವೃಷ್ಟ್ಯಾ ತುಷ್ಟ ಸ್ತದಾ ರೇಜೇ ತುಷ್ಟ್ಯಾ ಪುಷ್ಟ್ಯಾ ಯಥಾರ್ಥಯಾ ॥**
**ನಂದೀ ಭವಶ್ಚಾಂದ್ರಯಾ ತು ಸ್ನಾತಯಾ ಗಂಧವಾರಿಣಾ ।**
**ಪುಷ್ಪೈರ್ನಾನಾ ವಿಧೈಸ್ತತ್ರ ಭಾತಿ ಪೃಷ್ಠಂ ವೃಷಸ್ಯ ತತ್ ॥೧೫೧॥**
**ಸಂಕೀರ್ಣಂ ತು ದಿವಃ ಪೃಷ್ಠಂ ನಕ್ಷತ್ರೈ ರಿವ ಸುವ್ರತಾಃ ।**
**ಕುಸುಮೈಃ ಸಂವೃತೋ ನಂದೀ ವೃಷ ಪೃಷ್ಠೇ ರರಾಜ ಸಃ ॥೧೫೨॥**
**ದಿವಃ ಪೃಷ್ಠೇ ಯಥಾ ಚಂದ್ರೋ ನಕ್ಷತ್ರೈ ರಿವ ಸುವ್ರತಾಃ ।**
**ತಂ ದೃಷ್ಟ್ವಾ ನಂದಿನಂ ದೇವಾಃ ಸೇಂದ್ರೋ ಪೇಂದ್ರಾಸ್ತಥಾವಿಧಂ ॥**
**ತುಷ್ಟುವು ರ್ಗಣ ಪೇ ಶಾನಂ ದೇವದೇವ ಮಿವಾಪರಂ ।**

**॥ ದೇವಾ ಊಚುಃ ॥**

**ನಮಸ್ತೇ ರುದ್ರ ಭಕ್ತಾಯ ರುದ್ರಜಾ ಪ್ಯರತಾಯ ಚ ॥೧೫೪॥**

---

ದೇವತೆಗಳು ಶಿವನನ್ನು ನೋಡಿ ಪ್ರೀತಿಯಿಂದ, ರೋಮಾಂಚಗೊಳ್ಳು ವಂತೆ ಇಂದ್ರನ ಆಜ್ಞೆಯ ಪ್ರಕಾರ, ಆಕಾಶಚಾರಿಗಳಾದ ದೇವತೆಗಳೆಲ್ಲರೂ, ಬಹಳ ಸಂತೋಷಗೊಂಡು, ಸೇನಾಧಿಪತಿಯ ಮೇಲೆ ಹೂಮಳೆಯನ್ನು ಕರೆದರು.

೧೫೦-೧೫೨. ದೇವತೆಗಳು ಸುಗಂಧವಾದ ಹೂಮಳೆಯನ್ನು ನಂದೀಶ್ವರನ ಮೇಲೆ ಕರೆಯಲು, ನಂದಿಯು ಈ ಪುಷ್ಪವೃಷ್ಟಿಯಿಂದ ಸಹಜವಾಗಿ ಸಂತೋಷಗೊಂಡು ಬಹಳ ತೃಪ್ತಿಯನ್ನು ಹೊಂದಿದನು. ನಂದೀಶ್ವರನಿಗೆ ಹೀಗೆ ಸುಗಂಧವಾದ ಪುಷ್ಪಸ್ನಾನವಾಗಲು, ಅವನು ಏರಿದ್ದ ಎತ್ತಿನ ಹಿಂಭಾಗವು ಅನೇಕವಿಧವಾದ ಹೂವುಗಳಿಂದ ಬಹಳ ಸೊಗಸಾಗಿತ್ತು. ಎಲೈ ಋಷಿಶ್ರೇಷ್ಠರೇ, ಆಗ ಅಂತರಿಕ್ಷಪ್ರದೇಶವು ಹುವ್ವುಗಳಿಂದ ನಕ್ಷತ್ರಗಳು ಹೇಗೋ ಹಾಗೆ ಅದು ಪ್ರಕಾಶಿಸುತ್ತಿತ್ತು. ನಂದೀಶ್ವರನು ಹುವ್ವುಗಳಿಂದ ಪೂರ್ಣವಾದ ಎತ್ತಿನ ಹೆಗಲ ಮೇಲೆ ಚೆನ್ನಾಗಿ ಶೋಭಿಸಿದನು.

೧೫೩-೧೫೭. ಎಲೈ ಋಷಿಶ್ರೇಷ್ಠರೇ, ಅಂತರಿಕ್ಷಪ್ರದೇಶವಲ್ಲಿದ್ದ

ರುದ್ರ ಭಕ್ತಾರ್ತಿ ನಾಶಾಯ ರೌದ್ರ ಕರ್ಮ ರತಾಯ ಚ ।
ಕೂಷ್ಮಾಂಡ ಗಣ ನಾಥಾಯ ಯೋಗಿನಾಂ ಪತಯೇ ನಮಃ ॥೧೫೫॥

ಸರ್ವದಾಯ ಶರಣ್ಯಾಯ ಸರ್ವಜ್ಞಾಯಾರ್ತಿಹಾರಿಣೇ ।
ವೇದಾನಾಂ ಪತಯೇ ಚೈವ ವೇದ ವೇದ್ಯಾಯ ತೇ ನಮಃ ॥೧೫೬॥

ವಜ್ರಿಣೇ ವಜ್ರದಂಷ್ಟ್ರಾಯ ವಜ್ರಿ ವಜ್ರ ನಿವಾರಿಣೇ ।
ವಜ್ರಾಲಂಕೃತ ದೇಹಾಯ ವಜ್ರಿಣಾ ರಾಧಿತಾಯ ತೇ ॥೧೫೭॥

ರಕ್ತಾಯ ರಕ್ತನೇತ್ರಾಯ ರಕ್ತಾಂಬರ ಧರಾಯ ತೇ ।
ರಕ್ತಾನಾಂ ಭವ ಪಾದಾಬ್ಜೇ ರುದ್ರಲೋಕ ಪ್ರದಾಯಿನೇ ॥೧೫೮॥

ನಮಃ ಸೇನಾಧಿಪತಯೇ ರುದ್ರಾಣಾಂ ಪತಯೇ ನಮಃ ।
ಭೂತಾನಾಂ ಭುವನೇಶಾನಾಂ ಪತಯೇ ಪಾಪಹಾರಿಣೇ ॥೧೫೯॥

---

ದೇವತೆಗಳು ಸ್ತುತಿಸಿದರು. ಶಿವನನ್ನು ನೋಡಿ ಪ್ರೀತಿಯಿಂದ ರೋಮಾಂಚ ಗೊಳ್ಳುವಂತೆ, ಇಂದ್ರನ ಆಜ್ಞೆಯ ಪ್ರಕಾರ ಆಕಾಶ ಚಾರಿಗಳಾದ ದೇವತೆ ಗಳೆಲ್ಲರೂ ಬಹಳ ಸಂತೋಷಗೊಂಡು ಹೂಮಳೆಯನ್ನು ಕರೆದರು. ದೇವತೆ ಗಳು ಹೇಳಿದರು. ರುದ್ರ ಭಕ್ತನೂ, ರುದ್ರಜಪದಲ್ಲಿ ನಿರತನೂ, ರುದ್ರ ಭಕ್ತರ ಸಂಕಟಗಳನ್ನು ನಿವಾರಣೆಮಾಡುವವನೂ, ಭಯಂಕರವಾದ ಸೇನಾನಾಯಕತ್ವವನ್ನು ವಹಿಸಿದವನೂ, ಕೂಷ್ಮಾಂಡಗಣಪತಿಯೂ ಯೋಗಿಗಳಿಗೆ ಅಧಿಪತಿಯೂ ಆದ ನಂದೀಶ್ವರನಿಗೆ ನಮಸ್ಕಾರಗಳು. ನೀನು ಸರ್ವವನ್ನೂ ಕೊಡುವವನೂ, ಲೋಕರಕ್ಷಕನೂ, ಸರ್ವವನ್ನೂ ತಿಳಿದವನೂ, ಜನಗಳ ಸಂಕಟವನ್ನು ನಿವಾರಣೆ ಮಾಡುವವನೂ, ವೇದ ಗಳಿಗೆ ಅಧಿದೇವತೆಯೂ, ವೇದಗಳಿಂದ ತಿಳಿಯಲ್ಪಡತಕ್ಕವನೂ ಆಗಿದ್ದೀಯೆ. ಅಂಥಾ ನಿನ್ನ ಮಂಗಳಸ್ವರೂಪಕ್ಕೆ ನಮಸ್ಕಾರಗಳು.

೧೫೭–೧೬೦. ವಜ್ರಾಯುಧ ಧಾರಿಯೂ, ವಜ್ರದಂತೆ ಗಟ್ಟಿಯಾದ ಕೋರೆದಾಡೆಗಳುಳ್ಳವನೂ, ಇಂದ್ರನ ವಜ್ರಾಯುಧವನ್ನು ನಾಶಮಾಡಿ ದವನೂ, ವಜ್ರಗಳಿಂದ ಅಲಂಕರಿಸಲ್ಪಟ್ಟ ಶರೀರವುಳ್ಳವನೂ, ಇಂದ್ರ ನಿಂದ ಪೂಜಿಸಲ್ಪಟ್ಟವನೂ ಕೆಂಪಗಿರುವವನೂ, ಕೆಂಪಗಿರುವ ಕಣ್ಣುಳ್ಳ ವನೂ, ಕೆಂಪುಬಟ್ಟೆಯನ್ನು ಧರಿಸಿದವನೂ, ಈಶ್ವರನ ಪಾದಕಮಲಗಳಲ್ಲಿ ಭಕ್ತಿಯುಳ್ಳವರಿಗೆ ರುದ್ರಲೋಕವನ್ನು ಪಡೆಯಿಸುವವನೂ, ಸೇನಾಧಿಪ

ರುದ್ರಾಯ ರುದ್ರಪತಯೇ ರೌದ್ರ ಪಾಪಹರಾಯ ತೇ ।
ನಮಃ ಶಿವಾಯ ಸೌಮ್ಯಾಯ ರುದ್ರ ಭಕ್ತಾಯ ತೇ ನಮಃ ॥೧೬೦॥

॥ ಸೂತ ಉವಾಚ ॥

ತತಃ ಪ್ರೀತೋ ಗಣಾಧ್ಯಕ್ಷಃ ಪ್ರಾಹ ದೇವಾಂ ಶ್ಶಿಲಾತ್ಮಜಃ ।
ರಥಂಚ ಸಾರಥಿಂ ಶಂಭೋಃ ಕಾರ್ಮುಕಂ ಶರಮುತ್ತಮಂ ॥೧೬೧॥

ಕರ್ತುಮರ್ಹಥ ಯತ್ನೇನ ನಷ್ಟಂ ಮತ್ವಾ ಪುರತ್ರಯಂ ।
ಅಥ ತೇ ಬ್ರಹ್ಮಣಾ ಸಾರ್ಧಂ ತಥಾ ವೈ ವಿಶ್ವಕರ್ಮಣಾ ॥೧೬೨॥

ರಥಂ ಚಕ್ರುಃ ಸು ಸಂರಬ್ಧಾ ದೇವದೇವಸ್ಯ ಧೀಮತಃ ॥೧೬೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ತ್ರಿಪುರ ದಾಹೇ
ನಂದಿಕೇಶ್ವರ ವಾಕ್ಯಂ ನಾಮ ಏಕ ಸಪ್ತತಿತಮೋಽಧ್ಯಾಯಃ

---

ತಿಯೂ ರುದ್ರರಿಗೆ ಒಡೆಯನೂ, ಆದ ನಂದೀಶ್ವರನಿಗೆ ನಮಸ್ಕಾರಗಳು. ಪ್ರಪಂಚಕ್ಕೆ ಒಡೆಯನಾದ, ಭೂತಗಳಿಗೆ ಒಡೆಯನೂ, ಪಾಪವನ್ನು ಹಾಳುಮಾಡುವವನೂ, ರುದ್ರಸ್ವರೂಪನೂ, ರುದ್ರರಿಗೆ ಒಡೆಯನೂ, ಭಯಂಕರವಾದ ಪಾಪಗಳನ್ನು ಹೋಗಲಾಡಿಸುವವನೂ, ಮಂಗಳಕರನೂ ಶಾಂತಸ್ವರೂಪನೂ, ರುದ್ರಭಕ್ತನೂ ಆದ ನಂದೀಶ್ವರನಿಗೆ ನಮಸ್ಕಾರಗಳು.

೧೬೧–೧೬೩. ಸೂತನು ಹೇಳಿದನು; ಅನಂತರದಲ್ಲಿ ದೇವತೆಗಳ ಸ್ತೋತ್ರದಿಂದ ಸಂತುಷ್ಟನಾದ ಶಿಲೆಯ ಮಗನಾದ, ಗಣಾಧಿಪತಿಯಾದ, ನಂದೀಶ್ವರನು ದೇವತೆಗಳನ್ನು ಕುರಿತು ಹೀಗೆ ಹೇಳಿದನು ಶಿವನಿಗೆ ಯೋಗ್ಯವಾದ ಉತ್ತಮವಾದ ಸಾರಥಿಯನ್ನೂ, ರಥವನ್ನೂ, ಶ್ರೇಷ್ಠವಾದ ಬಾಣ, ಧನುಸ್ಸುಗಳನ್ನೂ, ತ್ರಿಪುರವು ಇನ್ನೇನು ನಷ್ಟವಾದ ಹಾಗೆಯೇ! ಎಂದು ಭಾವಿಸಿ, ಪ್ರಯತ್ನ ಪೂರ್ವಕವಾಗಿ ಸಿದ್ಧಗೊಳಿಸಿರಿ. ಅನಂತರದಲ್ಲಿ ದೇವತೆಗಳು ವಿಶ್ವಕರ್ಮಬ್ರಹ್ಮನೊಡನೆ ಮಾತನಾಡಿ, ಅವನ ಮೂಲಕ, ದೇವಾಧಿದೇವತೆಯಾದ ಶಿವನಿಗೆ ಯೋಗ್ಯವಾದ ರಥವನ್ನು ಬಹಳ ಸಂಭ್ರಮದಿಂದ ಮಾಡಿಸಿದರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತ್ರಿಪುರಪಟ್ಟಣಗಳ
ದಾಹದ ವಿಚಾರದಲ್ಲಿ ನಂದಿಕೇಶ್ವರನ ವಾಕ್ಯ ಎಂಬ ಎಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
द्विसप्ततितमोऽध्यायः

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ದ್ವಿಸಪ್ತತಿತಮೋऽಧ್ಯಾಯಃ

॥ ಸೂತ ಉವಾಚ ॥

**ಅಥ ರುದ್ರಸ್ಯ ದೇವಸ್ಯ ನಿರ್ಮಿತೋ ವಿಶ್ವಕರ್ಮಣಾ ।**
**ಸರ್ವಲೋಕ ಮಯೋ ದಿವ್ಯೋ ರಥೋ ಯತ್ನೇನ ಸಾದರಂ ॥ ೧ ॥**

**ಸರ್ವಭೂತ ಮಯಶ್ಚೈವ ಸರ್ವದೇವ ನಮಸ್ಕೃತಃ ।**
**ಸರ್ವ ದೇವಮಯಶ್ಚೈವ ಸೌವರ್ಣಃ ಸರ್ವಸಂಮತಃ ॥ ೨ ॥**

**ರಥಾಂಗಂ ದಕ್ಷಿಣಂ ಸೂರ್ಯೋ ವಾಮಾಂಗಂ ಸೋಮ ಏವಚ ।**
**ದಕ್ಷಿಣಂ ದ್ವಾದಶಾರಂ ಹಿ ಶೋಡಶಾರಂ ತಥೋತ್ತರಂ ॥ ೩ ॥**

**ಅರೇಷು ತೇಷು ವಿಪ್ರೇಂದ್ರಾ ಶ್ಚಾದಿತ್ಯಾ ದ್ವಾದ ಶೈವತು ।**
**ಶಶಿನಃ ಷೋಡಶಾರೇಷು ಕಲಾ ವಾಮಸ್ಯ ಸುವ್ರತಾಃ ॥ ೪ ॥**

**ಋಕ್ಷಾಣಿ ಚ ತದಾ ತಸ್ಯ ವಾಮಸ್ಯೈವ ತು ಭೂಷಣಂ ।**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತೆರಡನೆಯ ಅಧ್ಯಾಯವು.

೧—೫. ಸೂತನು ಹೇಳಿದನು: ಸ್ವಾಮಿಯಾದ ಶಿವನಿಗೆ ವಿಶ್ವಕರ್ಮಬ್ರಹ್ಮನು ಬಹಳ ಪ್ರಯತ್ನಪಟ್ಟು, ಎಲ್ಲಾ ಲೋಕಗಳನ್ನೊಳಗೊಂಡಿರುವ ದಿವ್ಯವಾದ ರಥ ಒಂದನ್ನು ನಿರ್ಮಿಸಿದನು. ಇದು ಎಲ್ಲಾ ಭೂತಗಳಿಂದ ಪೂರ್ಣವಾಗಿರುವ, ಎಲ್ಲಾ ದೇವತೆಗಳಿಂದ ನಮಸ್ಕರಿಸಲ್ಪಟ್ಟದ್ದೂ, ಎಲ್ಲಾ ದೇವತೆಗಳಿಂದ ಪೂರ್ಣವಾದುದೂ, ಚಿನ್ನದ್ದೂ, ಎಲ್ಲರೂ ಒಪ್ಪುವಂಥದೂ ಆಗಿತ್ತು. ಈ ರಥದ ಬಲಚಕ್ರವು ಸೂರ್ಯನಾಗಿಯೂ, ಎಡಚಕ್ರವು ಚಂದ್ರನಾಗಿಯೂ, ಇದ್ದವು. ಬಲಭಾಗದ ಚಕ್ರದಲ್ಲಿ ಹನ್ನೆರಡು ಪಟ್ಟಿಗಳೂ ಉತ್ತರ ಭಾಗದ ಚಕ್ರದಲ್ಲಿ ಹದಿನಾರು ಪಟ್ಟಿಗಳೂ, ಇದ್ದವು. ಎಲೈ ಬ್ರಾಹ್ಮಣಶ್ರೇಷ್ಠರೇ, ಬಲಭಾಗದ ಪಟ್ಟಿಗಳಲ್ಲಿ ಹನ್ನೆರಡು ಸೂರ್ಯರೂ, ಎಡಭಾಗದ ಹದಿನಾರು ಪಟ್ಟಿಗಳಲ್ಲಿ ಚಂದ್ರ

ನೇಮ್ಯಃ ಷಡೃತವಶ್ಚೈವ ತಯೋರ್ವೈ ವಿಪ್ರ ಪುಂಗವಾಃ ॥ ೫ ॥
ಪುಷ್ಕರಂ ಚಾಂತರಿಕ್ಷಂ ವೈ ರಥನೀಡಶ್ಚ ಮಂದರಃ ।
ಅಸ್ತಾದ್ರಿ ರುದಯಾದ್ರಿಶ್ಚ ಉಭೌ ತೌ ಕೂಬರೌ ಸ್ಮೃತೌ ॥ ೬ ॥
ಅಧಿಷ್ಠಾನಂ ಮಹಾಮೇರು ರಾಶ್ರಯಾಃ ಕೇಸರಾಚಲಾಃ ।
ವೇಗಃ ಸಂವತ್ಸರಸ್ತಸ್ಯ ಅಯನೇ ಚಕ್ರಸಂಗಮೌ ॥ ೭ ॥
ಮುಹೂರ್ತಾ ಬಂಧುರಾಸ್ತಸ್ಯ ಶಮ್ಯಾ ಶ್ಚೈವ ಕಲಾಃ ಸ್ಮೃತಾಃ ।
ತಸ್ಯ ಕಾಷ್ಠಾಃ ಸ್ಮೃತಾ ಘೋಣಾ ಚಾಕ್ಷದಂಡಾಃ ಕ್ಷಣಾಶ್ಚ ವೈ ॥
ನಿಮೇಷಾಶ್ಚಾನು ಕರ್ಷಾಶ್ಚ ಈಷಾ ಚಾಽಸ್ಯ ಲವಾಃ ಸ್ಮೃತಾಃ ।
ದ್ಯೌರ್ವರೂಥಂ ರಥಸ್ಯಾಸ್ಯ ಸ್ವರ್ಗಮೋಕ್ಷಾವು ಭೌ ಧ್ವಜೌ ॥ ೯ ॥

---

ಕಲೆಗಳೂ ಇದ್ದುವು. ಎಡಭಾಗಕ್ಕೆ ಅಲಂಕಾರ ಪ್ರಾಯವಾಗಿ ನಕ್ಷತ್ರ ಗಳೇ ಇದ್ದವು. ಎಲೈ ಬ್ರಾಹ್ಮಣ ಶ್ರೇಷ್ಠರೇ, ಈ ಚಕ್ರಗಳ ಸುತ್ತ ಪಟ್ಟಿ ಗಳು ಆರು ಋತುಗಳೇ ಆಗಿದ್ದವೆಂದು ತಿಳಿಯಿರಿ.

೬–೧೦. ಈ ರಥದ ಒಳಪ್ರದೇಶವು ಆಕಾಶವೇ ಆಗಿತ್ತು. ಸಾರಥಿ ಕೂತುಕೊಳ್ಳುವ ಜಾಗವು ಮಂದರಪರ್ವತವೇ ಆಗಿತ್ತು. ಅಸ್ತಾ ಚಲ, ಮತ್ತು ಉದಯಪರ್ವತಗಳು, ರಥದ ನೊಗವನ್ನು ಹೊತ್ತಿದ್ದವು ರಥದ ನಿಲ್ದಾಣವು ಪೂಜ್ಯವಾದ ಮೇರುಪರ್ವತವಾಗಿಯೂ, ಇದಕ್ಕೆ ಆಶ್ರಯವಾದ ಸ್ಥಾನವು ಕೇಸರಪರ್ವತಗಳಾಗಿಯೂ, ಇದ್ದುವು. ರಥದ ವೇಗವು ಸಂವತ್ಸರಗಳೇ ಆಗಿತ್ತು. ಅಚ್ಚಿನ ಅಂಚುಗಳು ದಕ್ಷಿಣೋತ್ತರ ಗಳಾದ ದಿಕ್ಕುಗಳೇ ಆಗಿದ್ದವು. ರಥದ ವಿಶ್ರಾಂತಿಸ್ಥಾನವು ಮುಹೂರ್ತ ಗಳೂ, ಮತ್ತು "ಶಮ್ಯ" ಎಂಬ ಕಾಲದ ವಿಭಾಗಗಳೂ ಆಗಿದ್ದವು. ಹದಿನೆಂಟು ನಿಮಿಷ ಸ್ವರೂಪವಾದ ಕಾಲವು ಆ ರಥದ ಮರ ವಾಗಿಯೂ, ಚಕ್ರಗಳಿಗೆ ಆಧಾರವಾದ ಕೋಲುಗಳು,ಮುವತ್ತು ನಿಮಿಷ ಸ್ವರೂಪಗಳಾದ ಕಾಲದ ಭಾಗಗಳಾಗಿಯೂ, ಇದ್ದುವು. ರಥದ ಕೆಳ ಗಡೆಯ ಮರಗಳು ನಿಮಿಷಗಳಾಗಿಯೂ, ನೊಗದ ಮತ್ತು ಅಚ್ಚುಸೇರುವ ಪ್ರದೇಶವು ನಿಮಿಷಕ್ಕಿಂತಲೂ ಸೂಕ್ಷ್ಮವಾದ ಕಾಲವಾಗಿಯೂ, ಇದ್ದವು. ರಥದ ಮೇಲುಭಾಗವು ಸ್ವರ್ಗವಾಗಿಯೂ,

**ಧರ್ಮೋ ವಿರಾಗೋ ದಂಡೋಽಸ್ಯ ಯಜ್ಞಾ ದಂಡಾಶ್ರಯಾಃ ಸ್ಮೃತಾಃ ।**
**ದಕ್ಷಿಣಾಃ ಸಂಧಯಸ್ತಸ್ಯ ಲೋಹಾಃ ಪಂಚಾಶದಗ್ನಯಃ ॥೧೦॥**

**ಯುಗಾಂತಕೋಟೀ ತೌ ತಸ್ಯ ಧರ್ಮಕಾಮಾ ವುಭೌ ಸ್ಮೃತೌ ।**
**ಈಷಾದಂಡಸ್ತಥಾಽವ್ಯಕ್ತಂ ಬುದ್ಧಿಸ್ತಸ್ಯೈವ ನಡ್ವಲಃ ॥೧೧॥**

**ಕೋಣಸ್ತಥಾ ಹ್ಯಹಂಕಾರೋ ಭೂತಾನಿ ಚ ಬಲಂ ಸ್ಮೃತಂ ।**
**ಇಂದ್ರಿಯಾಣಿ ಚ ತಸ್ಯೈವ ಭೂಷಣಾನಿ ಸಮಂ ತತಃ ॥೧೨॥**

**ಶ್ರದ್ಧಾ ಚ ಗತಿ ರಸ್ಯೈವ ವೇದಾಸ್ತಸ್ಯ ಹಯಾಃ ಸ್ಮೃತಾಃ ।**
**ಪದಾನಿ ಭೂಷಣಾನ್ಯೇವ ಷಡಂಗಾನ್ಯುಪ ಭೂಷಣಂ ॥೧೩॥**

**ಪುರಾಣ ನ್ಯಾಯ ಮೀಮಾಂಸಾ ಧರ್ಮ ಶಾಸ್ತ್ರಾಣಿ ಸುವ್ರತಾಃ ।**
**ವಾಲಾಶ್ರಯಾಃ ಪಟಾಶ್ಚೈವ ಸರ್ವಲಕ್ಷಣ ಸಂಯುತಾಃ ॥೧೪॥**

---

ಮತ್ತು ರಥದ ಎರಡು ಬಾವುಟಗಳು ಸ್ವರ್ಗ, ಮತ್ತು ಮೋಕ್ಷಗಳಾಗಿಯೂ, ಇದ್ದುವು. ರಥದ ಬಾವುಟದ ಕೋಲು ರಾಗದ್ವೇಷವಿಲ್ಲದ ಧರ್ಮವೇ ಆಗಿತ್ತು. ಈ ಕೋಲಿಗೆ ಯಾಗಗಳೇ ಆಶ್ರಯಗಳಾಗಿದ್ದವು. ರಥದ ಸಂಧಿಪ್ರದೇಶಗಳು ಯಾಗದಲ್ಲಿ ಕೊಡುವ ದಕ್ಷಿಣೆಗಳೇ ಆಗಿದ್ದುವು. ಐವತ್ತು ಅಗ್ನಿಗಳೇ ರಥದ ಕಬ್ಬಿಣದ ಕೀಲುಗಳಾಗಿದ್ದವು.

೧೧–೧೫. ರಥದ ನೊಗದ ಅಂಚುಗಳು ಧರ್ಮಕಾಮಗಳೇ ಆಗಿದ್ದುವು. ಅವ್ಯಕ್ತವಾದ ಪ್ರಕೃತಿಯೇ ರಥದ ದಂಡವಾಗಿಯೂ, ಅಚ್ಚಿಗೆ ಹಾಕುವ ಎಣ್ಣೆಯು ಬುದ್ಧಿಯಾಗಿಯೂ, ರಥದ ಮೂಲೆಯು ಅಹಂಕಾರವಾಗಿಯೂ, ಆಕಾಶಾದಿ ಭೂತಗಳೇ ರಥದ ಶಕ್ತಿಯಾಗಿಯೂ, ಇಂದ್ರಿಯಗಳೇ ಆಭರಣಗಳಾಗಿಯೂ, ಇದರ ಗಮನವು ಶ್ರದ್ಧೆಯಾಗಿಯೂ, ವೇದಗಳೇ ಕುದುರೆಗಳಾಗಿಯೂ, ವೇದ ಪದ ಪಾಠಗಳು ಮತ್ತು ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳೇ ಇದರ ಬೇರೆ ಬೇರೆ ಅಲಂಕಾರಗಳಾಗಿಯೂ, ಪುರಾಣ, ತರ್ಕ

**ಮಂತ್ರಾ ಘಂಟಾಃ ಸ್ಮೃತಾಸ್ತೇಷಾಂ ವರ್ಣಾಃ ಪಾದಾಸ್ತಥಾ ಶ್ರಮಾಃ ।**
**ಅವಚ್ಛೇದೋಽಹ್ಯನಂತಸ್ತು ಸಹಸ್ರ ಫಣ ಭೂಷಿತಃ ॥೧೫॥**
**ದಿಶಃ ಪಾದಾ ರಥಸ್ಯಾಽಸ್ಯ ತಥಾ ಚೋಪ ದಿಶಶ್ಚ ಹ ।**
**ಪುಷ್ಕರಾದ್ಯಾಃ ಪತಾಕಾಶ್ಚ ಸೌವರ್ಣಾ ರತ್ನಭೂಷಿತಾಃ ॥೧೬॥**
**ಸಮುದ್ರಾಸ್ತಸ್ಯ ಚತ್ವಾರೋ ರಥ ಕಂಬಲಿಕಾಃ ಸ್ಮೃತಾಃ ।**
**ಗಂಗಾದ್ಯಾಃ ಸರಿತಃ ಶ್ರೇಷ್ಠಾಃ ಸರ್ವಾಭರಣ ಭೂಷಿತಾಃ ॥೧೭॥**
**ಚಾಮರಾ ಸಕ್ತ ಹಸ್ತಾಗ್ರಾಃ ಸರ್ವಾಃ ಸ್ತ್ರೀರೂಪ ಶೋಭಿತಾಃ ।**
**ತತ್ರ ತತ್ರ ಕೃತಸ್ಥಾನಾಃ ಶೋಭಯಾಂ ಚ ಕ್ರಿರೇ ರಥಂ ॥೧೮॥**
**ಆವಹಾದ್ಯಾ ಸ್ತಥಾ ಸಪ್ತ ಸೋಪಾನಂ ಹೈಮ ಮುತ್ತಮಂ ।**
**ಸಾರಥಿಃ ಭಗವಾನ್ ಬ್ರಹ್ಮಾ ದೇವಾಽಭೀಷುಧರಾಃ ಸ್ಮೃತಾಃ ॥೧೯॥**

---

ಶಾಸ್ತ್ರ, ಮೀಮಾಂಸಾಶಾಸ್ತ್ರ, ಧರ್ಮಶಾಸ್ತ್ರಗಳು, ಈ ರಥದ ಬಟ್ಟೆಗಳಾಗಿಯೂ, ಎಲ್ಲಾ ಲಕ್ಷಣಗಳಿಂದ ಕೂಡಿದ ಮಂತ್ರಗಳು ಇತರ ಘಂಟೆಗಳಾಗಿಯೂ, ಗಾಯತ್ರಿಯೇ ಮೊದಲಾದ ಮಂತ್ರಗಳು, ಕಕಾರವೇ ಮೊದಲಾದ ಅಕ್ಷರಗಳು ಮತ್ತು ಬ್ರಹ್ಮಚರ್ಯವೇ ಮೊದಲಾದ ಆಶ್ರಮಗಳು ಆ ಬಟ್ಟೆಗಳ ಘಂಟೆಗಳಾಗಿಯೂ, ಇದ್ದುವು. ರಥಕ್ಕೆ ಕಟ್ಟುವ ಹಗ್ಗವು ಸಾವಿರ ಹೆಡೆಗಳಿಂದ ಪ್ರಕಾಶಮಾನನಾದ ಶೇಷ ಸರ್ಪನೇ ಆಗಿದ್ದನು.

೧೬–೨೧. ಈ ರಥದ ಕಾಲುಗಳು ನಾಲ್ಕುದಿಕ್ಕುಗಳೂ ಮತ್ತು ಉಪದಿಕ್ಕುಗಳೂ, ಪುಷ್ಕರವೇ ಮೊದಲಾದ ಮೋಡಗಳು, ಚಿನ್ನದಿಂದ ಮಾಡಿದ ರತ್ನಖಚಿತವಾದ ಬಾವುಟಗಳಾಗಿಯೂ, ಇದ್ದುವು. ಇದಕ್ಕೆ ಸಮುದ್ರಗಳೇ ರಥಕ್ಕೆ ಹೊದಿಸುವ ಕಂಬಳಿಗಳಾಗಿದ್ದುವು. ಗಂಗೆಯೇ ಮೊದಲಾದ ಮಹಾನದಿಗಳು ಹೆಂಗಸಿನ ರೂಪದಿಂದ ಶೋಭಿಸುತ್ತಾ ಅನೇಕ ಆಭರಣಗಳಿಂದ ಪ್ರಕಾಶಿಸುತ್ತಾ ಚಾಮರಗಳನ್ನು ಕೈಗಳಲ್ಲಿ ಹಿಡಿದು ಕೊಂಡು ಅಲ್ಲಲ್ಲಿ ರಥದಲ್ಲಿದ್ದು ಇದಕ್ಕೆ ಅಲಂಕಾರ ಪ್ರಾಯರಾಗಿದ್ದರು. ಆವಹವೇ ಮೊದಲಾದ ಏಳುಬಗೆಯ ವಾಯುಗಳು ಈ ರಥದ ಶ್ರೇಷ್ಠವಾದ ಚಿನ್ನದ ಮೆಟ್ಟಲುಗಳಾಗಿದ್ದವು. ಬ್ರಹ್ಮನು ಸಾರಥಿಯಾಗಿಯೂ, ದೇವತೆ

**ಪ್ರತೋದೋ ಬ್ರಹ್ಮಣಸ್ತಸ್ಯ ಪ್ರಣವೋ ಬ್ರಹ್ಮ ದೈವತಂ ।**
**ಲೋಕಾ ಲೋಕಾ ಚಲಸ್ತಸ್ಯ ಸ ಸೋಪಾನಃ ಸಮಂ ತತಃ ॥೨೦॥**
**ವಿಷಮಶ್ಚ ತದಾ ಬಾಹ್ಯೋ ಮಾನಸಾದ್ರಿಃ ಸು ಶೋಭನಃ ।**
**ನಾಸಾಃ ಸಮಂತತ ಸ್ತಸ್ಯ ಸರ್ವ ಏವಾಚಲಾಃ ಸ್ಮೃತಾಃ ॥೨೧॥**
**ತಲಾಃ ಕಪೋತಾಃ ಕಾಪೋತಾಃ ಸರ್ವೇ ತಲ ನಿವಾಸಿನಃ ।**
**ಮೇರು ರೇವ ಮಹಾ ಛತ್ರಂ ಮಂದರಃ ಪಾರ್ಶ್ವ ಡಿಂಡಿಮಃ ॥೨೨॥**
**ಶೈಲೇಂದ್ರಃ ಕಾರ್ಮುಕಂ ಚೈವ ಜ್ಯಾ ಭುಜಂಗಾಧಿಪಃ ಸ್ವಯಂ ।**
**ಕಾಲರಾತ್ರ್ಯ ತಥೈವೇಹ ತಥೇಂದ್ರ ಧನುಷಾ ಪುನಃ ॥೨೩॥**
**ಘಂಟಾ ಸರಸ್ವತೀ ದೇವೀ ಧನುಷಃ ಶ್ರುತಿರೂಪಿಣೀ ।**
**ಇಷು ರ್ವಿಷ್ಣು ರ್ಮಹಾತೇಜಾಃ ಶಲ್ಯಂ ಸೋಮಃ ಶರಸ್ಯ ಚ ॥೨೪॥**

---

ಗಳು ಲಗಾಮನ್ನು ಹಿಡಿಯುವವರಾಗಿಯೂ, ಇದ್ದರು. ಈ ರಥಕ್ಕೆ ಓಂಕಾರವೇ ಚಾವಟಿಯಾಗಿತ್ತು, ಪರಬ್ರಹ್ಮನೇ ಅಧಿದೇವತೆಯಾಗಿದ್ದನು "ಲೋಕಾಲೋಕ" ಎಂಬ ಪರ್ವತಗಳು ಅದರ ಮೆಟ್ಟಲುಗಳೊಂದಿಗೆ ಸಮನಾಗಿ ರಥವನ್ನು ಸುತ್ತಿಕೊಂಡಿದ್ದುವು. ಈ ರಥದ ಬಲಗಡೆಯ ಕಾಲಿಡುವ ಪ್ರದೇಶವು, ಮಾನಸ ಪರ್ವತವಾಗಿಯೂ, ಬೇರೆ ಪರ್ವತಗಳೆಲ್ಲವೂ, ರಥದ ಸುತ್ತಲಿನ ಮೂಲೆಯ ಮರಗಳಾಗಿಯೂ ಇದ್ದವು.

೨೨–೨೭. ಈ ರಥದ ಏಳು ತಳಪ್ರದೇಶಗಳು ಬಹಳ ಆಳವಾಗಿದ್ದುವು. ಈ ಅತ್ಯಂತ ಹಳ್ಳದಲ್ಲಿ ಇದ್ದವರು ಕೇವಲ ಪಾರಿವಾಳದ ಪಕ್ಷಿಗಳಂತೆ ಬಹು ಸಣ್ಣಗೆ ಕಾಣುತ್ತಿದ್ದರು. ಈ ರಥಕ್ಕೆ ದೊಡ್ಡ ಛತ್ರಿಯು ಮೇರುಪರ್ವತವೇ ಆಗಿತ್ತು. ಪಕ್ಕದಲ್ಲಿ ಬಾರಿಸುವ ವಾದ್ಯಗಳು ಮಂದರ ಪರ್ವತವೇ ಆಗಿದ್ದುವು. ಮೇರುಪರ್ವತ, ಸರ್ಪಶ್ರೇಷ್ಠನಾದ ವಾಸುಕಿ, ಕಾಲರಾತ್ರಿ, ಮತ್ತು ವಜ್ರಾಯುಧಗಳೊಡನೆ ಈ ರಥದಲ್ಲಿ ಉಪಯೋಗಿಸುವ ಬಿಲ್ಲು ಹೆದೆಗಳಾಗಿದ್ದರು. ವೇದಸ್ವರೂಪಳಾದ ಸರಸ್ವತೀದೇವಿಯೇ ಬಿಲ್ಲಿನ ಘಂಟೆಯಾಗಿಯೂ, ಬಹಳ ತೇಜಸ್ವಿಯಾದ ವಿಷ್ಣುವೇ ಬಾಣವಾಗಿಯೂ, ಚಂದ್ರನು ಬಾಣದ ಚೂಪಾದ ತುದಿಯಾಗಿಯೂ,

ಕಾಲಾಗ್ನಿಸ್ತತ್ಛರಸ್ಯೈವ ಸಾಕ್ಷಾತ್ತೀಕ್ಷ್ಣಃ ಸುದಾರುಣಃ ।
ಅನೀಕಂ ವಿಷ ಸಂಭೂತಂ ವಾಯುವೋ ವಾಜಕಾಃ ಸ್ಮೃತಾಃ ॥೨೫॥

ಏವಂ ಕೃತ್ವಾ ರಥಂ ದಿವ್ಯಂ ಕಾರ್ಮುಕಂ ಚ ಶರಂ ತಥಾ ।
ಸಾರಥಿಂ ಜಗತಾಂ ಚೈವ ಬ್ರಹ್ಮಾಣಂ ಪ್ರಭು ಮೀಶ್ವರಂ ॥೨೬॥

ಆರುರೋಹ ರಥಂ ದಿವ್ಯಂ ರಣಮುಂಡನ ಧೃಗ್ಭವಃ ।
ಸರ್ವ ದೇವಗಣೈಃ ಯುಕ್ತಂ ಕಂಪಯನ್ನಿವ ರೋದಸೀ ॥೨೭॥

ಋಷಿಭಿಃ ಸ್ತೂಯಮಾನಶ್ಚ ವಂದ್ಯ ಮಾನಶ್ಚ ವಂದಿಭಿಃ ।
ಉಪನೃತ್ಯ ಶ್ಚಾಪ್ಸರಸಾಂ ಗಣೈರ್ನೃತ್ಯ ವಿಶಾರದೈಃ ॥೨೮॥

ಸು ಶೋಭಮಾನೋ ವರದಃ ಸಂಪ್ರೇಕ್ಷ್ಯೈವ ಚ ಸಾರಥಿಂ ।
ತಸ್ಮಿನ್ನಾರೋಹತಿ ರಥಂ ಕಲ್ಪಿತಂ ಲೋಕ ಸಂಭೃತಂ ॥೨೯॥

ಶಿರೋಭಿಃ ಪತಿತಾ ಭೂಮಿಂ ತುರಗಾ ವೇದಸಂಭವಾಃ ।
ಅಥಾಽಧಸ್ತಾದ್ರಥಸ್ಯಾಽಸ್ಯ ಭಗವಾನ್ಧರಣೀ ಧರಃ ॥೩೦॥

---

ಈ ಬಾಣಕ್ಕೆ ಪ್ರಳಯಕಾಲದ ಬೆಂಕಿಯೇ ಬಹಳ ತೀಕ್ಷ್ಣವಾದ ತುದಿಯಾಗಿಯೂ, ಕಾಲಕೂಟ ವಿಷವೇ ಶಕ್ತಿಯಾಗಿಯೂ, "ಅವಹವೇ" ಮುಂತಾದ ವಾಯುಗಳೇ ವೇಗಗಳಾಗಿಯೂ, ಇದ್ದವು. ಹೀಗೆ ದಿವ್ಯವಾದ ರಥವನ್ನೂ, ಬಿಲ್ಲನ್ನೂ, ಬಾಣವನ್ನೂ, ಜಗತ್ತನ್ನೂ, ಸೃಷ್ಟಿಸಿದ ನಡೆಸುತ್ತಿರುವ ಬ್ರಹ್ಮನನ್ನು ಸಾರಥಿಯಾಗಿಯೂ, ಮಾಡಿಕೊಂಡು ಯುದ್ಧದ ಅಲಂಕಾರಗಳನ್ನು ಧರಿಸಿದ ಶಿವನು ಎಲ್ಲಾ ದೇವತೆಗಳೂ ಮತ್ತು ಗಣಗಳೊಂದಿಗೆ ಭೂವ್ಯಾಕಾಶಗಳನ್ನು ನಡುಗಿಸುವನೋ ಎಂಬಂತೆ ಈ ದಿವ್ಯವಾದ ರಥಕ್ಕೆ ಹತ್ತಿದನು.

೨೮-೩೧. ಶಿವನು ಋಷಿಗಳಿಂದ ನಮಸ್ಕಾರ ಮಾಡಲ್ಪಡುವವನಾಗಿಯೂ, ಹೊಗಳುಭಟರಿಂದ ಸ್ತೋತ್ರಮಾಡಲ್ಪಡುವವನಾಗಿಯೂ, ನಾಟ್ಯದಲ್ಲಿ ಚತುರರಾದ ಅಪ್ಸರಸ್ಸುಗಳ ನಾಟ್ಯವನ್ನು ನೋಡುತ್ತಲೂ, ವರವನ್ನು ಕೊಡಲು ಸಮರ್ಥನಾದ ಸ್ವಾಮಿಯು, ಬಹಳ ಪ್ರಕಾಶವಾನನಾಗಿದ್ದನು. ಸಕಲ ಲೋಕಮಯವಾಗಿ ರಚಿತವಾಗಿರುವ ಈ ರಥವನ್ನೂ ಸಾರಥಿಯನ್ನೂ ನೋಡಿ, ನಗುತ್ತಾ ಹತ್ತಿದನು. ಆದರೆ ವೇದ

ವೃಷೇಂದ್ರ ರೂಪೀ ಚೋತ್ಥಾಪ್ಯ ಸ್ಥಾಪಯಾ ಮಾಸ ವೈ ಕ್ಷಣಂ ।
ಕ್ಷಣಾಂತರೇ ವೃಷೇಂದ್ರೋಽಪಿ ಜಾನುಭ್ಯಾ ಮಗಮದ್ಧರಾಂ ॥೩೧॥
ಅಭೀಷು ಹಸ್ತೋ ಭಗವಾ ನುದ್ಯಮ್ಯ ಚ ಹಯಾನ್ವಿಭುಃ ।
ಸ್ಥಾಪಯಾ ಮಾಸ ದೇವಸ್ಯ ವಚನಾದ್ವೈ ರಥಂ ಶುಭಂ ॥೩೨॥
ತತೋಽಶ್ವಾಂ ಶ್ಚೋದಯಾ ಮಾಸ ಮನೋ ಮಾರುತ ರಂಹಸಃ ।
ಪುರಾಣ್ಯುದ್ದಿಶ್ಯ ಸ್ವಸ್ಥಾನಿ ದಾನವಾನಾಂ ತರಸ್ವಿನಾಂ ॥೩೩॥
ಅಥಾಽಹ ಭಗವಾನ್ರುದ್ರೋ ದೇವಾನಾಽಲೋಕ್ಯ ಶಂಕರಃ ।
ಪಶೂನಾ ಮಾಧಿಪತ್ಯಂ ಮೇ ದತ್ತಂ ಹನ್ಮಿ ತತೋಽಸುರಾನ್ ॥೩೪॥
ಪೃಥುಕ್ಪಶುತ್ವಂ ದೇವಾನಾಂ ತಥಾಽನ್ಯೇಷಾಂ ಸುರೋತ್ತಮಾಃ ।
ಕಲ್ಪಯಿತ್ವೈವ ವಧ್ಯಾಸ್ತೇ ನಾಽನ್ಯಥಾ ದೇವಸತ್ತಮಾಃ ॥೩೫॥
ಇತಿ ಶ್ರುತ್ವಾ ವಚಃ ಸರ್ವಂ ದೇವದೇವಸ್ಯ ಧೀಮತಃ ।
ವಿಷಾದ ಮಗಮನ್ಸರ್ವೇ ಪಶುತ್ವಂ ಪ್ರತಿ ಶಂಕಿತಾಃ ॥೩೬॥

---

ದಿಂದ ಹುಟ್ಟಿದ ಕುದುರೆಗಳು ತಲೆಕೆಳಗೆ ಮಾಡಿ ಭೂಮಿಗೆ ಬಿದ್ದವು. ಆದರೆ ತಳಗಡೇ ಭೂಮಿಯನ್ನು ಹೊತ್ತಿರುವ ವೃಷೇಂದ್ರನು ತಕ್ಷಣ ಎಬ್ಬಿಸಿ ಇವುಗಳನ್ನು ನೆಟ್ಟಗೆ ಮಾಡಿದನು. ಉತ್ತರ ಕ್ಷಣದಲ್ಲಿ ವೃಷೇಂದ್ರನೂ, ಭೂಮಿಯ ಕೆಳಗಡೆ ಹೊರಟು ಹೋದನು.

೩೨–೩೬. ಪೂಜ್ಯನಾದ ಬ್ರಹ್ಮನು ಶಿವನ ಆಜ್ಞೆಯ ಪ್ರಕಾರ ಲಗಾಮನ್ನು ಸರಿಯಾಗಿ ಎಳೆದು, ಕುದರೆಗಳನ್ನು ಹತೋಟಿಗೆ ತಂದು ರಥವನ್ನು ಸರಿಯಾಗಿ ನಿಲ್ಲಿಸಿದನು. ಅನಂತರದಲ್ಲಿ ಅವನು, ಮನಸ್ಸು, ವಾಯುಗಳಂತೆ ವೇಗವುಳ್ಳ, ಇಲ್ಲಿಯವರೆಗೂ ಶಾಂತವಾಗಿದ್ದ, ಕುದುರೆಗಳನ್ನು, ವೇಗವುಳ್ಳ ರಾಕ್ಷಸರ ಪಟ್ಟಣಗಳ ಕಡೆಗೆ ಓಡಿಸಿದನು. ಅನಂತರ ಶಿವನು ದೇವತೆಗಳನ್ನು ಕುರಿತು, ನಾನು ಪಶುಗಳಿಗೆ ಅಧಿಪತಿಯಾಗಿರುವುದರಿಂದ. ಈ ರಾಕ್ಷಸರನ್ನು ಕೊಲ್ಲಬಲ್ಲೆನು. ಆದ್ದರಿಂದ ದೇವತೆಗಳಾದ ನೀವೆಲ್ಲರೂ, ಪಶುಗಳಾಗಬೇಕು. ಹಾಗಲ್ಲದಿದ್ದರೆ ಇವರನ್ನು ಕೊಲ್ಲಲಾಗುವುದಿಲ್ಲ, ಎಂದು ಹೇಳಿದನು· ದೇವದೇವನಾದ

**ತೇಷಾಂ ಭಾವಂ ತತೋ ಜ್ಞಾತ್ವಾ ದೇವಸ್ತ್ವಾನಿದ ಮಬ್ರವೀತ್ ।**
**ಮಾ ವೋಽಸ್ತು ಪಶುಭಾವೇಽಸ್ಮಿನ್ಭಯಂ ವಿಬುಧ ಸತ್ತಮಾಃ ॥೩೭॥**
**ಶ್ರೂಯತಾಂ ಪಶುಭಾವಸ್ಯ ವಿಮೋಕ್ಷಃ ಕ್ರಿಯತಾಂ ಚ ಸಃ ।**
**ಯೋ ವೈ ಪಾಶುಪತಂ ದಿವ್ಯಂ ಚರಿಷ್ಯತಿ ಸ ಮೋಕ್ಷ್ಯತಿ ॥೩೮॥**
**ಪಶುತ್ವಾದಿತಿ ಸತ್ಯಂ ಚ ಪ್ರತಿಜ್ಞಾತಂ ಸಮಾಹಿತಾಃ ।**
**ಯೇ ಚಾಽಪ್ಯನ್ಯೇ ಚರಿಷ್ಯಂತಿ ವ್ರತಂ ಪಾಶುಪತಂ ಮಮ ॥೩೯॥**
**ಮೋಕ್ಷ್ಯಂತಿ ತೇ ನ ಸಂದೇಹಃ ಪಶುತ್ವಾತ್ಸುರಸತ್ತಮಾಃ ।**
**ನೈಷ್ಠಿಕಂ ದ್ವಾದಶಾಬ್ದಂ ವಾ ತದರ್ಧಂ ವರ್ಷಕತ್ರಯಂ ॥೪೦॥**
**ಶುಶ್ರೂಷಾಂ ಕಾರಯೇ ದ್ಯಸ್ತು ಸ ಪಶುತ್ವಾ ದ್ವಿಮುಚ್ಯತೇ ।**
**ತಸ್ಮಾತ್ಪರಮಿದಂ ದಿವ್ಯಂ ಚರಿಷ್ಯಥ ಸುರೋತ್ತಮಾಃ ॥೪೧॥**

---

ಶಿವನ ಮಾತನ್ನು ಕೇಳಿ, ತಾವು ಪಶುಗಳಾಗಲು ಕಳವಳಗೊಂಡು, ಎಲ್ಲಾ ದೇವತೆಗಳೂ ದುಃಖಕ್ಕೀಡಾದರು. ಇವರ ಮನೋಭಾವವನ್ನು ಅರಿತ ಪರಮೇಶ್ವರನು ಅವರನ್ನು ಕುರಿತು, ನೀವು ಪಶುಗಳಾಗಲು ಹೆದರಬೇಕಾದುದಿಲ್ಲ! ಎಂದು ಹೇಳಿದನು.

೩೮–೪೨. ಶಿವನು ದೇವತೆಗಳನ್ನು ಕುರಿತು, ನಿಮ್ಮ ಪಶುರೂಪವು ವಿಮೋಚನೆಯಾಗುವ ಪರಿಹಾರೋಪಾಯವನ್ನು ತಿಳಿಸುವೆನು. ಯಾರು ದಿವ್ಯವಾದ ಪಾಶುಪತ ವ್ರತವನ್ನು ಆಚರಿಸುವರೋ ಅವರಿಗೆ ಪಶುಭಾವವು ಹೊರಟು ಹೋಗುವುದು. ಇದು ಸತ್ಯ. ಸಮಾಧಾನದಿಂದ ಯಾರು ಈ ಪಾಶುಪತ ವ್ರತವನ್ನು ನೆಡೆಸಿದಾಗ್ಯೂ ಅವರಿಗೆ ಪಶುಭಾವವು ತೊಲಗುವುದು. ಒಳ್ಳೆಯ ಶ್ರದ್ಧೆಯಿಂದ ವ್ರತಧಾರಿಯಾಗಿ ಹನ್ನೆರಡು ವರ್ಷಗಳಾಗಲಿ, ಅಥವಾ ಅದರ ಅರ್ಧವಾದ ಆರುವರ್ಷಗಳಾಗಲಿ, ಅಥವಾ ಮೂರು ವರ್ಷಗಳಾಗಲಿ, ಯಾರು ಈ ಪಾಶುಪತ ವ್ರತವನ್ನುಮಾಡಿದರೂ, ಅವರಿಗೆ ಪಶುತ್ವವು ತೊಲಗುವುದು. ಆದ್ದರಿಂದ ನೀವು ತಾತ್ಕಾಲಿಕವಾಗಿ ಪಶುಗಳಾದರೂ, ಅನಂತರದಲ್ಲಿ ಪಾಶುಪತ ವ್ರತಾಚರಣೆಯನ್ನು ಮಾಡಿ, ನಿಮ್ಮ ಪಶುಭಾವವನ್ನು ಕಳೆದುಕೊಳ್ಳುವಿರಿ. ಇದನ್ನು ಕೇಳಿ

ತಥೇತಿ ಚಾಽಬ್ರುವ ನ್ದೇವಾಃ ಶಿವೇ ಲೋಕ ನಮಸ್ಕೃತೇ।
ತಸ್ಮಾದ್ವೈ ಪಶವಃ ಸರ್ವೇ ದೇವಾಸುರ ನರಾಃ ಪ್ರಭೋಃ ॥೪೨॥
ರುದ್ರಃ ಪಶುಪತಿ ಶ್ಚೈವ ಪಶುಪಾಶ ವಿಮೋಚಕಃ।
ಯಃ ಪಶು ಸ್ತತ್ಪಶುತ್ವಂ ಚ ವ್ರತೇನಾಽನೇನ ಸಂತ್ಯಜೇತ್ ॥೪೩॥
ತತ್ಕೃತ್ವಾ ನ ಚ ಪಾಪೀಯಾನಿತಿ ಶಾಸ್ತ್ರಸ್ಯ ನಿಶ್ಚಯಃ।
ತತೋ ವಿನಾಯಕಃ ಸಾಕ್ಷಾದ್ಬಾಲೋಽ ಬಾಲಪರಾಕ್ರಮಃ ॥೪೪॥
ಅಪೂಜಿತ ಸ್ತದಾ ದೇವೈಃ ಪ್ರಾಹ ದೇವಾ ನ್ನಿವಾರಯನ್।

॥ ಶ್ರೀ ವಿನಾಯಕ ಉವಾಚ ॥

ಮಾಮ ಪೂಜ್ಯ ಜಗತ್ಯಸ್ಮಿನ್ ಭಕ್ಷ್ಯ ಭೋಜ್ಯಾದಿಭಿಃ ಶುಭೈಃ ॥೪೫॥
ಕಃ ಪುಮಾ ನ್ಸಿದ್ಧಿಮಾಪ್ನೋತಿ ದೇವೋ ವಾ ದಾನವೋಽ ಪಿ ವಾ।
ತತ ಸ್ತಸ್ಮಿನ್ ಕ್ಷಣಾದೇವ ದೇವಕಾರ್ಯೇ ಸುರೇಶ್ವರಾಃ ॥೪೬॥

---

ದೇವಶ್ರೇಷ್ಠರು ಶಿವನ ಆಜ್ಞೆಯಂತೆ ನಡೆಯಲು ಸಮ್ಮತಿಸಿದರು. ಆದ ರಿಂದ ಈ ಯುದ್ಧದ ಕಾಲದಲ್ಲಿ ದೇವತೆಗಳೆಲ್ಲರೂ ಶಿವನಿಗೆ ಪಶುಗಳಾದರು.

೪೩. ಈಶ್ವರನು ಪಶುಗಳಿಗೆ ಒಡೆಯನೂ, ಅವರ ಪಶುಭಾವವನ್ನು ಹೋಗಲಾಡಿಸುವವನೂ, ಆಗಿದ್ದಾನೆ. ಯಾವನು ಪಶುಭಾವವನ್ನು ಹೊಂದಿದ್ದಾನೆಯೋ ಅವನು ಪಾಶುಪತ ವ್ರತಾಚರಣೆಯಿಂದ ಅವನ ಪಶು ಭಾವವನ್ನು ಕಳೆದುಕೊಳ್ಳಬಹುದೆಂಬುದರಲ್ಲಿ ಸಂದೇಹವಿಲ್ಲ.

೪೪–೪೯. ಯಾವನೇ ಆಗಲಿ, ಪಾಶುಪತ ವ್ರತವನ್ನು ಆಚರಿಸಿ, ಪಾಪ ವಿಮುಕ್ತನಾಗುವನೆಂಬುದು, ಶಾಸ್ತ್ರದಲ್ಲಿ ನಿಶ್ಚಯಿಸಲ್ಪಟ್ಟದೆ. ಅನಂತರ ಬಾಲಕನೂ, ಯೌವನಸ್ಥನಿಗಿರಬೇಕಾದ ಶೌರ್ಯವುಳ್ಳವನೂ, ಆದ ವಿಘ್ನೇಶ್ವರನೂ, ದೇವತೆಗಳಿಂದ ಪೂಜಿಸಲ್ಪಡದಿರಲು, ದೇವತೆಗಳನ್ನು ತಡೆಯುತ್ತಾ ಅವರನ್ನು ಕುರಿತು ಹೀಗೆ ಹೇಳಿದನು, ಶ್ರೀವಿನಾಯಕನು ಹೇಳಿದನು :—ದೇವತೆಯಾಗಲಿ, ರಾಕ್ಷಸರಾಗಲಿ, ಅಥವಾ ಯಾರೇ ಆಗಲಿ, ನನ್ನನ್ನು ಮೊದಲು ಭಕ್ಷ್ಯ ಭೋಜ್ಯಾದಿಗಳಿಂದ ಪೂಜಿಸದೇ ತನ್ನ

ವಿಘ್ನಂ ಕರಿಷ್ಯೇ ದೇವೇಶ ಕಥಂ ಕರ್ತುಂ ಸಮುದ್ಯತಾಃ ।
ತತಃ ಸೇಂದ್ರಾಃ ಸುರಾಃ ಸರ್ವೇ ಭೀತಾಃ ಸಂಪೂಜ್ಯ ತಂ ಪ್ರಭುಂ ॥
ಭಕ್ಷ್ಯ ಭೋಜ್ಯಾದಿಭಿ ಶ್ಚೈವ ಉಂಡರೈಶ್ಚೈವ ಮೋದಕೈಃ ।
ಅಬ್ರುವಂ ಸ್ತೇ ಗಣೇಶಾನಂ ನಿರ್ವಿಘ್ನಂ ಚಾಽಸ್ತು ನಃ ಸದಾ ॥೪೮॥
ಭವೋಽ ಪ್ಯನೇಕೈಃ ಕುಸುಮೈ ರ್ಗಣೇಶಂ ।
ಭಕ್ಷ್ಯೈಶ್ಚ ಭೋಜ್ಯೈಃ ಸುರಸೈಃ ಸುಗಂಧೈಃ ॥
ಆಲಿಂಗ್ಯ ಚಾಘ್ರಾಯ ಸುತಂ ತದಾನೀ ।
ಮ ಪೂಜಯ ತ್ಸರ್ವ ಸುರೇಂದ್ರ ಮುಖ್ಯಃ ॥೪೯॥
ಸಂಪೂಜ್ಯ ಪೂಜ್ಯಂ ಸಹ ದೇವ ಸಂಘೈಃ ।
ವಿನಾಯಕಂ ನಾಯಕ ಮೀಶ್ವರಾಣಾಂ ॥
ಗಣೇಶ್ವರೈರೇವ ನಗೇಂದ್ರ ಧನ್ವಾ ।
ಪುರತ್ರಯಂ ದಗ್ಧು ಮಸೌ ಜಗಾಮ ॥೫೦॥

---

ಕಾರ್ಯಸಿದ್ಧಿಯನ್ನು ಪಡೆಯುವನು? ಎಲೈ ದೇವತೆಗಳೇ, ಆದ್ದರಿಂದ ನಿಮ್ಮ ಕೆಲಸಕ್ಕೆ ಈಕ್ಷಣವೇ ಅಡ್ಡಿಯನ್ನುಂಟುಮಾಡುವೆನು. ಅನಂತರ ಇಂದ್ರನೇ ಮೊದಲಾದ ಸಮಸ್ತ ದೇವತೆಗಳೂ ಭಯಗೊಂಡವರಾಗಿ ನಾನಾ ವಿಧವಾದ ತಿಂಡಿಗಳೂ, ಸೊಗಸಾದ ಭೋಜನ ಪದಾರ್ಥಗಳೂ, ಉಂಡೆಗಳೂ, ಕಡುಬುಗಳೂ ಇವುಗಳಿಂದ ವಿಘ್ನೇಶ್ವರನನ್ನು ಪೂಜಿಸಿ "ಓ ಸ್ವಾಮಿಯೇ ನಮಗೆ ವಿಘ್ನವು ಯಾವಾಗಲೂ ಬಾರದಂತೆ ದಯಮಾಡು." ಎಂದು ಅವನನ್ನು ಪ್ರಾರ್ಥಿಸಿದರು. ಸಕಲ ದೇವಶ್ರೇಷ್ಠರಿಗೂ ಅಧಿಪತಿಯಾದ ಶಿವನೂ ಕೂಡ ಅನೇಕ ಬಗೆಯ ಹೂಗಳಿಂದಲೂ, ತಿಂಡಿಗಳಿಂದಲೂ ಆಹಾರ ಪದಾರ್ಥಗಳಿಂದಲೂ, ಮಗನಾದ ಗಣೇಶನನ್ನು ಪೂಜಿಸಿ, ಅವನನ್ನು ಆಲಿಂಗಿಸಿ, ಅವನ ತಲೆಯನ್ನು ಮೂಸಿನೋಡಿ, ಅವನನ್ನು ಬಹಳ ಸಂತೋಷಪಡಿಸಿದನು.

೫೦–೫೪. ಶಿವನು ದೇವತೆಗಳೊಡನೆ ಗಣಾಧಿಪತಿಗಳಿಗೆಲ್ಲರಿಗೂ ಒಡೆಯನಾದ, ಪೂಜ್ಯನಾದ ವಿನಾಯಕನನ್ನು ಹೀಗೆ ಪೂಜಿಸಿ, ಗಣಾಧಿಪತಿಗಳ ಜೊತೆಯಲ್ಲಿ ಮೇರು ಪರ್ವತವನ್ನೇ ಬಿಲ್ಲಾಗಿಮಾಡಿಕೊಂಡು ತ್ರಿಪುರವನ್ನು ಸುಡಲು ಹೊರಟು ಹೋದನು. ದೇವರಿಗೆಲ್ಲರಿಗೂ ದೇವರಾದ ಮಹೇಶ್ವರನನ್ನು ದೇವತೆಗಳು, ಸಿದ್ಧರು, ಭೂತಗಳ ಗುಂಪು, ಗಣಾಧಿ

ತಂ ದೇವದೇವಂ ಸುರ ಸಿದ್ಧಸಂಘಾಃ ।
ಮಹೇಶ್ವರಂ ಭೂತ ಗಣಾಶ್ಚ ಸರ್ವೇ॥
ಗಣೇಶ್ವರಾ ನಂದಿ ಮುಖಾ ಸ್ತದಾನೀಂ ।
ಸ್ವವಾಹನೈ ರನ್ವಯುರೀಶ ಮೀಶಾಃ ॥೫೧॥

ಅಗ್ರೇ ಸುರಾಣಾಂ ಚ ಗಣೇಶ್ವರಾಣಾಂ।
ತದಾಽಥ ನಂದೀ ಗಿರಿ ರಾಜ ಕಲ್ಪಂ॥
ವಿಮಾನ ಮಾರುಹ್ಯ ಪುರಂ ಪ್ರಹರ್ತುಂ।
ಜಗಾಮ ಮೃತ್ಯುಂ ಭಗವಾನಿವೇಶಃ ॥೫೨॥

ಯಾಂತಂ ತದಾನೀಂ ತು ಶಿಲಾದ ಪುತ್ರ।
ಮಾರುಹ್ಯ ನಾಗೇಂದ್ರ ವೃಷಾಽಶ್ವವರ್ಯಾನ್॥
ದೇವಾ ಸ್ತದಾನೀಂ ಗಣಪಾಶ್ಚ ಸರ್ವೇ।
ಗಣಾ ಯಯುಃ ಸ್ವಾಯುಧ ಚಿಹ್ನ ಹಸ್ತಾಃ ॥೫೩॥

ಖಗೇಂದ್ರ ಮಾರುಹ್ಯ ನಗೇಂದ್ರ ಕಲ್ಪಂ।
ಖಗಧ್ವಜೋ ವಾಮತ ಏವ ಶಂಭೋಃ॥
ಜಗಾಮ ತೂರ್ಣಂ ಜಗತಾಂ ಹಿತಾಯ।
ಪುರತ್ರಯಂ ದಗ್ಧು ಮಲುಪ್ತ ಶಕ್ತಿಃ ॥೫೪॥

---

ಪತಿಗಳು, ನಂದಿಯೇ ಮೊದಲಾದವರೂ, ತಂತಮ್ಮ ವಾಹನಗಳನ್ನೇರಿ ಹಿಂಬಾಲಿಸಿದರು. ಇವರೆಲ್ಲರ ಮುಂದೆ ಪರ್ವತಕ್ಕೆ ಸಮಾನವಾದ ವಿಮಾನ ವನ್ನು ಹತ್ತಿ, ಶಿವನು ಮೃತ್ಯುವನ್ನೇ ನಾಶಮಾಡಲು ಹೋಗುವಹಾಗೆ ತ್ರಿಪುರವನ್ನು ನಾಶಮಾಡಲು ಹೊರಟನು. ಶಿಲಾದನ ಮಗನಾದ ನಂದೀ ಶ್ವರನು ವಿಮಾನದ ಮೇಲೆ ಹೋಗುತ್ತಿರುವುದನ್ನು ಕಂಡು, ಶ್ರೇಷ್ಠ ವಾದ ಆನೆಗಳು, ಎತ್ತುಗಳು, ಕುದುರೆಗಳು, ಇವುಗಳನ್ನು ಹತ್ತಿ, ಗಣಾಧಿ ಪತಿಗಳೂ, ದೇವತೆಗಳೂ, ತಂತಮ್ಮ ಆಯುಧಗಳನ್ನು ಹಿಡಿದುಕೊಂಡು ಹಿಂಬಾಲಿಸಿದರು. ಅಸಾಧಾರಣವಾದ ನಾಶವಾಗದ ಶಕ್ತಿಯುಳ್ಳ, ಪಕ್ಷಿಯೇ ಬಾವುಟವಾಗುಳ್ಳ, ಶ್ರೀ ನಾರಾಯಣನೂ, ಪಕ್ಷಿಶ್ರೇಷ್ಠನಾದ ಗರುಡನ ಮೇಲೆ ಕುಳಿತು ಶಿವನ ಎಡಭಾಗದಲ್ಲಿ, ತ್ರಿಪುರ ವಿನಾಶಕ್ಕಾಗಿ ಮತ್ತು ತನ್ಮೂಲಕ ಲೋಕಕ್ಷೇಮಕ್ಕಾಗಿ ಹೊರಟನು.

ತಂ ಸರ್ವದೇವಾಃ ಸುರಲೋಕ ನಾಥಂ।
ಸಮಂತತ ಶ್ಚಾನ್ವಯುರ ಪ್ರಮೇಯಂ॥
ಸುರಾ ಸುರೇಶಂ ಶಿತ ಶಕ್ತಿಟಂಕ।
ಗದಾತ್ರಿಶೂಲಾ ಸಿ ವರಾಯುಧೈಶ್ಚ ॥೫೫॥

ರರಾಜ ಮಧ್ಯೇ ಭಗವಾ ನ್ಸುರಾಣಾಂ।
ವಿವಾಹನೋ ವಾರಿಜ ಪತ್ರವರ್ಣಃ॥
ಯಥಾ ಸುಮೇರೋಃ ಶಿಖರಾಧಿ ರೂಢಃ।
ಸಹಸ್ರ ರಶ್ಮಿರ್ಭಗವಾ ನ್ಸುತೀಕ್ಷ್ಣಃ ॥೫೬॥

ಸಹಸ್ರನೇತ್ರಃ ಪ್ರಥಮಃ ಸುರಾಣಾಂ।
ಗಜೇಂದ್ರ ಮಾರುಹ್ಯ ಚ ದಕ್ಷಿಣೇಽಸ್ಯ॥
ಜಗಾಮ ರುದ್ರಸ್ಯ ಪುರಂ ನಿಹಂತುಂ।
ಯಥೋರಗಾಂ ಸ್ತತ್ರ ತು ವೈನತೇಯಃ ॥೫೭॥

ತಂಸಿದ್ಧ ಗಂಧರ್ವ ಸುರೇಂದ್ರ ವೀರಾಃ।
ಸುರೇಂದ್ರ ವೃಂದಾಧಿಪ ಮಿಂದ್ರ ಮೀಶಂ॥
ಸಮಂತತಸ್ತುಷ್ಟುವು ರಿಷ್ಟದಂ ತೇ।
ಜಯೇತಿ ಶಕ್ರಂ ವರ ಪುಷ್ಪ ವೃಷ್ಟ್ಯಾ ॥೫೮॥

---

೫೫–೬೦. ಎಲ್ಲಾ ದೇವತೆಗಳೂ, ದೇವಲೋಕಕ್ಕೆ ಅಧಿಪತಿಯಾದ ಎಲ್ಲರ ಬುದ್ಧಿಗೂ ಗೋಚರವಾಗದ ಸ್ವರೂಪವುಳ್ಳ, ದೇವತೆಗಳಿಗೂ ಮತ್ತು ರಾಕ್ಷಸರಿಗೂ, ಅಧಿಪತಿಯಾದ, ಶಿವನ ಸುತ್ತಲೂ, ತೀಕ್ಷ್ಣವಾದ ಶಕ್ತ್ಯಾಯುಧ, ಉಳಿಗಳು, ಗದೆಗಳು, ತ್ರಿಶೂಲಗಳು, ಶ್ರೇಷ್ಠವಾದ ಕತ್ತಿಗಳು, ಇವೇ ಮೊದಲಾದ ಆಯುಧಗಳನ್ನು ಹಿಡಿದು ಹಿಂಬಾಲಿಸಿದರು. ದೇವತೆಗಳ ಮಧ್ಯಭಾಗದಲ್ಲಿ ಕಮಲದಳದ ಬಣ್ಣವುಳ್ಳ, ಸುಂದರನಾದ ಶಿವನು, ಮೇರು ಪರ್ವತದ ತುದಿಯಲ್ಲಿ ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿದ ಸೂರ್ಯನಂತೆ ಪ್ರಕಾಶಿಸುತ್ತಾ ಹೋದನು. ಶಿವನ ಬಲಭಾಗದಲ್ಲಿ ದೇವತೆಗಳಿಗೆ ಅಧಿಪತಿಯಾದ ಇಂದ್ರನು ಐರಾವತವನ್ನು ಹತ್ತಿ, ಗರುಡನು ಹಾವುಗಳನ್ನು ಕೊಲ್ಲಲು ಮುಂದುವರಿಯುವ ಹಾಗೆ, ಅವನ ಮುಂದುಗಡೆ ಹೊರಟನು. ದೇವತೆಗಳಿಗೆಲ್ಲರಿಗೂ ಅಧಿಪತಿಯಾದ ಇಂದ್ರನು ಹೊರಟ

ತದಾ ಹ್ಯಹಲ್ಯೋಽ ಪಪತಿಂ ಸುರೇಶಂ ।
ಜಗತ್ಪತಿಂ ದೇವ ಪತಿಂ ದಿವಿಷ್ಠಾಃ ॥
ಪ್ರಣೇಮು ರಾಲೋಕ್ಯ ಸಹಸ್ರ ನೇತ್ರಂ ।
ಸಲೀಲ ಮಂಬಾ ತನಯಂ ಯಥೇಂದ್ರಂ ॥೫೯॥

ಯಮ ಪಾವಕ ವಿತ್ತೇಶಾ ವಾಯು ನಿರ್ಋತಿ ರೇವ ಚ ।
ಅಪಾಂ ಪತಿ ಸ್ತಥೇಶಾನೋ ಭವಂ ಚಾನು ಸಮಾಗತಾಃ ॥೬೦॥

ವೀರಭದ್ರೋ ರಣೇ ಭದ್ರೋ ನೈಋತ್ಯಾಂ ವೈ ರಥಸ್ಯ ತು ।
ವೃಷಭೇಂದ್ರಂ ಸಮಾರುಹ್ಯ ರೋಮಜೈಶ್ಚ ಸಮಾವೃತಃ ॥೬೧॥

ಸೇವಾಂ ಚಕ್ರೇ ಪುರಂ ಹಂತುಂ ದೇವದೇವಂ ತ್ರಿಯಂಬಕಂ ।
ಮಹಾಕಾಲೋ ಮಹಾತೇಜಾ ಮಹಾದೇವ ಇವಾಪರಃ ॥೬೨॥

ವಾಯವ್ಯಾಂ ಸ ಗಣೈಃ ಸಾರ್ಧಂ ಸೇವಾಂ ಚಕ್ರೇ ರಥಸ್ಯ ತು ॥೬೩॥

---

ದ್ದನ್ನು ನೋಡಿ, ಸಿದ್ಧರು, ಗಂಧರ್ವರು, ದೇವಶ್ರೇಷ್ಠರು, ದೇವೇಂದ್ರ ಸ್ವಾಮಿಗೆ ಜಯವಾಗಲೀ, ಎಂದು ಜಯ ಘೋಷಮಾಡುತ್ತಾ, ಎಲ್ಲಾ ಕಡೆಯಲ್ಲಿಯೂ ಸೊಗಸಾದ ಹೂ ಮಳೆ ಗರೆದರು. ಸ್ವರ್ಗದಲ್ಲಿರುವ ದೇವತೆಗಳು, ಜಗತ್ತಿಗೂ ಮತ್ತು ದೇವತೆಗಳಿಗೂ ಅಧಿಪತಿಯಾದ, ಅಹ ಲ್ಯೆಗೆ ಜಾರನಾದ ಇಂದ್ರನನ್ನು, ನೋಡಿ, ಪಾರ್ವತೀ ದೇವಿಯು ಷಣ್ಮುಖ ನನ್ನು ನೋಡಿ ಸಂತೋಷ ಪಡುವಂತೆ, ಸಂತೋಷಪಡುತ್ತಾ ಅವನಿಗೆ ನಮ ಸ್ಕರಿಸಿದರು. ಯಮ, ಅಗ್ನಿ, ಕುಬೇರ, ವಾಯು, ವರುಣ, ಸಮುದ್ರರಾಜ, ಗಣೇಶ್ವರ, ಎಲ್ಲರೂ, ಶಿವನನ್ನು ಹಿಂಬಾಲಿಸಿದರು.

೬೧-೬೬. ಯುದ್ಧದಲ್ಲಿ ನಿಪುಣನಾದ ವೀರಭದ್ರನು, ಶ್ರೇಷ್ಠವಾದ ಎತ್ತನ್ನೇರಿ ನೈಋತ್ಯ ದಿಕ್ಕಿನಲ್ಲಿ "ರೋಮಜ" ಎಂಬ ಜನಗಳೊಡನೆ ಸಿದ್ಧನಾದನು. ತ್ರಿಪುರ ದಹನವನ್ನು ಮಾಡಲು ದೇವಾಧಿದೇವನಾದ ತ್ರಿನಯನೇಶ್ವರನನ್ನು ವೀರಭದ್ರನು ಸೇವಿಸಿದನು. ಆಗ ಇವನು ಬೇರೊಬ್ಬ ಶಿವನೋ ಎಂಬಂತೆ ಬಹಳ ತೇಜಸ್ವಿಯಾಗಿ ಬೆಳಗಿದನು. ಇವನು ವಾಯ ವ್ಯದಿಕ್ಕಿನಲ್ಲಿ ತನ್ನ ಸಮಸ್ತ ಗಣಗಳೊಡನೆ ರಥದ ಸೇವೆಯನ್ನು ಸಲ್ಲಿಸಿ ದನು. ಅಗ್ನಿಯಲ್ಲಿ ಉತ್ಪನ್ನನಾದ ಷಣ್ಮುಖನೂ ಕೂಡ, ಸಿದ್ಧರೂ,

ಷಣ್ಮುಖೋಽಪಿ ಸಹ ಸಿದ್ಧ ಚಾರಣೈಃ ।
ಸೋಮಯಾ ಚ ಗಿರಿರಾಜ ಸನ್ನಿಭಃ ॥
ದೇವನಾಥ ಗಣವೃಂದ ಸಂವೃತೋ ।
ವಾರಣೇನ ಚ ತಥಾಽಗ್ನಿ ಸಂಭವಃ ॥೬೪॥

ವಿಘ್ನಂ ಗಣೇಶೋಽ ಪ್ಯಸುರೇಶ್ವರಾಣಾಂ ।
ಕೃತ್ವಾ ಸುರಾಣಾಂ ಭಗವಾನ ವಿಘ್ನಂ ॥
ವಿಘ್ನೇಶ್ವರೋ ವಿಘ್ನಗಣೈಶ್ಚ ಸಾರ್ಧಂ ।
ತಂ ದೇಶ ಮೀಶಾನ ಪದಂ ಜಗಾಮ ॥೬೫॥

ಕಾಲೀ ತದಾ ಕಾಲ ನಿಶಾ ಪ್ರಕಾಶಂ ।
ಶೂಲಂ ಕಪಾಲಾ ಭರಣಾ ಕರೇಣ ॥
ಪ್ರಕಂಪಯಂತೀ ಚ ತದಾ ಸುರೇಂದ್ರಾನ್ ।
ಮಹಾ ಸುರಾಃ ಸೃಙ್ಮಧುಪಾನ ಮತ್ತಾ ॥೬೬॥

ಮತ್ತೇಭಗಾಮೀ ಮದಲೋಲ ನೇತ್ರಾ ।
ಮತ್ತೈಃ ಪಿಶಾಚೈಶ್ಚ ಗಣೈಶ್ಚ ಮತ್ತೈಃ ॥
ಮತ್ತೇಭ ಚರ್ಮಾಂಬರ ವೇಷ್ಟಿತಾಂಗೀ ।
ಯಯೌ ಪುರಸ್ತಾಚ್ಚ ಗಣೇಶ್ವರಸ್ಯ ॥೬೭॥

---

ಚಾರಣರು, ಎಂಬ ದೇವತೆಗಳು, ದೊಡ್ಡ ಸೈನ್ಯ, ಮತ್ತು ದೇವಗಣ, ಇವುಗಳಿಂದ ಕೂಡಿದವನಾಗಿ, ಸೊಗಸಾದ ಆನೆಯ ಮೇಲೆ ಕುಳಿತು, ಪರ್ವತ ಶ್ರೇಷ್ಠದಂತೆ ಪ್ರಕಾಶಿಸಿದನು. ಗಣೇಶನೂ ಕೂಡ, ರಾಕ್ಷಸಶ್ರೇಷ್ಠರಿಗೆ ಸಮಸ್ತ ವಿಘ್ನಗಳನ್ನೂ ಉಂಟುಮಾಡಿ, ದೇವತೆಗಳಿಗೆ ಮಾತ್ರ ಸಕಲ ವಿಘ್ನನಿವಾರಣೆಮಾಡಿ, ಸಕಲ ವಿಘ್ನಗಣಗಳೊಂದಿಗೆ ಶಿವನನ್ನು ಹಿಂಬಾಲಿಸಿದನು. ಪ್ರಳಯಕಾಲದ ಕತ್ತಲೆಯಂತೆ ಬಹಳ ಕಪ್ಪಾಗಿದ್ದು, ಶೂಲವನ್ನು ಹಿಡಿದು ರುಂಡವನ್ನೇ ಅಲಂಕಾರ ಮಾಡಿಕೊಂಡಿದ್ದು, ಕಾಳಿಯು ದೊಡ್ಡ ದೊಡ್ಡ ರಾಕ್ಷಸರ ರಕ್ತವೆಂಬ ಮದ್ಯದಿಂದ ಮದಿಸಿದವಳಾಗಿ ಬರುತ್ತಾ ರಾಕ್ಷಸಶ್ರೇಷ್ಠರನ್ನು ನಡುಗಿಸಿದಳು.

೬೭–೭೦. ಆನೆಯಂತೆ ನಡಗೆಯುಳ್ಳವಳೂ, ಮದದಿಂದ ಚಂಚಲವಾದ ಕಣ್ಣುಗಳುಳ್ಳವಳೂ, ಕೊಬ್ಬಿದ ಪಿಶಾಚಿಗಳಿಂದಲೂ,

ತಾಂ ಸಿದ್ಧಗಂಧರ್ವ ಪಿಶಾಚ ಯಕ್ಷ।
ವಿದ್ಯಾ ಧರಾಹೀಂದ್ರ ಸುರೇಂದ್ರ ಮುಖ್ಯಾಃ॥
ಪ್ರಣೇಮು ರುಚ್ಚೈ ರಭಿ ತುಷ್ಟುವುಶ್ಚ।
ಜಯೇತಿ ದೇವೀಂ ಹಿಮಶೈಲ ಪುತ್ರೀಂ ॥೬೮॥

ಮಾತರಃ ಸುರವರಾರಿ ಸೂದನಾಃ।
ಸಾದರಂ ಸುರಗಣೈಃ ಸುಪೂಜಿತಾಃ॥
ಮಾತರಂ ಯಯು ರಥ ಸ್ವವಾಹನೈಃ।
ಸ್ವೈರ್ಗಣೈ ರ್ಧ್ವಜ ಧರೈಃ ಸಮಂತತಃ ॥೬೯॥

ದುರ್ಗಾರೂಢ ಮೃಗಾಧಿಪಾ ದುರತಿಗಾ ದೋರ್ದಂಡ ವೃಂದೈಃ ಶಿವಾ
ಬಿಭ್ರಾಣಾಂಕುಶಶೂಲ ಪಾಶ ಪರಶುಂ ಚಕ್ರಾಸಿ ಶಂಖಾಯುಧಂ।
ಪ್ರೌಢಾದಿತ್ಯ ಸಹಸ್ರ ವಹ್ನಿ ಸದೃಶೈ ರ್ನೇತ್ರೈ ರ್ದಹಂತೀ ಪಥಂ।
ಬಾಲಾಬಾಲ ಪರಾಕ್ರಮಾ ಭಗವತೀ ದೈತ್ಯಾನ್ ಪ್ರಹರ್ತುಂ
ಯಯೌ ॥೭೦॥

---

ಮದಿಸಿದ ಗಣಗಳಿಂದಲೂ ಕೂಡಿ ಆನೆಯ ಚರ್ಮವನ್ನೇ ಧರಿಸಿ ಗಣಾಧಿಪತಿಯ ಮುಂದುಗಡೆಯಲ್ಲಿ ಹೊರಟಳು. ಸಿದ್ಧರು, ಗಂಧರ್ವರು, ಪಿಶಾಚಿಗಳು, ಯಕ್ಷರು, ವಿಧ್ಯಾಧರರು, ಸರ್ಪಶ್ರೇಷ್ಠರೂ, ದೇವಶ್ರೇಷ್ಠರೂ ಇವರೆಲ್ಲರೂ ಆ ಹಿಮವಂತನ ಮಗಳಾದ ಪಾರ್ವತಿಯನ್ನು ಸ್ತೋತ್ರಮಾಡಿ "ನಿಮಗೆ ಜಯವಾಗಲಿ" ಎಂದು ಜಯಘೋಷವನ್ನು ಮಾಡಿದರು. ದೇವತೆಗಳಿಂದ ಪೂಜಿಸಲ್ಪಟ್ಟ, ದೇವಶ್ರೇಷ್ಠರ ಶತ್ರುಗಳನ್ನು ನಾಶಮಾಡಲು ಶಕ್ತರಾದ, ಕೃತ್ತಿಕೆಯೇ ಮೊದಲಾದ ತಾಯಿಯರು ತಂತಮ್ಮ ವಾಹನಗಳನ್ನೇರಿ ಬಾವುಟ ಹಿಡಿದಿರುವ ತಮ್ಮ ಗುಂಪುಗಳೊಂದಿಗೆ ಪಾರ್ವತೀ ದೇವಿಯನ್ನು ಹಿಂಬಾಲಿಸಿದರು. ಪರ್ವತದ ಮೇಲೆ ನಿಂತಿರುವ ಸಿಂಹದ ಮೇಲೆ ಕುಳಿತು ಎಂಥಾ ತೋಳುಗಳಿಂದಲೂ ಜಯಿಸಲು ಅಶಕ್ಯಳಾದ, ಅಂಕುಶ ಶೂಲ ಪಾಶಾಯುಧ ಕೊಡಲಿ ಚಕ್ರಾಯುಧ ಶಂಖಾಯುಧ ಇವಗಳಳ್ನು ಹಿಡಿದುಕೊಂಡು ಬಹಳ ಉರಿಯುತ್ತಿರುವ ಸಾವಿರ ಸೂರ್ಯರಿಗೆ ಮತ್ತು ಬೆಂಕಿಗಳಿಗೆ ಸಮಾನವಾದ ಕಣ್ಣುಗಳಿಂದ ದಾರಿಯನ್ನೇ ಸುಡುತ್ತಾ ಬಹಳ ಪರಾಕ್ರಮವುಳ್ಳ ಪೂಜ್ಯಳಾದಕಾಳಿಯು ತ್ರಿಪುರ ರಾಕ್ಷಸರನ್ನು ನಾಶಮಾಡಲು ಹೊರಟಳು.

ತಂ ದೇವ ಮೀಶಂ ತ್ರಿಪುರಂ ನಿಹಂತುಂ ।
ತದಾ ತು ದೇವೇಂದ್ರ ರವಿ ಪ್ರಕಾಶಾಃ ॥
ಗಜೈರ್ಹಯೈಃ ಸಿಂಹ ವರೈ ರಥೈಶ್ಚ ।
ವೃಷೈರ್ಯಯುಸ್ತೇ ಗಣರಾಜ ಮುಖ್ಯಾಃ ॥೭೧॥

ಹಲೈಶ್ಚ ಫಾಲೈ ರ್ಮುಸಲೈ ರ್ಭುಶುಂಡ್ಯೈಃ ।
ಗಿರೀಂದ್ರಕೂಟೈ ರ್ಗಿರಿಸನ್ನಿಭಾಸ್ತೇ ॥
ಯಯುಃ ಪುರಸ್ತಾದ್ಧಿ ಮಹೇಶ್ವರಸ್ಯ ।
ಸುರೇಶ್ವರಾ ಭೂತ ಗಣೇಶ್ವರಾಶ್ಚ ॥೭೨॥

ತಥೇಂದ್ರ ಪದ್ಮೋದ್ಭವ ವಿಷ್ಣು ಮುಖ್ಯಾಃ ।
ಸುರಾ ಗಣೇಶಾಶ್ಚ ಗಣೇಶ ಮೀಶಂ ॥
ಜಯೇತಿ ವಾಗ್ಭಿರ್ಭಗವಂ ತಮೂಚುಃ ।
ಕಿರೀಟ ದತ್ತಾಂಜಲಯಃ ಸಮಂತಾತ್ ॥೭೩॥

---

೭೧–೭೪. ದೇವೇಂದ್ರ ಮತ್ತು ಸೂರ್ಯರಂತೆ ಬಹಳ ಪ್ರಕಾಶಮಾನರಾದ ಗಣಾಧಿಪತಿಗಳು ಆನೆಗಳಿಂದಲೂ, ಕುದುರೆಗಳಿಂದಲೂ, ಶ್ರೇಷ್ಠವಾದ ಸಿಂಹಗಳಿಂದಲೂ ರಥಗಳಿಂದಲೂ ಎತ್ತುಗಳಿಂದಲೂ ಕೂಡಿ ಪ್ರಭುವಾದ ಶಿವನನ್ನು ತ್ರಿಪುರಸಂಹಾರಕ್ಕಾಗಿ ಹಿಂಬಾಲಿಸಿದರು. ಮಹೇಶ್ವರನ ಮುಂಭಾಗದಲ್ಲಿ ದೇವಶ್ರೇಷ್ಠರೂ ಮತ್ತು ಗಣಾಧಿಪತಿಗಳೂ, ನೇಗಿಲುಗಳು, ಹಲಗೆಗಳು, ಒನಕೆಗಳು, ದೊಡ್ಡ ದೊಡ್ಡ ಮರಗಳು, ಮತ್ತು ಪರ್ವತಾಗ್ರ ಭಾಗದ ಶಿಖರಗಳು, ಮುಂತಾದುವನ್ನು ಹಿಡಿದುಕೊಂಡು ಪರ್ವತಕ್ಕೆ ಸಮಾನವಾದ ದೊಡ್ಡ ಆಕಾರವುಳ್ಳವರಾಗಿ ತ್ರಿಪುರನಾಶಕ್ಕಾಗಿ ಹೊರಟರು. ಹಾಗೆಯೇ ಇಂದ್ರ, ಕಮಲದಲ್ಲಿ ಹುಟ್ಟಿದ ಬ್ರಹ್ಮ, ವಿಷ್ಣುವೇ ಮೊದಲಾದ ದೇವತೆಗಳೂ, ದೇವಶ್ರೇಷ್ಠರೂ, ಪೂಜ್ಯನಾದ ಮತ್ತು ಗಣಾಧಿಪತಿಯಾದ ಶಿವನನ್ನು ಕುರಿತು ತಮ್ಮ ಕಿರೀಟಪ್ರದೇಶಕ್ಕೆ ಕೈಗಳನ್ನು ಜೋಡಿಸಿ ಸುತ್ತಲೂ "ಈಶ್ವರನಿಗೆ ಜಯವಾಗಲಿ" ಎಂದು ಜಯಘೋಷಮಾಡಿದರು. ಜಟೆಗಳನ್ನು ಧರಿಸಿರುವ ದಂಡಧಾರಿಗಳಾದ ಎಲ್ಲಾ ಋಷಿಗಳೂ ಸಂತೋಷದಿಂದ

**ನನೃತು ಮುರ್ನಯು ಸ್ಸರ್ವೇ ದಂಡಹಸ್ತಾ ಜಟಾಧರಾಃ ।**
**ವವೃಷುಃ ಪುಷ್ಪ ವರ್ಷಾಣಿ ಖೇಚರಾಃ ಸಿದ್ಧಚಾರಣಾಃ ॥**
**ಪುರತ್ರಯಂ ಚ ವಿಪ್ರೇಂದ್ರಾಃ ಪ್ರಾಣದತ್ಸರ್ವತ ಸ್ತಥಾ ॥೭೪॥**

**ಗಣೇಶ್ವರೈ ರ್ದೇವ ಗಣೈಶ್ಚ ಭೃಂಗೀ ।**
**ಸಮಾವೃತಃ ಸರ್ವ ಗಣೇಂದ್ರ ವರ್ಯಃ ॥**
**ಜಗಾಮ ಯೋಗೀ ತ್ರಿಪುರಂ ನಿಹಂತುಂ ।**
**ವಿಮಾನ ಮಾರುಹ್ಯ ಯಥಾ ಮಹೇಂದ್ರಃ ॥೭೫॥**

**ಕೇಶೋ ವಿಗತ ವಾಸಾಶ್ಚ ಮಹಾಕೇಶೋ ಮಹಾಜ್ವರಃ ।**
**ಸೋಮವಲ್ಲೀ ಸವರ್ಣಶ್ಚ ಸೋಮಪಃ ಸೇನಕ ಸ್ತಥಾ ॥೭೬॥**

**ಸೋಮಧೃಕ್ ಸೂರ್ಯ ವಾಚಶ್ಚ ಸೂರ್ಯ ಪೇಷಣಕ ಸ್ತಥಾ ।**
**ಸೂರ್ಯಾಕ್ಷಃ ಸೂರಿನಾಮಾ ಚ ಸುರಃ ಸುಂದರ ಏವ ಚ ॥೭೭॥**

**ಪ್ರಕುದಃ ಕಕುದಂತಶ್ಚ ಕಂಪನಶ್ಚ ಪ್ರಕಂಪನಃ ।**
**ಇಂದ್ರಶ್ಚೇಂದ್ರ ಜಯಶ್ಚೈವ ಮಹಾಭೀರ್ಭೀಮಕ ಸ್ತಥಾ ॥೭೮॥**

---

ಕುಣಿದರು. ಸಿದ್ಧ, ಚಾರಣರೆಂಬ ದೇವತೆಗಳ ಕೆಲವು ಗುಂಪಿನವರು ಆಕಾಶದಲ್ಲಿ ಸಂಚರಿಸುತ್ತಾ ಹೂಮಳೆಗರೆದರು. ಎಲೈ ಬ್ರಾಹ್ಮಣ ಶ್ರೇಷ್ಠರೇ, ಹಾಗೆಯೇ ಎಲ್ಲಾ ಕಡೆಯಲ್ಲಿಯೂ, ತ್ರಿಪುರವೂ ಬಹಳ ಶಬ್ದ ಮಾಡಿತು.

೭೫–೮೦. ಎಲ್ಲಾ ಗಣಗಳಿಗೂ ಅಗ್ರಗಣ್ಯನಾದ, ಮತ್ತು ಯೋಗಿಯಾದ ನಂದೀಶ್ವರನು, ಗಣಾಧಿಪತಿಗಳಿಂದಲೂ, ಮತ್ತು ದೇವತೆಗಳ ಗುಂಪಿನಿಂದಲೂ, ಸುತ್ತುವರಿಯಲ್ಪಟ್ಟವನಾಗಿ ಮಹೇಂದ್ರನ ಹಾಗೆ ವಿಮಾನದ ಮೇಲೆ ಕೂತು ತ್ರಿಪುರನಾಶಕ್ಕಾಗಿ ಹೊರಟನು. ಅಲ್ಲದೇ ಕೇಶ, ವಿಗತವಾಸ, ಮಹಾಕೇಶ, ಮಹಾಜ್ವರ, ಸೋಮವಲ್ಲೀ, ಸವರ್ಣ, ಸೋಮಪ, ಸೇನಕ, ಸೋಮಧೃಕ್, ಸೂರ್ಯವಾಚ, ಸೂರ್ಯಪೇಷಣಕ, ಸೂರ್ಯಾಕ್ಷ, ಸೂರಿನಾಮ, ಸುರ, ಸುಂದರ, ಪ್ರಕುದ, ಕಕುದಂತ,

ಶತಾಕ್ಷಶ್ಚೈವ ಪಂಚಾಕ್ಷಃ ಸಹಸ್ರಾಕ್ಷೋ ಮಹೋದರಃ ।
ಯಮಜಿಹ್ವಃ ಶತಾಶ್ವಶ್ಚ ಕಂಠನಃ ಕಂಠ ಪೂಜನಃ ॥೭೯॥

ದ್ವಿಶಿಖಸ್ತ್ರಿಶಿಖಶ್ಚೈವ ತಥಾ ಪಂಚ ಶಿಖೋ ದ್ವಿಜಾಃ ।
ಮುಂಡೋಽರ್ಧಮುಂಡೋ ದೀರ್ಘಶ್ಚ ಪಿಶಾಚಾಸ್ಯಃ ಪಿನಾಕ ಧೃಕ್ ॥೮೦॥

ಪಿಪ್ಪಲಾಯತನಶ್ಚೈವ ತಥಾ ಹ್ಯಂಗಾರ ಕಾಶನಃ ।
ಶಿಥಿಲಃ ಶಿಥಿಲಾಸ್ಯಶ್ಚ ಅಕ್ಷಪಾದೋ ಹ್ಯಜಃ ಕುಜಃ ॥೮೧॥

ಅಜವಕ್ತ್ರೋ ಹಯವಕ್ತ್ರೋ ಗಜವಕ್ತ್ರೋರ್ಧ್ವವಕ್ತ್ರಕಃ ।
ಇತ್ಯಾದ್ಯಾಃ ಪರಿವಾರೈಶ್ಚ ಲಕ್ಷ್ಯ ಲಕ್ಷಣ ವರ್ಜಿತಾಃ ॥೮೨॥

ವೃಂದ ಶಸ್ತಂ ಸಮಾವೃತ್ಯ ಜಗ್ಮುಃ ಸೋಮಂ ಗಣೈರ್ವೃತಾಃ ।
ಸಹಸ್ರಾಣಾಂ ಸಹಸ್ರಾಣಿ ರುದ್ರಾಣಾ ಮೂರ್ಧ್ವರೇತಸಾಂ ॥೮೩॥

ಸಮಾವೃತ್ಯ ಮಹಾದೇವಂ ದೇವದೇವಂ ಮಹೇಶ್ವರಂ ।
ದಗ್ಧಂ ಪುರತ್ರಯಂ ಜಗ್ಮುಃ ಕೋಟಿ ಕೋಟಿ ಗಣೈ ರ್ವೃತಾಃ ॥

---

ಕಂಪನ, ಪ್ರಕಂಪನ, ಇಂದ್ರ, ಇಂದ್ರಜಯ, ಮಹಾಭೀ, ಭೀಮಕ ಶತಾಕ್ಷ, ಪಂಚಾಕ್ಷ, ಸಹಸ್ರಾಕ್ಷ, ಮಹೋದರ, ಯಮಜಿಹ್ವ, ಶತಾಶ್ವ, ಕಂಠನ, ಕಂಠಪೂಜನ, ದ್ವಿಶಿಖ, ತ್ರಿಶಿಖ, ಪಂಚಶಿಖ, ಮುಂಡ, ಅರ್ಧಮುಂಡ, ದೀರ್ಘ, ಪಿಶಾಚಾಸ್ಯ, ಪಿನಾಕಧೃಕ್, ಮುಂತಾದವರೂ, ಪರಿವಾರದ ಜನರೊಡನೆ, ಈಶ್ವರನನ್ನು ಹಿಂಬಾಲಿಸಿ ಹೊರಟರು.

೮೧–೮೫. ಪಿಪ್ಪಲಾಯತನ, ಅಂಗಾರಕಾಶನ, ಶಿಥಿಲ, ಶಿಥಿಲಾಸ್ಯ, ಅಕ್ಷಪಾದ, ಅಜ, ಕುಜ, ಅಜವಕ್ತ್ರ, ಹಯವಕ್ತ್ರ, ಗಜವಕ್ತ್ರ, ಊರ್ಧ್ವವಕ್ತ್ರ, ಮುಂತಾದ ಗಣದ ಜನರೂ, ತಂತಮ್ಮ ವೇಷ ಮತ್ತು ಗುರುತುಗಳನ್ನು ಧರಿಸಿ, ಈಶ್ವರನ ಸುತ್ತಲೂ, ಗಣಗಳ ಜೊತೆಯಲ್ಲಿ ಗುಂಪು ಗುಂಪಾಗಿ ಹೊರಟರು. ಬ್ರಹ್ಮಚಾರಿಗಳಾದ ಹತ್ತುಲಕ್ಷ ರುದ್ರರು, ಈಶ್ವರನ ಸುತ್ತಲೂ ಹೊರಟರು. ಅಲ್ಲದೆ ಇವರ ಹಿಂದುಗಡೆ ಕೋಟ್ಯಾಂ

ತ್ರಯಸ್ತ್ರಿಂಶ ತ್ಸುರಾಶ್ಚೈವ ತ್ರಯಶ್ಚ ತ್ರಿಶತಾ ಸ್ತಥಾ ।
ತ್ರಯಶ್ಚ ತ್ರಿ ಸಹಸ್ರಾಣಿ ಜಗ್ಮುರ್ದೇವಾಃ ಸಮಂ ತತಃ ॥೮೫॥

ಮಾತರಃ ಸರ್ವಲೋಕಾನಾಂ ಗಣಾನಾಂ ಚೈವ ಮಾತರಃ ।
ಭೂತಾನಾಂ ಮಾತರಶ್ಚೈವ ಜಗ್ಮುರ್ದೇವಸ್ಯ ಪೃಷ್ಠತಃ ॥೮೬॥

ಭಾತಿಮಧ್ಯೇ ಗಣಾನಾಂ ಚ ರಥ ಮಧ್ಯೇ ಗಣೇಶ್ವರಃ ।
ನಭಸ್ಯ ಮಲ ನಕ್ಷತ್ರೇ ತಾರಾಮಧ್ಯ ಇವೋಡುರಾಟ್ ॥೮೭॥

ರರಾಜ ದೇವೀ ದೇವಸ್ಯ ಗಿರಿಜಾ ಪಾರ್ಶ್ವ ಸಂಸ್ಥಿತಾ ।
ತದಾ ಪ್ರಭಾವತೋ ಗೌರೀ ಭವಸ್ಯೇವ ಜಗನ್ಮಯೀ ॥೮೮॥

ಶುಭಾವತೀ ತದಾ ದೇವೀ ಪಾರ್ಶ್ವಸಂಸ್ಥಾ ವಿಭಾತಿ ಸಾ ।
ಚಾಮರಾ ಸಕ್ತಹಸ್ತಾಗ್ರಾ ಸಾ ಹೇಮಾಂಬುಜ ವರ್ಣಿಕಾ ॥೮೯॥

---

ತರ ಮಂದಿ ಗಣಗಳು ಬರುತ್ತಿದ್ದುವು. ಅಲ್ಲದೇ ವಸು, ರುದ್ರ, ಆದಿತ್ಯ, ಅಶ್ವಿನೀದೇವ, ಬ್ರಹ್ಮ, ವಿಷ್ಣು, ರುದ್ರ, ಮುಂತಾದ ಒಂಬತ್ತು ಸಾವಿರದ ಒಂಬೈನೂರು ತೊಂಬತ್ತುಜನ ದೇವತೆಗಳು ಸುತ್ತಲೂ ಶಿವನನ್ನು ಹಿಂಬಾಲಿಸಿದರು.

೮೬–೯೦. ಸರ್ವಲೋಕಕ್ಕೂ ಗಣಗಳಿಗೂ, ಭೂತಗಳಿಗೂ, ತಾಯಿಯರಾದ ಮಾತೃಕಾದೇವಿಯರು ಶಿವನ ಹಿಂಭಾಗದಲ್ಲಿ ಹೊರಟರು. ಗಣಗಳ ಮಧ್ಯದಲ್ಲಿಯೂ, ಗಣಗಳಿಗೆ ಒಡೆಯನಾದ ಶಿವನು, ನಿರ್ಮಲವಾದ ನಕ್ಷತ್ರವುಳ್ಳ ಆಕಾಶದಲ್ಲಿ ನಕ್ಷತ್ರಗಳ ಮಧ್ಯಭಾಗದಲ್ಲಿ ಬೆಳಗುವ ಚಂದ್ರನಂತೆ ಪ್ರಕಾಶಿಸಿದನು. ದೇವನಾದ ಶಿವನ ಪಕ್ಕದಲ್ಲಿದ್ದ ಪಾರ್ವತೀ ದೇವಿಯು ಬಹಳ ಪ್ರಕಾಶಮಾನವಾಗಿದ್ದಳು. ಆಗ ಶಿವನ ಮಹಿಮೆಯಿಂದಲೇ ಜಗತ್ತಿನ ಸ್ವರೂಪಳಾದ ಪಾರ್ವತಿಯು ಶಿವನ ಎಡಭಾಗದಲ್ಲಿ ಹಾಗೆ ಶೋಭಿಸುತ್ತಿದ್ದಳು. ''ಶುಭಾವತಿ'' ಎಂಬ ಪಾರ್ವತಿಯ ಸಖಿಯು ಅವಳ ಪಕ್ಕದಲ್ಲಿ ಚಾಮರವನ್ನು ಹಿಡಿದುಕೊಂಡವಳಾಗಿ ಚಿನ್ನದ ಬಣ್ಣದಿಂದ ಶೋಭಿಸುತ್ತಿದ್ದಳು. ಆಗ ಸ್ವಾಮಿಯಾದ ಶಿವನ ಶುಭ್ರವಾದ ಶರೀರವು ವಿಭೂತಿಯಿಂದ ಪ್ರಕಾಶಮಾನವಾಗಿರುತ್ತಾ, ಪಾರ್ವತೀ

**ಅಥ ವಿಭಾತಿ ವಿಭೋರ್ವಿಶದಂ ವಪುಃ ।**
**ಭಸಿತ ಭಾಸಿತ ಮಂಬಿಕಯಾ ತಯಾ ॥**
**ಸಿತ ಮಿವಾಭ್ರಮಹೋ ಇಹ ವಿದ್ಯುತಾ ।**
**ನಭಸಿ ದೇವ ಪತೇಃ ಪರಮೇಷ್ಠಿನಃ ॥೯೦॥**

**ಭಾತೀಂದ್ರ ಧನುಷಾಽಽಕಾಶಂ ಮೇರುಣಾ ಚ ಯಥಾ ಜಗತ್ ।**
**ಹಿರಣ್ಯ ಧನುಷಾ ಸೌಮ್ಯಂ ವಪುಃ ಶಂಭೋಃ ಶಶಿದ್ಯುತಿ ॥೯೧॥**

**ಸಿತಾಽತಪತ್ರಂ ರತ್ನಾಂಶು ಮಿಶ್ರಿತಂ ಪರಮೇಷ್ಠಿನಃ ।**
**ಯಥೋದಯೇ ಶಶಾಂಕಸ್ಯ ಭಾತ್ಯಖಂಡಂ ಹಿ ಮಂಡಲಂ ॥೯೨॥**

**ಸ ದುಕೂಲಾ ಶಿವೇ ರಕ್ತಾ ಲಂಬಿತಾ ಭಾತಿ ಮಾಲಿಕಾ ।**
**ಛತ್ರಾಂ ತಾ ರತ್ನಜಾಽಽಕಾಶಾ ತ್ಪತಂತೀವ ಸರಿದ್ವರಾ ॥೯೩॥**

**ಅಥ ಮಹೇಂದ್ರ ವಿರಿಂಚಿ ವಿಭಾವಸು ।**
**ಪ್ರಭೃತಿ ಭಿರ್ನತ ಪಾದ ಸರೋರುಹಃ ॥**
**ಸಹ ತದಾ ಚ ಜಗಾಮ ತಯಾಽಂಬಯಾ ।**
**ಸಕಲಲೋಕ ಹಿತಾಯ ಪುರತ್ರಯಂ ॥೯೪॥**

---

ದೇವಿಯ ಜೊತೆಯಲ್ಲಿ, ಶುಭ್ರವಾದ ಮೋಡವು ಮಿಂಚಿನಿಂದ ಬೆಳಗುತ್ತಿರುವಂತೆ ವಿಶೇಷವಾಗಿ ಪ್ರಕಾಶಮಾನವಾಗಿತ್ತು.

೯೧–೯೫. ಕಾಮನ ಬಿಲ್ಲಿನಿಂದ ಕೂಡಿದ ಆಕಾಶದಂತೆಯೂ, ಮೇರು ಪರ್ವತದಿಂದ ಕೂಡಿದ ಜಗತ್ತಿನಂತೆಯೂ, ಶಿವನ ಸೌಮ್ಯವಾದ ಮತ್ತು ಚಂದ್ರನಂತೆ ಕಾಂತಿಯುಳ್ಳ ಶರೀರವು ಚಿನ್ನದ ಧನುಸ್ಸಿನಿಂದ ಪ್ರಕಾಶಿಸಿತು. ಶಿವನ ರತ್ನದ ಕಾಂತಿಯಿಂದ ಮಿಶ್ರವಾದ ಶ್ವೇತಚ್ಛತ್ರಿಯು, ಉದಯಕಾಲದ ಚಂದ್ರನ ಪೂರ್ಣಮಂಡಲದಂತೆ ಪ್ರಕಾಶಿಸಿತು. ಈಶ್ವರನಲ್ಲಿ ಪ್ರೀತಿಯಿಂದಲೋ ಎಂಬಂತೆ ರೇಷ್ಮೆಯ ವಸ್ತ್ರದಿಂದ ಕೂಡಿದ ಮಾಲೆಯೊಂದು ಛತ್ರಿಯ ಕೊನೆಯಿಂದ ಜೋಲಾಡುತ್ತಾ ರತ್ನಮಯವಾದ ಆಕಾಶದಿಂದ ಬೀಳುತ್ತಿರುವ ಗಂಗೆಯೋ ಎಂಬಂತೆ ತೋರುತ್ತಿತ್ತು. ಅನಂತರದಲ್ಲಿ ಮಹೇಂದ್ರ, ಬ್ರಹ್ಮ, ಸೂರ್ಯನೇ ಮೊದಲಾದವರಿಂದ ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳ, ಶಿವನು ಪಾರ್ವತಿಯೊಡನೆ ಸಕಲ

ದಗ್ಧುಂ ಸಮರ್ಥೋ ಮನಸಾ ಕ್ಷಣೇನ ।
ಚರಾಚರಂ ಸರ್ವಮಿದಂ ತ್ರಿಶೂಲೀ ॥
ಕಿಮತ್ರ ದಗ್ಧುಂ ತ್ರಿಪುರಂ ಪಿನಾಕೀ ।
ಸ್ವಯಂ ಗತಾಶ್ಚಾತ್ರ ಗಣೈಶ್ಚ ಸಾರ್ಧಂ ॥೯೫॥

ರಥೇನ ಕಿಂ ಚೇಷು ವರೇಣ ತಸ್ಯಾ ।
ಗಣೈಶ್ಚ ಕಿಂ ದೇವ ಗಣೈಶ್ಚ ಶಂಭೋಃ ॥
ಪುರತ್ರಯಂ ದಗ್ಧು ಮಲುಪ್ತ ಶಕ್ತೇಃ ।
ಕಿ ಮೇತದಿತ್ಯಾಹು ರಜೇಂದ್ರ ಮುಖ್ಯಾಃ ॥೯೬॥

ಮನ್ಯಾಮ ನೂನಂ ಭಗವಾ ನ್ಪಿನಾಕೀ ।
ಲೀಲಾರ್ಥಮೇತತ್ಸಕಲಂ ಪ್ರವೃತ್ತಂ (ವರ್ತುಂ) ॥
ವ್ಯವಸ್ಥಿತಶ್ಚೇತಿ ತಥಾऽನ್ಯಥಾ ಚೇ ।
ದಾಡಂಬರೇಣಾಸ್ಯ ಫಲಂ ಕಿಮನ್ಯತ್ ॥೯೭॥

ಪುರತ್ರಯಸ್ಯಾಸ್ಯ ಸಮೀಪ ವರ್ತೀ ।
ಸುರೇಶ್ವರೈಃ ನಂದಿಮುಖೈಶ್ಚ ನಂದೀ ॥
ಗಣೈರ್ಗಣೇಶಸ್ತು ರರಾಜ ದೇವ್ಯಾ ।
ಜಗದ್ರಥೋ ಮೇರುರಿವಾಽಷ್ಟಶೃಂಗೈಃ ॥೯೮॥

---

ಲೋಕ ಕ್ಷೇಮಕ್ಕಾಗಿ, ತ್ರಿಪುರಸಂಹಾರಕ್ಕೆ ಹೊರಟನು. ತ್ರಿಶೂಲಾಯುಧ ಧಾರಿಯಾದ ಶಿವನು ತನ್ನ ಮನಸ್ಸಂಕಲ್ಪದಿಂದಲೇ ಈ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತನ್ನು ಒಂದು ಕ್ಷಣಕಾಲದಲ್ಲಿ ಸುಟ್ಟುಹಾಕಲು ಶಕ್ತನು. ಹೀಗಿರುವಾಗ ಪಿನಾಕಾಯುಧಧಾರಿಯಾದ ಶಿವನು ತ್ರಿಪುರವನ್ನು ನಾಶ ಮಾಡಲು ಇಷ್ಟು ಗಣಗಳು ಮತ್ತು ಪರಿವಾರದೊಂದಿಗೆ ತಾನೇ ಹೊರಡಲು ಕಾರಣವೇನು?

೯೬-೧೦೦. ಅಮೋಘವಾದ ಶಕ್ತಿಯುಳ್ಳ ಶಿವನಿಗೆ ತ್ರಿಪುರನಾಶಕ್ಕಾಗಿ ರಥವಾಗಲಿ, ಶ್ರೇಷ್ಠವಾದ ಬಾಣವಾಗಲಿ, ಗಣಗಳಾಗಲಿ, ದೇವತೆಗಳ ಗುಂಪಾಗಲಿ, ಏಕೆ ಬೇಕು? ಎಂದು ಬ್ರಹ್ಮ, ಮತ್ತು ಇಂದ್ರ ಮುಂತಾದವರು ಮಾತನಾಡಿಕೊಂಡರು. ಪೂಜ್ಯನಾದ ಈಶ್ವರನು ಲೀಲೆ

ಅಥ ನೀರೀಕ್ಷ್ಯ ಸುರೇಶ್ವರ ಮೀಶ್ವರಂ ।
ಸಗಣ ಮದ್ರಿಸುತಾ ಸಹಿತಂ ತದಾ ॥
ತ್ರಿಪುರ ರಂಗ ತಲೋಪರಿ ಸಂಸ್ಥಿತಃ ।
ಸುರಗಣೋಽನು ಜಗಾಮ ಸ್ವಯಂ ತಥಾ ॥೯೯॥

ಜಗತ್ತ್ರಯಂ ಸರ್ವಮಿಮಾಽಪರಂ ತ ।
ತ್ಪುರತ್ರಯಂ ತತ್ರ ವಿಭಾತಿ ಸಮ್ಯಕ್ ॥
ನರೈಶ್ವರೈ ಶ್ಚೈವ ಗಣೈಶ್ಚ ದೇವೈಃ ।
ಸುರೇತರೈಶ್ಚ ತ್ರಿ ವಿಧೈ ರ್ಮುನೀಂದ್ರಾಃ ॥೧೦೦॥

ಅಥ ಸಜ್ಯಂ ಧನುಃ ಕೃತ್ವಾ ಶರ್ವಃ ಸಂಧಾಯ ತಂ ಶರಂ ।
ಯುಕ್ತ್ವಾ ಪಾಶು ಪತಾಸ್ತ್ರೇಣ ತ್ರಿಪುರಂ ಸಮ ಚಿಂತಯತ್ ॥

ತಸ್ಮಿಂಸ್ಥಿತೇ ಮಹಾದೇವೇ ರುದ್ರೇ ವಿತತ ಕಾರ್ಮುಕೇ ।
ಪುರಾಣಿ ತೇನ ಕಾಲೇನ ಜಗ್ಮುರೇಕತ್ವಮಾಶು ವೈ ॥೧೦೨॥

---

ಗಾಗಿಯೇ ಇದನ್ನೆಲ್ಲವನ್ನೂ ಸಿದ್ಧಗೊಳಿಸಿರಬೇಕು. ಇಲ್ಲದಿದ್ದರೆ ಈ ಆಡಂಬರದಿಂದ ಸ್ವಾಮಿಯಾದ ಶಿವನಿಗೆ ಏನು ಪ್ರಯೋಜನ? ತ್ರಿಪುರದ ಹತ್ತಿರ ದೇವಶ್ರೇಷ್ಠರು, ನಂದಿಯೇ ಮೊದಲಾದ ಗಣಗಳು, ಗಣಾಧಿಪತಿಗಳು, ಮತ್ತು ಪಾರ್ವತೀದೇವೀ, ಇವರೊಂದಿಗೆ ಜಗನ್ನಿಯಾಮಕನಾದ ಶಿವನು, ಎಂಟು ಶಿಖರಗಳುಳ್ಳ ಮೇರುಪರ್ವತದಂತೆ ಶೋಭಿಸಿದನು. ದೇವತೆಗಳಿಗೆ ಸ್ವಾಮಿಯಾದ ಗಣಗಳೊಡನೆ ಮತ್ತು ಪರ್ವತರಾಜನ ಮಗಳಾದ ಪಾರ್ವತೀದೇವಿಯೊಡನೆ ಶೋಭಿಸುತ್ತಿರುವ ಶಿವನನ್ನು ಕಂಡು, ತ್ರಿಪುರದ ರಣರಂಗದ ಪ್ರದೇಶದಲ್ಲಿ ವ್ಯವಸ್ಥೆಯಿಂದಿದ್ದ ದೇವತೆಗಳ ಸಮೂಹವು ಅವನನ್ನು ಹಿಂಬಾಲಿಸಿತು. ಎಲೈ ಋಷಿಶ್ರೇಷ್ಠರೇ, ಶ್ರೇಷ್ಠರಾದ ಮನುಷ್ಯರಿಂದಲೂ, ದೇವಗಣಗಳಿಂದಲೂ, ಮೂರು ಬಗೆಯ ರಾಕ್ಷಸರಿಂದಲೂ, ತ್ರಿಪುರವು ಎರಡನೆಯ ಮೂರು ಲೋಕವೋ ಎಂಬಂತೆ ಶೋಭಿಸುತ್ತಿತ್ತು.

೧೦೧-೧೦೪. ಅನಂತರದಲ್ಲಿ ಶಿವನು ಬಿಲ್ಲನ್ನು ಹೆದೆಗೇರಿಸಿ, ಬಾಣವನ್ನು ಸಿದ್ಧಮಾಡಿಕೊಂಡು, ಪಾಶುಪತಾಸ್ತ್ರದೊಂದಿಗೆ ಸೇರಿಸಿ, ತ್ರಿಪುರದ ಮೇಲೆ ದೃಷ್ಟಿಯಿಟ್ಟನು. ಮಹಾದೇವನು ಬಿಲ್ಲನ್ನು ವಿಸ್ತರಿಸಿ ನಿಂತಿ

ಏಕೀಭಾವಂ ಗತೇ ಚೈವ ತ್ರಿಪುರೇ ಸಮುಪಾಗತೇ ।
ಬಭೂವ ತುಮುಲೋ ಹರ್ಷೋ ದೇವತಾನಾಂ ಮಹಾತ್ಮನಾಂ ॥
ತತೋ ದೇವ ಗಣಾಃ ಸರ್ವೇ ಸಿದ್ಧಾಶ್ಚ ಪರಮರ್ಷಯಃ ।
ಜಯೇತಿ ವಾಚೋ ಮುಮುಚುಃ ಸಂಸ್ತುವಂತೋಽಷ್ಟಮೂರ್ತಿನಂ ॥೧೦೪॥

ಅಥಾಹ ಭಗವಾನ್ಬ್ರಹ್ಮಾ ಭಗನೇತ್ರ ನಿಪಾತನಂ ।
ಪುಷ್ಯಯೋಗೇಽಪಿ ಸಂಪ್ರಾಪ್ತೇ ಲೀಲಾವಶ ಮುಮಾಪತಿಂ ॥೧೦೫॥
ಸ್ಥಾನೇ ತವ ಮಹಾದೇವ ಚೇಷ್ಟೇಯಂ ಪರಮೇಶ್ವರ ।
ಪೂರ್ವದೇವಾಶ್ಚ ದೇವಾಶ್ಚ ಸಮಾಸ್ತವ ಯತಃ ಪ್ರಭೋ ॥೧೦೬॥
ತಥಾಽಪಿ ದೇವಾ ಧರ್ಮಿಷ್ಠಾಃ ಪೂರ್ವದೇವಾಶ್ಚ ಪಾಪಿನಃ ।
ಯತ ಸ್ತಸ್ಮಾಜ್ಜಗನ್ನಾಥ ಲೀಲಾಂ ತ್ಯಕ್ತು ಮಿಹಾಽರ್ಹಸಿ ॥೧೦೭॥

---

ರಲು ಆ ಕ್ಷಣದಲ್ಲಿ ಆ ಮೂರು ಪುರಗಳೂ ಒಂದಾಗಿಬಿಟ್ಟವು! ಹೀಗೆ ಒಟ್ಟಾಗಿ ತ್ರಿಪುರವು ಬರಲು, ಮಹಾತ್ಮರಾದ ದೇವತೆಗಳು, ಸಂತೋಷದಿಂದ ಕೋಲಾಹಲಮಾಡುವ ಹಾಗಾಯಿತು. ಅನಂತರದಲ್ಲಿ ಎಲ್ಲಾ ದೇವತೆಗಳೂ, ಸಿದ್ಧರೂ, ಋಷಿಶ್ರೇಷ್ಠರೂ, ಎಂಟು ಶರೀರವುಳ್ಳ ಈಶ್ವರನನ್ನು ಸ್ತೋತ್ರಮಾಡುತ್ತಾ "ಈಶ್ವರನಿಗೆ ಜಯವಾಗಲಿ" ಎಂದು ಜಯ ಘೋಷ ಮಾಡಿದರು.

೧೦೫–೧೦೭. ಅನಂತರದಲ್ಲಿ ಪೂಜ್ಯನಾದ ಬ್ರಹ್ಮನು ಪುಷ್ಯನಕ್ಷತ್ರ ಸಂಬಂಧದಿಂದ ಜಯವು ಸನ್ನಿಹಿತವಾಗಿದ್ದರೂ, ವಿನೋದವಾಗಿಯೇ ಕಾಲಕಳೆಯುತ್ತಲಿರುವ ಶಿವನನ್ನು ಕುರಿತು, ಓ ಸ್ವಾಮಿಯಾದ ಶಿವನೇ, ರಾಕ್ಷಸರೂ ಮತ್ತು ದೇವತೆಗಳೂ, ನಿನಗೆ ಒಂದೇ ಆಗಿರುವುದರಿಂದ ಈ ವಿಧವಾದ ವಿನೋದವು ನಿನಗೆ ಯುಕ್ತವಾಗಿಯೇ ಇದೆ! ಆದರೂ ದೇವತೆಗಳು ಧರ್ಮಪರಾಯಣರೂ, ರಾಕ್ಷಸರು ಪಾಪಿಷ್ಠರೂ, ಆಗಿರುವುದರಿಂದ ಈ ವಿನೋದವನ್ನು ಸ್ವಾಮಿಯು ಬಿಟ್ಟುಬಿಡಬೇಕು!

ಕಿಂ ರಥೇನ ಧ್ವಜೇನೇಶ ತವ ದಗ್ಧುಂ ಪುರತ್ರಯಂ ।
ಇಷುಣಾ ಭೂತ ಸಂಘೈಶ್ಚ ವಿಷ್ಣುನಾ ಚ ಮಯಾ ಪ್ರಭೋ॥೧೦೮॥
ಪುಷ್ಯಯೋಗೇ ತ್ವನು ಪ್ರಾಪ್ತೇ ಪುರಂ ದಗ್ಧು ಮಿಹಾರ್ಹಸಿ ।
ಯಾವನ್ನ ಯಾಂತಿ ದೇವೇಶ ವಿಯೋಗಂ ತಾವದೇವ ತು ॥೧೦೯॥
ದಗ್ಧು ಮರ್ಹಸಿ ಶೀಘ್ರಂ ತ್ವಂ ತ್ರೀಣ್ಯೇ ತಾನಿ ಪುರಾಣಿ ವೈ ।
ಅಥ ದೇವೋ ಮಹಾದೇವಃ ಸರ್ವಜ್ಞ ಸ್ತದ ವೈಕ್ಷತ ॥೧೧೦॥
ಪುರತ್ರಯಂ ವಿರೂಪಾಕ್ಷಸ್ತತ್ಕ್ಷಣಾ ದ್ಭಸ್ಮ ಸ್ಯೈ ಕೃತಂ ।
ಸೋಮಶ್ಚ ಭಗವಾನ್ವಿಷ್ಣುಃ ಕಾಲಾಗ್ನಿ ರ್ವಾಯುರೇವ ಚ ॥೧೧೧॥
ಶರೇ ವ್ಯವಸ್ಥಿತಾಃ ಸರ್ವೇ ದೇವ ಮೂಚುಃ ಪ್ರಣಮ್ಯ ತಂ ।
ದಗ್ಧಮಪ್ಯಥ ದೇವೇಶ ವೀಕ್ಷಣೇನ ಪುರತ್ರಯಂ ॥೧೧೨॥
ಅಸ್ಮದ್ಧಿತಾರ್ಥಂ ದೇವೇಶ ಶರಂ ಮೋಕ್ತು ಮಿಹಾರ್ಹಸಿ ।
ಅಥ ಸಂಮೃಜ್ಯ ಧನುಷೋ ಜ್ಯಾಂ ಹಸನ್ ತ್ರಿಪುರಾರ್ದನಃ ॥೧೧೩॥

---

೧೦೮–೧೧೨. ಓ ಸ್ವಾಮಿಯಾದ ಶಿವನೇ, ನಿನಗೆ ತ್ರಿಪುರನಾಶಮಾಡಲು ಈ ರಥದಿಂದಾಗಲಿ, ಬಾವುಟದಿಂದಾಗಲಿ, ಬಾಣದಿಂದಾಗಲಿ, ಭೂತಗಳ ಗುಂಪಿನಿಂದಾಗಲಿ, ವಿಷ್ಣುವಿನಿಂದಾಗಲಿ, ನನ್ನಿಂದಾಗಲಿ, ಏನು ಪ್ರಯೋಜನವಾಗಬೇಕಾಗಿದೆ? ಪುಷ್ಯನಕ್ಷತ್ರಸಂಬಂಧವಾಗಿರಲು ತ್ರಿಪುರವನ್ನು ತಾವು ದಯವಿಟ್ಟು ಸುಟ್ಟುಹಾಕಬೇಕು. ಈ ತ್ರಿಪುರಗಳು ಪ್ರತ್ಯೇಕವಾಗದೇ ಇರುವಾಗಲೇ ಶೀಘ್ರವಾಗಿ ಇವನ್ನು ಸುಟ್ಟುಬಿಡಬೇಕು. ಅನಂತರದಲ್ಲಿ ಸರ್ವಜ್ಞನಾದ ಶಿವನು ತ್ರಿಪುರವನ್ನು ನೋಡಿದನು. ವಿರೂಪಾಕ್ಷನಾದ ಶಿವನು ನೋಡಿದ ಕೂಡಲೇ ತ್ರಿಪುರವು ಬೂದಿಯಾಗಿ ವಿಕಾರ ಹೊಂದಿತು. ಆದರೆ ಚಂದ್ರ, ವಿಷ್ಣು, ಪ್ರಳಯಕಾಲದ ಬೆಂಕಿ, ಪ್ರಲಯದ ಗಾಳಿ, ಎಲ್ಲಾ ಶಿವನ ಬಾಣಗಳಲ್ಲಿ ಕಾಣಸಿಕೊಂಡು, ಶಿವನನ್ನು ನಮಸ್ಕರಿಸಿ. ಓ ಪರಮಾತ್ಮನೇ, ನಿಮ್ಮ ನೋಡುವಿಕೆ ಮಾತ್ರದಿಂದಲೇ ತ್ರಿಪುರವು ಸುಟ್ಟಹಾಗಾಯಿತು! ಎಂದರು.

೧೧೩–೧೧೪. ಆದಾಗ್ಯೂ ನಮ್ಮ ಕ್ಷೇಮಕ್ಕಾಗಿ ದಯವಿಟ್ಟು ಬಾಣ

**ಮುಮೋಚ ಬಾಣಂ ವಿಪ್ರೇಂದ್ರಾ ವ್ಯಾಕೃಷ್ಯಾಕರ್ಣಮೀಶ್ವರಃ ।**
**ತತ್ಕ್ಷಣಾ ತ್ರಿಪುರಂ ದಗ್ಧ್ವಾ ತ್ರಿಪುರಾಂತಕರಃ ಶರಃ ॥೧೧೪॥**
**ದೇವದೇವಂ ಸಮಾಸಾದ್ಯ ನಮಸ್ಕೃತ್ವಾ ವ್ಯವಸ್ಥಿತಃ ।**
**ರೇಜೇ ಪುರತ್ರಯಂ ದಗ್ಧಂ ದೈತ್ಯ ಕೋಟಿ ಶತೈರ್ವೃತಂ ॥೧೧೫॥**
**ಇಷುಣಾ ತೇನ ಕಲ್ಪಾಂತೇ ರುದ್ರೇಣೇವ ಜಗತ್ತ್ರಯಂ ।**
**ಯೇ ಪೂಜಯಂತಿ ತತ್ರಾಪಿ ದೈತ್ಯಾ ರುದ್ರಂ ಸಬಾಂಧವಾಃ ॥೧೧೬॥**
**ಗಾಣ ಪತ್ಯಂ ತದಾ ಶಂಭೋಃ ಯಯುಃ ಪೂಜಾವಿಧೇರ್ಬಲಾತ್ ।**
**ನ ಕಿಂಚಿದಬ್ರುವ ನ್ದೇವಾಃ ಸೇಂದ್ರೋಪೇಂದ್ರಾ ಗಣೇಶ್ವರಾಃ ॥**
**ಭಯಾದ್ದೇವಂ ನಿರೀಕ್ಷ್ಯೈವ ದೇವೀಂ ಹಿಮವತಃ ಸುತಾಂ ।**
**ದೃಷ್ಟ್ವಾ ಭೀತಂ ತದಾಽನೀಕಂ ದೇವಾನಾಂ ದೇವ ಪುಂಗವಃ ॥**
**ಕಿಂಚೇ ತ್ಯಾಹ ತದಾ ದೇವಾ ನ್ಪ್ರಣೇಮುಸ್ತಂ ಸಮಂತತಃ ॥೧೧೯॥**

---

ಪ್ರಯೋಗವನ್ನೂ ಮಾಡಬೇಕು ಎಂದರು. ಅನಂತರ ಶಿವನು ಬಿಲ್ಲಿಗೆ ಹದೆಯನ್ನೇರಿಸಿ. ಹೂಡಿ, ತ್ರಿಪುರವನ್ನು ನಾಶಮಾಡಲು, ಬಾಣವನ್ನು ತನ್ನ ಕಿವಿಯವರೆಗೂ ಎಳೆದು ಬಿಟ್ಟನು. ತಕ್ಷಣ ತ್ರಿಪುರವನ್ನು ಸುಡಬಲ್ಲ ಬಾಣವು ಆ ಈಶ್ವರನನ್ನು ಪಡೆದು ನಮಸ್ಕರಿಸಿ ಬೆಳಗುತ್ತಿತ್ತು!

೧೧೫–೧೨೦. ಬಾಣವು ಆ ರೀತಿಯಲ್ಲಿ ತ್ರಿಪುರವನ್ನು ಸುಟ್ಟು, ಹಿಂತಿರುಗಿ ಬಂದು ಶಿವನನ್ನು ನಮಸ್ಕರಿಸಿ ಅವನನ್ನು ಸೇರಿತು. ಶಿವನ ಬಾಣದಿಂದ ಸುಡಲ್ಪಟ್ಟ, ಕೋಟ್ಯಾಂತರ ರಾಕ್ಷಸರಿದ್ದ ತ್ರಿಪುರವು, ಪ್ರಳಯ ಕಾಲದಲ್ಲಿ ರುದ್ರನಿಂದ ನಾಶಮಾಡಲ್ಪಟ್ಟ ಮೂರು ಲೋಕದಂತೆ ಪ್ರಕಾಶಿಸಿತು. ಇಲ್ಲಿಯೂ ಯಾವ ರಾಕ್ಷಸರು ತಮ್ಮ ನೆಂಟರೊಡನೆ ಶಿವನನ್ನು ಪೂಜಿಸಿದರೋ, ಶಿವನ ಪೂಜಾ ಮಹಿಮೆಯಿಂದ ಅವರು ಶಿವನ ಗಣಗಳಿಗೆ ಪತಿ ಗಳಾದರು. ಇಂದ್ರ, ಉಪೇಂದ್ರ, ಗಣಾಧಿಪತಿಗಳೂ ಸಹ. ಹಿಮವಂತನ ಮಗಳಾದ ಪಾರ್ವತಿಯನ್ನೂ, ಶಿವನನ್ನೂ ನೋಡಿ ಭಯದಿಂದ ಈ ರಾಕ್ಷಸರು ಗಣಾಧಿಪತಿಗಳಾದ ವಿಷಯದಲ್ಲಿ ಏನನ್ನೂ ಕೇಳಲು ಧೈರ್ಯ ಪಡದೆ ಮೌನವಾಗಿದ್ದರು. ದೇವತೆಗಳ ಸೈನ್ಯವೂ ಇವರನ್ನು ನೋಡಿ

ನವಂದಿರೇ ನಂದಿನ ಮಿಂದು ಭೂಷಣಂ ।
ನವಂದಿರೇ ಪರ್ವತರಾಜ ಸಂಭವಾಂ ॥
ನವಂದಿರೇ ಚಾಽದ್ರಿಸುತಾ ಸುತಂ ಪ್ರಭುಂ ।
ನವಂದಿರೇ ದೇವಗಣಾ ಮಹೇಶ್ವರಂ ॥೧೨೦॥

ತುಷ್ಟಾವ ಹೃದಯೋ ಬ್ರಹ್ಮಾ ದೇವೈಃ ಸಹಃ ಸಮಾಹಿತಃ ।
ವಿಷ್ಣುನಾ ಚ ಭವಂ ದೇವಂ ತ್ರಿಪುರಾಽರಾತಿಮೀಶ್ವರಂ ॥೧೨೧॥

॥ ಶ್ರೀ ಪಿತಾಮಹ ಉವಾಚ ॥

ಪ್ರಸೀದ ದೇವ ದೇವೇಶ ಪ್ರಸೀದ ಪರಮೇಶ್ವರ ।
ಪ್ರಸೀದ ಜಗತಾಂ ನಾಥ ಪ್ರಸೀದಾನಂದದಾಽವ್ಯಯ ॥೧೨೨॥

ಪಂಚಾಽಸ್ಯ ರುದ್ರ ರುದ್ರಾಯ ಪಂಚಾಶತ್ಕೋಟಿ ಮೂರ್ತಯೇ ।
ಆತ್ಮ ತ್ರಯೋಽಪ ವಿಷ್ಟಾಯ ವಿದ್ಯಾ ತತ್ವಾಯ ತೇ ನಮಃ ॥೧೨೩॥

---

ಭಯದಿಂದ ಸುಮ್ಮನಿದ್ದಿತು. ಶಿವನ ಆಜ್ಞೆಯಂತೆ ಗಣಗಳು ದೇವತೆಗಳನ್ನು ನಮಸ್ಕರಿಸಿದರು. ದೇವತೆಗಳೂ ಸಹ ಚಂದ್ರನೇ ಅಲಂಕಾರವಾಗುಳ್ಳ ನಂದೀಶ್ವರನನ್ನೂ, ಪರ್ವತರಾಜನಾದ ಹಿಮವಂತನ ಮಗಳಾದ ಪಾರ್ವತಿಯನ್ನೂ, ಪಾರ್ವತಿಯ ಮಗನಾದ ಗಣೇಶನನ್ನೂ, ಸಾಕ್ಷಾತ್ಪರಮೇಶ್ವರನಾದ ಶಿವನನ್ನೂ ನಮಸ್ಕರಿಸಿದರು.

೧೨೧–೧೨೪. ಬ್ರಹ್ಮನು, ವಿಷ್ಣುವು, ಮತ್ತು ದೇವತೆಗಳೊಡನೆ ಏಕಾಗ್ರವಾದ ಮನಸ್ಸಿನಿಂದ ತ್ರಿಪುರ ನಾಶಕನಾದ, ಈಶ್ವರನಾದ ಶಿವನನ್ನು ಸ್ತೋತ್ರಮಾಡಿದನು. ಲೋಕಕ್ಕೆ ತಾತನಾದ, ಬ್ರಹ್ಮನು ಹೇಳಿದನು :– ಓ ದೇವಾಧಿ ದೇವತೆಗಳಿಗೂ ಒಡೆಯನಾದ ಶಿವನೇ, ಪ್ರಸನ್ನನಾಗು. ಓ ಪರಮೇಶ್ವರನೇ, ಜಗತ್ಪಾಲಕನೇ, ಆನಂದವನ್ನು ಕೊಡುವ, ವಿಕಾರ ರಹಿತನಾದ ನಿತ್ಯನಾದ, ಸ್ವಾಮಿಯೇ, ನಮ್ಮನ್ನು ದಯವಿಟ್ಟು ಅನುಗ್ರಹಿಸು ವಿಶಾಲವಾದ ಮುಖವುಳ್ಳವನೂ, ರುದ್ರರಿಗೆಲ್ಲರಿಗೂ ರುದ್ರನೂ, ಐವತ್ತು ಕೋಟಿ ಸ್ವರೂಪವುಳ್ಳವನೂ, ಮೂರು ಆತ್ಮಗಳಲ್ಲಿಯೂ ಇರುವವನೂ, ವಿದ್ಯೆಗೆ ಮೂಲತತ್ವವೂ ಆದ ನಿನಗೆ ನಮಸ್ಕಾರಗಳು. ಮಂಗಳ

ಶಿವಾಯ ಶಿವತತ್ತ್ವಾಯ ಅಘೋರಾಯ ನಮೋ ನಮಃ ।
ಅಘೋರಾಷ್ಟಕ ತತ್ತ್ವಾಯ ದ್ವಾದಶಾತ್ಮ ಸ್ವರೂಪಿಣೇ ॥೧೨೪॥
ವಿದ್ಯುತ್ಕೋಟಿ ಪ್ರತೀಕಾಶ ಮಷ್ಟಕಾಶಂ ಸುಶೋಭನಂ ।
ರೂಪಮಾಸ್ಥಾಯ ಲೋಕೇಽಸ್ಮಿನ್ ಸಂಸ್ಥಿತಾಯ ಶಿವಾತ್ಮನೇ ॥
ಅಗ್ನಿವರ್ಣಾಯ ರೌದ್ರಾಯ ಅಂಬಿಕಾಽರ್ಧಶರೀರಿಣೇ ।
ಧವಲಶ್ಯಾಮ ರಕ್ತಾನಾಂ ಮುಕ್ತಿದಾಯಾಽಮರಾಯ ಚ ॥೧೨೬॥
ಜ್ಯೇಷ್ಠಾಯ ರುದ್ರ ರೂಪಾಯ ಸೋಮಾಯ ವರದಾಯ ಚ ।
ತ್ರಿಲೋಕಾಯ ತ್ರಿದೇವಾಯ ವಷಟ್ಕಾರಾಯ ವೈನಮಃ ॥೧೨೭॥
ಮಧ್ಯೇ ಗಗನ ರೂಪಾಯ ಗಗನಸ್ಥಾಯ ತೇ ನಮಃ ।
ಅಷ್ಟಕ್ಷೇತ್ರಾಽಷ್ಟರೂಪಾಯ ಅಷ್ಟತತ್ತ್ವಾಯ ತೇ ನಮಃ ॥೧೨೮॥

---

ಸ್ವರೂಪನೂ, ಮಂಗಳಕರವಾದ ಪರಮಾರ್ಥತತ್ತ್ವರೂಪನೂ, ಸೌಮ್ಯ ಸ್ವರೂಪನೂ, ಸೌಮ್ಯವಾದ ಎಂಟು ತತ್ತ್ವಸ್ವರೂಪನೂ, ಹನ್ನೆರಡು ಸೂರ್ಯರ ಆತ್ಮಸ್ವರೂಪನೂ ಆದ ಶಿವನಿಗೆ ನಮಸ್ಕಾರಗಳು.

೧೨೫–೧೨೭. ಕೋಟ್ಯಂತರ ಮಿಂಚುಗಳಂತೆ ಪ್ರಕಾಶಮಾನವಾದ, ಭೂಮಿಯೇ ಮೊದಲಾದ ಎಂಟು ಶರೀರಗಳಲ್ಲಿಯೂ ಪ್ರಕಾಶಿಸುವ, ಮಂಗಳಕರವಾದ ಸ್ವರೂಪವನ್ನು ಹೊಂದಿ ಲೋಕದಲ್ಲಿ ನಿತ್ಯವಾಗಿ ಕಾಣಿಸುತ್ತಿರುವ, ಮತ್ತು ವಾಸಿಸುತ್ತಿರುವ, ಶಿವಸ್ವರೂಪನಾದ ನಿನಗೆ ನಮಸ್ಕಾರಗಳು. ಅಗ್ನಿಯ ಬಣ್ಣವುಳ್ಳ, ಭಯಂಕರನಾದ, ಪಾರ್ವತಿಯೇ ಅರ್ಧಶರೀರವಾಗುಳ್ಳ, ರುದ್ರ, ವಿಷ್ಣು, ಬ್ರಹ್ಮರಿಗೂ ಮುಕ್ತಿಯನ್ನು ಕೊಟ್ಟ, ಸಾವಿಲ್ಲದ, ಎಲ್ಲರಿಗೂ ಹಿರಿಯನಾದ, ಭಯಂಕರ ಸ್ವರೂಪವುಳ್ಳ, ಚಂದ್ರಸ್ವರೂಪನಾದ, ವರಗಳನ್ನು ನೀಡುವ, ಮೂರುಲೋಕ ಸ್ವರೂಪನಾದ, ಮೂರು ದೇವರ ಸ್ವರೂಪನಾದ, ವಷಟ್ಕಾರ ಸ್ವರೂಪನಾದ ಶಿವನಿಗೆ ನಮಸ್ಕಾರಗಳು.

೧೨೮–೧೩೦. ಮನಸ್ಸೆಂಬ ಕಮಲದ ಮಧ್ಯಭಾಗದಲ್ಲಿ, ಆಕಾಶದಂತೆ ಲೇಪ, ರೂಪವಿಲ್ಲದೇ ಇರುವ, ಆಕಾಶದಲ್ಲಿಯೂ ಇರುವ, ಸೂರ್ಯನೇ ಮೊದಲಾದ ಎಂಟು ಸ್ಥಳಗಳಲ್ಲಿ, ಎಂಟು ಬಗೆಯ ರೂಪವನ್ನು ಹೊಂದಿ

**ಚತುರ್ಧಾ ಚ ಚತುರ್ಧಾ ಚ ಚತುರ್ಧಾ ಸಂಸ್ಥಿತಾಯ ಚ ।**
**ಪಂಚಧಾ ಪಂಚಧಾ ಚೈವ ಪಂಚ ಮಂತ್ರ ಶರೀರಿಣೇ ॥೧೨೯॥**
**ಚತುಃ ಷಷ್ಟಿ ಪ್ರಕಾರಾಯ ಅಕಾರಾಯ ನಮೋನಮಃ ।**
**ದ್ವಾತ್ರಿಂಶತ್ತತ್ವರೂಪಾಯ ಉಕಾರಾಯ ನಮೋನಮಃ ॥೧೩೦॥**
**ಷೋಡಶಾತ್ಮ ಸ್ವರೂಪಾಯ ಮಕಾರಾಯ ನಮೋನಮಃ ।**
**ಅಷ್ಟಧಾऽऽ ತ್ಮಸ್ವರೂಪಾಯ ಅರ್ಧಮಾತ್ರಾತ್ಮನೇ ನಮಃ ॥೧೩೧॥**
**ಓಂಕಾರಾಯ ನಮಸ್ತುಭ್ಯಂ ಚತುರ್ಧಾ ಸಂಸ್ಥಿತಾಯ ಚ ।**
**ಗಗನೇಶಾಯ ದೇವಾಯ ಸ್ವರ್ಗೇಶಾಯ ನಮೋನಮಃ ॥೧೩೨॥**
**ಸಪ್ತಲೋಕಾಯ ಪಾತಾಳ ನರಕೇಶಾಯ ವೈ ನಮಃ ।**
**ಅಷ್ಟಕ್ಷೇತ್ರಾऽಷ್ಟ ರೂಪಾಯ ಪರಾತ್ಪರ ತರಾಯ ಚ ॥೧೩೩॥**

---

ರುವ, ಪೃಥಿವಿಯೇ ಮೊದಲಾದ ಭೂತಗಳಿಗೆ ಉತ್ಪತ್ತಿಕಾರಣನಾದ, ನಾಲ್ಕು ವೇದಸ್ವರೂಪನೂ, ನಾಲ್ಕು ಆಶ್ರಮ ಸ್ವರೂಪನೂ, ನಾಲ್ಕು ವ್ಯೂಹ ಸ್ವರೂಪನೂ ಆದ, ಆಕಾಶವೇ ಮೊದಲಾದ ಐದು ಭೂತಗಳ ಸ್ವರೂಪದಲ್ಲಿಯೂ, ಸದ್ಯೋಜಾತಾದಿ ಐದು ಮಂತ್ರಸ್ವರೂಪದಲ್ಲಿಯೂ ಇರುವ, ಸದ್ಯೋಜಾತಾದಿ ಐದು ಮಂತ್ರ ಸ್ವರೂಪನೂ ಆಗಿರುವ, ಅರವತ್ತು ನಾಲ್ಕು ರೂಪವುಳ್ಳ, ಅಕಾರದ ಸ್ವರೂಪನೂ ಆದ, ಮುವ್ವತ್ತೆರಡು ತತ್ವ ಸ್ವರೂಪವುಳ್ಳ, ಉಕಾರ ಸ್ವರೂಪನಾದ, ನಿನಗೆ ಅನೇಕ ನಮಸ್ಕಾರಗಳು.

೧೩೧–೧೩೩. ಹದಿನಾರು ತತ್ತ್ವಸ್ವರೂಪನಾದ, ಮಕಾರ ಸ್ವರೂಪನಾದ ಶಿವನಿಗೆ ಅನೇಕ ನಮಸ್ಕಾರಗಳು. ಎಂಟು ವಿಧವಾದ ಆತ್ಮಸ್ವರೂಪನೂ, ಅರ್ಧಮಾತ್ರಾ ಕಾಲಸ್ವರೂಪನೂ, ಓಂಕಾರ ಸ್ವರೂಪನೂ, ಹಿಂದೆ ಹೇಳಿದ ಅಕಾರ, ಉಕಾರ, ಮಕಾರ ಮತ್ತು ಅರ್ಧಮಾತ್ರಾ ಕಾಲಸ್ವರೂಪನಾದ, ಧ್ವನಿಸ್ವರೂಪನಾಗಿ ಪರಾದಿನಾಲ್ಕು ವಿಧವಾಗಿರುವವನೂ, ಆಕಾಶಕ್ಕೆ ಅಧಿದೇವತೆಯೂ, ಸ್ವರ್ಗಕ್ಕೆ ಅಧಿಪತಿಯೂ, ಶಿವನೂ ಆದ ಸ್ವಾಮಿಗೆ ಅನೇಕ ನಮಸ್ಕಾರಗಳು. ಏಳು ಲೋಕದ ಸ್ವರೂಪನೂ, ಪಾತಾಳ ಮತ್ತು ನರಕ ಲೋಕಗಳಿಗೆ ಒಡೆಯನೂ, ಭೂಮಿಯೇ ಮೊದಲಾದ ಎಂಟು ಭೂತಗಳ ಸ್ವರೂಪನೂ, ಅತ್ಯಂತ ಉತ್ಕೃಷ್ಟ ವಸ್ತುಗಳಿಗಿಂತಲೂ,

ಸಹಸ್ರ ಶಿರಸೇ ತುಭ್ಯಂ ಸಹಸ್ರಾಯ ಚ ತೇ ನಮಃ ।
ಸಹಸ್ರ ಪಾದ ಯುಕ್ತಾಯ ಶರ್ವಾಯ ಪರಮೇಷ್ಠಿನೇ ॥೧೩೪॥

ನವಾಽತ್ಮ ತತ್ವ ರೂಪಾಯ ನವಾಽಷ್ಟಾತ್ಮಾತ್ಮ ಶಕ್ತಯೇ ।
ಪುನರಷ್ಟ ಪ್ರಕಾಶಾಯ ತಥಾಽಷ್ಟಾಷ್ಟಕ ಮೂರ್ತಯೇ ॥೧೩೫॥

ಚತುಃ ಷಷ್ಟ್ಯಾತ್ಮ ತತ್ವಾಯ ಪುನರಷ್ಟ ವಿಧಾಯ ತೇ ।
ಗುಣಾಷ್ಟಕ ವೃತಾಯೈವ ಗುಣಿನೇ ನಿರ್ಗುಣಾಯ ತೇ ॥೧೩೬॥

ಮೂಲಸ್ಥಾಯ ನಮಸ್ತುಭ್ಯಂ ಶಾಶ್ವತಸ್ಥಾನ ವಾಸಿನೇ ।
ನಾಭಿ ಮಂಡಲ ಸಂಸ್ಥಾಯ ಹೃದಿ ನಿಸ್ವನ ಕಾರಿಣೇ ॥೧೩೭॥

ಕಂಧರೇ ಚ ಸ್ಥಿತಾಯೈವ ತಾಲುರಂಧ್ರ ಸ್ಥಿತಾಯ ಚ ।
ಭ್ರೂಮಧ್ಯೇ ಸಂಸ್ಥಿತಾಯೈವ ನಾದಮಧ್ಯೇ ಸ್ಥಿತಾಯ ಚ ॥೧೩೮॥

---

ಅತ್ಯಂತ ಶ್ರೇಷ್ಠನು ಎಂದರೆ ಸ್ವಕಾರಣವಾದ ಪರತತ್ವ ಸ್ವರೂಪನಾದ ಪರಮೇಶ್ವರನಿಗೆ ಅನೇಕ ನಮಸ್ಕಾರಗಳು.

೧೩೪–೧೩೮. ಸಾವಿರ ಶಿರಸ್ಸುಳ್ಳ, ಸಾವಿರ ಸ್ವರೂಪನಾದ, ಸಾವಿರ ಕಾಲುಗಳುಳ್ಳ, ಮಂಗಳಕರನೂ ಮತ್ತು ಬ್ರಹ್ಮಸ್ವರೂಪನೂ ಆದ, ಒಂಬತ್ತು ವಿಧವಾದ ಆತ್ಮ ತತ್ವ ಸ್ವರೂಪನಾದ, ತಿರುಗಿ ಎಂಟು ವಿಧವಾದ ತೇಜಸ್ಸ್ವರೂಪನಾದ, ಅರವತ್ತುನಾಲ್ಕು ಆತ್ಮಶಕ್ತಿ ಸ್ವರೂಪನಾದ, ಭವ, ಮುಂತಾದ ಎಂಟು ಹೆಸರುಗಳುಳ್ಳ, ಎಂಟು ಬಗೆಯ ಗುಣಗಳಿಂದ ಕೂಡಿರುವ, ಪ್ರಪಂಚಸೃಷ್ಟಿಯ ಕಾಲದಲ್ಲಿ, ಸತ್ವ, ರಜಸ್, ತಮಸ್, ಇವುಗಳಿಂದ ಕೂಡಿರುವ, ಆದರೂ ನಿಜಸ್ವರೂಪದಲ್ಲಿ ಗುಣಗಳ ಸಂಪರ್ಕವಿಲ್ಲದ, ಶಾಶ್ವತವಾದ ಸ್ಥಾನದಲ್ಲಿರುವ, ಮೂಲಾಧಾರಚಕ್ರದಲ್ಲಿ ವಾಸಿಸುವ ಶಿವನಿಗೆ ಅನೇಕ ನಮಸ್ಕಾರಗಳು. ನಾಭಿಮಂಡಲದಲ್ಲಿ ವಾಸಮಾಡುವ, ಹೃದಯದಲ್ಲಿ ಪ್ರಾಣವಾಯುವಿನ ಶಬ್ದವನ್ನುಂಟು ಮಾಡುವ, ಕತ್ತಿನಲ್ಲಿಯೂ ವಾಸಿಸುವ, ದವಡೆಗಳ ರಂಧ್ರದಲ್ಲಿರುವ, ಹುಬ್ಬುಗಳ ಮಧ್ಯದಲ್ಲಿರುವ, ಧ್ವನಿ ಮಧ್ಯಭಾಗದಲ್ಲಿಯೂ ಇರುವ ಶಿವನಿಗೆ ಅನೇಕ ನಮಸ್ಕಾರಗಳು.

ಚಂದ್ರ ಬಿಂಬಸ್ಥಿತಾಯೈವ ಶಿವಾಯ ಶಿವರೂಪಿಣೇ ।
ವಹ್ನಿ ಸೋಮಾಽರ್ಕ ರೂಪಾಯ ಷಟ್ತ್ರಿಂಶಚ್ಛಕ್ತಿ ರೂಪಿಣೇ ॥
ತ್ರಿಧಾ ಸಂವೃತ್ಯ ಲೋಕಾನ್ವೈ ಪ್ರಸುಪ್ತಂ ಭುಜಗಾತ್ಮನೇ ।
ತ್ರಿಪ್ರಕಾರಂ ಸ್ಥಿತಾಯೈವ ತ್ರೇತಾಽಗ್ನಿಮಯ ರೂಪಿಣೇ ॥೧೪೦॥
ಸದಾಶಿವಾಯ ಶಾಂತಾಯ ಮಹೇಶಾಯ ಪಿನಾಕಿನೇ ।
ಸರ್ವಜ್ಞಾಯ ಶರಣ್ಯಾಯ ಸದ್ಯೋಜಾತಾಯ ವೈ ನಮಃ ॥೧೪೧॥
ಅಘೋರಾಯ ನಮಸ್ತುಭ್ಯಂ ವಾಮದೇವಾಯ ತೇ ನಮಃ ।
ತತ್ಪುರುಷಾಯ ನಮೋಽಸ್ತು ಈಶಾನಾಯ ನಮೋನಮಃ ॥
ನಮಸ್ತ್ರಿಂಶತ್ಪ್ರಕಾಶಾಯ ಶಾಂತಾಽತೀತಾಯ ವೈ ನಮಃ ।
ಅನಂತೇಶಾಯ ಸೂಕ್ಷ್ಮಾಯ ಉತ್ತಮಾಯ ನಮೋಽಸ್ತು ತೇ ॥
ಏಕಾಽಕ್ಷಾಯ ನಮಸ್ತುಭ್ಯ ಮೇಕ ರುದ್ರಾಯ ತೇ ನಮಃ ।
ನಮ ಸ್ತ್ರಿಮೂರ್ತಯೇ ತುಭ್ಯಂ ಶ್ರೀಕಂಠಾಯ ಶಿಖಂಡಿನೇ ॥೧೪೪॥

---

೧೩೯–೧೪೧. ಚಂದ್ರ ಬಿಂಬದಲ್ಲಿರುವವನೂ, ಶಿವಸ್ವರೂಪನೂ, ಮಂಗಳಕರನೂ, ಅಗ್ನಿ, ಚಂದ್ರ, ಸೂರ್ಯ ಸ್ವರೂಪನೂ, ಮೂವತ್ತಾರು ಶಕ್ತಿಸ್ವರೂಪನೂ, ಲೋಕಗಳನ್ನು ಮೂರು ರೀತಿಯಲ್ಲಿ ಸುತ್ತುಹಾಕಿ ಕೊಂಡು ಮಲಗಿರುವ ಸರ್ಪಸ್ವರೂಪನೂ, ಮೂರು ಗುಣರೂಪದಲ್ಲಿರು ವವನೂ, ಮೂರುಶ್ರೌತಾಗ್ನಿ ಸ್ವರೂಪನೂ, ಸದಾಶಿವನೂ, ಶಾಂತನೂ, ಮಹೇಶ್ವರನೂ, ಪಿನಾಕ ಧನುಸ್ಸನ್ನು ಹಿಡಿದಿರುವವನೂ, ಸರ್ವಜ್ಞನೂ, ಲೋಕರಕ್ಷಕನೂ, ಸದ್ಯೋಜಾತ, ಅಘೋರ, ತತ್ಪುರುಷ, ಈಶಾನ, ವಾಮದೇವ ಎಂಬ ದೇವಸ್ವರೂಪನೂ ಆದ ಶಿವನಿಗೆ ಅನೇಕ ನಮ ಸ್ಕಾರಗಳು.

೧೪೨–೧೪೪. ಸೌಮ್ಯಸ್ವರೂಪನಾದ ವಾಮದೇವನೂ, ಶ್ರೇಷ್ಠನಾದ ಅಚಿಂತ್ಯ ಶಕ್ತಿಯುಳ್ಳ ತತ್ಪುರುಷನೂ, ಈಶಾನನೂ, ಮುಹೂರ್ತಗಳ ಲ್ಲಿಯೂ ಪ್ರಕಾಶವುಳ್ಳವನೂ, ಪರಮ ಶಾಂತಿಸ್ವರೂಪನೂ, ಅನಂತ ರೂಪ ಸರ್ಪಕ್ಕೆ ಅಧಿಪತಿಯೂ, ಸೂಕ್ಷ್ಮನೂ, ಉತ್ತಮನೂ ಆದ ಶಿವನಿಗೆ ಅನೇಕ ನಮಸ್ಕಾರಗಳು. ಜ್ಞಾನರೂಪವಾದ ಕಣ್ಣಿನ ಸಾಧನದಿಂದ ತಿಳಿಯಲ್ಪಡ ತಕ್ಕವನೂ, ಅದ್ವಿತೀಯನಾದ ರುದ್ರಸ್ವರೂಪನೂ, ಬ್ರಹ್ಮ, ವಿಷ್ಣು, ಶಿವ, ಎಂಬ ಮೂರು ಸ್ವರೂಪವುಳ್ಳವನೂ, ಶ್ರೀಕಂಠನೂ, ನವಿಲುಗರಿಯನ್ನು

ಅನಂತಾಸನ ಸಂಸ್ಥಾಯ ಅನಂತಾಯಾಂತ ಕಾರಿಣೇ ।
ವಿಮಲಾಯ ವಿಶಾಲಾಯ ವಿಮಲಾಂಗಾಯ ತೇ ನಮಃ ॥೧೪೫॥

ವಿಮಲಾಽಸನ ಸಂಸ್ಥಾಯ ವಿಮಲಾಽರ್ಥಾರ್ಥ ರೂಪಿಣೇ ।
ಯೋಗ ಪೀಠಾಂತರಸ್ಥಾಯ ಯೋಗಿನೇ ಯೋಗದಾಯಿನೇ ॥

ಯೋಗಿನಾಂ ಹೃದಿ ಸಂಸ್ಥಾಯ ಸದಾ ನೀವಾರ ಶೂಕವತ್ ।
ಪ್ರತ್ಯಾ ಹಾರಾಯ ತೇ ನಿತ್ಯಂ ಪ್ರತ್ಯಾಹಾರ ರತಾಯ ತೇ ॥೧೪೭॥

ಪ್ರತ್ಯಾಹಾರರತಾನಾಂ ಚ ಪ್ರತಿಸ್ಥಾನ ಸ್ಥಿತಾಯ ಚ ।
ಧಾರಣಾಯ ನಮಸ್ತುಭ್ಯಂ ಧಾರಣಾಽಭಿ ರತಾಯಚ ॥೧೪೮॥

ಧಾರಣಾಽಭ್ಯಾಸ ಯುಕ್ತಾನಾಂ ಪುರಸ್ತಾತ್ಸಂಸ್ಥಿತಾಯ ಚ ।
ಧ್ಯಾನಾಯ ಧ್ಯಾನ ರೂಪಾಯ ಧ್ಯಾನಗಮ್ಯಾಯ ತೇ ನಮಃ ॥

ಧ್ಯೇಯಾಯ ಧ್ಯೇಯಗಮ್ಯಾಯ ಧ್ಯೇಯ ಧ್ಯಾನಾಯ ತೇ ನಮಃ ।
ಧ್ಯೇಯಾನಾಮಪಿ ಧ್ಯೇಯಾಯ ನಮೋ ಧ್ಯೇಯ ತಮಾಯತೇ ॥

---

ಅಲಂಕಾರವಾಗುಳ್ಳವನೂ, ಶೇಷವೆಂಬ ಸರ್ಪದ ಪೀಠದಲ್ಲಿ ಕೂತಿರುವವನೂ, ಶೇಷಸ್ವರೂಪನೂ, ಪ್ರಳಯಕ್ಕೆ ಕಾರಣನೂ, ವಿಶಾಲವಾದ ಆಕಾರವುಳ್ಳವನೂ, ಶುದ್ಧವಾದ ದೇಹವುಳ್ಳವನೂ ಆದ ಶಿವನಿಗೆ ಅನೇಕ ನಮಸ್ಕಾರಗಳು.

೧೪೭–೧೫೧. ಶುದ್ಧವಾದ ಪೀಠದಲ್ಲಿ ಕೂತಿರುವ, ಶುದ್ಧಜ್ಞಾನಸ್ವರೂಪನಾದ, ಯೋಗ ಪೀಠದ ಒಳಗಡೇ ಇರುವ, ಯೋಗಾಭ್ಯಾಸ ಸ್ವಭಾವವುಳ್ಳ, ಭಾಗ್ಯವನ್ನು ಕೊಡುವ, ಯೋಗಿಗಳ ಮನಸ್ಸಿನಲ್ಲಿ ನವಣೆಯ ಕಾಳಿನ ತುದಿಯಂತೆ ಬಹು ಸೂಕ್ಷ್ಮವಾಗಿ ಪ್ರಕಾಶಿಸುವ, ಪ್ರತ್ಯಾಹಾರ ಯೋಗಾಭ್ಯಾಸ ಮಾಡುವವರಿಗೆ ಎಲ್ಲಾ ಸ್ಥಳಗಳಲ್ಲಿಯೂ ಕಾಣುವ, ಲೋಕದ ಸ್ಥಿತಿಯನ್ನು ಪಾಲಿಸುವ, ಮನಸ್ಸನ್ನು ಹತೋಟಿಯಲ್ಲಿಟ್ಟು, ಯೋಗದಿಂದ ಧ್ಯಾನಮಾಡುವವರಿಗೆ ಮನಸ್ಸಿನ ಎದುರಿಗೆ ಕಾಣುವ, ಧ್ಯಾನಸ್ವರೂಪನೂ, ಅತ್ಯಂತ ಉತ್ಕೃಷ್ಟವಾದ ಧ್ಯೇಯಕ್ಕಿಂತಲೂ, ಅತ್ಯುತ್ಕೃಷ್ಟವಾದ ಧ್ಯೇಯರೂಪನೂ, ಶಾಂತಿಯಿಂದ ಲಭಿಸುವವನೂ,

ಸಮಾಧಾನಾಭಿ ಗಮ್ಯಾಯ ಸಮಾಧಾನಾಯ ತೇ ನಮಃ ।
ಸಮಾಧಾನ ರತಾನಾಂ ತು ನಿರ್ವಿಕಲ್ಪಾಽರ್ಥ ರೂಪಿಣೇ ॥೧೫೧॥

ದಗ್ಧ್ವೇದಮ್ಧೃತಂ ಸರ್ವಮಿದಂ ತ್ವಯಾಽದ್ಯ ।
ಜಗತ್ತ್ರಯಂ ರುದ್ರ ಪುರತ್ರಯಂ ಹಿ ॥
ಕಃ ಸ್ತೋತುಮಿಚ್ಛೇತ್ಕಥ ಮೀದೃಶಂ ತ್ವಾಂ ।
ಸ್ತೋಷ್ಯೇ ಹ ತುಷ್ಟಾಯ ಶಿವಾಯ ತುಭ್ಯಂ ॥೧೫೨॥

ಭಕ್ತ್ಯಾ ಚ ತುಷ್ಟ್ಯಾಽದ್ಭುತ ದರ್ಶನಾಚ್ಚ ।
ಮರ್ತ್ಯಾ ಅಮರ್ತ್ಯಾ ಅಪಿ ದೇವದೇವ ॥
ಏತೇ ಗಣಾಃ ಸಿದ್ಧ ಗಣೈಃ ಪ್ರಣಾಮಂ ।
ಕುರ್ವಂತಿ ದೇವೇಶ ಗಣೇಶ ತುಭ್ಯಂ ॥೧೫೩॥

ನಿರೀಕ್ಷಣಾದೇವ ವಿಭೋಽಸಿ ದಗ್ಧುಂ ।
ಪುರತ್ರಯಂ ಚೈವ ಜಗತ್ತ್ರಯಂ ಚ ॥
ಲೀಲಾಽಲಸೇನಾಽಂಬಿಕಯಾ ಕ್ಷಣೇನ ।
ದಗ್ಧಂ ಕಿಲೇಷುಶ್ಚ ತದಾಽಥ ಮುಕ್ತಃ ॥೧೫೪॥

---

ಶಾಂತಿಪ್ರಿಯರಿಗೆ ನಿಶ್ಚಯಾತ್ಮಕವಾಗಿ ನಿತ್ಯಾರ್ಥರೂಪನಾಗಿ ತೋರುವವನೂ, ಆದ ಶಿವನಿಗೆ ಅನೇಕ ನಮಸ್ಕಾರಗಳು.

೧೫೨–೧೫೪. ಓ ಶಿವನೇ, ನೀನು ಈಗ ತ್ರಿಪುರವನ್ನು ಸುಟ್ಟು, ಮೂರು ಲೋಕವನ್ನೂ ಉದ್ಧಾರಮಾಡಿದ್ದೀಯೆ. ಇಂಥಾ ಮಹಿಮೆಯಿಂದ ಕೂಡಿದ ನಿನ್ನ ಸ್ವರೂಪವನ್ನು ಸ್ತೋತ್ರಮಾಡಲು ನನಗೆ ಸಾಧ್ಯವೆ? ಆದರೂ ನಿನ್ನ ಮೇಲಿನ ಭಕ್ತಿಯಿಂದ ಸ್ತೋತ್ರ ಮಾಡಲು ಬಯಸುತ್ತೇನೆ. ಓ ದೇವರಿಗೆಲ್ಲರಿಗೂ ದೇವರೇ, ನಿನ್ನ ಮೇಲಿನ ಭಕ್ತಿಯಿಂದಲೂ, ಸಂತೋಷದಿಂದಲೂ, ನಿನ್ನ ಆಶ್ಚರ್ಯಕರವಾದ ಕಾರ್ಯವನ್ನು ನೋಡಿದುದರಿಂದಲೂ, ಮನುಷ್ಯರು, ದೇವತೆಗಳು, ಗಣಗಳು, ಸಿದ್ಧರೂ, ಎಲ್ಲರೂ ನಿನಗೆ ನಮಸ್ಕಾರ ಮಾಡುತ್ತಿದ್ದಾರೆ. ಓ ಸ್ವಾಮಿಯೇ, ನೀನು ಕೇವಲ ನೋಡೋಣ ಮಾತ್ರದಿಂದಲೇ, ಮೂರು ಲೋಕವನ್ನೂ ಮತ್ತು ತ್ರಿಪುರವನ್ನೂ ಸುಟ್ಟುಹಾಕಲು ಸಮರ್ಥನಾಗಿದ್ದೀಯೆ! ಆದರೂ ನೀನು ಪಾರ್ವತಿಯೊಂದಿಗೆ ರಥದಲ್ಲಿ ಕೂತು, ಆಟಕ್ಕಾಗಿ ಬಾಣ

ಕೃತೋ ರಥಶ್ಚೇಷು ವರಶ್ಚ ಶುಭ್ರಂ ।
ಶರಾಸನಂ ತೇ ತ್ರಿಪುರ ಕ್ಷಯಾಯ ॥
ಅನೇಕ ಯತ್ನೈಶ್ಚ ಮಯಾಽಥ ತುಭ್ಯಂ ।
ಫಲಂ ನ ದೃಷ್ಟಂ ಸುರ ಸಿದ್ಧಸಂಘೈಃ ॥೧೫೫॥

ರಥೋ ರಥೀ ದೇವವರೋ ಹರಿಶ್ಚ ।
ರುದ್ರಃ ಸ್ವಯಂ ಶಕ್ರ ಪಿತಾಮಹೌ ಚ ॥
ತ್ವಮೇವ ಸರ್ವೇ ಭಗವನ್ ಕಥಂ ತು ।
ಸ್ತೋಷ್ಯೇ ಹ್ಯತೋಷ್ಯಂ ಪ್ರಣಿಪತ್ಯ ಮೂರ್ಧ್ನಾ ॥೧೫೬॥

ಅನಂತ ಪಾದಸ್ತ್ವಮನಂತ ಬಾಹು ।
ರನಂತ ಮೂರ್ಧಾಽಂತಕರಃ ಶಿವಶ್ಚ ॥
ಅನಂತ ಮೂರ್ತಿಃ ಕಥ ಮೀದೃಶಂ ತ್ವಾಂ ।
ತೋಷ್ಯೇ ಹ್ಯತೋಷ್ಯಂ ಕಥ ಮೀದೃಶಂ ತ್ವಾಂ ॥೧೫೭॥

ನಮೋ ನಮಃ ಸರ್ವವಿದೇ ಶಿವಾಯ ।
ರುದ್ರಾಯ ಶರ್ವಾಯ ಭವಾಯ ತುಭ್ಯಂ ॥
ಸ್ಥೂಲಾಯ ಸೂಕ್ಷ್ಮಾಯ ಸು ಸೂಕ್ಷ್ಮ ಸೂಕ್ಷ್ಮ ।
ಸೂಕ್ಷ್ಮಾಯ ಸೂಕ್ಷ್ಮಾರ್ಥ ವಿದೇ ವಿಧಾತ್ರೇ ॥೧೫೮॥

---

ವನ್ನು ಬಿಟ್ಟು, ತ್ರಿಪುರವನ್ನು ಒಂದು ಕ್ಷಣಕಾಲದಲ್ಲಿಯೇ ನಾಶಮಾಡಿದ್ದೀಯೆ. ನೀನು ತ್ರಿಪುರನಾಶಕ್ಕಾಗಿ ಬಹಳ ಪ್ರಯತ್ನದಿಂದ, ಒಂದು ರಥವನ್ನೂ, ಶ್ರೇಷ್ಠವಾದ ಬಾಣವನ್ನೂ ಬತ್ತಳಿಕೆಯನ್ನೂ ಮಾಡಿಸಿದೆ. ಆದರೆ ಮಹಾಮಹಿಮಾಽನ್ವಿತನಾದ ನಿನಗೆ ಇವುಗಳಿಂದ ಉಪಯೋಗವೇನೂ ಇತ್ತಿಲ್ಲವೆಂದು ಸಿದ್ಧರೆಂಬ ದೇವತೆಗಳಿಗೂ, ನನಗೂ ಅನ್ನಿಸುವುದು.

೧೫೬–೧೬೧. ಓ ಶಿವನೇ, ನೀನೇ ರಥವೂ. ರಥದಲ್ಲಿ ಕೂತುಕೊಳ್ಳುವವನೂ, ದೇವಶ್ರೇಷ್ಠನೂ, ವಿಷ್ಣುವೂ, ರುದ್ರನೂ, ಇಂದ್ರ ಮತ್ತು ಬ್ರಹ್ಮನೂ, ಎಲ್ಲವೂ ಆಗಿದ್ದೀಯೆ. ಇಂಥಾ ಪೂಜ್ಯ ಸ್ವರೂಪನಾದ, ಸ್ತೋತ್ರಮಾಡಲು ಅಸಾಧ್ಯವಾದ ಸ್ವರೂಪವುಳ್ಳ, ನಿನ್ನನ್ನು ನಾನು ಹೇಗೆ ಸ್ತೋತ್ರ ಮಾಡಬಲ್ಲೆನು? ಎಲ್ಲವನ್ನೂ ತಿಳಿದಿರುವವನೂ,

ಸ್ರಷ್ಟ್ರೇ ನಮಃ ಸರ್ವ ಸುರಾಽಸುರಾಣಾಂ ।
ಭರ್ತ್ರೇ ಚ ಹರ್ತ್ರೇ ಜಗತಾಂ ವಿಧಾತ್ರೇ ॥
ನೇತ್ರೇ ಸುರಾಣಾ ಮಸುರೇಶ್ವರಾಣಾಂ ।
ದಾತ್ರೇ ಪ್ರಶಾಸ್ತ್ರೇ ಮಮ ಸರ್ವ ಶಾಸ್ತ್ರೇ ॥೧೫೯॥
ವೇದಾಂತ ವೇದ್ಯಾಯ ಸು ನಿರ್ಮಲಾಯ ।
ವೇದಾಽರ್ಥ ವಿದ್ಭಿಃ ಸತತಂ ಸ್ತುತಾಯ ॥
ವೇದಾತ್ಮ ರೂಪಾಯ ಭವಾಯ ತುಭ್ಯಂ ।
ಅಂತಾಯ ಮಧ್ಯಾಯ ಸು ಮಧ್ಯಮಾಯ ॥೧೬೦॥
ಆದ್ಯಂತ ಶೂನ್ಯಾಯ ಚ ಸಂ ಸ್ಥಿತಾಯ ।
ತಥಾ ತ್ವ ಶೂನ್ಯಾಯ ಚ ಲಿಂಗಿನೇ ಚ ॥

---

ಮಂಗಳಸ್ವರೂಪನೂ, ರುದ್ರನೂ, ಸರ್ವನೂ, ಭವನೂ, ದೊಡ್ಡವನೂ, ಚಿಕ್ಕವನೂ, ಸೂಕ್ಷ್ಮಜ್ಞನೂ, ಪ್ರಪಂಚದ ಎಲ್ಲಾ ಸೂಕ್ಷ್ಮವಸ್ತುಗಳಿಗಿಂತಲೂ ಬಹು ಸೂಕ್ಷ್ಮನೂ, ಸೃಷ್ಟಿಕರ್ತನೂ ಆದ ನಿನಗೆ ಅನೇಕ ನಮಸ್ಕಾರಗಳು. ಎಲ್ಲವನ್ನೂ ಸೃಜಿಸಿದವನೂ, ಎಲ್ಲಾ ದೇವತೆಗಳಿಗೂ ಮತ್ತು ರಾಕ್ಷಸರಿಗೂ, ಸ್ವಾಮಿಯೂ, ಜಗನ್ನಾಯಕನೂ, ಜಗತ್ತನ್ನು ಸೃಷ್ಟಿಸಿದವನೂ, ಆದ ನಿನಗೆ ನಮಸ್ಕಾರಗಳು. ದೇವತೆಗಳಿಗೂ ಮತ್ತು ರಾಕ್ಷಸ ಶ್ರೇಷ್ಠರಿಗೂ ನಾಯಕನೂ, ದಾನಿಯೂ, ಒಳ್ಳೆಯ ನಿಯಾಮಕನೂ, ನನಗೆ ಎಲ್ಲವನ್ನೂ ನಿಯಮಿಸುವವನೂ, ವೇದಾಂತದಿಂದ ತಿಳಿಯಲ್ಪಡುವವನೂ, ಬಹಳ ಶುದ್ಧನೂ, ವೇದದ ಅರ್ಥವನ್ನು ತಿಳಿದಿರುವ ಜ್ಞಾನಿಗಳಿಂದ ಯಾವಾಗಲೂ ಸ್ತೋತ್ರ ಮಾಡಲ್ಪಡುವವನೂ, ವೇದಗಳಲ್ಲಿ ಹೇಳಲ್ಪಡುವ ಪರಮಾತ್ಮಸ್ವರೂಪನೂ, ಜಗತ್ತಿಗೆ ಉತ್ಪತ್ತಿಕಾರಣನೂ, ಎಲ್ಲದಕ್ಕೂ ಕೊನೆಯೂ, ಮಧ್ಯನೂ, ಶ್ರೇಷ್ಠನಾಗಿ ಮಧ್ಯದಲ್ಲಿ ಕಾಣುವವನೂ, ಆದ ನಿನಗೆ ನಮಸ್ಕಾರಗಳು. ಮೊದಲು ಕೊನೆಯೆಂಬುದಿಲ್ಲದವನೂ,ಯಾವಾಗಲೂ ಇರುವವನೂ, ಹಾಗೆಯೇ ಶೂನ್ಯಸ್ವರೂಪನಲ್ಲದವನೂ,ಲಿಂಗಸ್ವರೂಪಿಯೂ,ನಿನ್ನ ಹೊರತು ಬೇರೆ ಗಮಕ ವಿಲ್ಲದವನೂ,

ಅಲಿಂಗಿನೇ ಲಿಂಗ ಮಯಾಯ ತುಭ್ಯಂ ।
ಲಿಂಗಾಯ ವೇದಾದಿ ಮಯಾಯ ಸಾಕ್ಷಾತ್ ॥೧೬೧॥

ರುದ್ರಾಯ ಮೂರ್ಧಾನ ನಿಕೃಂತನಾಯ ।
ಮಮಾದಿ ದೇವಸ್ಯ ಚ ಯಜ್ಞಮೂರ್ತೇಃ ॥
ವಿಧ್ವಾಂತ ಭಂಗಂ ಮಮ ಕರ್ತು ಮೀಶಃ ।
ದೃಷ್ಟ್ವೈವ ಭೂಮೌ ಕರ ಜಾಗ್ರಕೋಟ್ಯಾ ॥೧೬೨॥

ಅಹೋ ವಿಚಿತ್ರಂ ತವ ದೇವ ದೇವ ।
ವಿಚೇಷ್ಟಿತಂ ಸರ್ವ ಸುರಾಸುರೇಶ ॥
ದೇಹೀವ ದೇಹ್ಯೈಃ ಸಹ ದೇವ ಕಾರ್ಯಂ ।
ಕರಿಷ್ಯಸೇ ನಿರ್ಗುಣ ರೂಪ ತತ್ತ್ವ ॥೧೬೩॥

ಏಕಂ ಸ್ಥೂಲಂ ಸೂಕ್ಷ್ಮಮೇಕಂ ಸು ಸೂಕ್ಷ್ಮಂ ।
ಮೂರ್ತಾಮೂರ್ತಂ ಮೂರ್ತಮೇಕಂ ಹ್ಯಮೂರ್ತಂ ॥
ಏಕಂ ದೃಷ್ಟಂ ವಾಙ್ಮಯಂ ಚೈಕ ಮೀಶಂ ।
ಧ್ಯೇಯಂ ಚೈಕಂ ತತ್ತ್ವ ಮತ್ರಾದ್ಭುತಂ ತೇ ॥೧೬೪॥

---

ಲಿಂಗ ಪೂರ್ಣನೂ, ಲಿಂಗರೂಪನೂ, ಸಾಕ್ಷಾತ್ ವೇದದ ಮೊದಲನೆಯ ಓಂಕಾರ ಸ್ವರೂಪನೂ, ಆದ ನಿನಗೆ ನಮಸ್ಕಾರಗಳು.

೧೬೨-೧೬೬. ಓ ಶಿವನೇ, ಆದಿಕಾರಣನಾದ, ಯಜ್ಞಸ್ವರೂಪನಾದ ವಿಷ್ಣುವಿಗೂ. ಬ್ರಹ್ಮನಾದ ನನಗೂ, ಇದ್ದ ಅಜ್ಞಾನವನ್ನು ನಾಶಮಾಡುವುದಕ್ಕಾಗಿ ನಮ್ಮನ್ನು ಅಪರಾಧಿ ಸ್ಥಾನದಲ್ಲಿದ್ದವರನ್ನಾಗಿ ಭಾವಿಸಿ, ನಿನ್ನ ಕೈಯುಗುರಿನ ತುದಿಯಿಂದ ನನ್ನ ತಲೆಯನ್ನು ಕತ್ತರಿಸಿದ ಸ್ವಾಮಿಯಾದ ನಿನಗೆ ನಮಸ್ಕಾರಗಳು. ಓ ಎಲ್ಲಾ ದೇವತೆಗಳಿಗೆ ಮತ್ತು ರಾಕ್ಷಸರಿಗೆ ಒಡೆಯನೇ, ನಿನ್ನ ನಡೆವಳಿಕೆಗಳೆಲ್ಲವೂ ಬಹಳ ಆಶ್ಚರ್ಯವನ್ನುಂಟುಮಾಡುವವೇ ಆಗಿವೆ. ಗುಣವಿಲ್ಲದವನೂ, ಮತ್ತು ಆಕಾರವಿಲ್ಲದವನಾದರೂ, ಶರೀರಧಾರಿಯೋ ಎಂಬಂತೆ ದೇವತೆಗಳೊಡನೆ ಸೇರಿ ದೇವತೆಗಳ ಕೆಲಸಗಳನ್ನು ನಡೆಸುತ್ತೀಯೆ. ನೀನು ಸ್ಥೂಲನಾಗಿಯೂ, ಸೂಕ್ಷ್ಮನಾಗಿಯೂ, ಇಂದ್ರಿಯಗಳಿಗೆ ಗೋಚರವಾದ ಪದಾರ್ಥವೂ,

ಸ್ವಪ್ನೇ ದೃಷ್ಟಂ ಯತ್ಪದಾರ್ಥಂ ಹ್ಯಲಕ್ಷ್ಯಂ ।
ದೃಷ್ಟಂ ನೂನಂ ಭಾತಿ ಮನ್ಯೇನ ಚಾಽಪಿ ॥
ಮೂರ್ತಿರ್ನೋ ನ್ಯೈ ದೇವ ಮೀಶಾನ ದೇವ್ಯೈ ।
ರ್ಲಕ್ಷ್ಯಾಯತ್ನೈ ರಪ್ಯಲಕ್ಷ್ಯಂ ತಥಂ ತು ॥೧೬೫॥
ದಿವ್ಯಃ ಕ್ವ ದೇವೇಶ ಭವತ್ಪ್ರಭಾವೋ ।
ವಯಂ ಕ್ವ ಭಕ್ತಿಃ ಕ್ವ ಚ ತೇ ಸ್ತುತಿಶ್ಚ ॥
ತಥಾಽಪಿ ಭಕ್ತ್ಯಾ ವಿಲಪಂ ತ ಮೀಶ ।
ಪಿತಾಮಹಂ ಮಾಂ ಭಗವನ್ ಕ್ಷಮಸ್ವ ॥೧೬೬॥

॥ ಸೂತ ಉವಾಚ ॥

ಯ ಇಮಂ ಶೃಣುಯಾದ್ವಿಜೋತ್ತಮಾ ।
ಭುವಿ ದೇವಂ ಪ್ರಣಿಪತ್ಯ ವಾ ಪಠೇತ್ ॥
ಸ ಚ ಮುಂಚತಿ ಪಾಪ ಬಂಧನಂ ।
ಭವ ಭಕ್ತ್ಯಾ ಪುರಶಾಸಿತುಃ ಸ್ತವಂ ॥೧೬೭॥

---

ಆಕಾಶ ಸ್ವರೂಪನಾಗಿಯೂ, ಒಬ್ಬನೇ ಆದ ನೀನು, ನಾನಾ ರೂಪದಲ್ಲಿ ಕಾಣುತ್ತಿರುವುದು ಬಹಳ ಆಶ್ಚರ್ಯವೇ ಸರಿ. ಕಾಣಿಸದ ಮತ್ತು ಕೇಳಿಸದ ಪದಾರ್ಥಗಳು ಸ್ವಪ್ನದಲ್ಲಿಯೂ ಕಾಣಿಸಲಾರವು. ನಿನ್ನ ಸ್ವರೂಪವು ಕಾಣಿಸುವಂಥಾದ್ದಲ್ಲದಿದ್ದರೂ, ದೇವಾಧಿದೇವತೆಗಳಿಗೆ ಕಾಣಿಸುತ್ತಿರುವುದು ಆಶ್ಚರ್ಯವೇ ಸರಿ. ಓ ಶಿವನೇ, ನಿನ್ನ ಮಹಾಮಹಿಮೆಯೆಲ್ಲಿ? ಅಲ್ಪರಾದ ನಮ್ಮ ನಿನ್ನ ಭಕ್ತಿಸ್ತೋತ್ರಗಳೆಂಬುವೆಲ್ಲಿ? ಆದ್ದರಿಂದ ಇವುಗಳು ಅಸಾಧ್ಯವೇ ಸರಿ! ಆದರೂ, ಲೋಕಕ್ಕೆ ತಾತನಾದ ನಾನು ನಿನ್ನ ಮೇಲಿನ ಭಕ್ತಿಯಿಂದ ಏನೋ ಸ್ತೋತ್ರರೂಪವಾಗಿ ಹರಟಿದ್ದನ್ನು ದಯವಿಟ್ಟು ಕ್ಷಮಿಸು.

೧೬೭–೧೭೨. ಸೂತನು ಹೇಳಿದನು: ಎಲೈ ಬ್ರಾಹ್ಮಣ ಶ್ರೇಷ್ಠರೇ, ಈ ತ್ರಿಪುರಸಂಹಾರ ಕಾಲದಲ್ಲಿ ಮಾಡಿದ ತ್ರಿಪುರಸ್ತೋತ್ರವನ್ನು ಯಾವನು ಕೇಳುವನೋ ಶಿವನನ್ನು ನಮಸ್ಕರಿಸಿ ಓದುವನೋ, ಶಿವನ ಮಹಿಮೆಯಿಂದ

ಶ್ರುತ್ವಾ ಚ ಭಕ್ತ್ಯಾ ಚತುರಾನನೇನ ।
ಸ್ತುತೋ ಹಸನ್ ಶೈಲಸುತಾಂ ನಿರೀಕ್ಷ್ಯ ॥
ಸ್ತವಂ ತದಾ ಪ್ರಾಹ ಮಹಾನುಭಾವಂ ।
ಮಹಾ ಭುಜೋ ಮಂದರ ಶೃಂಗವಾಸೀ ॥೧೬೮॥

॥ ಶಿವ ಉವಾಚ ॥

ಸ್ತವೇನಾನೇನ ತುಷ್ಟೋಽಸ್ಮಿ ತವ ಭಕ್ತ್ಯಾ ಚ ಪದ್ಮಜ ।
ವರಾನ್ ವರಯ ಭದ್ರಂ ತೇ ದೇವಾನಾಂ ಚ ಯಥೇಪ್ಸಿತಾನ್ ॥

॥ ಸೂತ ಉವಾಚ ॥

ತತಃ ಪ್ರಣಮ್ಯ ದೇವೇಶಂ ಭಗವಾನ್ಪದ್ಮ ಸಂಭವಃ ।
ಕೃತಾಂಜಲಿ ಪುಟೋ ಭೂತ್ವಾ ಪ್ರಾಹೇದಂ ಪ್ರೀತ ಮಾನಸಃ ॥

॥ ಶ್ರೀ ಪಿತಾಮಹ ಉವಾಚ ॥

ಭಗವನ್ದೇವ ದೇವೇಶ ತ್ರಿಪುರಾಂತಕ ಶಂಕರ ।
ತ್ವಯಿ ಭಕ್ತಿಂ ಪರಾಂ ಮೇಽದ್ಯ ಪ್ರಸೀದ ಪರಮೇಶ್ವರ ॥೧೭೦॥

---

ಅವನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಮಹಾಮಹಿಮನಾದ, ದೊಡ್ಡ ತೋಳುಗಳುಳ್ಳ, ಮಂದರ ಪರ್ವತದ ಶಿಖರದ ಮೇಲೆ ವಾಸಮಾಡುವ ಶಿವನು, ಬ್ರಹ್ಮನು ಭಕ್ತಿಯಿಂದ ಮಾಡಿದ ಸ್ತೋತ್ರವನ್ನು ಕೇಳಿ, ಪಾರ್ವತಿಯ ಕಡೆ ಮುಗುಳುನಗೆಯಿಂದ ನೋಡುತ್ತಾ ಬ್ರಹ್ಮನನ್ನು ಕುರಿತು ಹೀಗೆ ಹೇಳಿದನು. ಶಿವನು ಹೇಳಿದನು: ಎಲೈ ಕಮಲದಲ್ಲಿ ಹುಟ್ಟಿದ ಬ್ರಹ್ಮನೇ, ನಿನ್ನ ಭಕ್ತಿಯಿಂದಲೂ, ನೀನು ಮಾಡಿದ ಸ್ತೋತ್ರದಿಂದಲೂ, ಮೆಚ್ಚಿದ್ದೇನೆ. ನಿನಗೂ ಮತ್ತು ದೇವತೆಗಳಿಗೂ ಇಷ್ಟವಾದ ವರಗಳನ್ನು ಬೇಡಿಕೋ, ನಿನಗೆ ಮಂಗಳವಾಗಲಿ. ಸೂತನು ಹೇಳಿದನು: ಅನಂತರದಲ್ಲಿ ಬ್ರಹ್ಮನು ದೇವತೆಗಳಿಗೆ ಒಡೆಯನಾದ ಶಿವನನ್ನು ನಮಸ್ಕರಿಸಿ, ಬಹಳ ಸಂತೋಷದಿಂದ ಕೈಮುಗಿದು ಶಿವನಿಗೆ ಈ ರೀತಿ ಬಿನ್ನೈಸಿದನು. ಶ್ರೀ ಬ್ರಹ್ಮನು ಹೇಳಿದನು: ಓ ಪೂಜ್ಯನಾದ, ದೇವಾಧಿದೇವತೆಗಳಿಗೆಲ್ಲರಿಗೂ ಒಡೆಯನಾದ ತ್ರಿಪುರನಾಶಕನಾದ, ಲೋಕಕ್ಷೇಮವನ್ನುಂಟುಮಾಡುವ ಪರಮೇಶ್ವರನೇ, ನಿನ್ನಲ್ಲಿ

ದೇವಾನಾಂ ಚೈವ ಸರ್ವೇಷಾಂ ತ್ವಯಿ ಸರ್ವಾರ್ಥ ದೇಶ್ವರ ।
ಪ್ರಸೀದ ಭಕ್ತಿಯೋಗೇನ ಸಾರಥ್ಯೇನ ಚ ಸರ್ವದಾ ॥೧೬೨॥

ಜನಾರ್ದನೋಽಪಿ ಭಗವಾ ನ್ನಮಸ್ಕೃತ್ಯ ಮಹೇಶ್ವರಂ ।
ಕೃತಾಂಜಲಿ ಪುಟೋ ಭೂತ್ವಾ ಪ್ರಾಹ ಸಾಂಬಂ ತ್ರಿಯಂಬಕಂ ॥

ವಾಹನತ್ವಂ ತವೇಶಾನ ನಿತ್ಯ ಮೀಹೇ ಪ್ರಸೀದ ಮೇ ।
ತ್ವಯಿ ಭಕ್ತಿಂ ಚ ದೇವೇಶ ದೇವದೇವ ನಮೋಽಸ್ತು ತೇ ॥೧೬೪॥

ಸಾಮರ್ಥ್ಯಂ ಚ ಸದಾ ಮಹ್ಯಂ ಭವಂತಂ ವೋಢು ಮೀಶ್ವರಂ ।
ಸರ್ವಜ್ಞತ್ವಂ ಚ ವರದ ಸರ್ವಗತ್ವಂ ಚ ಶಂಕರ ॥೧೬೫॥

॥ ಸೂತ ಉವಾಚ ॥

ತಯೋಃ ಶ್ರುತ್ವಾ ಮಹಾದೇವೋ ವಿಜ್ಞಪ್ತಿಂ ಪರಮೇಶ್ವರಃ ।
ಸಾರಥ್ಯೇ ವಾಹನತ್ವೇ ಚ ಕಲ್ಪಯಾಮಾಸ ವೈ ಭವಃ ॥೧೬೬॥

---

ಭಕ್ತಿಯನ್ನುಕೊಟ್ಟು ನನಗೆ ಪ್ರಸನ್ನನಾಗು. ಓ ಎಲ್ಲವನ್ನೂಕೊಡುವ ಶಿವನೇ ನಿನ್ನಲ್ಲಿ ದೇವತೆಗಳ ಭಕ್ತಿಯನ್ನೂ ಮತ್ತು ನನ್ನ ಸಾರಥಿಯ ಕೆಲಸ ವನ್ನೂ ಒಪ್ಪಿ ದಯವಿಟ್ಟು ಅನುಗ್ರಹಿಸಿ ನಮ್ಮಗಳಿಗೆಲ್ಲರಿಗೂ ಯಾವಾ ಗಲೂ ಪ್ರಸನ್ನನಾಗು.

೧೬೩–೧೬೫. ಪೂಜ್ಯನಾದ ವಿಷ್ಣುವೂ ಕೂಡ ಶಿವನನ್ನು ನಮಸ್ಕರಿಸಿ, ಕೈಮುಗಿದುಕೊಂಡು ಪಾರ್ವತೀ ಸಮೇತನಾದ ಶಿವನಿಗೆ ಬಿನ್ನೈಸಿದನು. ಓ ಶಿವನೇ, ನಾನು ಯಾವಾಗಲೂ ನಿನಗೆ ವಾಹನವಾಗಿರಬೇಕೆಂದು ಬಯಸುತ್ತೇನೆ. ನಿನ್ನಲ್ಲಿ ಅಚಲವಾದ ಭಕ್ತಿಯುಳ್ಳ ನನಗೆ ಈ ವರ ವನ್ನು ಕೊಡುವುದರ ಮೂಲಕ ಪ್ರಸನ್ನನಾಗು. ಓ ಶಿವನೇ, ನಿನಗೆ ವಾಹನವಾಗಿ ನಿನ್ನನ್ನು ವಹಿಸಲು ಬೇಕಾಗುವ ಶಕ್ತಿಯನ್ನೂ, ಸರ್ವಜ್ಞಾನ ವನ್ನೂ, ಸರ್ವವ್ಯಾಪಿತ್ವವನ್ನೂ ಅನುಗ್ರಹಿಸು ಸೂತನು ಹೇಳಿದನು:— ಬ್ರಹ್ಮ, ವಿಷ್ಣುಗಳ ಈ ಪ್ರಾರ್ಥನೆಯನ್ನು ಲಾಲಿಸಿ, ಬ್ರಹ್ಮನನ್ನು ತನ್ನ ಸಾರಥಿಯನ್ನಾಗಿಯೂ, ವಿಷ್ಣುವನ್ನು ತನ್ನ ವಾಹನವನ್ನಾಗಿಯೂ, ನೇಮಿಸಿಕೊಂಡನು. ಅನಂತರ ತ್ರಿಪುರಾಸುರನನ್ನು ನಾಶಮಾಡಿದ

ದತ್ವಾ ತಸ್ಮೈ ಬ್ರಹ್ಮಣೇ ವಿಷ್ಣವೇ ಚ ।
ದಗ್ಧ್ವಾ ದೈತ್ಯಾನ್ದೇವ ದೇವೋ ಮಹಾತ್ಮಾ ॥
ಸಾರ್ಧಂ ದೇವ್ಯಾ ನಂದಿನಾ ಭೂತ ಸಂಘೈಃ ।
ಅಂತರ್ಧಾನಂ ಕಾರಯಾ ಮಾಸ ಸರ್ವಃ ॥೧೭೭॥

ತತಸ್ತದಾ ಮಹೇಶ್ವರೇ ಗತೇ ರಣಾದ್ಗಣೈಃ ಸಹ ।
ಸುರೇಶ್ವರಾಃ ಸು ವಿಸ್ಮಿತಾ ಭವಂ ಪ್ರಣಮ್ಯ ಪಾರ್ವತೀಂ ॥೧೭೮॥

ಯಯುಶ್ಚ ದುಃಖವರ್ಜಿತಾಃ ಸ್ವವಾಹನೈ ರ್ದಿವಂ ತತಃ ।
ಸುರೇಶ್ವರಾ ಮುನೀಶ್ವರಾ ಗಣೇಶ್ವರಾಶ್ಚ ಭಾಸ್ಕರಾಃ ॥೧೭೯॥

ತ್ರಿ ಪುರಾರೇ ರಿಮಂ ಪುಣ್ಯಂ ನಿರ್ಮಿತಂ ಬ್ರಹ್ಮಣಾ ಪುರಾ ।
ಯಃ ಪಠೇಚ್ಛ್ರಾದ್ಧಕಾಲೇ ವಾ ದೈವೇ ಕರ್ಮಣಿ ಚ ದ್ವಿಜಾಃ ॥

ಶ್ರಾವಯೇ ದ್ವಾ ದ್ವಿಜಾನ್ ಭಕ್ತ್ಯಾ ಬ್ರಹ್ಮಲೋಕಂ ಸ ಗಚ್ಛತಿ ।
ಮಾನಸೈರ್ವಾಚಿಕೈಃ ಪಾಪೈ ಸ್ತಥಾ ವೈ ಕಾಯಿಕೈಃ ಪುನಃ ॥೧೮೧॥

ಸ್ಥೂಲೈಃ ಸೂಕ್ಷ್ಮೈಃ ಸು ಸೂಕ್ಷ್ಮೈಶ್ಚ ಮಹಾಪಾತಕ ಸಂಭವೈಃ ।
ಪಾತಕೈಶ್ಚ ದ್ವಿಜಶ್ರೇಷ್ಠಾ ಉಪಪಾತಕ ಸಂಭವೈಃ ॥೧೮೨॥

---

ಮಹಾತ್ಮನಾದ ಶಿವನು ಪಾರ್ವತೀದೇವಿ, ನಂದೀಶ್ವರ, ಭೂತಗಳ ಸಮೂಹಗಳು, ಇವರೆಲ್ಲರೊಡನೆ ಅಂತರ್ಧಾನವಾದನು. ಪಾರ್ವತಿಯನ್ನೂ ಮನಸ್ಸಿನಲ್ಲೇ ನಮಸ್ಕರಿಸಿ, ಭಗವಂತನ ಮಹಿಮೆಯನ್ನು ಆಶ್ಚರ್ಯದಿಂದ ಸ್ಮರಿಸಿ, ತಂತಮ್ಮ ವಾಹನಗಳಲ್ಲಿ ದೇವಶ್ರೇಷ್ಠರೂ, ಋಷಿಶ್ರೇಷ್ಠರೂ, ಗಣಾಧಿಪತಿಗಳೂ, ಸೂರ್ಯರೂ, ಎಲ್ಲರೂ ದುಃಖವಿಲ್ಲದವರಾಗಿ ಸ್ವರ್ಗಕ್ಕೆ ತೆರಳಿದರು. ಹಿಂದೆ ಬ್ರಹ್ಮನಿಂದ ರಚಿಸಲ್ಪಟ್ಟ, ತ್ರಿಪುರಾಸುರನನ್ನು ಸಂಹರಿಸಿದ, ಶಿವನ ಪುಣ್ಯಕರವಾದ ಈ ಚರಿತ್ರೆಯನ್ನು ಶ್ರಾದ್ಧಕಾಲದಲ್ಲಾಗಲೀ ಅಥವಾ ಇನ್ಯಾವ ದೇವಕಾರ್ಯಗಳಲ್ಲಾಗಲೀ, ಯಾವನು ಓದುವನೋ ಅಥವಾ ಭಕ್ತಿಯಿಂದ ಬ್ರಾಹ್ಮಣರಿಗೆ ಹೇಳುವನೋ ಅವನು ಬ್ರಹ್ಮಲೋಕವನ್ನು ಹೊಂದುವನು. ಅವನು ಮನಸ್ಸಿನಲ್ಲಿ,ಮಾತಿನಲ್ಲಿ,ಶರೀರದಲ್ಲಿ,ಮಾಡಿದ, ದೊಡ್ಡದಾದ,ದೊಡ್ಡದೊಡ್ಡ ಪಾಪಗಳು,ಅಥವಾ ಕಾಣದ ಸಣ್ಣ ಸಣ್ಣ ಪಾಪಗಳಿಂದಲೂ, ವಿಮುಕ್ತನಾಗು

**ಪಾಪೈಶ್ಚ ಮುಚ್ಯತೇ ಜಂತುಃಶ್ರುತ್ವಾಽಧ್ಯಾಯ ಮಿಮಂಶುಭಂ ।**
**ಶತ್ರವೋ ನಾಶಮಾಯಾಂತಿ ಸಂಗ್ರಾಮೇ ವಿಜಯೀ ಭವೇತ್ ॥**
**ಸರ್ವ ರೋಗೈರ್ನ ಬಾಧ್ಯೇತ ಆಪದೋ ನ ಸ್ಪೃಶಂತಿ ತಂ ।**
**ಧನ ಮಾಯುರ್ಯಶೋ ವಿದ್ಯಾಂ ಪ್ರಭಾವ ಮತುಲಂ ಭವೇತ್ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ತ್ರಿಪುರದಾಹಕಾಲೇ ಬ್ರಹ್ಮಕೃತ ಶಿವಸ್ತೋತ್ರ ವರ್ಣನಂ ನಾಮ ದ್ವಿಸಪ್ತತಿತಮೋಽಧ್ಯಾಯಃ**

---

ವನು. ಇದು ಈ ಶ್ರೇಷ್ಠವಾದ,ಮಂಗಳಕರವಾದ,ಅಧ್ಯಾಯದ ಮಹಾಫಲ ವೆಂದು ತಿಳಿಯಬೇಕು. ಅಲ್ಲದೇ ಇದನ್ನು ಪಠಿಸುವ, ಅಥವಾ ಹೇಳುವ ಜನರಿಗೆ ಶತ್ರುಗಳೆಲ್ಲರೂ ನಷ್ಟರಾಗುವರು. ಮತ್ತು ಇವರಿಗೆ ಯುದ್ಧ ದಲ್ಲಿಯೂ ಜಯವು ಲಭಿಸುವುದು.

೧೮೪. ಈ ಮಂಗಳಕರವಾದ ಅಧ್ಯಾಯವನ್ನು ಓದುವವನೂ, ಅಥವಾ ಕೇಳುವವನೂ, ಅಥವಾ ಹೇಳುವವನೂ, ಎಲ್ಲಾ ರೋಗಗಳು ಮತ್ತು ಸಂಕಟಗಳಿಂದಲೂ ಪಾರಾಗುವನು. ಅಲ್ಲದೇ ಇವನಿಗೆ ಬೇಕಾ ದಷ್ಟು ಐಶ್ವರ್ಯ, ಆಯುಸ್ಸು, ಕೀರ್ತಿ, ವಿದ್ಯೆ, ಅಸಾಧಾರಣವಾದ ವೈಭವ, ಮುಂತಾದುದು ಎಲ್ಲವೂ ಬರುವುದು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತ್ರಿಪುರದಾಹಕಾಲದಲ್ಲಿ ಬ್ರಹ್ಮನಿಂದ ಮಾಡಲ್ಪಟ್ಟ ಶಿವಸ್ತೋತ್ರವನ್ನು ಒಳಗೊಂಡಿರುವ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ತ್ರಿಸಪ್ತತಿತಮೋಽಧ್ಯಾಯಃ

॥ ಸೂತ ಉವಾಚ ॥

ಗತೇ ಮಹೇಶ್ವರೇ ದೇವೇ ದಗ್ಧ್ವಾ ಚ ತ್ರಿಪುರಂ ಕ್ಷಣಾತ್ ।
ಸದಸ್ಯಾಹ ಸುರೇಂದ್ರಾಣಾಂ ಭಗವಾನ್ಪದ್ಮಸಂಭವಃ ॥ ೧ ॥

॥ ಪಿತಾಮಹ ಉವಾಚ ॥

ಸಂತ್ಯಜ್ಯ ದೇವದೇವೇಶಂ ಲಿಂಗಮೂರ್ತಿಂ ಮಹೇಶ್ವರಂ ।
ತಾರಪೌತ್ರೋ ಮಹಾತೇಜಾ ಸ್ತಾರಕಸ್ಯ ಸುತೋ ಬಲೀ ॥ ೨ ॥

ತಾರಕಾಕ್ಷೋಽಪಿ ದಿತಿಜಃ ಕಮಲಾಕ್ಷಶ್ಚ ವೀರ್ಯವಾನ್ ।
ವಿದ್ಯುನ್ಮಾಲೀ ಚ ದೈತ್ಯೇಶಃ ಅನ್ಯೇ ಚಾಽಪಿ ಸ ಬಾಂಧವಾಃ ॥ ೩ ॥

ತ್ಯಕ್ತ್ವಾ ದೇವಂ ಮಹಾದೇವಂ ಮಾಯಯಾ ಚ ಹರೇಃ ಪ್ರಭೋಃ।
ಸರ್ವೇ ವಿನಷ್ಟಾಃ ಪ್ರಧ್ವಸ್ತಾಃ ಸ್ವ ಪುರೈಃ ಪುರಸಂಭವೈಃ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತುಮೂರನೆಯ ಅಧ್ಯಾಯವು.

೧-೭. ಸೂತನು ಹೇಳಿದನು: ಮಹೇಶ್ವರನು ಕ್ಷಣಕಾಲದಲ್ಲಿಯೇ ತ್ರಿಪುರವನ್ನು ಸುಟ್ಟು ಹೊರಟುಹೋಗಲು, ಪೂಜ್ಯನಾದ ಬ್ರಹ್ಮನು ದೇವಶ್ರೇಷ್ಠರ ಸಭೆಯಲ್ಲಿ ಈ ರೀತಿ ಹೇಳಿದನು. ಬ್ರಹ್ಮನು ಹೇಳಿದನು :- ತಾರಾಸುರನ ಮೊಮ್ಮಗನಾದ, ಬಹಳ ತೇಜಸ್ವಿಯೂ, ಬಲಿಷ್ಠನೂ, ಆದ, ತಾರಕಾಸುರನ ಮಗನಾದ, ತಾರಕಾಕ್ಷನೂ, ಹಾಗೆಯೇ ಇವನ ತಮ್ಮಂದಿರಾದ ಕಮಲಾಕ್ಷ, ವಿದ್ಯುನ್ಮಾಲಿಯೂ, ಇವರ ನೆಂಟರೂ, ವಿಷ್ಣು ಮಾಯೆಯಿಂದ ಲಿಂಗರೂಪನಾದ ಪರಶಿವನನ್ನು ಪೂಜಿಸದೆ, ತಮ್ಮ ತ್ರಿಪುರ ಮತ್ತು ಪ್ರಜೆಗಳ ಸಮೇತವಾಗಿ ಈಶ್ವರನಿಂದ ಸುಡಲ್ಪಟ್ಟರು. ಆದ್ದರಿಂದ ಲಿಂಗ ಸ್ವರೂಪನಾದ ಪರಶಿವನನ್ನು ಯಾವಾಗಲೂ, ಆರಾಧಿಸಬೇಕು. ರಾಕ್ಷಸ ಶ್ರೇಷ್ಠರು, ಶಿವನನ್ನು ಎಂದಿನವರೆಗೆ ಪೂಜಿಸುತ್ತಿದ್ದರೋ ಅಲ್ಲಿಯವರೆಗೆ

ತಸ್ಮಾತ್ಸದಾ ಪೂಜನೀಯೋ ಲಿಂಗಮೂರ್ತಿಃ ಸದಾ ಶಿವಃ ।
ಯಾವತ್ಪೂಜಾ ಸುರೇಶಾನಾಂ ತಾವದೇವ ಸ್ಥಿತಿರ್ಯತಃ ॥ ೫ ॥

ಪೂಜನೀಯಃ ಶಿವೋ ನಿತ್ಯಂ ಶ್ರದ್ಧಯಾ ದೇವ ಪುಂಗವೈಃ ।
ಸರ್ವ ಲಿಂಗಮಯೋ ಲೋಕಃ ಸರ್ವಂ ಲಿಂಗೇ ಪ್ರತಿಷ್ಠಿತಂ ॥ ೬ ॥

ತಸ್ಮಾತ್ಸಂಪೂಜಯೇ ಲ್ಲಿಂಗಂ ಯ ಇಚ್ಛೇತ್ಸಿದ್ಧಿ ಮಾತ್ಮನಃ ।
ಸರ್ವೇ ಲಿಂಗಾರ್ಚನಾದೇವ ದೇವಾ ದೈತ್ಯಾಶ್ಚ ದಾನವಾಃ ॥ ೭ ॥

ಯಕ್ಷಾ ವಿದ್ಯಾಧರಾಃ ಸಿದ್ಧಾ ರಾಕ್ಷಸಾಃ ಪಿಶಿತಾಽಶನಾಃ ।
ಪಿತರೋ ಮುನಯಶ್ಚಾಽಪಿ ಪಿಶಾಚಾಃ ಕಿನ್ನರಾದಯಃ ॥ ೮ ॥

ಅರ್ಚಯಿತ್ವಾ ಲಿಂಗಮೂರ್ತಿಂ ಸಂಸಿದ್ಧಾ ನಾಽತ್ರ ಸಂಶಯಃ ।
ತಸ್ಮಾಲ್ಲಿಂಗಂ ಯಜೇನ್ನಿತ್ಯಂ ಯೇನ ಕೇನಾಽಪಿ ವಾ ಸುರಾಃ ॥ ೯ ॥

ಪಶವಶ್ಚ ವಯಂ ತಸ್ಯ ದೇವದೇವಸ್ಯ ಧೀಮತಃ ।
ಪಶುತ್ವಂ ಚ ಪರಿತ್ಯಜ್ಯ ಕೃತ್ವಾ ಪಾಶುಪತಂ ತತಃ ॥೧೦॥

---

ಮಾತ್ರವೇ ಚನ್ನಾಗಿ ಬದುಕಿದ್ದರು. ದೇವಶ್ರೇಷ್ಠರು ಯಾವಾಗಲೂ ಶಿವನನ್ನು ಶ್ರದ್ಧೆಯಿಂದ ಆರಾಧಿಸಬೇಕು. ಈ ಲೋಕವೆಲ್ಲವೂ ಈಶ್ವರ ಜ್ಞಾಪಕವಾದ ಲಿಂಗಸ್ವರೂಪವಾಗಿದೆ. ಎಲ್ಲವೂ ಲಿಂಗಸ್ವರೂಪನಾದ ಶಿವನಲ್ಲಿಯೇ ಇದೆ. ಆದ್ದರಿಂದ ಕಾರ್ಯಸಿದ್ಧಿಯನ್ನು ಅಪೇಕ್ಷಿಸುವ ಪ್ರತಿಯೊಬ್ಬನೂ, ಲಿಂಗಾರ್ಚನೆಯನ್ನು ಮಾಡಬೇಕು. ದೇವತೆಗಳೂ, ರಾಕ್ಷಸರೂ, ದಾನವರೂ, ಹೀಗೆ ಲಿಂಗಾರ್ಚನೆ ಮಾಡಿಯೇ ಕಾರ್ಯಸಿದ್ಧಿಯನ್ನು ಪಡೆದರು.

೮-೧೨. ಯಕ್ಷರು, ವಿದ್ಯಾಧರರು, ಸಿದ್ಧರು, ರಾಕ್ಷಸರು, ಮಾಂಸಭಕ್ಷಣ ಮಾಡುವ ದಾನವರು, ಪಿತೃದೇವತೆಗಳು, ಋಷಿಗಳು, ಕಿನ್ನರರೇ ಮೊದಲಾದ ದೇವತಾ ಸಂಗಡಗಳೂ, ಲಿಂಗಸ್ವರೂಪನಾದ ಶಿವನನ್ನು ಆರಾಧಿಸಿಯೇ ಸಿದ್ಧಿಪಡೆದರೆಂಬುವುದರಲ್ಲಿ ಸಂದೇಹವಿಲ್ಲ. ಎಲೈ ದೇವತೆಗಳೇ, ಯಾವುದಾದರೊಂದು ಮಾರ್ಗದಿಂದ ಲಿಂಗಾರ್ಚನೆಯನ್ನು ಪ್ರತಿದಿನವೂ ನಡೆಸಬೇಕು. ದೇವಾಧಿದೇವತೆಯೂ, ಮಹಾಪ್ರಾಜ್ಞನೂ, ಆದ ಪರಶಿವನಿಗೆ ನಾವು ಪಶುಗಳೆಂದು ತಿಳಿಯಿರಿ. ಪಾಶು

**ಪೂಜನೀಯೋ ಮಹಾದೇವೋ ಲಿಂಗಮೂರ್ತಿಃ ಸನಾತನಃ ।**
**ವಿಶೋಧ್ಯ ಚೈವ ಭೂತಾನಿ ಪಂಚಭಿಃ ಪ್ರಣವೈಃ ಸಮಂ ॥೧೧॥**

**ಪ್ರಾಣಾಯಾಮೈಃ ಸಮಾಯುಕ್ತೈಃ ಪಂಚಭಿಃ ಸುರಪುಂಗವಾಃ ।**
**ಚತುರ್ಭಿಃ ಪ್ರಣವೈ ಶ್ಚೈವ ಪ್ರಾಣಾಯಾಮ ಪರಾಯಣೈಃ ॥೧೨॥**

**ತ್ರಿಭಿಶ್ಚ ಪ್ರಣವೈ ರ್ದೇವಾಃ ಪ್ರಾಣಾಯಾಮೈ ಸ್ತಥಾ ವಿಧೈಃ ।**
**ದ್ವಿಧಾ ನ್ಯಸ್ಯ ತಥೋಂಕಾರಂ ಪ್ರಾಣಾಯಾಮ ಪರಾಯಣಃ ॥೧೩॥**

**ತತ ಶ್ಚೋಂಕಾರ ಮುಚ್ಚಾರ್ಯ ಪ್ರಾಣಾ ಪಾನೌ ನಿಯಮ್ಯ ಚ**
**ಜ್ಞಾನಾಽಮೃತೇನ ಸರ್ವಾಂಗಾ ನ್ಯಾಪೂರ್ಯ ಪ್ರಣವೇನ ಚ ॥೧೪॥**

**ಗುಣತ್ರಯಂ ಚತುರ್ಥಾಽಽಖ್ಯ ಮಹಂಕಾರಂ ಚ ಸು ವ್ರತಾಃ ।**
**ತನ್ಮಾತ್ರಾಣಿ ಚ ಭೂತಾನಿ ತಥಾ ಬುದ್ಧೀಂದ್ರಿಯಾಣಿ ಚ ॥೧೫॥**

---

ಪತವ್ರತವನ್ನು ಮಾಡಿ, ಪಶುಸ್ವಭಾವವನ್ನು ಕಳೆದುಕೊಂಡು, ಪ್ರಾಚೀನನಾದ, ಲಿಂಗಸ್ವರೂಪನಾದ ಶಿವನ ಮಂಗಳಸ್ವರೂಪವನ್ನು ಆರಾಧಿಸಬೇಕು. ಹೇಗೆಂದರೆ, ಓಂಕಾರೋಚ್ಚಾರಣೆಯಿಂದ ಪಂಚ ಭೂತಗಳನ್ನೂ ಶುದ್ಧವಾಗಿಮಾಡಿ,ಪ್ರಾಣಾಯಾಮಗಳನ್ನು ಆಚರಿಸಿ,ನಾಲ್ಕು ವಿಧವಾದ ಓಂಕಾರವನ್ನೂ ಜಪಿಸಬೇಕು.

೧೩–೨೦. ಎಲೈ ದೇವತೆಗಳೇ, ಮೂರು ವಿಧವಾದ ಓಂಕಾರಗಳಿಂದಲೂ, ಮೂರು ವಿಧವಾದ ಪ್ರಾಣಾಯಾಮಗಳಿಂದಲೂ, ಓಂಕಾರವನ್ನು ಎರಡು ವಿಧವಾಗಿ ಜಪಿಸಿ, ಪ್ರಾಣ, ಅಪಾನಗಳೆಂಬ ಎರಡು ವಾಯುಗಳನ್ನು ನಿಗ್ರಹಿಸಿ,ಜ್ಞಾನವೆಂಬ ಅಮೃತದಿಂದ ದೇಹವೆಲ್ಲವನ್ನೂ ಪೂರ್ಣವಾಗಿ ಮಾಡಬೇಕು. ಎಲೈ ದೇವತೆಗಳೇ, ಮೂರು ಗಣಗಳನ್ನೂ, ನಾಲ್ಕು ವಿಧವಾದ ಅಹಂಕಾರವನ್ನೂ, ಅದರಿಂದ ಹುಟ್ಟಿದ ಪಂಚತನ್ಮಾತ್ರಗಳೆಂಬ ಪ್ರಕೃತಿಯ ವಿಕಾರಗಳನ್ನೂ, ಜ್ಞಾನೇಂದ್ರಿಯಗಳನ್ನೂ ಮತ್ತು ಕರ್ಮೇಂದ್ರಿಯಗಳನ್ನೂ ಸಂಶೋಧನೆ ಮಾಡಬೇಕು. ತೇಜಸ್ಸು, ಜ್ಞಾನ, ಇವೆರಡಕ್ಕೂ ಸಂಬಂಧಪಟ್ಟ ಆತ್ಮನನ್ನು ಸಂಶೋಧಿಸಬೇಕು.

ಕರ್ಮೇಂದ್ರಿಯಾಣಿ ಸಂಶೋಕ್ಷ್ಯ ಪುರುಷಂ ಯುಗಲಂ ತಥಾ ।
ಚಿದಾತ್ಮಾನಂ ತನುಂ ಕೃತ್ವಾ ಚಾಽಗ್ನಿರ್ಭಸ್ಮೇತಿ ಸಂಸ್ಪೃಶೇತ್ ॥೧೬॥
ವಾಯು ರ್ಭಸ್ಮೇತಿ ಚ ವ್ಯೋಮ ತಥಾಽಂಭೋ ಪೃಥಿವೀ ತಥಾ ।
ತ್ರಿಯಾಯುಷಂ ತ್ರಿಸಂಧ್ಯಂ ಚ ಧೂಲಯೇದ್ಭಸಿತೇನ ಯಃ ॥೧೭॥
ಸ ಯೋಗೀ ಸರ್ವ ತತ್ವಜ್ಞೋ ವ್ರತಂ ಪಾಶುಪತಂ ತ್ವಿದಂ ।
ಭವೇನ ಪಾಶ ಮೋಕ್ಷಾರ್ಥಂ ಕಥಿತಂ ದೇವಸತ್ತಮಾಃ ॥೧೮॥
ಏವಂ ಪಾಶುಪತಂ ಕೃತ್ವಾ ಸಂಪೂಜ್ಯ ಪರಮೇಶ್ವರಂ ।
ಲಿಂಗೇ ಪುರಾ ಮಯಾ ದೃಷ್ಟೋ ವಿಷ್ಣುನಾ ಚ ಮಹಾತ್ಮನಾ ॥೧೯॥
ಪಶವೋ ನೈವ ಜಾಯಂತೇ ವರ್ಷಮಾತ್ರೇಣ ದೇವತಾಃ ।
ಅಸ್ಮಾಭಿಃ ಸರ್ವಕಾರ್ಯಾಣಾಂ ದೇವ ಮಭ್ಯರ್ಚ್ಯ ಯತ್ನತಃ ॥೨೦॥

---

ಜ್ಞಾನಸ್ವರೂಪನಾದ ಆತ್ಮನನ್ನು ಏಕಾಗ್ರವಾಗಿ ಧ್ಯಾನಮಾಡಿ, ಅಗ್ನಿರಿತಿ ಭಸ್ಮ ಎಂಬ ಮಂತ್ರಜಪದಿಂದ ಅಗ್ನಿಯನ್ನೂ ವಾಯುವನ್ನೂ, ಆಕಾಶ ವನ್ನೂ, ನೀರನ್ನೂ, ಭೂಮಿಯನ್ನೂ, ಭಸ್ಮವೆಂದು ಭಾವಿಸಬೇಕು. ಯಾವನು "ತ್ರಿಯಾಯುಷಂ ಜಮದಗ್ನೇಃ" ಮುಂತಾದ ಮಂತ್ರಗಳಿಂದ ಮೂರು ಕಾಲಗಳಲ್ಲಿಯೂ, ಭಸ್ಮಧಾರಣೆ ಮಾಡುತ್ತಾನೆಯೋ ಅವನು ಯೋಗಿ ಯೆಂದೇ ತಿಳಿಯಬೇಕು. ಯಾವನು ಈ ರೀತಿ ಪಾಶುಪತವ್ರತವನ್ನು ಆಚರಿಸುತ್ತಾನೆಯೋ ಅವನಿಗೆ ಸಂಸಾರ ಬಂಧನದಿಂದ ಬಿಡುಗಡೆಯಾಗು ತ್ತದೆ. ಇದನ್ನೇ ಸಂಸಾರ ಬಂಧನವನ್ನು ತೊಲಗಿಸುವ ಮೋಕ್ಷಮಾರ್ಗ ವೆಂದು ಭಗವಂತನಾದ ಶಿವನು ಹೇಳಿರುವನು. ಈ ರೀತಿಯಾಗಿ ಪಾಶುಪತ ವ್ರತವನ್ನು ಮಾಡಿ, ಪರಮೇಶ್ವರನನ್ನು ಪೂಜಿಸಿ, ನಾನೂ ಮತ್ತು ಮಹಾತ್ಮ ನಾದ ವಿಷ್ಣುವೂ, ಇಷ್ಟಾರ್ಥಗಳನ್ನು ಹೊಂದಿದೆವು. ದೇವತೆಗಳೂ ಕೂಡ ಈ ಪಾಶುಪತವ್ರತವನ್ನು ಆಚರಿಸಿದರೆ ಒಂದು ವರ್ಷಕಾಲದಲ್ಲಿಯೇ ಅವರ ಪಶುಭಾವವು ತೊಲಗುವುದು. ಆದ್ದರಿಂದ ನಾವು ಎಲ್ಲರೂ ಕಾರ್ಯ ಸಿದ್ಧಿಗಾಗಿಯೂ, ಪ್ರಯತ್ನ ಪೂರ್ವಕವಾಗಿ ಶಿವನ ಆರಾಧನೆಯನ್ನು ಮಾಡಬೇಕು.

ಬಾಹ್ಯೇ ಚಾ ಭ್ಯಂ ತರೇ ಚೈವ ಮನ್ಯೇ ಕರ್ತವ್ಯ ಮೀಶ್ವರಂ ।
ಪ್ರತಿಜ್ಞಾನುಮ ವಿಷ್ಣೋಶ್ಚ ದಿವ್ಯೈಷಾ ಸುರಸತ್ತಮಾಃ ॥೨೧॥
ಮುನೀನಾಂ ಚ ನ ಸಂದೇಹ ಸ್ತಸ್ಮಾತ್ಸಂ ಪೂಜಯೇ ಚ್ಛಿವಂ ।
ಸಾಹಾನಿಸ್ತನ್ಮಹಚ್ಛಿದ್ರಂ ಸ ಮೋಹಃ ಸಾ ಚ ಮೂಕತಾ ॥೨೨॥
ಯತ್ಕ್ಷಣಂ ವಾ ಮುಹೂರ್ತಂ ವಾ ಶಿವಮೇಕಂ ನ ಚಿಂತಯೇತ್ ।
ಭವಭಕ್ತಿ ಪರಾ ಯೇ ಚ ಭವ ಪ್ರಣತ ಚೇತಸಃ ॥೨೩॥
ಭವ ಸಂಸ್ಮರಣೋದ್ಯುಕ್ತಾ ನ ತೇ ದುಃಖಸ್ಯ ಭಾಜನಂ ।
ಭುವನಾನಿ ಮನೋಜ್ಞಾನಿ ದಿವ್ಯ ಮಾಭರಣಂ ಸ್ತ್ರಿಯಃ ॥೨೪॥
ಧನಂ ವಾ ತುಷ್ಟಿ ಪರ್ಯಂತಂ ಶಿವಪೂಜಾ ವಿಧೇಃ ಫಲಂ ।
ಯೇ ವಾಂಛಂತಿ ಮಹಾಭೋಗಾನ್ ರಾಜ್ಯಂ ಚ ತ್ರಿದಶಾಲಯೇ ॥

---

೨೧–೨೭. ನಾವು ಒಳಗೂ,ಹೊರಗೂ,ಶಿವಾರ್ಚನೆಯನ್ನು ಮಾಡಬೇಕೆಂಬುದೇ ನನ್ನ ಮತ್ತು ವಿಷ್ಣುವಿನ ದಿವ್ಯವಾದ ಪ್ರತಿಜ್ಞೆಯು. ಎಲೈ ದೇವತೆಗಳೇ, ಇದು ಶ್ರೇಷ್ಠವಾದ ಕಾರ್ಯವೆಂಬುದರಲ್ಲಿ ಸಂದೇಹವಿಲ್ಲ. ಅದ್ದರಿಂದ ನಾವು ಮನಃ ಪೂರ್ವಕವಾಗಿ ಶಿವಾರ್ಚನೆಯನ್ನು ಮಾಡಬೇಕು. ನಾವು ಯಾವ ಕ್ಷಣದಲ್ಲಿ ಅಥವಾ ಘಳಿಗೆಯಲ್ಲಿ ಒಬ್ಬನೇ ಆದ ಶಿವನನ್ನು ಮಾತ್ರ ಮನಸ್ಸಿನಲ್ಲಿ ಚಿಂತಿಸುವುದಿದ್ದರೆ, ಅದರಿಂದ ನಮಗೆ ಬಹಳ ನಷ್ಟವೂ,ತೊಂದರೆಯೂ, ದೊಡ್ಡ ತಪ್ಪುತಿಳಿವಳಿಕೆಯೂ, ಮೂಢತನವೂ ಆಗುವುದು. ಯಾರು ಈಶ್ವರನನ್ನು ವಂದಿಸಬೇಕೆಂಬ ಮನಸ್ಸುಳ್ಳವರೋ, ಅವನ ಭಕ್ತರೋ, ಅವನ ಸ್ಮರಣೆಯನ್ನು ಯಾವಾಗಲೂ ಮಾಡುತ್ತಿರುವವರೋ, ಅವರಿಗೆ ದುಃಖವು ಬರುವುದೇ ಇಲ್ಲ. ಅವರಿಗೆ ಸೊಗಸಾದ ದೊಡ್ಡದೊಡ್ಡ ಮನೆಗಳೂ, ಬೆಲೆಬಾಳುವ ಆಭರಣಗಳು, ಸೊಗಸಾದ ಸ್ತ್ರೀಯರು, ಅವರಿಗೆ ಇಚ್ಛೆ ಇರುವಷ್ಟು ಹಣವೂ, ಶಿವನ ಪೂಜೆಯ ಫಲವಾಗಿ ದೊರಕುವುವು. ಯಾರು ಹೆಚ್ಚು ಸೌಖ್ಯವನ್ನೂ, ಸ್ವರ್ಗಲೋಕದಲ್ಲಿ ದೊಡ್ಡ ರಾಜ್ಯವನ್ನೂ ಅಪೇಕ್ಷಿಸುವರೋ ಅವರು ಲಿಂಗಸ್ವರೂಪಿಯಾದ ಶಿವನನ್ನು ಸರ್ವದಾ ಭಜಿಸಲಿ. ಪ್ರಪಂಚದಲ್ಲಿ ಕೊಲೆ ಮಾಡುವವರೂ, ಪ್ರಾಣಿಗಳನ್ನು ಸುಟ್ಟುಹಾಕುವವರೂ, ಜಗತ್ತಿನಲ್ಲಿ

ತೇಽರ್ಚಯಂತು ಸದಾಕಾಲಂ ಲಿಂಗಮೂರ್ತಿಂ ಮಹೇಶ್ವರಂ ।
ಹತ್ವಾ ಭಿತ್ವಾ ಚ ಭೂತಾನಿ ದಗ್ಧ್ವಾ ಸರ್ವಮಿದಂ ಜಗತ್ ॥೨೬॥

ಯಜೇದೇಕಂ ವಿರೂಪಾಕ್ಷಂ ನ ಪಾಪೈಃ ಸ ಪ್ರಲಿಪ್ಯತೇ ।
ಶೈಲಂ ಲಿಂಗಂ ಮದೀಯಂ ಹಿ ಸರ್ವ ದೇವ ನಮಸ್ಕೃತಂ ॥೨೭॥

ಇತ್ಯುಕ್ತ್ವಾ ಪೂರ್ವ ಮಭ್ಯರ್ಚ್ಯ ರುದ್ರಂ ತ್ರಿ ಭುವನೇಶ್ವರಂ ।
ತುಷ್ಟಾವ ವಾಗ್ಭಿ ರಿಷ್ಟಾಭಿ ರ್ದೇವ ದೇವಂ ತ್ರಿಯಂಬಕಂ ॥೨೮॥

ತದಾ ಪ್ರಭೃತಿ ಶಕ್ರಾದ್ಯಾಃ ಪೂಜಯಾ ಮಾಸು ರೀಶ್ವರಂ ।
ಸಾಕ್ಷಾ ತ್ಪಾಶುಪತಂ ಕೃತ್ವಾ ಭಸ್ಮೋದ್ಧೂಲಿತ ವಿಗ್ರಹಾಃ ॥೨೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಬ್ರಹ್ಮಕೃತ
ಲಿಂಗಾರ್ಚನವಿಧಿಃ ನಾಮ ತ್ರಿಸಪ್ತತಿತಮೋಽಧ್ಯಾಯಃ

---

ಈ ವಿಧವಾದ ಪಾಪಗಳನ್ನು ಮಾಡಿರುವವರಾದರೂ, ವಿರೂಪಾಕ್ಷನನ್ನು ಸೇವಿಸಿದರೆ, ತಮ್ಮ ಇಂಥಾ ಕಠೋರವಾದ ಪಾಪಗಳಿಂದಲೂ, ಮುಕ್ತರಾಗುತ್ತಾರೆ. ಎಲ್ಲಾ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ, ಕಲ್ಲಿನಿಂದ ಮಾಡಲ್ಪಟ್ಟ ಲಿಂಗವು ನಮಗೆ ಪೂಜಾಯೋಗ್ಯವೆಂದು ತಿಳಿಯಬೇಕು.

೨೮–೨೯. ಹೀಗೆ ಹೇಳಿ ಬ್ರಹ್ಮನು ಮೂರುಲೋಕಕ್ಕೂ ಅಧಿಪತಿಯಾದ ದೇವತೆಗಳಿಗೆಲ್ಲರಿಗೂ ದೇವನಾದ ಮೂರು ಕಣ್ಣುಳ್ಳ ಶಿವನನ್ನು ಅವನಿಗೆ ಪ್ರಿಯವಾದ ಮಾತುಗಳಿಂದ ಸ್ತೋತ್ರ ಮಾಡಿದನು. ಆ ದಿನ ಮೊದಲುಗೊಂಡು, ಇಂದ್ರನೇ ಮೊದಲಾದ ದೇವತೆಗಳೂ, ಸಾಕ್ಷಾತ್ಪಶುಪತಿಯಾದ ಶಿವನ ಸಗುಣ, ಸಾಕಾರ, ರೂಪವನ್ನು ಮಾಡಿಕೊಂಡು, ತಮ್ಮ ಸಕಲದೇಹ ಭಾಗಗಳಿಗೂ, ವಿಭೂತಿಯನ್ನು ಹಚ್ಚಿಕೊಂಡು, ಶಿವನನ್ನು ಪೂಜೆ ಮಾಡತೊಡಗಿದರು. ಇದಕ್ಕೆ ಪಾಶುಪತವ್ರತವೆಂದು ಹೆಸರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಬ್ರಹ್ಮನಿಂದ
ಹೇಳಲ್ಪಟ್ಟ ಲಿಂಗಾರ್ಚನ ವಿಧಿ ಪಾಶುಪತವ್ರತವನ್ನು ವಿವರಿಸಿರುವ
ಎಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

*

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಚತುಃ ಸಪ್ತತಿತಮೋಽಧ್ಯಾಯಃ

॥ ಸೂತ ಉವಾಚ ॥

ಲಿಂಗಾನಿ ಕಲ್ಪಯಿತ್ವೈವಂ ಸ್ವಾಧಿಕಾರಾನುರೂಪತಃ ।
ವಿಶ್ವಕರ್ಮಾ ದದೌ ತೇಷಾಂ ನಿಯೋಗಾದ್ಬ್ರಹ್ಮಣಃ ಪ್ರಭೋಃ॥ ೧ ॥

ಇಂದ್ರನೀಲ ಮಯಂ ಲಿಂಗಂ ವಿಷ್ಣುನಾ ಪೂಜಿತಂ ಸದಾ ।
ಪದ್ಮರಾಗಮಯಂ ಶಕ್ರೋ ಹೈಮಂ ವಿಶ್ರವಸಃ ಸುತಃ ॥ ೨ ॥

ವಿಶ್ವೇ ದೇವಾ ಸ್ತಥಾ ರೌಪ್ಯಂ ವಸವಃ ಕಾಂತಿಕಂ ಶುಭಂ ।
ಆರ ಕೂಟ ಮಯಂ ವಾಯು ರಶ್ವಿನೌ ಪಾರ್ಥಿವಂ ಸದಾ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತುನಾಲ್ಕನೆಯ ಅಧ್ಯಾಯವು

೧–೩. ಸೂತನು ಹೇಳಿದನು: ಹೀಗೆ ಎಲ್ಲರೂ ತಮ್ಮ ಅಧಿಕಾರಕ್ಕೆ ಯೊಗ್ಯವಾದ ಲಿಂಗಗಳನ್ನು ಮಾಡಿಕೊಂಡು ಪೂಜಿಸಲಾರಂಭಿಸಿದರು. ಸ್ವಾಮಿಯಾದ ಬ್ರಹ್ಮನ ಅಪ್ಪಣೆಯಂತೆ ವಿಶ್ವಕರ್ಮನೆಂಬ ದೇವ ಶಿಲ್ಪಿಯು ಅವರವರಿಗೆ ಬೇರೆ ಬೇರೆ ಲಿಂಗಗಳನ್ನು ಮಾಡಿಕೊಟ್ಟನು. ವಿಷ್ಣುವು ಯಾವಾಗಲೂ ಇಂದ್ರ ನೀಲಮಣಿಯಿಂದ ಮಾಡಲ್ಪಟ್ಟ ಲಿಂಗವನ್ನು ಪೂಜಿಸಿದನು. ಇಂದ್ರನು ಪದ್ಮರಾಗ ಮಣಿಯಿಂದ ಮಾಡಿದ ಲಿಂಗವನ್ನೂ, ವಿಶ್ರವಸ್ಸಿನ ಮಗನು ಚಿನ್ನದಿಂದ ಮಾಡಿದ ಲಿಂಗವನ್ನೂ, ವಿಶ್ವೇದೇವತೆಗಳು ಬೆಳ್ಳಿಯಿಂದ ಮಾಡಿದ ಲಿಂಗವನ್ನೂ, ವಸುದೇವತೆಗಳು ಚಂದ್ರಕಾಂತಮಣಿಯ ಲಿಂಗವನ್ನೂ, ವಾಯುವು ಆರಕೂಟವೆಂಬ ಶಿಲೆಯ ಲಿಂಗವನ್ನೂ, ಅಶ್ವಿನೀ ದೇವತೆಗಳು ಮಣ್ಣಿನ ಲಿಂಗವನ್ನೂ, ಪೂಜಿಸಿದರು.

ಸ್ಫಾಟಿಕಂ ವರುಣೋ ರಾಜಾ ಆದಿತ್ಯಾಸ್ತ್ರಾನ್ರ್ಮ ನಿರ್ಮಿತಂ।
ಮೌಕ್ತಿಕಂ ಸೋಮರಾಡ್ ಧೀಮಾಂ ಸ್ತಥಾ ಲಿಂಗ ಮನುತ್ತಮಂ॥
ಅನಂತಾದ್ಯಾ ಮಹಾನಾಗಾಃ ಪ್ರವಾಲಕಮಯಂ ಶುಭಂ।
ದೈತ್ಯಾಹ್ಯಯೋ ಮಯಂ ಲಿಂಗಂ ರಾಕ್ಷಸಾಶ್ಚ ಮಹಾತ್ಮನಃ ॥ ೫ ॥
ತ್ರೈಲೋಹಿಕಂ ಗುಹ್ಯಕಾಶ್ಚ ಸರ್ವಲೋಹ ಮಯಂ ಗಣಾಃ।
ಚಾಮುಂಡಾ ಸೈಕತಂ ಸಾಕ್ಷ್ಯಾನ್ಮಾತರಶ್ಚ ದ್ವಿಜೋತ್ತಮಾಃ ॥ ೬ ॥
ದಾರುಜಂ ನೈಋುತಿಃ ಭಕ್ತ್ಯಾ ಯಮೋ ಮಾರಕತಂ ಶುಭಂ।
ನೀಲಾದ್ಯಾಶ್ಚ ತಥಾ ರುದ್ರಾಃ ಶುದ್ಧಂ ಭಸ್ಮಮಯಂ ಶುಭಂ ॥ ೭ ॥
ಲಕ್ಷ್ಮೀವೃಕ್ಷಮಯಂ ಲಕ್ಷ್ಮೀ ಗುಹೋ ವೈ ಗೋಮಯಾತ್ಮಕಂ।
ಮುನಯೋ ಮುನಿಶಾರ್ದೂಲಾಃ ಕುಶಾಗ್ರ ಮಯ ಮುತ್ತಮಂ ॥

---

೪–೬. ಮೇಧಾವಿಯಾದ, ನಕ್ಷತ್ರ ರಾಜನಾದ ಚಂದ್ರನು ಮುತ್ತಿನ ಲಿಂಗವನ್ನೂ, ಅನಂತನೇ ಮೊದಲಾದ ದೊಡ್ಡ ಸರ್ಪಗಳು, ಹವಳದ ಲಿಂಗವನ್ನೂ, ರಾಕ್ಷಸರು ಕಬ್ಬಿಣದ ಲಿಂಗವನ್ನೂ, ಗುಹ್ಯಕರೆಂಬ ದೇವತೆಗಳು ಮೂರು ಲೋಹದಿಂದ ಮಾಡಿದ ಲಿಂಗವನ್ನೂ, ಗಣಗಳು ಎಲ್ಲಾ ಲೋಹದಿಂದಲೂ ಮಾಡಿದ ಲಿಂಗವನ್ನೂ, ಚಾಮುಂಡಿಕೆಯು ಮರಳಿನ ಲಿಂಗವನ್ನೂ, ಕೃತ್ತಿಕೆಯೇ ಮೊದಲಾದ ತಾಯಿಯರಾದರೋ ಅದೇ ಲಿಂಗವನ್ನೂ ಪೂಜಿಸಿದರು.

೭–೧೦. ವರುಣನು ಭಕ್ತಿಯಿಂದ ಮರದ ಲಿಂಗವನ್ನೂ, ಯಮನು ಮರಕತ ಮಣಿಯ ಲಿಂಗವನ್ನೂ, ನೀಲನೇ ಮೊದಲಾದ ರುದ್ರರು ಶುದ್ಧವಾದ ಬೂದಿಯಿಂದ ಮಾಡಿದ ಲಿಂಗವನ್ನೂ, ಲಕ್ಷ್ಮಿಯು ಶ್ರೀಬಿಲ್ವ ಗಿಡದ ಲಿಂಗವನ್ನೂ, ಗುಹನು ಸಗಣಿಯಿಂದ ಮಾಡಿದ ಲಿಂಗವನ್ನೂ, ಋಷಿಗಳು ಶ್ರೇಷ್ಠವಾದ ದರ್ಭೆಯ ತುದಿಯಿಂದ ಮಾಡಿದ ಲಿಂಗವನ್ನೂ, ವಾಮನೇ ಮೊದಲಾದವರು, ಹುವ್ವಿನ ಲಿಂಗವನ್ನೂ, ಮನೋನ್ಮನೀ ದೇವಿಯು ಸುಗಂಧ ದ್ರವ್ಯದಲಿಂಗವನ್ನೂ, ಶಿವನ ವಾಗ್ರೂಪಳಾದ ಸರಸ್ವತಿಯು

ವಾಮಾದ್ಯಾಃ ಪುಷ್ಪ ಲಿಂಗಂ ತು ಗಂಧಲಿಂಗಂ ಮನೋನ್ಮನೀ ।
ಸರಸ್ವತೀ ಚ ರತ್ನೇನ ಕೃತಂ ರುದ್ರೇಣ ವಾಽಂಭಸಾ ॥ ೯ ॥

ದುರ್ಗಾ ಹೈಮಂ ಮಹಾದೇವಂ ಸ ವೇದಿಕ ಮನುತ್ತಮಂ ।
ಉಗ್ರಾಃಪಿಷ್ಟ ಮಯಂ ಸರ್ವೇ ಮಂತ್ರಾಹ್ಯಾಜ್ಯಮಯಂ ಶುಭಂ ॥

ವೇದಾಃ (ದೇವಾಃ) ಸರ್ವೇ ದಧಿ ಮಯಂ ಪಿಶಾಚಾಃ ಸೀಸ ನಿರ್ಮಿತಂ।
ಲೇಭಿರೇ ಚ ಯಥಾ ಯೋಗ್ಯಂ ಪ್ರಸಾದಾದ್ಬ್ರಹ್ಮಣಃ ಪದಂ ॥೧೧॥

ಬಹುನಾಽತ್ರ ಕಿ ಮುಕ್ತೇನ ಚರಾಽಚರ ಮಿದಂ ಜಗತ್ ।
ಶಿವಲಿಂಗಂ ಸಮಭ್ಯರ್ಚ್ಯ ಸ್ಥಿತಮತ್ರ ನ ಸಂಶಯಃ ॥೧೨॥

ಷಡ್ವಿಧಂ ಲಿಂಗ ಮಿತ್ಯಾಹು ರ್ದ್ರವ್ಯಾಣಾಂ ಚ ಪ್ರಭೇದತಃ ।
ತೇಷಾಂ ಭೇದಾ ಶ್ಚತುಯುರ್ಕ್ತ ಚತ್ವಾರಿಂಶ ದಿತಿ ಸ್ಮೃತಾಃ ॥೧೩॥

ಶೈಲಜಂ ಪ್ರಥಮಂ ಪ್ರೋಕ್ತಂ ತದ್ಧಿ ಸಾಕ್ಷಾ ಚ್ಚತುರ್ವಿಧಂ ।
ದ್ವಿತೀಯಂ ರತ್ನಜಂ ತಚ್ಚ ಸಪ್ತಧಾ ಮುನಿಸತ್ತಮಾಃ ॥೧೪॥

---

ರತ್ನದ್ ಅಥವಾ ನೀರಿನ ಲಿಂಗವನ್ನೂ, ಪಾರ್ವತಿಯು ಪೀಠದ ಮೇಲೆ ಶೋಭಿಸುವ ಉತ್ತಮವಾದ ಚಿನ್ನದ ಲಿಂಗವನ್ನೂ, ಉಗ್ರರು ಹಿಟ್ಟಿನ ಲಿಂಗವನ್ನೂ, ಎಲ್ಲಾ ಮಂತ್ರದೇವತೆಗಳೂ, ತುಪ್ಪದಿಂದ ಮಾಡಿದ ಲಿಂಗವನ್ನೂ ಪೂಜಿಸಿದರು.

೧೧-೧೩. ವೇದಾಭಿಮಾನಿ ಎಲ್ಲಾ ದೇವತೆಗಳೂ ವಿಷ್ಣುವೂ, ಮೊಸರಿನ ಲಿಂಗವನ್ನೂ, ಪಿಶಾಚಾದಿಗಳು ಸೀಸದಿಂದ ಮಾಡಿದ ಲಿಂಗವನ್ನೂ, ತಂತಮ್ಮ ಯೋಗ್ಯತೆಗೆ ಅನುಸರಿಸಿ ಪೂಜೆಮಾಡಿದರು. ಇವರೆಲ್ಲರೂ ಬ್ರಹ್ಮನ ಮಾತಿನಂತೆ ಮಾಡಿದ ಶಿವಪೂಜಾ ಫಲವಾಗಿ ತಮ್ಮ ಸ್ಥಾನವನ್ನೂ ಮೋಕ್ಷವನ್ನೂ ಹೊಂದಿದರು. ಹೆಚ್ಚು ಹೇಳಿ ಏನು ಪ್ರಯೋಜನ? ಸ್ಥಾವರ ಜಂಗಮಾತ್ಮಕವಾದ ಈ ಜಗತ್ತೆಲ್ಲವೂ, ಶಿವಲಿಂಗದ ಪೂಜಾ ಫಲವಾಗಿಯೇ ಇರುವುದೆಂಬುದರಲ್ಲಿ ಸಂದೇಹವಿಲ್ಲ. ದ್ರವ್ಯಗಳ ಭೇದದಿಂದ ಆರು ಬಗೆಯ ಲಿಂಗಗಳುಂಟೆಂದು ಹೇಳುತ್ತಾರೆ. ಇದರ ಭೇದಗಳು ನಲವತ್ತುನಾಲ್ಕು ಎಂದು ತಿಳಿಯಬೇಕು.

೧೪-೧೭. ಮೊದಲನೆಯ ಲಿಂಗವು ಪರ್ವತದಲ್ಲಿ ಶಿಲೆಯಿಂದ ಹುಟ್ಟಿದ್ದೆಂಬುದಾಗಿ ಹೇಳಲ್ಪಟ್ಟಿದೆ. ಇದು ನಾಲ್ಕು ವಿಧವಾಗಿದೆ. ಎಲೈ ಋಷಿ

ತೃತೀಯಂ ಧಾತುಜಂ ಲಿಂಗಂ ಅಷ್ಟಧಾ ಪರಮೇಷ್ಠಿನಃ ।
ತುರೀಯಂ ದಾರುಜಂ ಲಿಂಗಂ ತತ್ತು ಷೋಡಶಧೋಚ್ಯತೇ ॥೧೫॥
ಮೃಣ್ಮಯಂ ಪಂಚಮಂ ಲಿಂಗಂ ದ್ವಿಧಾ ಭಿನ್ನಂ ದ್ವಿಜೋತ್ತಮಾಃ ।
ಷಷ್ಠಂ ತು ಕ್ಷಣಿಕಂ ಲಿಂಗಂ ಸಪ್ತಧಾ ಪರಿಕೀರ್ತಿತಂ ॥೧೬॥
ಶ್ರೀಪ್ರದಂ ರತ್ನಜಂ ಲಿಂಗಂ ಶೈಲಜಂ ಸರ್ವ ಸಿದ್ಧಿದಂ ।
ಧಾತುಜಂ ಧನದಂ ಸಾಕ್ಷಾದ್ದಾರುಜಂ ಭೋಗ ಸಿದ್ಧಿದಂ ॥೧೭॥
ಮೃಣ್ಮಯಂ ಚೈವ ವಿಪ್ರೇಂದ್ರಾಃ ಸರ್ವಸಿದ್ಧಿಕರಂ ಶುಭಂ ।
ಶೈಲಜಂ ಚೋತ್ತಮಂ ಪ್ರೋಕ್ತಂ ಮಧ್ಯಮಂ ಚೈವ ಧಾತುಜಂ ॥
ಬಹುಧಾ ಲಿಂಗ ಭೇದಾಶ್ಚ ನವ ಚೈವ ಸಮಾಸತಃ ।
ಮೂಲೇ ಬ್ರಹ್ಮಾ ತಥಾ ಮಧ್ಯೇ ವಿಷ್ಣು ಸ್ತ್ರಿ ಭುವನೇಶ್ವರಃ ॥೧೮॥

---

ಶ್ರೇಷ್ಠರೇ, ಎರಡನೆಯದು ರತ್ನದಲ್ಲಿ ಹುಟ್ಟಿದ್ದು. ಇದು ಏಳು ವಿಧವಾದದ್ದು. ಮೂರನೆಯದು ಪರ್ವತದ ಧಾತುಗಳಿಂದ ಹುಟ್ಟಿದ್ದು. ಇದು ಪರಬ್ರಹ್ಮನಿಗೆ ಸಂಬಂಧಿಸಿದ್ದಾಗಿಯೂ, ಎಂಟು ವಿಧವಾಗಿಯೂ, ಇದೆ. ನಾಲ್ಕನೆಯದು ಮರದಲ್ಲಿ ಹುಟ್ಟಿದ್ದೂ, ಹದಿನಾರು ವಿಧವಾಗಿಯೂ, ಇದೆ ಎಂದು ಹೇಳಲ್ಪಟ್ಟಿದೆ. ಐದನೆಯ ಬಗೆಯು ಮಣ್ಣಿನದೂ, ಎರಡು ವಿಧವಾದುದಾಗಿಯೂ ಇದೆ. ಆರನೆಯದು ರಂಗೋಲಿಯಿಂದ ಹುಟ್ಟಿದ್ದೂ, ಏಳು ವಿಧವಾದುದಾಗಿಯೂ ಇದೆ. ರತ್ನದಲ್ಲಿ ಹುಟ್ಟಿದ ಲಿಂಗವು ಭಾಗ್ಯ ಲಕ್ಷ್ಮಿಯನ್ನು ಕೊಡುವುದಾಗಿಯೂ, ಶೈಲದಲ್ಲಿ ಶಿಲೆಯಿಂದ ಹುಟ್ಟಿದುದು ಎಲ್ಲಾ ಕಾರ್ಯಸಿದ್ಧಿಯನ್ನು ಕೊಡುವುದಾಗಿಯೂ, ಧಾತುವಿನಲ್ಲಿ ಹುಟ್ಟಿದ್ದು ಐಶ್ವರ್ಯವನ್ನು ಕೊಡುವುದಾಗಿಯೂ, ಮರದಲ್ಲಿ ಹುಟ್ಟಿದ್ದು ಸುಖ ಭೋಗ ಗಳನ್ನು ಕೊಡುವುದಾಗಿಯೂ, ಇದೆಯೆಂದು ಹೇಳಲ್ಪಟ್ಟಿದೆ.

೧೮-೨೨. ಎಲೈ ಬ್ರಾಹ್ಮಣ ಶ್ರೇಷ್ಠರೇ, ಮಣ್ಣಿನಿಂದ ಮಾಡಿದ ಲಿಂಗವು ಎಲ್ಲಾ ಸಿದ್ಧಿಗಳನ್ನೂ ಕೊಡುವ ಮಂಗಳಕರವಾದ ಲಿಂಗವೆಂದು ತಿಳಿಯಿರಿ. ಹಾಗೆಯೇ ಪರ್ವತದಲ್ಲಿ ಹುಟ್ಟಿದ ಲಿಂಗವು ಶ್ರೇಷ್ಠವಾಗಿದೆ. ಪರ್ವತದ ಧಾತುಗಳಲ್ಲಿ ಹುಟ್ಟಿದ ಲಿಂಗವು ಮಧ್ಯಮ ತರಗತಿಯದು,

**ರುದ್ರೋಽಪರಿ ಮಹಾದೇವಃ ಪ್ರಣವಾಽಖ್ಯಃ ಸದಾಶಿವಃ ।**
**ಲಿಂಗವೇದೀ ಮಹಾದೇವೀ ತ್ರಿಗುಣಾ ತ್ರಿಮಯಾಽಂಬಿಕಾ ॥೨೦॥**

**ತಯಾ ಚ ಪೂಜಯೇ ದ್ಯಸ್ತು ದೇವೀ ದೇವಶ್ಚ ಪೂಜಿತೌ ।**
**ಶೈಲಜಂ ರತ್ನಜಂ ವಾಽಪಿ ಧಾತುಜಂ ವಾಽಪಿ ದಾರುಜಂ ॥೨೧॥**

**ಮೃಣ್ಮಯಂ ಕ್ಷಣಿಕಂ ವಾಽಪಿ ಭಕ್ತ್ಯಾ ಸ್ಥಾಪ್ಯ ಫಲಂ ಶುಭಂ ।**
**ಸುರೇಂದ್ರಾಂಭೋಜ ಗರ್ಭಾಗ್ನಿಯಮಾಂಬುಪ ಧನೇಶ್ವರೈಃ ॥೨೨॥**

**ಸಿದ್ಧ ವಿದ್ಯಾಧರಾ ಹೀಂದ್ರೈ ರ್ಯಕ್ಷ ದಾನವ ಕಿನ್ನರೈಃ ।**
**ಸ್ತೂಯಮಾನಃ ಸು ಪುಣ್ಯಾತ್ಮಾ ದೇವ ದುಂದುಭಿನಾಂ ಸ್ವನೈಃ ॥**

**ಭೂರ್ಭುವಃ ಸ್ವರ್ಮಹರ್ಲೋಕಾನ್ಕ್ರಮಾದ್ವೈ ಜನತಃ ಪರಂ ।**
**ತಪಃ ಸತ್ಯಂ ಪರಾಕ್ರಮ್ಯ ಭಾಸಯ ನ್ಸ್ವೇನ ತೇಜಸಾ ॥೨೪॥**

---

ಲಿಂಗದ ಭೇದಗಳು ಅನೇಕವಾಗಿವೆ. ಒಟ್ಟಿನಲ್ಲಿ ಒಂಬತ್ತು ಭೇದಗಳಿಂದು ಸಂಕ್ಷೇಪವಾಗಿ ಹೇಳಬಹುದು. ಲಿಂಗದ ಮೂಲದಲ್ಲಿ ಬ್ರಹ್ಮನೂ, ಮೂರು ಲೋಕಕ್ಕೂ ಒಡೆಯನಾದ ವಿಷ್ಣುವು ಅದರ ಮಧ್ಯಭಾಗದಲ್ಲಿಯೂ, ಮೇಲು ಭಾಗದಲ್ಲಿ ರುದ್ರನೂ, ಆ ಮೇಲೆ ಓಂಕಾರಸ್ವರೂಪನಾದ ಶಿವನೇ ವಾಸ ವಾಗಿದ್ದಾರೆ. ಲಿಂಗದ ಸ್ವರೂಪವನ್ನು ಚೆನ್ನಾಗಿ ಅರಿತಿರುವವಳು, ತ್ರಿಗುಣ ತ್ರಿಮೂರ್ತಿ ಸ್ವರೂಪಳಾದ ಮಹಾದೇವಿಯಾದ ಪಾರ್ವತಿಯೇ ಎಂದು ತಿಳಿ ಯಲ್ಪಟ್ಟಿದೆ. ಯಾರು ಈ ಮಹಾತಾಯಿಯು ಪೂಜಿಸಿದ ವೇದಿಯುಳ್ಳ ಲಿಂಗದಲ್ಲಿ ಭಗವಂತನನ್ನು ಪೂಜಿಸುವರೋ ಅವರು ಶಿವ ಪಾರ್ವತಿಯರಿಬ್ಬರ ಪೂಜೆಯನ್ನೂ ಸಾಂಗವಾಗಿ ನೆರವೇರಿಸಿದಂತಾಗುತ್ತದೆ. ಪರ್ವತದಲ್ಲಿ ಹುಟ್ಟಿದ ಅಥವಾ ರತ್ನದಲ್ಲಿ ಹುಟ್ಟಿದ, ಧಾತುವಿನಲ್ಲಿ ಹುಟ್ಟಿದ ಅಥವಾ ಮರ ದಲ್ಲಿ ಹುಟ್ಟಿದ, ಮಣ್ಣಿನಿಂದ ಅಥವಾ ರಂಗೋಲಿಯಿಂದ ಮಾಡಿದ ಲಿಂಗ ವನ್ನು, ಭಕ್ತಿಯಿಂದ ಸ್ಥಾಪನೆಮಾಡಿ ಪೂಜಿಸಿದರೆ ವಿಶೇಷ ಶುಭ ಫಲವಾಗು ವುದರಲ್ಲಿ ಸಂದೇಹವಿಲ್ಲ. ಶಿವನು, ದೇವೇಂದ್ರ, ಬ್ರಹ್ಮ, ಅಗ್ನಿ, ಯಮ, ವರುಣ, ಕುಬೇರ, ಇವರಿಂದ ಯಾವಾಗಲೂ ಸ್ತೋತ್ರಮಾಡಲ್ಪಡುತ್ತಾನೆ.

೨೩–೨೬. ಸಿದ್ಧರು, ವಿದ್ಯಾಧರರು, ಸರ್ಪಶ್ರೇಷ್ಠರು, ಯಕ್ಷರು, ದಾನವರು, ಕಿನ್ನರರು, ಇವರಿಂದ ಸ್ತೋತ್ರ ಮಾಡಲ್ಪಡುವ ಬಹಳ

**ಲಿಂಗ ಸ್ಥಾಪನ ಸನ್ಮಾರ್ಗ ನಿಹಿತ ಸ್ವಾಯು ತಾಸಿನಾ ।**
**ಆಶು ಬ್ರಹ್ಮಾಂಡ ಮುದ್ಭಿದ್ಯ ನಿರ್ಗಚ್ಛೇನ್ನಿರ್ವಿಶಂಕಯಾ ॥೨೫॥**

**ಶೈಲಜಂ ರತ್ನಜಂ ವಾಽಪಿ ಧಾತುಜಂ ವಾಽಪಿ ದಾರುಜಂ ।**
**ಮೃಣ್ಮಯಂ ಕ್ಷಣಿಕಂ ತ್ಯಕ್ತ್ವಾ ಸ್ಥಾಪಯೇತ್ಸಕಲಂ ವಪುಃ ॥೨೬॥**

**ವಿಧಿನಾ ಚೈವ ಕೃತ್ವಾ ತು ಸ್ಕಂದೋಮಾ ಸಹಿತಂ ಶುಭಂ ।**
**ಕುಂದ ಗೋಕ್ಷೀರ ಸಂಕಾಶಂ ಲಿಂಗಂ ಯಃ ಸ್ಥಾಪಯೇನ್ನರಃ ॥೨೭॥**

**ನೃಣಾಂ ತನುಂ ಸಮಾಸ್ಥಾಯ ಸ್ಥಿತೋ ರುದ್ರೋ ನ ಸಂಶಯಃ ।**
**ದರ್ಶನಾತ್ಸ್ಪರ್ಶನಾತ್ತಸ್ಯ ಲಭಂತೇ ನಿರ್ವೃತಿಂ ನರಾಃ ॥೨೮॥**

**ತಸ್ಯ ಪುಣ್ಯಂ ಮಯಾ ವಕ್ತುಂ ಸಮ್ಯ ಗ್ಯುಗ ಶತೈರಪಿ ।**
**ಶಕ್ಯತೇ ನೈವ ವಿಪ್ರೇಂದ್ರಾ ಸ್ತಸ್ಮಾದ್ವೈ ಸ್ಥಾಪಯೇ ತ್ತಥಾ ॥೨೯॥**

---

ಮಂಗಳಕರವಾದ ಸ್ವರೂಪವುಳ್ಳ ಶಿವನು ದೇವತೆಗಳಿಂದ, ನಗಾರಿ, ಮುಂತಾದ ವಾದ್ಯಗಳೊಡನೆ ಬಾಣಲಿಂಗದಲ್ಲಿ ಪೂಜಿಸಲ್ಪಡುತ್ತಾನೆ. ಈ ಅರ್ಚಕನು ಭೂಲೋಕ, ಭುವರ್ಲೋಕ, ಸ್ವರ್ಲೋಕ ಮಹರ್ಲೋಕಗಳನ್ನು ಕ್ರಮವಾಗಿ ದಾಟಿ, ತನ್ನ ಸತ್ಯದ ಮತ್ತು ತಪಸ್ಸಿನ ಮಹಾತೇಜಸ್ಸಿನಿಂದ ಪ್ರಕಾಶಿಸುತ್ತಾನೆ. ಲಿಂಗ ಸ್ಥಾಪನೆ ಮಾಡಿರುವ ಮನುಷ್ಯನು ಉತ್ತಮವಾಗಿ ಇರುವ ಭಕ್ತಿಯಿಂದ, ನಿಶ್ಚಿಂತೆಯಿಂದ ಬ್ರಹ್ಮಾಂಡವನ್ನು ಭೇದಿಸಿ' ಉತ್ತಮ ಲೋಕವನ್ನು ಪಡೆಯುವನು. ಬೆಟ್ಟದಲ್ಲಿ ಹುಟ್ಟಿದ ಅಥವಾ ರತ್ನದಲ್ಲಿ ಹುಟ್ಟಿದ, ಧಾತುವಿನಲ್ಲಿ ಹುಟ್ಟಿದ ಅಥವಾ ಮರದಲ್ಲಿ ಹುಟ್ಟಿದ, ಮಣ್ಣಿನಿಂದ ಮಾಡಿದ ಅಥವಾ ರಂಗೋಲಿಯಿಂದ ಮಾಡಿದ ಲಿಂಗವನ್ನು ಬಿಟ್ಟು, ಶಿವನ ಚಂದ್ರಕಲಾದಿಗಳಿಂದ ಪೂರ್ಣವಾಗಿರುವ ಲಿಂಗವನ್ನು ಬೇಕಾದರೂ ಪೂಜಿಸಬಹುದು.

೨೭–೩೦. ಹೀಗೆ ಶಾಸ್ತ್ರೋಕ್ತ ರೀತಿಯಲ್ಲಿ, ಷಣ್ಮುಖ, ಪಾರ್ವತೀ, ಇವರೊಡನೆ ಇರುವ, ಕುಂದಪುಷ್ಪ, ಹಸುವಿನಹಾಲು, ಇವುಗಳಿಗೆ ಸಮಾನವಾಗಿ ಶುಭ್ರವಾದ ಲಿಂಗವನ್ನು ಯಾರು ಸ್ಥಾಪಿಸುವರೋ, ಅವರಲ್ಲಿ ಸಾಕ್ಷಾತ್ ರುದ್ರನೇ ಮನುಷ್ಯ ರೂಪದಲ್ಲಿ ನೆಲಸಿದ್ದಾನೆಂದು ತಿಳಿಯಬೇಕು. ಇಂಥಾ ಸತ್ಪುರುಷನ ದರ್ಶನ ಅಥವಾ ಮುಟ್ಟುವಿಕೆಗಳಿಂದ ಜನರು ಸೌಖ್ಯ

**ಸರ್ವೇಷಾ ಮೇವ ಮರ್ತ್ಯಾನಾಂ ವಿಭೋರ್ದಿವ್ಯಂ ವಪುಃ ಶುಭಂ।**
**ಸಕಲಂ ಭಾವನಾ ಯೋಗ್ಯಂ ಯೋಗಿನಾ ಮೇವ ನಿಷ್ಕಲಂ ॥೩೦॥**

**ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಶಿವಲಿಂಗ ಭೇದ**
**ಸಂಸ್ಥಾಪನೇತ್ಯಾದಿ ವಿಷಯವರ್ಣನಂ ನಾಮ**
**ಚತುಃ ಸಪ್ತತಿತಮೋಽಧ್ಯಾಯಃ**

---

ವನ್ನು ಹೊಂದುತ್ತಾರೆ. ಇಂಥಾ ಸತ್ಪುರುಷನ ಪುಣ್ಯವೆಷ್ಟಿದೆಯೆಂಬುದನ್ನು ನೂರಾರು ಯುಗಗಳು ವರ್ಣಿಸಿದರೂ ಪೂರ್ಣವಾಗಿ ಹೇಳಿದ ಹಾಗಾಗುವುದಿಲ್ಲ. ಆದ್ದರಿಂದ ಎಲೈ ಬ್ರಾಹ್ಮಣ ಶ್ರೇಷ್ಠರೇ, ಕಳಂಕವಿಲ್ಲದ ಯೋಗಿಗಳಿಗೂ ಸರ್ವದಾ ಭಾವಿಸಲು ಯೋಗ್ಯವಾದ, ಪತ್ನೀ, ಪುತ್ರ, ಸಮೇತನಾದ ಶಿವನ ಮಂಗಳಕರವಾದ ಶರೀರವು ಎಲ್ಲಾ ಮಾನವರಿಗೂ, ಯಾವಾಗಲೂ ಪೂಜಾಯೋಗ್ಯವೆಂದು ತಿಳಿಯಿರಿ. ಯೋಗಿಗಳು ಮಾತ್ರ ಶಿವನ ನಿಷ್ಕಲ ಸ್ವರೂಪವನ್ನು ಪೂಜಿಸಿ ಧ್ಯಾನಿಸುತ್ತಿರಬಹುದು.

ಇಲ್ಲಿಗೆ ಶ್ರೀಲಿಂಗಮಹಾಪುರಾಣದಲ್ಲಿ ಪೂರ್ವಭಾಗದ ಶಿವಲಿಂಗ ಭೇದ
ಸಂಸ್ಥಾಪನೆ ಮುಂತಾದ ವಿಷಯಗಳ ವಿವರಣೆ, ಎಂಬ,
ಎಪ್ಪತ್ತುನಾಲ್ಕನೆಯ ಅಧ್ಯಾಯವು, ಮುಗಿಯಿತು.

अथ श्रीलिंगमहापुराणे पूर्वभागे
पंचसप्ततितमोऽध्यायः

॥ ऋषय ऊचुः ॥

ನಿಷ್ಕಲೋ ನಿರ್ಮಲೋ ನಿತ್ಯಃ ಸಕಲತ್ವಂ ಕಥಂ ಗತಃ ।
ವಕ್ತು ಮರ್ಹಸಿ ಚಾಽಸ್ಮಾಕಂ ಯಥಾಪೂರ್ವಂ ಯಥಾ ಶ್ರುತಂ ॥

॥ ಸೂತ ಉವಾಚ ॥

ಪರಮಾರ್ಥವಿದಃ ಕೇಚಿ ದೂಚುಃ ಪ್ರಣವ ರೂಪಿಣಂ ।
ವಿಜ್ಞಾನ ಮಿತಿ ವಿಪ್ರೇಂದ್ರಾಃ ಶ್ರುತ್ವಾ ಶ್ರುತಿ ಶಿರಸ್ಯಜಂ ॥ ೨ ॥

ಶಬ್ದಾದಿ ವಿಷಯಂ ಜ್ಞಾನಂ ಜ್ಞಾನ ಮಿತ್ಯಭಿ ಧೀಯತೇ ।
ತಜ್ಜ್ಞಾನಂ ಭ್ರಾಂತಿ ರಹಿತ ಮಿತ್ಯ ನ್ಯೇ ನೇತಿ ಚಾಽಪರೇ ॥ ೩ ॥

ಯಜ್ಜ್ಞಾನಂ ನಿರ್ಮಲಂ ಶುದ್ಧಂ ನಿರ್ವಿಕಲ್ಪಂ ನಿರಾಶ್ರಯಂ ।
ಗುರು ಪ್ರಕಾಶಕಂ ಜ್ಞಾನಂ ಇತ್ಯನ್ಯೇ ಮುನಯೋ ದ್ವಿಜಾಃ ॥ ೪ ॥

---

ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತೈದನೆಯ ಅಧ್ಯಾಯವು.

೧–೪. ಋಷಿಗಳು ಹೇಳಿದರು:—ಸತ್ವರಜಸ್ತಮೋ ಗುಣಗಳಿಲ್ಲದವನೂ, ಶುದ್ಧನೂ, ಮಾಯಾವಿಕಾರಗಳಿಲ್ಲದ, ನಿತ್ಯನೂ, ಆದ ಶಿವನು, ಗುಣಗಳಿಂದ ಕೂಡಿದ ರೂಪವನ್ನು ಹೊಂದಿದ ಬಗೆ ಹೇಗೆ? ಎಂಬ ವಿಷಯವನ್ನು ತಾವು ಹಿಂದೆ ಗುರುಗಳಿಂದ ಕೇಳಿದ್ದಹಾಗೆಯೇ ನಮಗೆ ದಯವಿಟ್ಟು ತಿಳಿಸಬೇಕು. ಸೂತನು ಹೇಳಿದನು:—ಪರಮಾತ್ಮಜ್ಞಾನವನ್ನು ಪಡೆದಿರುವ ಜ್ಞಾನಿಗಳು, ಭಗವಂತನನ್ನು ಓಂಕಾರಸ್ವರೂಪಿಯೆಂದೂ, ವೇದಾಂತ ವಿಚಾರವನ್ನು ತಿಳಿದಿರುವ ಇನ್ನು ಕೆಲವರು ವೇದಾಂತ ಶಾಸ್ತ್ರೀಯವಾದ ಜ್ಞಾನಸ್ವರೂಪನೇ ಅವನೆಂದೂ ಅಭಿಪ್ರಾಯಪಡುತ್ತಾರೆ. ಜ್ಞಾನವು ಶಬ್ದವೇ ಮೊದಲಾದ ವಿಷಯಗಳನ್ನೊಳಗೊಂಡಿದೆ ಯೆಂದು ತಿಳಿಯಬೇಕು. ಈ ಜ್ಞಾನವು ಭ್ರಾಂತಿಯಿಲ್ಲದ್ದೆಂದು ಕೆಲವರೂ, ಭ್ರಾಂತಿಯುಳ್ಳದ್ದೆಂದು ಕೆಲವರೂ, ಅಭಿಪ್ರಾಯ ಪಡುತ್ತಾರೆ. ಯಾವ ಜ್ಞಾನವು

ಜ್ಞಾನೇನೈವ ಭವೇ ನ್ಮುಕ್ತಿಃ ಪ್ರಸಾದೋ ಜ್ಞಾನ ಸಿದ್ಧಯೇ ।
ಉಭಾಭ್ಯಾಂ ಮುಚ್ಯತೇ ಯೋಗೀ ತತ್ರಾನಂದ ಮಯೋ ಭವೇತ್ ॥

ವದಂತಿ ಮುನಯಃ ಕೇಚಿ ತ್ಕರ್ಮಣಾ ತಸ್ಯ ಸಂಗತಿಂ ।
ಕಲ್ಪನಾ ಕಲ್ಪಿತಂ ರೂಪಂ ಸಂಹೃತ್ಯ ಸ್ವೇಚ್ಛಯೈವ ಹಿ ॥ ೬ ॥

ದ್ಯೌ ಮೂರ್ಧಾ ತು ವಿಭೋ ಸ್ತಸ್ಯ ಖಂ ನಾಭಿಃ ಪರಮೇಷ್ಠಿನಃ ।
ಸೋಮ ಸೂರ್ಯಾಗ್ನಯೋ ನೇತ್ರಂ ದಿಶಃ ಶ್ರೋತ್ರಂ ಮಹಾತ್ಮನಃ ॥

ಚರಣೌ ಚೈವ ಪಾತಾಲಂ ಸಮುದ್ರ ಸ್ತಸ್ಯ ಚಾಂಬರಂ ।
ದೇವಾಃ ತಸ್ಯ ಭುಜಾಃ ಸರ್ವೇ ನಕ್ಷತ್ರಾಣಿ ಚ ಭೂಷಣಂ ॥ ೮ ॥

ಪ್ರಕೃತಿ ಸ್ತಸ್ಯ ಪತ್ನೀ ಚ ಪುರುಷೋ ಲಿಂಗ ಮುಚ್ಯತೇ ।
ವಕ್ತ್ರಾ ದ್ವೈ ಬ್ರಾಹ್ಮಣಾಃ ಸರ್ವೇ ಬ್ರಹ್ಮಾ ಚ ಭಗವಾನ್ಪ್ರಭುಃ ॥

---

ಶುದ್ಧವೂ, ಭ್ರಾಂತಿ, ಸಂಶಯಗಳಿಲ್ಲದ್ದೂ, ವಿಕಲ್ಪ, ಆಶ್ರಯಗಳಿಲ್ಲದ್ದೂ, ಆಗಿದೆಯೋ ಅಂಥಾ ಮತ್ತು ಗುರುವಿನ ಉಪದೇಶದಿಂದುಂಟಾದ ಜ್ಞಾನವು ಬ್ರಹ್ಮರೂಪನಾದ ಶಿವಸ್ವರೂಪ ಅರಿವನ್ನುಂಟುಮಾಡಿಕೊಡಬಲ್ಲದ್ದಾದುದರಿಂದ ಅದೇ ಜ್ಞಾನವೆಂದು ಕೆಲವು ಋಷಿಗಳು ಹೇಳುತ್ತಾರೆ.

೫–೮. ಜ್ಞಾನಒಂದರಿಂದಲೇ ಮನುಷ್ಯನಿಗೆ ಮೋಕ್ಷವು ಲಭಿಸುವುದು. ಜ್ಞಾನ ಸಿದ್ಧಿಗಾಗಿ ಗುರುದೇವರ ಅನುಗ್ರಹವು ಆವಶ್ಯಕ. ಯೋಗಿಗೆ ಇಂತಹ ಈ ಜ್ಞಾನ, ಪ್ರಸಾದ, ಈ ಎರಡರಿಂದಲೂ, ಮೋಕ್ಷವು ದೊರೆಯುತ್ತದೆ. ಆ ಜ್ಞಾನಿಯು ಕೇವಲ ಆನಂದ ಸ್ವರೂಪನಾಗಿರುತ್ತಾನೆ. ಕೆಲವು ಋಷಿಗಳು ಜ್ಞಾನದೊಂದಿಗೆ ನಿಷ್ಕಾಮ ಕರ್ಮವನ್ನೂ ಸೇರಿಸುತ್ತಾರೆ. ಇದಕ್ಕೆ ಕಾರಣವೇನೆಂದರೆ ಅವರು ಈಶ್ವರನ ಸಗುಣಸಾಕಾರ ಸ್ವರೂಪ ಉಪಾಸನೆಮಾಡುತ್ತಿರುವುದೇ ಆಗಿದೆ. ಈ ಪರಬ್ರಹ್ಮಸ್ವರೂಪನಾದ ಶಿವನಿಗೆ ಸ್ವರ್ಗವು ತಲೆಯಾಗಿಯೂ, ಆಕಾಶವು ಹೊಕ್ಕುಳಾಗಿಯೂ, ಸೂರ್ಯ, ಚಂದ್ರ ಅಗ್ನಿಗಳು ಕಣ್ಣಾಗಿಯೂ, ದಿಕ್ಕುಗಳೇ ಕಿವಿಗಳಾಗಿಯೂ, ಪಾತಾಳ ಲೋಕವೇ ಕಾಲುಗಳಾಗಿಯೂ, ಸಮುದ್ರವೇ ಬಟ್ಟೆಯಾಗಿಯೂ, ಎಲ್ಲಾ ದೇವತೆಗಳೇ ತೋಳುಗಳಾಗಿಯೂ, ನಕ್ಷತ್ರಗಳೇ ಅಲಂಕಾರಗಳಾಗಿಯೂ ಇವೆ.

೯–೧೧. ಶಿವನಿಗೆ ಪ್ರಕೃತಿಯೇ ಪತ್ನಿಯಾಗಿಯೂ, ಪುರುಷನೇ

ಇಂದ್ರೋ ಪೇಂದ್ರೌ ಭುಜಾಭ್ಯಾಂ ತು ಕ್ಷತ್ರಿಯಾಶ್ಚ ಮಹಾತ್ಮನಃ ।
ವೈಶ್ಯಾ ಶ್ಚೋರು ಪ್ರದೇಶಾತ್ತು ಶೂದ್ರಾಃ ಪಾದಾ ತ್ಪಿನಾಕಿನಃ॥೧೦॥
ಪುಷ್ಕರಾಃವರ್ತಕಾ ದ್ಯಾಸ್ತು ಕೇಶಾ ಸ್ತಸ್ಯ ಪ್ರಕೀರ್ತಿತಾಃ ।
ವಾಯವೋ ಘ್ರಾಣಜಾ ಸ್ತಸ್ಯ ಗತಿಃ ಶ್ರೌತಂ ಸ್ಮೃತಿ ಸ್ತಥಾ ॥೧೧॥
ಅಥಾ ನೇನೈವ ಕರ್ಮಾತ್ಮಾ ಪ್ರಕೃತೇಸ್ತು ಪ್ರವರ್ತಕಃ ।
ಪುಂಸಾಂ ತು ಪುರುಷಃ ಶ್ರೀಮಾನ್ ಜ್ಞಾನಗಮ್ಯೋ ನ ಚಾನ್ಯಥಾ ॥
ಕರ್ಮಯಜ್ಞ ಸಹಸ್ರೇಭ್ಯ ಸ್ತಪೋಯಜ್ಞೋ ವಿಶಿಷ್ಯತೇ ।
ತಪೋ ಯಜ್ಞ ಸಹಸ್ರೇಭ್ಯೋ ಜಪಯಜ್ಞೋ ವಿಶಿಷ್ಯತೇ ॥೧೩॥
ಜಪಯಜ್ಞ ಸಹಸ್ರೇಭ್ಯೋ ಧ್ಯಾನ ಯಜ್ಞೋ ವಿಶಿಷ್ಯತೇ ।
ಧ್ಯಾನ ಯಜ್ಞಾತ್ಪರೋ ನಾಸ್ತಿ ಧ್ಯಾನಂ ಜ್ಞಾನಸ್ಯ ಸಾಧನಂ ॥೧೪॥

---

ಲಿಂಗವಾಗಿಯೂ, ಇದ್ದಾರೆ. ಶಿವನ ಮುಖದಿಂದ ಎಲ್ಲಾ ಬ್ರಾಹ್ಮಣರೂ, ಪೂಜ್ಯನಾದ ಬ್ರಹ್ಮನೂ, ಇಂದ್ರ ಮತ್ತು ಉಪೇಂದ್ರರೂ, ಹುಟ್ಟಿದರು. ಇವನ ತೋಳುಗಳಿಂದ ಮಹಾತ್ಮರಾದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ, ಕಾಲಿನಿಂದ ಶೂದ್ರರೂ, ಹುಟ್ಟಿದರು. ಪುಷ್ಕರ, ಆವರ್ತಕ, ವೊದಲಾದ ಮೇಘಗಳು ಶಿವನ ಕೂದಲುಗಳೆಂದು ಹೇಳಲ್ಪಟ್ಟಿದೆ. ಅವನ ಮೂಗಿನಿಂದ ವಾಯುಗಳು ಹುಟ್ಟಿದುವು. ಅವನ ನಡಗೆಯು ಶ್ರೌತ ಸ್ಮಾರ್ತ ಕರ್ಮಗಳೆಂದು ತಿಳಿಯಬೇಕು.

೧೨–೧೫. ಸೃಷ್ಟಿಯ ಪ್ರಾರಂಭದಲ್ಲಿ ಹಿಂದೆ ಹೇಳಿದ ಮಾರ್ಗದಲ್ಲಿ ಶಿವನು ಕರ್ಮವನ್ನು ಮಾಡುತ್ತಾ ಪ್ರಕೃತಿಗೆ ಪ್ರೇರಕ ನಾದನು. ಶ್ರೇಷ್ಠನಾದ ಪುರುಷನು ಜನಗಳಿಗೆ ಜ್ಞಾನದಿಂದ ತಿಳಿಯಲ್ಪಡತಕ್ಕವನಾಗಿದ್ದಾನೆಯೋ ಹೊರತು ಬೇರೆ ವಿಧವಾಗಿಲ್ಲ. ಸಾವಿರಾರು ಕರ್ಮರೂಪವಾದ ಯಜ್ಞಕ್ಕಿಂತಲೂ, ತಪಸ್ಸೆಂಬ ಯಜ್ಞವು ಶ್ರೇಷ್ಠವಾದುದು. ಸಾವಿರಾರು ತಪಸ್ಸೆಂಬ ಯಜ್ಞಕ್ಕಿಂತಲೂ, ಜಪಯಜ್ಞವು ಮಿಗಿಲಾದುದು, ಸಾವಿರಾರು ಜಪಯಜ್ಞಕ್ಕಿಂತಲೂ, ಧ್ಯಾನಯಜ್ಞವು ಶ್ರೇಷ್ಠ ವಾದುದು. ಧ್ಯಾನಯಜ್ಞಕ್ಕಿಂತಲೂ ಶ್ರೇಷ್ಠವಾದ ಯಜ್ಞವು

ಯದಾ ಸಮರಸೋ ನಿಷ್ಠೋ ಯೋಗೀ ಧ್ಯಾನೇನ ಪಶ್ಯತಿ ।
ಧ್ಯಾನ ಯಜ್ಞ ರತಸ್ಯಾಽಸ್ಯ ಸದಾ ಸನ್ನಿಹಿತಃ ಶಿವಃ ॥೧೫॥
ನಾಸ್ತಿ ವಿಜ್ಞಾನಿನಾಂ ಶೌಚಂ ಪ್ರಾಯಶ್ಚಿತ್ತಾದಿ ಚೋದನಾ ।
ವಿಶುದ್ಧಾ ವಿದ್ಯಯಾ ಸರ್ವೇ ಬ್ರಹ್ಮವಿದ್ಯಾ ವಿದೋ ಜನಾಃ ॥೧೬॥
ನಾಸ್ತಿ ಕ್ರಿಯಾ ಚ ಲೋಕೇಷು ಸುಖಂ ದುಃಖಂ ವಿಚಾರತಃ ।
ಧರ್ಮಾ ಧರ್ಮೌ ಜಪೋ ಹೋಮೋ ಧ್ಯಾನಿನಾಂ ಸನ್ನಿಧಿಃ ಸದಾ ॥
ಪರಾಽನಂದಾಽತ್ಮಕಂ ಲಿಂಗಂ ವಿಶುದ್ಧಂ ಶಿವಮಕ್ಷರಂ ।
ನಿಷ್ಕಲಂ ಸರ್ವಗಂ ಜ್ಞೇಯಂ ಯೋಗಿನಾಂ ಹೃದಿ ಸಂಸ್ಥಿತಂ ॥೧೮॥
ಲಿಂಗಂ ತು ದ್ವಿವಿಧಂ ಪ್ರಾಹುಃ ಬಾಹ್ಯ ಮಾಭ್ಯಂತರಂ ದ್ವಿಜಾಃ ।
ಬಾಹ್ಯಂ ಸ್ಥೂಲಂ ಮುನಿಶ್ರೇಷ್ಠಾಃ ಸೂಕ್ಷ್ಮಮಾಭ್ಯಂತರಂ ದ್ವಿಜಾಃ ॥

---

ಮತ್ತೊಂದಿಲ್ಲ. ಧ್ಯಾನವೇ ಜ್ಞಾನಕ್ಕೆ ಕಾರಣವು. ಯಾವಾಗ ಎಲ್ಲಾ ವಸ್ತುಗಳನ್ನೂ ಸಮವಾಗಿ ನೋಡುವ ಯೋಗಿಯು ಧ್ಯಾನದಿಂದ ತತ್ವವನ್ನು ತಿಳಿಯಲು ಬಯಸುತ್ತಾನೋ ಆಗ ಧ್ಯಾನಯಜ್ಞ ಮಾಡುತ್ತಿರುವ ಇವನಿಗೆ ಶಿವನು ಸಮೀಪದಲ್ಲಿಯೇ ಇರುತ್ತಾನೆಂದು ತಿಳಿಯಿರಿ.

೧೬-೧೯. ಯೋಗಿಯಾದವನಿಗೆ ಈ ಲೋಕದ ಸುಖ ದುಃಖಗಳಾಗಲೀ, ಕರ್ಮಗಳಾಗಲಿ, ಒಂದೂ ಇಲ್ಲ. ಇವನಿಗೆ ಧರ್ಮಾ ಧರ್ಮಗಳಾಗಲಿ, ಜಪ ಹೋಮಗಳಾಗಲಿ, ಧ್ಯಾನಮಾಡುವ ಯೋಗಿಗಿಲ್ಲ. ಇವನಿಗೆ ಯಾವಾಗಲೂ ಶಿವನು ಪ್ರತ್ಯಕ್ಷನೇ ಆಗಿದ್ದಾನೆ. ಶಿವಲಿಂಗವು ಉತ್ಕೃಷ್ಟವಾದ ಆನಂದ ಸ್ವರೂಪವಾಗಿಯೂ, ಶುದ್ಧವಾಗಿಯೂ, ಮಂಗಳಕರವಾಗಿಯೂ, ನಾಶರಹಿತವಾಗಿಯೂ, ಗುಣ ವಿಲ್ಲದುದಾಗಿಯೂ, ಯೋಗಿಗಳ ಮನಸ್ಸಿನಲ್ಲೇ ಇರುವುದೆಂದೂ, ತಿಳಿಯಬೇಕು. ಎಲೈ ಬ್ರಾಹ್ಮಣರೇ, ಲಿಂಗವನ್ನು ಒಳಗಿನದು ಮತ್ತು ಹೊರಗಿನದು ಎಂದು ಎರಡು ವಿಧವಾಗಿ ಹೇಳುವರು. ಎಲೈ ಋಷಿಶ್ರೇಷ್ಠರೇ ಹೊರಗಿನ ಲಿಂಗವು ಸ್ಥೂಲವಾಗಿಯೂ, ಒಳಗಿನದು ಸೂಕ್ಷ್ಮವಾಗಿಯೂ ಇದೆಯೆಂದು ತಿಳಿಯಿರಿ.

ಕರ್ಮ ಯಜ್ಞರತಾಃ ಸ್ಥೂಲಾಃ ಸ್ಥೂಲ ಲಿಂಗಾಽರ್ಚನೇ ರತಾಃ ।
ಅಸತಾಂ ಭಾವನಾಽರ್ಥಾಯ ನಾನ್ಯಥಾ ಸ್ಥೂಲ ವಿಗ್ರಹಃ ॥೨೦॥
ಆಧ್ಯಾತ್ಮಿಕಂ ಚ ಯಲ್ಲಿಂಗಂ ಪ್ರತ್ಯಕ್ಷಂ ಯಸ್ಯ ನೋ ಭವೇತ್ ।
ಅಸೌ ಮೂಢೋ ಬಹಿಃ ಸರ್ವಂ ಕಲ್ಪಯಿತ್ವೈವ ನಾಽನ್ಯಥಾ ॥೨೧॥
ಜ್ಞಾನಿನಾಂ ಸೂಕ್ಷ್ಮಮಮಲಂ ಭವೇತ್ಪ್ರತ್ಯಕ್ಷ ಮವ್ಯಯಂ ।
ಯಥಾ ಸ್ಥೂಲ ಮಯುಕ್ತಾನಾಂ ಮೃತ್ಕಾಷ್ಠಾದ್ಯೈಃ ಪ್ರಕಲ್ಪಿತಂ ॥
ಅರ್ಥೋ ವಿಚಾರತೋ ನಾಸ್ತೀ ತ್ಯನ್ಯೇ ತತ್ವಾರ್ಥ ವೇದಿನಃ ।
ನಿಷ್ಕಲಃ ಸಕಲಶ್ಚೇತಿ ಸರ್ವಂ ಶಿವಮಯಂ ತತಃ ॥೨೩॥
ವ್ಯೋಮೈಕ ಮಪಿ ದೃಷ್ಟಂ ಹಿ ಶರಾವಂ ಪ್ರತಿ ಸುವ್ರತಾಃ ।
ಪೃಥಕ್ತ್ವಂ ಚಾಽಪೃಥಕ್ತ್ವಂ ಚ ಶಂಕರಸ್ಯೇತಿ ಚಾಽಪರೇ ॥೨೪॥

---

೨೦–೨೨. ಕರ್ಮಯಜ್ಞ ಮಾಡುವವರೂ, ಸ್ಥೂಲಸ್ವಭಾವದವರಾಗಿ, ಸ್ಥೂಲಲಿಂಗದ ಪೂಜೆಯಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ. ಸಾಮಾನ್ಯ ಜನರ ಯೋಗ್ಯತೆಗನುಸರಿಸಿ ಸ್ಥೂಲಲಿಂಗ ಪೂಜೆಯನ್ನು ವಿಧಿಸಿರುವರೇ ವಿನಾ ಮತ್ತೇನಿಲ್ಲ. ಒಳಗಿನ ಆತ್ಮಕ್ಕೆ ಸಂಬಂಧಪಟ್ಟ ಲಿಂಗವನ್ನು ಸಾಕ್ಷಾತ್ಕರಿಸಲು ಯೋಗ್ಯತೆಯಿಲ್ಲದವನಾದ ಮೂಢ ಮನುಷ್ಯನು ಎಲ್ಲವೂ ಹೊರಗಿನದೆಂದು ತಿಳಿದು ಕೊಂಡಿರುತ್ತಾನೆ. ಜ್ಞಾನಿಗಳಿಗಾದರೋ ಶುದ್ಧವೂ ಸೂಕ್ಷ್ಮವೂ, ನಾಶರಹಿತವೂ, ಆದ ಲಿಂಗವು ಗೋಚರವಾಗುವುದು. ಯೋಗಾಭ್ಯಾಸವಿಲ್ಲದ ಸಾಮಾನ್ಯ ಮನುಷ್ಯರಿಗೆ ಮಣ್ಣು, ಮರ, ಮುಂತಾದುದರಿಂದ ಮಾಡಿದ ಸ್ಥೂಲವಾದ ಲಿಂಗದ ಅರ್ಚನೆಯು ವಿಧಿಸಲ್ಪಟ್ಟಿದೆ.

೨೩–೨೫. ಇನ್ನು ತತ್ವ ವಿಚಾರವನ್ನು ತಿಳಿದಿರುವ ಕೆಲವರು ವಿಚಾರ ಮಾಡಿದರೆ ಪದಾರ್ಥವೆಂಬುದೇ ಇಲ್ಲವೆಂದೂ, ನಿರ್ಗುಣನೂ, ಪೂರ್ಣನೂ ಆದ ಶಿವನೇ ಈ ಜಗತ್ತೆಂದೂ ಹೇಳುತ್ತಾರೆ. ಎಲೈ ಬ್ರಾಹ್ಮಣ ಶ್ರೇಷ್ಠರೇ, ಒಂದೇ ಆದ ಆಕಾಶವು ಶ್ರಾವೆಯೇ ಮೊದಲಾದ ಪದಾರ್ಥಗಳೊಳಗೆ ಇರುವಾಗ ಬೇರೆಯಾಗಿಯೂ, ವಾಸ್ತವವಾಗಿ ಒಂದೇ ಆಗಿಯೂ ಹೇಗಿರುವುದೋ, ಹಾಗೆಯೇ ಶಂಕರನೂ, ಜಗತ್ತೂ, ಬೇರೆಯಾಗಿರುವಂತೆ

ಪ್ರತ್ಯಯಾರ್ಥಂ ಹಿ ಜಗತಾ ಮೇಕ ಸ್ಥೋಽಪಿ ದಿವಾಕರಃ ॥
ಏಕೋಽಪಿ ಬಹುಧಾ ದೃಷ್ಟೋ ಜಲಾಧಾರೇಷು ಸು ವ್ರತಾಃ ॥೨೫॥
ಜಂತವೋ ದಿವಿ ಭೂಮೌ ಚ ಸರ್ವೇ ವೈ ಪಾಂಚ ಭೌತಿಕಾಃ ।
ತಥಾಽಪಿ ಬಹುಳಾ ದೃಷ್ಟಾ ಜಾತಿ ವ್ಯಕ್ತಿ ವಿಭೇದತಃ ॥೨೬॥
ದೃಶ್ಯತೇ ಶ್ರೂಯತೇ ಯದ್ಯತ್ ತದ್ವಿತ್ತದ್ಧಿ ಶಿವಾಽತ್ಮಕಂ ।
ಭೇದೋ ಜನಾನಾಂ ಲೋಕೇಽಸ್ಮಿನ್ಪ್ರತಿಭಾಸೋ ವಿಚಾರತಃ ॥೨೭॥
ಸ್ವಪ್ನೇ ಚ ವಿಪುಲಾನ್ ಭೋಗಾನ್ ಭುಕ್ತ್ವಾ ಮರ್ತ್ಯಃ ಸುಖೀ ಭವೇತ್ ।
ದುಃಖೀ ಚ ಭೋಗಂ ದುಃಖಂ ಚ ನಾಽನು ಭೂತಂ ವಿಚಾರತಃ ॥
ಏವಮಾಹು ಸ್ತಥಾಽನ್ಯೇ ಚ ಸರ್ವೇ ವೇದಾರ್ಥ ತತ್ತ್ವಗಾಃ ।
ಹೃದಿ ಸಂಸಾರಿಣಾಂ ಸಾಕ್ಷಾತ್ಸಕಲಃ ಪರಮೇಶ್ವರಃ ॥೨೯॥

---

ತಾತ್ಕಾಲಿಕವಾದ ಪ್ರಪಂಚದ ವಸ್ತುಗಳು ಭೇದವುಳ್ಳಂತೆ ಕಂಡುಬಂದರೂ ವಾಸ್ತವವಾಗಿ ಇವೆರಡೂ ಒಂದೇ ಆಗಿರುತ್ತವೆ. ಎಲೈ ಬ್ರಾಹ್ಮಣ ಶ್ರೇಷ್ಠರೇ, ಸೂರ್ಯನು ಒಬ್ಬನಾದರೂ, ಹೇಗೆ ನೀರಿನ ಆಧಾರ ವಾದ ಪದಾರ್ಥಗಳಿಂದ ಬೇರೆ ಬೇರೆಯಾಗಿ ತೋರುವಂತೆ, ಪರಮಾತ್ಮ ನಾದ ಶಿವನೂ, ಮತ್ತು ಜಗತ್ತೂ ಬೇರೆಯಾಗಿರುವುದು ತೋರಿಕೆಯೇ ಹೊರತು ಪಾರಮಾರ್ಥಿಕವಲ್ಲ.

೨೮–೨೯. ಮನುಷ್ಯನು ಈ ಪ್ರಪಂಚದಲ್ಲಿ ಅನೇಕವಾದ ಭೋಗ, ಸೌಖ್ಯಗಳನ್ನು ಅನುಭವಿಸುವುದು ಸ್ವಪ್ನ ಪ್ರಪಂಚದಲ್ಲಿ ಸುಖಗಳನ್ನು ಅನುಭವಿಸಿದಂತೆಯೇ. ವಿಚಾರ ಮಾಡಿದರೆ ಈ ಪ್ರಪಂಚದ ಸುಖವಾಗಲಿ, ದುಃಖವಾಗಲಿ, ಆತ್ಮನಿಗಿಲ್ಲವೇ ಇಲ್ಲ. ವೇದಾರ್ಥವನ್ನು ತಿಳಿದಿರುವ ಜ್ಞಾನಿಗಳಾದ ವೇದಾಂತಿಗಳೂ, ಈ ರೀತಿಯಾಗಿ ಅಭಿಪ್ರಾಯ ಪಡುವರು. ಸಂಸಾರಿಗಳ ಮನಸ್ಸಿನಲ್ಲಿ ಸಾಕ್ಷಾತ್ಪರಮೇಶ್ವರನೇ ವಾಸವಾಗಿದ್ದಾನೆ. ಯೋಗಿಗಳ ಮತ್ತು ಜ್ಞಾನಿಗಳ ಮನಸ್ಸಿನಲ್ಲಿಯೂ, ಗುಣ ರಹಿತನಾದ ಪರಮಾತ್ಮನೇ ವಾಸವಾಗಿದ್ದಾನೆ. ಪರಮಾತ್ಮನನ್ನು ಬಿಟ್ಟು ಜಗತ್ತು ಬೇರೆಯಿಲ್ಲ. ಪರಮೇಶ್ವರನ ಮೂರು ಬಗೆಯ ಸ್ವರೂಪಗಳು ಲೋಕದಲ್ಲಿ

ಯೋಗಿನಾಂ ನಿಷ್ಕಲೋ ದೇವೋ ಜ್ಞಾನಿನಾಂ ಚ ಜಗನ್ಮಯಃ ।
ತ್ರಿವಿಧಂ ಪರಮೇಶಸ್ಯ ವಪು ರ್ಲೋಕೇ ಪ್ರಶಸ್ಯತೇ ॥೩೦॥

ನಿಷ್ಕಲಂ ಪ್ರಥಮಂ ಚೈಕಂ ತತಃ ಸಕಲ ನಿಷ್ಕಲಂ ।
ತೃತೀಯಂ ಸಕಲಂ ಚೈವ ನಾಽನ್ಯಥೇತಿ ದ್ವಿಜೋತ್ತಮಾಃ ॥೩೧॥

ಅರ್ಚಯಂತಿ ಮುಹುಃ ಕೇಚಿ ತ್ಸದಾ ಸಕಲ ನಿಷ್ಕಲಂ ।
ಸರ್ವಜ್ಞಂ ಹೃದಯೇ ಕೇಚಿ ಚ್ಛಿವಲಿಂಗೇ ವಿಭಾವಸೌ ॥೩೨॥

ಸಕಲಂ ಮುನಯಃ ಕೇಚಿ ತ್ಸದಾ ಸಂಸಾರ ವರ್ತಿನಃ ।
ಏವ ಮಭ್ಯರ್ಚಯಂ ತ್ಯೇವ ಸ ದಾರಾಃ ಸ ಸುತಾ ನರಾಃ ॥೩೩॥

ಯಥಾ ಶಿವಸ್ತಥಾ ದೇವೀ ಯಥಾ ದೇವೀ ತಥಾ ಶಿವಃ ।
ತಸ್ಮಾ ದಭೇದ ಬುದ್ಧ್ಯೈವ ಸಪ್ತ ವಿಂಶ ಪ್ರಭೇದತಃ ॥೩೪॥

ಯಜಂತಿ ದೇಹೇ ಬಾಹ್ಯೇ ಚ ಚತುಷ್ಕೋಣೇ ಷಡಸ್ರಕೇ ।
ದಶಾರೇ ದ್ವಾದಶಾರೇ ಚ ಷೋಡಶಾರೇ ತ್ರಿರಸ್ರಕೇ ॥೩೫॥

---

ಪೂಜೆಗೆ ಪಾತ್ರವಾಗಿವೆ. ಮೊದಲನೆಯದು ಗುಣಗಳಿಲ್ಲದ ಸ್ವರೂಪ. ಎರಡನೆಯದು ದೃಷ್ಟಿ ಭೇದದಿಂದ ಗುಣವುಳ್ಳದ್ದೂ, ಗುಣವಿಲ್ಲದ್ದೂ, ಆಗಿದೆ. ಕೆಲವರು ಗುಣಗಳಿಂದ ಕೂಡಿದ್ದೇ ಮೂರನೆಯ ರೂಪವಾಗಿದೆ ಎನ್ನುತ್ತಾರೆ. ಇವುಗಳನ್ನು ಬಿಟ್ಟು ಪರಮೇಶ್ವರನ ಸ್ವರೂಪವು ಬೇರೆಯಿಲ್ಲ. ಕೆಲವರು ಗುಣಗಳಿಂದ ಕೂಡಿದ್ದೂ, ಗುಣಗಳಿಲ್ಲದ್ದೂ ಆದ ಎರಡನೆಯ ಶರೀರವನ್ನು ಬಾರಿಬಾರಿಗೂ ಪೂಜಿಸುತ್ತಾರೆ. ಕೆಲವರು ಸರ್ವಜ್ಞನಾದ ಪ್ರಕಾಶಮಾನನಾದ, ಶಿವನನ್ನೇ ಮನಸ್ಸಿನಲ್ಲಿ ಧ್ಯಾನಮಾಡಿ, ಸೂರ್ಯನನ್ನೂ, ಲಿಂಗವನ್ನೂ ಪೂಜಿಸುತ್ತಾರೆ. ಯಾವಾಗಲೂ ಸಂಸಾರದಲ್ಲಿ ತೊಡಗಿರುವ ಮುನಿ ಜನರು ಮತ್ತು ಋಷಿಗಳೂ, ಗುಣಗಳಿಂದ ಕೂಡಿದ ಈಶ್ವರನ ಸ್ವರೂಪವನ್ನು ಪೂಜಿಸುತ್ತಾರೆ. ಹೀಗೆ ತಮ್ಮ ಹೆಂಡಿತಿ ಮಕ್ಕಳೊಂದಿಗೆ ಸಂಸಾರಿಗಳಾಗಿರುವ ಮನುಷ್ಯರು ಶಿವನನ್ನು ಪೂಜಿಸುತ್ತಾರೆ.

೩೪–೩೭. ಶಿವನು ತತ್ಸ್ವರೂಪನು ಹೇಗೋ ಪಾರ್ವತಿಯೂ, ಹಾಗೆಯೇ ಪಾರ್ವತಿಯು ಹೇಗೋ ಶಿವನೂ ಹಾಗಿಯೇ ಆದ್ದರಿಂದ ಶಿವ

ಸ ಸ್ವೇಚ್ಛಯಾ ಶಿವಃ ಸಾಕ್ಷಾದ್ದೇವ್ಯಾ ಸಾರ್ಧಂ ಸ್ಥಿತಃ ಪ್ರಭುಃ ।
ಸಂತಾರಣಾರ್ಥಂ ಚ ಶಿವಃ ಸದಸದ್ವ್ಯಕ್ತಿ ವರ್ಜಿತಃ ॥೩೭॥

ತಮೇಕ ಮಾಹು ರ್ದ್ವಿಗುಣಂ ಚ ಕೇಚಿತ್ ।
ಕೇಚಿತ್ತ್ವಮಾಹುಃ ತ್ರಿಗುಣಾಽತ್ಮಕಂ ಚ ॥
ಊಚು ಸ್ತಥಾ ತಂ ಚ ಶಿವಂ ತಥಾಽನ್ಯೇ ।
ಸಂಸಾರಿಣಂ ವೇದವಿದೋ ವದಂತಿ ॥೩೮॥

ಭಕ್ತ್ಯಾ ಚ ಯೋಗೇನ ಶುಭೇನ ಯುಕ್ತಾ ।
ವಿಪ್ರಾಃ ಸದಾ ಧರ್ಮರತಾ ವಿಶಿಷ್ಟಾಃ ॥

---

ಪಾರ್ವತಿಯರಿಬ್ಬರನ್ನೂ ಒಂದು ಎಂಬುದಾಗಿ ತಿಳಿದು, ಇವರ ಇಪ್ಪತ್ತೇಳು ಸ್ವರೂಪವನ್ನೂ ಭಾವಿಸಿ, ಮಾನವರು ತಮ್ಮ ಶರೀರದಲ್ಲಿಯೂ, ಹೊರಗೆ ಸೂರ್ಯ ಮಂಡಲವೇ ಮುಂತಾದ್ದರಲ್ಲಿಯೂ, ನಾಲ್ಕು ಕೋಣ ಗಳುಳ್ಳ ಅಥವಾ ಆರುದಳವುಳ್ಳ ಚಕ್ರದ ಮೇಲು ಭಾಗದಲ್ಲಿ ಅಥವಾ ಹತ್ತುದಳಗಳುಳ್ಳ ಅಥವಾ ಹದಿನಾರು ದಳಗಳುಳ್ಳ ಅಥವಾ ಮೂರು ದಳಗಳುಳ್ಳ, ನಾಲ್ಕು ಮೂಲೆಗಳುಳ್ಳ ಮಂಡಲ ಅಥವಾ ಚಕ್ರದಲ್ಲಿ ಶಿವನನ್ನು ಪೂಜಿಸುತ್ತಾರೆ. ಶಿವನು ಪಾರ್ವತೀ ಸಮೇತನಾಗಿ ಲೋಕಕ್ಕೆ ಸ್ವಾಮಿಯಾಗಿ ತನ್ನ ಇಚ್ಛೆಯಂತೆ ಲೋಕದ ನಡೆವಳಿಕೆಗಳನ್ನು ಸರಿಪಡಿ ಸುತ್ತಾ, ಕೋರಿಕೆಗಳನ್ನು ನೆರವೇರಿಸುತ್ತಾನೆ. ಮತ್ತು ಗುಣಗಳಿಲ್ಲದ ವಸ್ತುವೂ ಆಗಿರುತ್ತಾಗಿ, ಲೋಕದಲ್ಲಿರುವ ಸಮಸ್ತ ಜೀವರ ಮೋಕ್ಷಕ್ಕೂ ಕಾರಣ ಭೂತನಾಗಿದ್ದಾನೆ. ಕೆಲವರು ಶಿವನನ್ನು ಅದ್ವಿತೀಯ ತತ್ತ್ವ ಸ್ವರೂಪನೆಂದೂ, ಮತ್ತೆ ಕೆಲವರು ಬ್ರಹ್ಮಾ ವಿಷ್ಣು ರುದ್ರರೆಂಬ ತ್ರಿಮೂರ್ತಿ ಸ್ವರೂಪನೆಂದೂ, ಬೇರೆ ಕೆಲವರು ಪ್ರಕೃತಿ ಪುರುಷ ಸ್ವರೂಪ ನೆಂದೂ ಕೆಲವರು ಶಿವನನ್ನಾಗಿಯೂ ಮತ್ತೆ ಹಲವರು ಸಂಸಾರಿಯಾದ ಜಗತ್ತಿಗೆ ಜನಕನಾದ ಸ್ವಾಮಿಯನ್ನಾಗಿಯೂ ತಿಳಿಯುತ್ತಾರೆ.

೩೮–೪೯. ಭಕ್ತಿಯಿಂದಲೂ, ಮಂಗಳಕರವಾದ ಯೋಗಾಭ್ಯಾಸ ದಿಂದಲೂ, ಕೂಡಿರುವ, ಧರ್ಮಕಾರ್ಯದಲ್ಲಿ ಆಸಕ್ತರಾದ ವಿಶೇಷ ಜ್ಞಾನ

ಯಜಂತಿ ಯೋಗೇಶ ಮಶೇಷ ಮೂರ್ತಿಂ ।
ಷಡಸ್ರ ಮಧ್ಯೇ ಭಗವಂತ ಮೇವ ॥೩೮॥
ಯೇ ತತ್ರ ಪಶ್ಯಂತಿ ಶಿವಂ ತ್ರಿರಸ್ರೇ ।
ತ್ರಿತ್ವಾ ಮಧ್ಯೇ ತ್ರಿಗುಣಂ ತ್ರಿಯಕ್ಷಂ ॥
ತೇ ಯಾಂತಿ ಚೈನಂ ನ ಚ ಯೋಗಿನೋಽನ್ಯೇ ।
ತಯಾ ಚ ದೇವ್ಯಾ ಪುರುಷಂ ಪುರಾಣಂ ॥೩೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಶಿವಾದ್ವೈತ ವಿಚಾರ ವರ್ಣನಂ ನಾಮ ಪಂಚಸಪ್ತತಿತಮೋಽಧ್ಯಾಯಃ

---

ವುಳ್ಳ ಬ್ರಾಹ್ಮಣರು ಎಲ್ಲ ಬಗೆಯ ಯೋಗಗಳಿಗೆ ಅಧಿಪತಿಯೂ ಪೂಜ್ಯನೂ, ಆದ ಶಿವನನ್ನು ಆರುದಳಗಳುಳ್ಳ ಚಕ್ರದ ಮಧ್ಯಭಾಗದಲ್ಲಿ ಪೂಜಿಸುತ್ತಾರೆ. ಯಾವ ಭಕ್ತರು ಭ್ರೂ ಮಧ್ಯದಲ್ಲೂ ತ್ರಿಕೋಣದಲ್ಲೂ ಸಚ್ಚಿದಾನಂದನಾಗಿ ಮೂರು ಕಣ್ಣುಗಳಿಂದಲೂ ಕೂಡಿದ ಶಿವನನ್ನು ದರ್ಶನ ಮಾಡುತ್ತಾರೋ ಅವರು ಶಿವೈಕ್ಯ ರೂಪವಾದ ಮೋಕ್ಷವನ್ನೇ ಹೊಂದುವರು. ಪಾರ್ವತೀದೇವಿಯಿಂದ ಕೂಡಿದ ಲೋಕ ಪೂಜ್ಯನಾದ ಶಿವನನ್ನು ಈ ರೀತಿ ಧ್ಯಾನಿಸುವವರೇ ಯೋಗಿಗಳು. ಬೇರೊಬ್ಬರೂ ಅಲ್ಲವು. ಎಂದು ತಿಳಿಯಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಒಬ್ಬನೇ ಶಿವನು ಸಮಸ್ತಪ್ರಪಂಚರೂಪನಾಗಿ ತೋರುತ್ತಿದ್ದಾನೆ ಎಂಬ "ಶಿವಾದ್ವೈತ" ವಿಚಾರವರ್ಣನೆಯುಳ್ಳ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಷಷ್ಟಿಸಪ್ತತಿತಮೋಽಧ್ಯಾಯಃ

॥ ಸೂತ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಸ್ವೇಚ್ಛಾ ವಿಗ್ರಹ ಸಂಭವಂ ।
ಪ್ರತಿಷ್ಠಾಯಾಃ ಫಲಂ ಸರ್ವಂ ಸರ್ವಲೋಕ ಹಿತಾಯ ವೈ ॥ ೧ ॥
ಸ್ಕಂದೋಮಾ ಸ ಹಿತಂ ದೇವಮಾಸೀನಂ ಪರಮಾಸನೇ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಸರ್ವಾನ್ ಕಾಮಾನವಾಪ್ನುಯಾತ್ ॥
ಸ್ಕಂದೋಮಾ ಸ ಹಿತಂ ದೇವಂ ಸಂಪೂಜ್ಯ ವಿಧಿನಾ ಸಕೃತ್ ।
ಯತ್ಫಲಂ ಲಭತೇ ಮರ್ತ್ಯಃ ಸ್ತದ್ವದಾಮಿ ಯಥಾ ಶ್ರುತಂ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತಾರನೆಯ ಅಧ್ಯಾಯವು.

೧. ಸೂತನು ಈ ರೀತಿಯಾಗಿ ಹೇಳಿದನು. :– ಇನ್ನು ಮುಂದೆ ಶಿವನು ತನ್ನ ಇಚ್ಛೆಯಿಂದ ಧರಿಸಿದ ಮೂರ್ತಿಗಳನ್ನು ಪ್ರತಿಷ್ಠೆ ಮಾಡುವುದರಿಂದ ಬರುವ ಎಲ್ಲಾ ಫಲವನ್ನು ಎಲ್ಲಜನರ ಹಿತಕ್ಕಾಗಿಯೇ ನಾನು ಹೇಳುತ್ತೇನೆ.

೨. ಶ್ರೇಷ್ಠವಾದ ಆಸನದಲ್ಲಿ ಷಣ್ಮುಖ, ಮತ್ತು ಪಾರ್ವತಿ, ಇವರೊಡನೆ ಕೂಡಿರುವ ಶಿವನನ್ನು (ಶಿವ ವಿಗ್ರಹವನ್ನು) ಮಾಡಿ ಭಕ್ತಿಯಿಂದ ಪ್ರತಿಷ್ಠೆ ಮಾಡಿದವನು ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ.

೩. ಷಣ್ಮುಖ, ಮತ್ತು ಪಾರ್ವತಿ ಇವರೊಡನೆ ಇರುವ ಈಶ್ವರನನ್ನು ಶಾಸ್ತ್ರೋಕ್ತವಾಗಿ ಒಂದು ಸಾರಿ ಪೂಜಿಸಿ ಮನುಷ್ಯನು ಯಾವ ಫಲವನ್ನು ಹೊಂದುತ್ತಾನೆಯೋ ಅದನ್ನು ನಾನು ವೇದವ್ಯಾಸರಿಂದ ಕೇಳಿದ್ದಂತೆಯೇ ಹೇಳುವೆನು.

ಸೂರ್ಯಕೋಟಿ ಪ್ರತೀಕಾಶೈಃ ವಿಮಾನೈಃ ಸಾರ್ವಕಾಮಿಕೈಃ ।
ರುದ್ರಕನ್ಯಾ ಸಮಾಕೀರ್ಣೈ ರ್ಗೇಯ ನಾಟ್ಯ ಸಮನ್ವಿತೈಃ ॥ ೪ ॥
ಶಿವವತ್ ಕ್ರೀಡತೇ ಯೋಗೀ ಯಾವದಾಭೂತ ಸಂಪ್ಲವಂ ।
ತತ್ರ ಭುಕ್ತ್ವಾ ಮಹಾ ಭೋಗಾನ್ ವಿಮಾನೈಃ ಸಾರ್ವಕಾಮಿಕೈಃ ॥
ಔಮಂ ಕೌಮಾರ ಮೈಶಾನಂ ವೈಷ್ಣವಂ ಬ್ರಾಹ್ಮಮೇವ ಚ ।
ಪ್ರಾಜಾಪತ್ಯಂ ಮಹಾತೇಜಾ ಜನಲೋಕಂ ಮಹಸ್ತಥಾ ॥ ೬ ॥
ಐಂದ್ರ ಮಾಸಾದ್ಯ ಚೇಂದ್ರತ್ವಂ ಕೃತ್ವಾ ವರ್ಷಾಯುತಂ ಪುನಃ ।
ಭುಕ್ತ್ವಾ ಚೈವ ಭುವರ್ಲೋಕೇ ಭೋಗಾನ್ ದಿವ್ಯಾನ್ ಸುಶೋಭನಾನ್ ॥ ೭ ॥
ಮೇರು ಮಾಸಾದ್ಯ ದೇವಾನಾಂ ಭವನೇಷು ಪ್ರಮೋದತೇ ।
ಏಕಪಾದಂ ಚತುರ್ಬಾಹುಂ ತ್ರಿನೇತ್ರಂ ಶೂಲ ಸಂಯುತಂ ॥ ೮ ॥

---

೪. ಕೋಟಿ ಸೂರ್ಯರಂತಿರುವ ಮತ್ತು ಎಲ್ಲಾ ಬೇಕಾದ ವಸ್ತುಗಳಿರುವಂಥ, ಮತ್ತು ರುದ್ರಕನ್ನಿಕೆಯರಿಂದ ಸುತ್ತಲೂ ವ್ಯಾಪಿಸಿರುವುದಾಗಿಯೂ, ಸಂಗೀತ, ನಾಟ್ಯಗಳಿಂದ ಕೂಡಿದ್ದಾಗಿಯೂ, ಇರುವ ವಿಮಾನಗಳಿಂದ ಯೋಗಿಯು, (ಈಶ್ವರೋಪಾಸಕನು) ಈಶ್ವರನಂತೆಯೇ ಎಲ್ಲಾ ಪ್ರಾಣಿಗಳೂ ಲಯವಾಗುವ ಪರ್ಯಂತ (ಪ್ರಳಯ ಪರ್ಯಂತ) ಶಿವಲೋಕದಲ್ಲಿ ಕ್ರೀಡಿಸುತ್ತಾನೆ.

೫–೭. ಅಲ್ಲಿ ಹೆಚ್ಚಿನ ಸೌಖ್ಯಗಳನ್ನು ಅನುಭವಿಸಿ, ಎಲ್ಲಾ ಇಷ್ಟವಸ್ತುಗಳುಳ್ಳ ವಿಮಾನಗಳಿಂದ ಪಾರ್ವತಿ, ಷಣ್ಮುಖ, ಈಶ್ವರ, ಬ್ರಹ್ಮ, ಪ್ರಜಾಪತಿ, ಇವರು ಇರುವ ಲೋಕಗಳನ್ನು ಜನಲೋಕ, ಮಹರ್ಲೋಕ, ಇಂದ್ರ ಲೋಕಗಳನ್ನೂ ಪಡೆದು ಹತ್ತುಸಾವಿರ ವರ್ಷಕಾಲ ಪ್ರಭುತ್ವವನ್ನು (ಅಧಿಕಾರ) ಮಾಡಿ, ತಿರುಗಿ ಭುವರ್ಲೋಕದಲ್ಲಿ ಶ್ರೇಷ್ಠವಾದ ಮತ್ತು ರಮ್ಯವಾದ ಭೋಗಗಳನ್ನು ಅನುಭವಿಸಿ, ಮೇರು ಪರ್ವತಕ್ಕೆ ಬಂದು, ದೇವ ಗೃಹಗಳಲ್ಲಿ ಸುಖಪಡುತ್ತಾನೆ.

೮–೧೪. ಒಂದು ಕಾಲೂ, ನಾಲ್ಕು ಭುಜಗಳೂ, ಮೂರು ಕಣ್ಣು

ಸೃಷ್ಟ್ವಾ ಸ್ಥಿತಂ ಹರಿಂ ವಾಮೇ ದಕ್ಷಿಣೇ ಚತುರಾನನಂ ।
ಅಷ್ಟಾವಿಂಶತಿ ರುದ್ರಾಣಾಂ ಕೋಟೀಃ ಸರ್ವಾಂಗ ಸುಪ್ರಭಂ ॥ ೯ ॥

ಪಂಚ ವಿಂಶತಿಕಂ ಸಾಕ್ಷಾತ್ ಪುರುಷಂ ಹೃದಯಾತ್ತಥಾ ।
ಪ್ರಕೃತಿಂ ವಾಮತಶ್ಚೈವ ಬುದ್ಧಿಂ ವೈ ಬುದ್ಧಿದೇಶತಃ ॥೧೦॥

ಅಹಂಕಾರ ಮಹಂಕಾರಾತ್ ತನ್ಮಾತ್ರಾಣಿ ತು ತತ್ರ ವೈ ।
ಇಂದ್ರಿಯಾ ಣೀಂದ್ರಿಯಾದೇವ ಲೀಲಯಾ ಪರಮೇಶ್ವರಂ ॥೧೧॥

ಪೃಥಿವೀಂ ಪಾದ ಮೂಲಾತ್ತು ಗುಹ್ಯದೇಶಾ ಜ್ಜಲಂ ತಥಾ ।
ನಾಭಿದೇಶಾ ತ್ತಥಾ ವಹ್ನಿಂ ಹೃದಯಾ ದ್ಭಾಸ್ಕರಂ ತಥಾ ॥೧೨॥

ಕಂಠಾತ್ ಸೋಮಂ ತಥಾಽಽತ್ಮಾನಂ ಭ್ರೂಮಧ್ಯಾ ನ್ಮಸ್ತಕಾದ್ದಿವಂ।
ಸೃಷ್ಟ್ವೈವಂ ಸಂಸ್ಥಿತಂ ಸಾಕ್ಷಾತ್ ಜಗತ್ ಸರ್ವಂ ಚರಾಚರಂ ॥

---

ಗಳೂ ಇರುವಂಥ, ಶೂಲಾಯುಧದಿಂದ ಕೂಡಿದವನಾಗಿಯೂ ಎಡದಲ್ಲಿ ವಿಷ್ಣುವನ್ನೂ, ಬಲದಲ್ಲಿ ಬ್ರಹ್ಮನನ್ನೂ, ಇಪ್ಪತ್ತೆಂಟು ಜನ ರುದ್ರರನ್ನೂ ಕೋಟಿಸಲ ಸೃಷ್ಟಿಮಾಡಿದಂಥಾವನಾಗಿಯೂ, ಎಲ್ಲಾ ಭಾಗದಲ್ಲೂ ಪ್ರಕಾಶಿಸುವ, ಇಪ್ಪತ್ತೈದು ತತ್ವ (ವಸ್ತು) ಗಳಿಂದೊಡಗೂಡಿದ ಜೀವ ನನ್ನು ತನ್ನ ಹೃದಯದಿಂದಲೂ, ಎಡಭಾಗದಿಂದ ಪ್ರಕೃತಿಯನ್ನೂ, ಮೂಲಕಾರಣವನ್ನೂ, ಬುದ್ಧಿಸ್ಥಾನವಾದ ಹೃದಯದಿಂದ ಬುದ್ಧಿ ಯನ್ನೂ, ಅಹಂಕಾರನ್ನು ಅಹಂಭಾವದಿಂದಲೂ, ಈ ಅಹಂಕಾರ ದಿಂದಲೇ ಪಂಚತನ್ಮಾತ್ರ ವಸ್ತುಗಳನ್ನೂ, ಇಂದ್ರಿಯವಿರುವ ಸ್ಥಳದಿಂದ ಇಂದ್ರಿಯಗಳನ್ನೂ, ಯಾವ ಆಯಾಸವೂ ಇಲ್ಲದೇ ಈಶ್ವರ ತತ್ವವನ್ನೂ ಕಾಲಿನ ಬುಡದಿಂದ ಭೂಮಿಯನ್ನೂ, ಮರ್ಮಸ್ಥಾನದಿಂದ ನೀರನ್ನೂ, ಹೊಕ್ಕುಳಿಂದ ಬೆಂಕಿಯನ್ನೂ, ಹೃದಯದಿಂದ ಸೂರ್ಯನನ್ನೂ, ಕುತ್ತಿಗೆಯಿಂದ ಚಂದ್ರನನ್ನೂ, ಹುಬ್ಬುಗಳ ನಡುವಿನಿಂದ ರುದ್ರನನ್ನೂ, ತಲೆಯಿಂದ, ಅಂತರಿಕ್ಷವನ್ನೂ, ಹೀಗೆಯೇ ಸ್ಥಾವರ ಜಂಗಮವಾದ ಜಗತ್ತನ್ನೆಲ್ಲವನ್ನೂ ತಾನೇ ನೇರವಾಗಿ ಸೃಷ್ಟಿಸಿದಂಥಾವನಾಗಿಯೂ, ಮತ್ತು ಎಲ್ಲವನ್ನೂ

ಸರ್ವಜ್ಞಂ ಸರ್ವಗಂ ದೇವಂ ಕೃತ್ವಾ ವಿದ್ಯಾ ವಿಧಾನತಃ ।
ಪ್ರತಿಷ್ಠಾಪ್ಯ ಯಥಾನ್ಯಾಯಂ ಶಿವಸಾಯುಜ್ಯ ಮಾಪ್ನುಯಾತ್ ॥
ತ್ರಿಪಾದಂ ಸಪ್ತಹಸ್ತಂ ಚ ಚತುಶ್ಶೃಂಗಂ ದ್ವಿಶೀರ್ಷಕಂ ।
ಕೃತ್ವಾ ಯಜ್ಞೇಶ ಮೀಶಾನಂ ವಿಷ್ಣುಲೋಕೇ ಮಹೀಯತೇ ॥೧೫॥
ತತ್ರ ಭುಕ್ತ್ವಾ ಮಹಾ ಭೋಗಾನ್ ಕಲ್ಪ ಲಕ್ಷಂ ಸುಖೀ ನರಃ ।
ಕ್ರಮಾ ದಾಗತ್ಯ ಲೋಕೇಽಸ್ಮಿನ್ ಸರ್ವ ಯಜ್ಞಾಂತಗೋ ಭವೇತ್॥
ವೃಷಾರೂಢಂ ತು ಯಃ ಕುರ್ಯಾತ್ ಸೋಮಂ ಸೋಮಾರ್ಧ ಭೂಷಣಂ ।
ಹಯ ಮೇಧಾಯುತಂ ಕೃತ್ವಾ ಯತ್ಪುಣ್ಯಂ ತದವಾಪ್ಯ ಸಃ ॥೧೭॥
ಕಾಂಚನೇನ ವಿಮಾನೇನ ಕಿಂಕಿಣೀ ಜಾಲ ಮಾಲಿನಾ ।
ಗತ್ವಾ ಶಿವಪುರಂ ರಮ್ಯಂ ತತ್ರೈವ ಸ ವಿಮುಚ್ಯತೇ ॥೧೮॥

---

ತಿಳಿದವನಾಗಿಯೂ ಮತ್ತು ಎಲ್ಲಾ ಕಡೆಯಲ್ಲಿಯೂ ಇರುವವನಾದ ಈಶ್ವರನನ್ನು, ಶಿಲ್ಪಕಲೆಯ ನಿಯಮದಂತೆ ರಚಿಸಿ, ಶಾಸ್ತ್ರನಿಯಮಕ್ಕೆ ಅನುಸಾರವಾಗಿ ಪ್ರತಿಷ್ಠೆ ಮಾಡಿದಲ್ಲಿ ಅವನು ಶಿವನ ಸಾಯುಜ್ಯ ರೂಪ ಮುಕ್ತಿಯನ್ನು ಹೊಂದುವನು.

೧೫–೧೬. ಮೂರು ಕಾಲುಗಳೂ, ಏಳು ಕೈಗಳೂ, ನಾಲ್ಕು ಕೋಡುಗಳೂ, ಎರಡು ತಲೆಗಳೂ ಇರುವ ಯಜ್ಞೇಶ್ವರ ಸ್ವರೂಪನಾದ ಈಶ್ವರವಿಗ್ರಹವನ್ನು ಮಾಡಿ, ಪ್ರತಿಷ್ಠೆ ಮಾಡಿದಲ್ಲಿ, ಅವನು ವಿಷ್ಣುಲೋಕದಲ್ಲಿ ಪೂಜಿಸಲ್ಪಡುತ್ತಾನೆ. ಅಲ್ಲಿ ಅವನು ಒಂದುಲಕ್ಷ ಕಲ್ಪಕಾಲ ಸುಖವನ್ನು ಅನುಭವಿಸಿ, ಸುಖವಾಗಿದ್ದ ಆ ಮನುಷ್ಯನು ಕಾಲಕ್ರಮದಲ್ಲಿ ಬಂದು ಈ ಲೋಕಗಳಲ್ಲಿ ಎಲ್ಲಾ ಯಾಗಗಳ ಕೊನೆಯನ್ನು ಮುಟ್ಟುವನು. (ಎಂದರೆ ಎಲ್ಲಾ ಯಾಗಗಳನ್ನೂ ಮಾಡಿ ಪೂರೈಸುವನೆಂದು ತಾತ್ಪರ್ಯ).

೧೭–೧೮. ಬಸವನ ಮೇಲೆ ಕುಳಿತುಕೊಂಡಿರುವ, ಮತ್ತು ಅರ್ಧಚಂದ್ರನನ್ನು ಅಲಂಕಾರ ಮಾಡಿ ಕೊಂಡಿರುವ ಪಾರ್ವತೀ ದೇವಿಯೊಡನೆ

**ನಂದಿನಾ ಸಹಿತಂ ದೇವಂ ಸಾಂಬಂ ಸರ್ವಗಣೈರ್ವೃತಂ ।**
**ಕೃತ್ವಾ ಯತ್ಫಲ ಮಾಪ್ನೋತಿ ವಕ್ಷ್ಯೇ ತದ್ವೈ ಯಥಾ ಶ್ರುತಂ॥೧೯॥**
**ಸೂರ್ಯ ಮಂಡಲ ಸಂಕಾಶೈ ರ್ವಿಮಾನೈ ರ್ವೃಷ ಸಂಯುತೈಃ ।**
**ಅಪ್ಸರೋಗಣ ಸಂಕೀರ್ಣೈ ರ್ದೇವ ದಾನವ ದುರ್ಲಭೈಃ ॥೨೦॥**
**ನೃತ್ಯದ್ಭಿ ರಪ್ಸರಃ ಸಂಘೈಃ ಸರ್ವತಃ ಸರ್ವ ಶೋಭಿತೈಃ ।**
**ಗತ್ವಾ ಶಿವಪುರಂ ದಿವ್ಯಂ ಗಾಣ ಪತ್ಯ ಮವಾಪ್ನುಯಾತ್ ॥೨೧॥**
**ನೃತ್ಯಂತಂ ದೇವದೇವೇಶಂ ಶೈಲಜಾ ಸಹಿತಂ ಪ್ರಭುಂ ।**
**ಸಹಸ್ರ ಬಾಹುಂ ಸರ್ವಜ್ಞಂ ಚತುರ್ಬಾಹು ಮಥಾಪಿ ವಾ ॥೨೨॥**
**ಭೃಗ್ವಾದ್ಯೈ ರ್ಭೂತ ಸಂಘೈಶ್ಚ ಸಂವೃತಂ ಪರಮೇಶ್ವರಂ ।**
**ಶೈಲಜಾ ಸಹಿತಂ ಸಾಕ್ಷಾತ್ ವೃಷಭಧ್ವಜ ಮೀಶ್ವರಂ ॥೨೩॥**

---

ಇರುವ ಶಿವನನ್ನು ಯಾವನು ಧ್ಯಾನಮಾಡುವನೋ, ಅವನು ಹತ್ತು ಸಾವಿರ ಅಶ್ವಮೇಧ ಯಾಗವನ್ನು ಮಾಡಿದರೆ ಯಾವ ಪುಣ್ಯವು ಬರುವುದೋ ಅದನ್ನುಹೊಂದಿ, ಕಿರಿಗೆಜ್ಜೆಗಳಮಾಲೆಯನ್ನು ಗೊಂಚಲಾಗಿ ಕಟ್ಟಿರುವ ಚಿನ್ನದ ವಿಮಾನದಿಂದ ಮನೋಹರವಾದ ಶಿವಪುರಕ್ಕೆ ಹೋಗಿ, ಅಲ್ಲಿಯೇ ಮುಕ್ತನಾಗುತ್ತಾನೆ.

೧೯. ನಂದಿಕೇಶ್ವರನೊಡನೆ ಇರುವಂಥ, ಮತ್ತು ಪಾರ್ವತಿಯೊಡನೆ ಕೂಡಿ ಇರುವವನಾದ, ಎಲ್ಲಾ ಪ್ರಮಥ ಗಣಗಳಿಂದ ಕೂಡಿದ ಈಶ್ವರನನ್ನು ಧ್ಯಾನಮಾಡಿ ಯಾವ ಫಲವನ್ನು ಹೊಂದುತ್ತಾನೆಯೋ ಅದನ್ನು ನಾನು ಕೇಳಿದ್ದಂತೆಯೇ ಹೇಳುತ್ತೇನೆ.

೨೦–೨೧. ಸೂರ್ಯಮಂಡಲಕ್ಕೆ ಸಮಾನವಾಗಿಯೂ, ಗೂಳಿಗಳನ್ನು ಕಟ್ಟಿದ್ದಾಗಿಯೂ, ಅಪ್ಸರ ಸ್ತ್ರೀಯರಿಂದ ವ್ಯಾಪಿಸಲ್ಪಟ್ಟದ್ದಾಗಿಯೂ, ದೇವತೆಗಳಿಗೂ, ರಾಕ್ಷಸರಿಗೂ, ಸಿಕ್ಕದ ವಿಮಾನಗಳಿಂದ, ಎಲ್ಲಾ ಆಭರಣಗಳಿಂದ ಅಲಂಕರಿಸಲ್ಪಟ್ಟಂಥ, ಮತ್ತು ನರ್ತನ ಮಾಡುತ್ತಲಿರುವ ಅಪ್ಸರ ಸ್ತ್ರೀಯರ ಗುಂಪುಗಳ ಜೊತೆಯಲ್ಲಿ ರಮ್ಯವಾದ ಶಿವಪುರಕ್ಕೆ ಹೋಗಿ, ಅಲ್ಲಿ ಗಣಗಳ ಮೇಲೆ ಪ್ರಭುತ್ವವನ್ನು ವಹಿಸುವನು.

೨೨–೨೪. ನರ್ತನ ಮಾಡುತ್ತಲಿರುವ ದೇವತೆಗಳಿಗೂ ಪೂಜ್ಯನಾದ,

ಬ್ರಹ್ಮೇಂದ್ರ ವಿಷ್ಣು ಸೋಮಾದ್ಯೈಃ ಸದಾ ಸರ್ವೈರ್ನಮಸ್ಕೃತಂ ।
ಮಾತೃಭಿ ರ್ಮುನಿಭಿ ಶ್ಚೈವ ಸಂವೃತಂ ಪರಮೇಶ್ವರಂ ॥೨೪॥
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಯತ್ಫಲಂ ತದ್ವದಾಮ್ಯಹಂ ।
ಸರ್ವಯಜ್ಞ ತಪೋ ದಾನ ತೀರ್ಥ ದೇವೇಷು ಯತ್ಫಲಂ ॥೨೫॥
ತತ್ಫಲಂ ಕೋಟಿ ಗುಣಿತಂ ಲಬ್ಧ್ವಾ ಯಾತಿ ಶಿವಂ ಪರಂ ।
ತತ್ರ ಭುಕ್ತ್ವಾ ಮಹಾ ಭೋಗಾನ್ ಯಾವ ದಾಭೂತ ಸಂಪ್ಲವಂ ॥
ಸೃಷ್ಟ್ಯಂತರೇ ಪುನಃ ಪ್ರಾಪ್ತೇ ಮಾನವಂ ಪದ ಮಾಪ್ನುಯಾತ್ ।
ನಗ್ನಂ ಚತುರ್ಭುಜಂ ಶ್ವೇತಂ ತ್ರಿನೇತ್ರಂ ಸರ್ಪ ಮೇಖಲಂ ॥೨೭॥
ಕಪಾಲ ಹಸ್ತಂ ದೇವೇಶಂ ಕೃಷ್ಣ ಕುಂಚಿತ ಮೂರ್ಧಜಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಸಾಯುಜ್ಯ ಮಾಪ್ನುಯಾತ್ ॥

---

ಇಂದ್ರನಿಗೂ ಪ್ರಭುವಾದ, ಪಾರ್ವತಿಯೊಡನೆ ಇರುವ, ಮತ್ತು ಸಾವಿರ ಭುಜವುಳ್ಳವನೂ, ಎಲ್ಲವನ್ನೂ ತಿಳಿದವನೂ, ಆಗಿ ಇರುವ, ಶಿವನನ್ನೋ ಅಥವಾ ನಾಲ್ಕು ಭುಜವುಳ್ಳವನಾಗಿಯೂ, ಭೃಗುವೇ ಮುಂತಾದ ಋಷಿಗಳಿಂದಲೂ, ಮತ್ತು ಭೂತಗಳ ಗುಂಪುಗಳಿಂದಲೂ ಸುತ್ತುವರಿಸಲ್ಪಟ್ಟವನಾಗಿಯೂ, ಪಾರ್ವತಿಯಿಂದೊಡಗೂಡಿಯೂ, ವೃಷಭವೇ (ಎತ್ತು) ಚಿಹ್ನೆಯಾಗಿರುವ ಈಶ್ವರನನ್ನೋ ಅಥವಾ ಬ್ರಹ್ಮ, ವಿಷ್ಣು, ಇಂದ್ರ, ಚಂದ್ರ, ಮುಂತಾದವರಿಂದಲೂ, ಎಲ್ಲರಿಂದಲೂ, ಯಾವಾಗಲೂ ನಮಸ್ಕರಿಸಲ್ಪಟ್ಟವನಾಗಿಯೂ, ಬ್ರಾಹ್ಮೀ ಮುಂತಾದ ಸಪ್ತ ಮಾತೃಕಾ ದೇವಿಯರಿಂದಲೂ, ಋಷಿಗಳಿಂದಲೂ ವರಿಸಲ್ಪಟ್ಟವನಾಗಿರುವ, ಈಶ್ವರನನ್ನೋ ಮಾಡಿ ಭಕ್ತಿಯಿಂದ ಪ್ರತಿಷ್ಠೆ ಮಾಡಿದಲ್ಲಿ ಬರುವ ಯಾವ ಫಲವಿದೆಯೋ ಅದನ್ನು ನಾನು ಹೇಳುವೆನು.

೨೫–೨೬. ಎಲ್ಲಾ ಯಾಗಗಳಲ್ಲೂ, ತಪಸ್ಸುಗಳಲ್ಲೂ, ದಾನಗಳಲ್ಲೂ, ತೀರ್ಥಕ್ಷೇತ್ರಗಳಲ್ಲೂ, ಯಾವ ಫಲವು ಲಭಿಸುವುದೋ ಆ ಫಲವನ್ನು ಒಂದುಕೋಟಿಯಿಂದ ಗುಣಿಸಿದರೆ, ಆಗುವಷ್ಟು ಫಲವನ್ನು ಹೊಂದಿ, ಉತ್ತಮ ಸ್ಥಾನಕ್ಕೆ ಹೋಗುತ್ತಾನೆ. ಎಲ್ಲ ಪ್ರಾಣಿಗಳೂ ಲಯವಾಗುವ ಪರ್ಯಂತ ಅಲ್ಲಿ ಉತ್ತಮವಾದ ಸೌಖ್ಯವನ್ನು ಅನುಭವಿಸಿ, ಪುನಃ ಬೇರೆ ಸೃಷ್ಟಿಯಾಗುವಾಗ ಮನುವಿನ ಸ್ಥಾನವನ್ನೂ ಪಡೆಯುತ್ತಾನೆ.

೨೭–೨೮. ದಿಗಂಬರನಾಗಿಯೂ, ನಾಲ್ಕು ಭುಜವುಳ್ಳವನಾಗಿಯೂ,

ಇಭೇಂದ್ರ ದಾರಕಂ ದೇಹಂ ಸಾಂಬಂ ಸಿದ್ಧಾರ್ಥದಂ ಪ್ರಭುಂ ।
ಸುಧೂಮ್ರ ವರ್ಣಂ ರಕ್ತಾಕ್ಷಂ ತ್ರಿನೇತ್ರಂ ಚಂದ್ರ ಭೂಷಣಂ ॥
ಕಾಕ ಪಕ್ಷ ಧರಂ ಮೂರ್ಧ್ನಾ ನಾಗಟಂಕ ಧರಂ ಹರಂ ।
ಸಿಂಹಾಜಿನೋ ತ್ತರೀಯಂ ಚ ಮೃಗ ಚರ್ಮಾಂಬರಂ ಪ್ರಭುಂ॥೩೦॥
ತೀಕ್ಷ್ಣದಂಷ್ಟ್ರಂ ಗದಾಹಸ್ತಂ ಕಪಾಲೋದ್ಯತ ಪಾಣಿನಂ ।
ಹುಂ ಫಟ್ ಕಾರೇ ಮಹಾಶಬ್ದ ಶಬ್ದಿತಾಖಿಲ ದಿಙ್ಮುಖಂ ॥೩೧॥
ಪುಂಡರೀ ಕಾಜಿನಂ ದೋರ್ಭ್ಯಾಂ ಬಿಭ್ರ(ಂ)ತಂ ಕಂಬು ಕಂ ತಥಾ ।
ಹಸಂತಂ ಚ ನದಂತಂ ಚ ಪಿಬಂತಂ ಕೃಷ್ಣಸಾಗರಂ ॥೩೨॥
ನೃತ್ಯಂತಂ ಭೂತಸಂಘೈಶ್ಚ ಗಣಸಂಘೈಃ ಸ್ವಲಂಕೃತಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಯಥಾ ವಿಭವ ವಿಸ್ತರಂ ॥೩೩॥

---

ಶುಭ್ರವಾಗಿಯೂ, ಮೂರು ಕಣ್ಣು ಉಳ್ಳವನಾಗಿಯೂ, ನಾಗರಹಾವೇ ಉಡಿದಾರವಾಗಿ ಉಳ್ಳವನಾಗಿಯೂ, ಕೈಯ್ಯಲ್ಲಿ ಕಪಾಲವನ್ನು ಹಿಡಿದವನಾಗಿಯೂ, ದೇವತೆಗಳಿಗೂ ನಿಯಾಮಕನಾಗಿಯೂ, ಕಪ್ಪಾದ ಮತ್ತು ಮೋಟಾದ (ಅಥವಾ ಒಟ್ಟುಗೂಡಿದ) ಕೂದಲುಳ್ಳವನಾಗಿಯೂ, ಇರುವ ಶಿವನನ್ನು ರಚಿಸಿ ಭಕ್ತಿಯಿಂದ ಪ್ರತಿಷ್ಠೆಮಾಡಿದರೆ ಆ ಭಕ್ತನು ಶಿವ ಸಾಯುಜ್ಯವನ್ನು ಹೊಂದುತ್ತಾನೆ.

೨೯–೩೩. ಗಜಾಸುರನನ್ನು ಸೀಳಿದವನಾಗಿಯೂ, ಪ್ರಕಾಶಿಸುತ್ತಿರುವವನಾಗಿಯೂ, ಪಾರ್ವತಿಯೊಡನೆ ಕೂಡಿ ಇರುವವನೂ, ದೇವತೆಗಳಿಗೂ ಇಷ್ಟಾರ್ಥವನ್ನು ಕೊಡುವವನಾಗಿಯೂ, ಕಪ್ಪು ಮಿಶ್ರವಾದ ಕೆಂಪು ಬಣ್ಣದ ಮೈಯುಳ್ಳವನೂ, ಮೂರು ಕಣ್ಣುಳ್ಳವನಾಗಿಯೂ, ಬಾಲಚಂದ್ರನಿಂದ ಅಲಂಕಾರ ಮಾಡಿಕೊಂಡಿರುವವನೂ, ತಲೆಯಲ್ಲಿ ಶಿಖೆಯನ್ನು ಇಟ್ಟುಕೊಂಡವನಾಗಿಯೂ, ಆನೆಯದಂತ ಮತ್ತು ಗುದ್ದಲಿಯನ್ನು ಹಿಡಿದವನಾಗಿಯೂ, ಸಿಂಹದ ಚರ್ಮವನ್ನು ಹೊದ್ದುಕೊಂಡಿರುವವನೂ, ಜಿಂಕೆಯ ಚರ್ಮವನ್ನು ಬಟ್ಟೆಯಾಗಿ ಧರಿಸಿದವನಾಗಿಯೂ, ಸಮರ್ಥನಾಗಿಯೂ, ಹರಿತವಾದ ಕೋರೆ ದಾಡೆಯುಳ್ಳವನಾಗಿಯೂ ಕೈಯ್ಯಲ್ಲಿ ಗದೆಯನ್ನು

ಸರ್ವ ವಿಘ್ನಾನತಿಕ್ರಮ್ಯ ಶಿವಲೋಕೇ ಮಹೀಯತೇ ।
ತತ್ರ ಭುಕ್ತ್ವಾ ಮಹಾಭೋಗಾನ್ ಯಾವದಾ ಭೂತ ಸಂಪ್ಲವಂ ॥
ಜ್ಞಾನಂ ವಿಚಾರತೋ ಲಬ್ಧ್ವಾ ರುದ್ರೇಭ್ಯ ಸ್ತತ್ರ ಮುಚ್ಯತೇ ।
ಅರ್ಧ ನಾರೀಶ್ವರಂ ದೇವಂ ಚತುರ್ಭುಜ ಮನುತ್ತಮಂ ॥೩೫॥
ವರದಾ ಭಯ ಹಸ್ತಂಚ ಶೂಲ ಪದ್ಮಧರಂ ಪ್ರಭುಂ ।
ಸ್ತ್ರೀಪುಂ ಭಾವೇನ ಸಂಸ್ಥಾನಂ ಸರ್ವಾಭರಣ ಭೂಷಿತಂ ॥೩೬॥
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಲೋಕೇ ಮಹೀಯತೇ ।
ತತ್ರ ಭುಕ್ತ್ವಾ ಮಹಾಭೋಗಾನ್ ಅಣಿಮಾದಿ ಗುಣೈರ್ಯುತಃ ॥೩೭

---

ಧರಿಸಿದವನೂ. ಇನ್ನೊಂದು ಕೈಯಲ್ಲಿ ಕಪಾಲವನ್ನು ಧರಿಸಿದವನೂ, ಹುಂ ಫಟ್ ಎಂದು ಜಪಹೋಮಗಳಲ್ಲಿ ಶಬ್ದಮಾಡುವಾಗ ಆ ಶಬ್ದದಿಂದ ಎಲ್ಲಾ ದಿಕ್ಕುಗಳೂ ಧ್ವನಿಮಾಡುವಂತೆ ಮಾಡುವವನಾದ, ಸಿಂಹದ ಚರ್ಮವನ್ನೂ ಎರಡು ಭುಜಗಳಿಂದಲೂ ಧರಿಸಿ ಮಂದಹಾಸವುಳ್ಳವನಾಗಿ, ನಗುತ್ತಲೂ, ಕುಣಿಯುತ್ತಲೂ, ಭೂತ ಮತ್ತು ಪ್ರಮಥಗಣಗಳಿಂದ ಶೋಭಿಸುತ್ತಲೂ ಇರುವ ಶಿವನ ವಿಗ್ರಹವನ್ನು ಮಾಡಿ, ಭಕ್ತಿಯಿಂದ ತನ್ನ ಶಕ್ತಿಯನ್ನು ಅನುಸರಿಸಿ, ಹೆಚ್ಚಾದ ವೈಭವದಿಂದ ಪ್ರತಿಷ್ಠೆಮಾಡುವ ಭಕ್ತನು ಎಲ್ಲಾ ವಿಘ್ನಗಳನ್ನೂ ದಾಟಿದವನಾಗಿ, ಶಿವಲೋಕಕ್ಕೆ ಹೋಗಿ ಅಲ್ಲಿಯೂ ಪೂಜಿಸಲ್ಪಡುತ್ತಾನೆ. ಅಲ್ಲಿ ಹೆಚ್ಚಿನ ಸೌಖ್ಯಗಳನ್ನೂ ಎಲ್ಲಾ ಪ್ರಾಣಿಗಳೂ ಲಯವಾಗುವವರೆಗೂ ಅನುಭವಿಸಿ, ರುದ್ರರಿಂದ ವೇದಾಂತ ಶ್ರವಣಮಾಡಿ ದೊರೆತ ಜ್ಞಾನದಿಂದ ಮುಕ್ತಿಯನ್ನೂ ಪಡೆಯುತ್ತಾನೆ.

೩೫–೩೭. ನಾಲ್ಕು ತೋಳುಗಳುಳ್ಳವನಾಗಿಯೂ, ಅತಿಶ್ರೇಷ್ಠನೂ, ವರದ ಮತ್ತು ಅಭಯ ಮುದ್ರೆಯುಳ್ಳ ಕೈಯುಳ್ಳವನೂ, ತ್ರಿಶೂಲ ಮತ್ತು ಕಮಲವನ್ನು ಹಿಡಿದುಕೊಂಡು ಎಲ್ಲಕ್ಕೂನಿಯಾಮಕನಾಗಿರುವ, ಹೆಂಗಸು ಮತ್ತು ಗಂಡಸಿನ ಅಂಗಸನ್ನಿವೇಶ ವುಳ್ಳವ

ಆ ಚಂದ್ರ ತಾರಕಂ ಜ್ಞಾನಂ ತತೋ ಲಬ್ಧ್ವಾ ವಿಮುಚ್ಯತೇ ।
ಯಃ ಕುರ್ಯಾದ್ದೇವ ದೇವೇಶಂ ಸರ್ವಜ್ಞಂ ಲಕುಲೀಶ್ವರಂ ॥೩೮॥
ವೃತಂ ಶಿಷ್ಯ ಪ್ರಶಿಷ್ಯೈಶ್ಚ ವ್ಯಾಖ್ಯಾನೋದ್ಯತ ಪಾಣಿನಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಲೋಕಂ ಸ ಗಚ್ಛತಿ ॥೩೯॥
ಭುಕ್ತ್ವಾತು ವಿಪುಲಾಂ ಸ್ತತ್ರ ಭೋಗಾನ್ ಯುಗಶತಂ ನರಃ ।
ಜ್ಞಾನಯೋಗಂ ಸಮಾಸಾದ್ಯ ತತ್ರೈವ ಚ ವಿಮುಚ್ಯತೇ ॥೪೦॥
ಪೂರ್ವದೇವಾ ಮರಾಣಾಂಚ ಯತ್ ಸ್ಥಾನಂ ಸಕಲೇಪ್ಸಿತಂ ।
ಕೃತ ಮುದ್ರಸ್ಯ ದೇವಸ್ಯ ಚಿತಾ ಭಸ್ಮಾನು ಲೇಪಿನಃ ॥೪೧॥

---

ನಾಗಿರುವ, ಎಲ್ಲಾ ಆಭರಣಗಳಿಂದ ಅಲಂಕರಿಸಲ್ಪಟ್ಟವನಾದ, ಅರ್ಧನಾರೀಶ್ವರನೆಂಬ ಈಶ್ವರ ಮೂರ್ತಿಯನ್ನು ಮಾಡಿ ಭಕ್ತಿಯಿಂದ ಪ್ರತಿಷ್ಠೆಮಾಡಿದಲ್ಲಿ, ಆ ಭಕ್ತನು ಶಿವಲೋಕದಲ್ಲಿಯೂ ಪೂಜಿಸಲ್ಪಡುತ್ತಾನೆ. ಅಲ್ಲಿ ಅಣಿಮ ಮುಂತಾದ ಅಷ್ಟೈಶ್ವರ್ಯಗಳಿಂದ ಕೂಡಿ, ದಿವ್ಯಸೌಖ್ಯಗಳನ್ನು ಚಂದ್ರ ನಕ್ಷತ್ರಗಳಿರುವ ಪರ್ಯಂತ ಅನುಭವಿಸಿ, ಕಡೆಗೆ ಜ್ಞಾನವನ್ನು ಹೊಂದಿ ಮುಕ್ತನಾಗುತ್ತಾನೆ.

೩೮–೩೯. ಯಾವನು ದೇವತೆಗಳಿಗೆಲ್ಲರಿಗೂ ದೇವರಾದ, ಇಂದ್ರಾದಿಗಳಿಗೂ ನಿಯಾಮಕನಾಗಿಯೂ, ಎಲ್ಲವನ್ನು ತಿಳಿದವನಾಗಿಯೂ, ಶಿಷ್ಯರಿಂದ ಮತ್ತು ಅವರ ಶಿಷ್ಯರಿಂದ ಕೂಡಿದವನಾಗಿಯೂ, (ಅರ್ಥ ತಾತ್ಪರ್ಯಗಳನ್ನು ಹೇಳುವುದರಲ್ಲಿ) ಟೀಕೆ ಮಾಡುವ ಚಿನ್ಮುದ್ರೆಯಿಂದ ಕೂಡಿದ ಕೈಯುಳ್ಳವನಾಗಿಯೂ, ಇರುವ ಲಕುಲೀಶ್ವರ ಮೂರ್ತಿಯನ್ನು ಮಾಡಿ, ಭಕ್ತಿಯಿಂದ ಪ್ರತಿಷ್ಠೆಮಾಡುವ, ಭಕ್ತನು ಶಿವಲೋಕಕ್ಕೆ ಹೋಗುವನು.

೪೦. ಅಲ್ಲಿ ನೂರು ಯುಗ ಕಾಲ ಪರ್ಯಂತ ಹೆಚ್ಚಿನ ಸೌಖ್ಯಗಳನ್ನು ಅನುಭವಿಸಿ ಆ ಮನುಷ್ಯನು, ಜ್ಞಾನ ಯೋಗದಿಂದ ಮೋಕ್ಷವನ್ನು ಸಂಪಾದಿಸಿ, ಅಲ್ಲಿಯೇ ಮುಕ್ತನಾಗುತ್ತಾನೆ.

೪೧–೪೨. ದೈತ್ಯದಾನವರೂ, ದೇವತೆಗಳೂ, ಎಲ್ಲರೂ ಅಪೇಕ್ಷೆಪಡುವಂಥಾದ್ದಾಗಿ, ಮತ್ತು ರಾಕ್ಷಸರಿಗೂ, ದೇವತೆಗಳಿಗೂ, ಯಾವುದು ಸ್ಥಾನವಾಗಿದ್ದಿತೋ ಆ ಸ್ಥಾನದಲ್ಲೇ ಅವನು ಮುಕ್ತನಾಗುವನು.

ತ್ರಿಪುಂಡ್ರ ಧಾರಿಣಸ್ತೇಷಾಂ ಶಿರೋ ಮಾಲಾ ಧರಸ್ಯ ಚ ।
ಬ್ರಹ್ಮಣಃ ಕೇಶಕೇನೈಕಂ ಉಪವೀತಂ ಚ ಬಿಭ್ರತಃ ॥೪೨॥
ಬಿಭ್ರತೋ ವಾಮ ಹಸ್ತೇನ ಕಪಾಲಂ ಬ್ರಹ್ಮಣೋ ವರಂ ।
ವಿಷ್ಣೋಃ ಕಲೇಬರಂ ಚೈವ ಬಿಭ್ರತಃ ಪರಮೇಷ್ಠಿನಃ ॥೪೩॥
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಮುಚ್ಯತೇ ಭವಸಾಗರಾತ್ ।
ಓಂ ನಮೋ ನೀಲಕಂಠಾಯ ಇತಿ ಪುಣ್ಯಾಕ್ಷರಾಷ್ಟಕಂ ॥೪೪॥
ಮಂತ್ರ ಮಾಹ ಸಕೃದ್ವಾ ಯಃ ಪಾತಕೈಃ ಸ ವಿಮುಚ್ಯತೇ ।
ಮಂತ್ರೇಣಾನೇನ ಗಂಧಾದ್ಯೈಃ ಭಕ್ತ್ಯಾ ವಿತ್ತಾನು ಸಾರತಃ ॥೪೫॥

---

ಮತ್ತು ಮಾಡುವಂತಹ ಧ್ಯಾನಮುದ್ರೆಯಿಂದ ಕೂಡಿದವನಾಗಿಯೂ, ಚಿತಿಯ ಬೂದಿಯನ್ನು ಬಳಿದುಕೊಂಡು, ಅಡ್ಡಲಾಗಿ ಮೂರು ಪಟ್ಟಿ ವಿಭೂತಿಯನ್ನು ಇಟ್ಟುಕೊಂಡು, ತಾನು ಕೊಂದ ಶತ್ರುಗಳ ರುಂಡಮಾಲೆಗಳನ್ನು ಹಾಕಿಕೊಂಡವನಾಗಿಯೂ, ಬ್ರಹ್ಮನ ತಲೆ ಕೂದಲಿನಿಂದಲೇ ಮಾಡಿರುವ ಒಂದು ಯಜ್ಞೋಪವೀತವನ್ನು ಹಾಕಿಕೊಂಡಿರುವವನಾಗಿಯೂ, ಎಡಗೈಯಿಂದ ಬ್ರಹ್ಮನ ಶ್ರೇಷ್ಠವಾದ ಕಪಾಲವನ್ನು (ತಲೆಯ ಬುರುಡೆಯನ್ನು) ಹಿಡಿದುಕೊಂಡವನಾಗಿಯೂ, ವಿಷ್ಣುಸ್ವರೂಪನಾದ ನರಸಿಂಹನ ಶರೀರ ಎಂದರೆ ಚರ್ಮವನ್ನು ಶರಭಾವತಾರವನ್ನು ಮಾಡಿದಾಗ ಧರಿಸಿದವನಾಗಿಯೂ, ಕಂಡು ಬರುವ, ಈಶ್ವರನ ವಿಗ್ರಹವನ್ನು ಮಾಡಿ, ಭಕ್ತಿಯಿಂದ ಪ್ರತಿಷ್ಠೆಮಾಡಿದರೆ ಅಂತಹ ಭಕ್ತನು ಸಂಸಾರವೆಂಬ ಸಮುದ್ರದಿಂದ ಪಾರಾಗಿ ಬಿಡುಗಡೆಯನ್ನು ಹೊಂದುತ್ತಾನೆ.

೪೪–೪೫. ಓಂ ನಮೋ ನೀಲಕಂಠಾಯ ಎಂಬುವ ಪವಿತ್ರವಾದ ಅಷ್ಟಾಕ್ಷರೀ ಮಂತ್ರವನ್ನು ಯಾವನು ಒಂದಾವೃತ್ತಿ ಹೇಳುವನೋ ಅವನು ಎಲ್ಲಾ ಪಾಪಗಳಿಂದ ಬಿಡಲ್ಪಡುತ್ತಾನೆ. ಮತ್ತು ಈ ಮಂತ್ರವನ್ನು ಹೇಳುತ್ತಾ ಗಂಧ ಪುಷ್ಪಾದಿಗಳಿಂದ ತನ್ನ ದ್ರವ್ಯದ ಶಕ್ತಿಗೆ ಅನುಸಾರವಾಗಿ, ಭಕ್ತಿಯಿಂದ ಇಂದ್ರಾದಿಗಳಿಗೂ ಪ್ರಭುವಾದ ಈಶ್ವರನನ್ನು ಪೂಜಿಸಿದರೆ ಅವನು ಶಿವಲೋಕದಲ್ಲಿಯೂ ಪೂಜಿಸಲ್ಪಡುತ್ತಾನೆ.

ಸಂಪೂಜ್ಯ ದೇವದೇವೇಶಂ ಶಿವಲೋಕೇ ಮಹೀಯತೇ ।
ಜಲಂಧರಾಂತಕಂ ದೇವಂ ಸುದರ್ಶನ ಧರಂ ಪ್ರಭುಂ ॥೪೬॥

ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ದ್ವಿಧಾಭೂತಂ ಜಲಂಧರಂ ।
ಪ್ರಯಾತಿ ಶಿವಸಾಯುಜ್ಯಂ ನಾತ್ರ ಕಾರ್ಯಾ ವಿಚಾರಣಾ ॥೪೭॥

ಸುದರ್ಶನ ಪ್ರದಂ ದೇವಂ ಸಾಕ್ಷಾತ್ ಪೂರ್ವೋಕ್ತ ಲಕ್ಷಣಂ ।
ಅರ್ಚಮಾನೇನ ದೇವೇನ ಚಾರ್ಚಿತಂ ನೇತ್ರಪೂಜಯಾ ॥೪೮॥

ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಲೋಕೇ ಮಹೀಯತೇ ।
ತಿಷ್ಠತೋಽಥ ನಿಕುಂಭಸ್ಯ ಪೃಷ್ಠತ ಶ್ಚರಣಾಂಬುಜಂ ॥೪೯॥

ವಾಮೇತರಂ ಸುವಿನ್ಯಸ್ಯ ವಾಮೇ ಚಾಲಿಂಗ್ಯ ಚಾದ್ರಿಜಾಂ ।
ಶೂಲಾಗ್ರೇ ಕೂರ್ಪರಂ ಸ್ಥಾಪ್ಯ ಕಂಕಣೀಕೃತ ಪನ್ನಗಂ ॥೫೦॥

---

೪೬–೪೮. ಜಲಂಧರನೆಂಬ ರಾಕ್ಷಸನನ್ನು ಕೊಂದಂಥಾ, ಮತ್ತು ಸುದರ್ಶನ ಚಕ್ರವನ್ನು ಹಿಡಿದುಕೊಂಡವನಾಗಿ, ಬೆಳಗುತ್ತಿರುವ ಈಶ್ವರ ವಿಗ್ರಹವನ್ನು ಮಾಡಿ, ಪ್ರತಿಷ್ಠೆ ಮಾಡಿದರೆ, ಮತ್ತು ಎರಡಾಗಿ ಸೀಳಲ್ಪಟ್ಟ ಜಲಂಧರ ರಾಕ್ಷಸನನ್ನೂ ಪ್ರತಿಷ್ಠೆ ಮಾಡಿದರೆ ಶಿವನೊಡನೆ ಸಾಯುಜ್ಯ ಮುಕ್ತಿಯನ್ನು ಹೊಂದುತ್ತಾನೆ. ಈ ವಿಷಯದಲ್ಲಿ ವಿಚಾರ ಮಾಡ ಬೇಕಾಗಿಲ್ಲವು. ವಿಷ್ಣುವಿಗೆ ತಾನೇ ಸುದರ್ಶನ ಚಕ್ರವನ್ನು ಕೊಡುತ್ತಿರುವವನಾಗಿಯೂ, ಹಿಂದೆ ಹೇಳಿದ ಚಿಹ್ನೆಯುಳ್ಳವನಾಗಿಯೂ, ಸಹಸ್ರ ಕಮಲಾರ್ಚನೆಯಲ್ಲಿ ವಿಷ್ಣುವಿನಿಂದ ತನ್ನ ಕಣ್ಣುಗಳನ್ನು ತಾನಾಗಿ ಕಿತ್ತು ಅರ್ಪಿಸಿ ಪೂಜಿಸಲ್ಪಟ್ಟಂತೆ ಕಂಡು ಬರುವ ಈಶ್ವರ ವಿಗ್ರಹವನ್ನು ನಿರ್ಮಿಸಿ ಪ್ರತಿಷ್ಠೆ ಮಾಡುವುದರಿಂದ ಭಕ್ತನು ಶಿವಲೋಕದಲ್ಲಿ ಪೂಜಿಸಲ್ಪಡುತ್ತಾನೆ.

೪೯–೫೧, ನಿಂತಿರುವ ನಿಕುಂಭನ ಬೆನ್ನಿನಮೇಲೆ ಕಮಲದಂತಿರುವ ಬಲದ ಕಾಲನ್ನು ಊರಿಕೊಂಡಿರುವ, ಎಡಭಾಗದಲ್ಲಿ ಪಾರ್ವತಿಯನ್ನು ತಬ್ಬಿಕೊಂಡು, ಮತ್ತು ತ್ರಿಶೂಲದ ಮೇಲೆ ಮೊಳಕೈಯ್ಯನ್ನು ಇಟ್ಟುಕೊಂಡೂ ಇರುವಂಥ ಮತ್ತು ಸರ್ಪವನ್ನು ಬಳೆಯಾಗಿಟ್ಟುಕೊಂಡವನಾಗಿಯೂ, ತನ್ನ ಮಗ್ಗುಲಲ್ಲಿ ಕೈಮುಗಿದು ನಿಂತಿರುವ ಅಂಧಕಾಸುರ

ಸಂಪ್ರೇಕ್ಷ್ಯ ಚಾಂಧಕಂ ಪಾರ್ಶ್ವೇ ಕೃತಾಂಜಲಿ ಪುಟಂ ಸ್ಥಿತಂ ।
ರೂಪಂ ಕೃತ್ವಾ ಯಥಾನ್ಯಾಯಂ ಶಿವಸಾಯುಜ್ಯ ಮಾಪ್ನುಯಾತ್

ಯಃ ಕುರ್ಯಾದ್ದೇವ ದೇವೇಶಂ ತ್ರಿಪುರಾಂತಕ ಮೀಶ್ವರಂ ।
ಧನುರ್ಬಾಣಸಮಾಯುಕ್ತಂ ಸೋಮಂ ಸೋಮಾರ್ಧ ಭೂಷಣಂ ॥

ರಥೇ ಸುಸಂಸ್ಥಿತಂ ದೇವಂ ಚತುರಾನನ ಸಾರಥಿಂ ।
ತದಾಕಾರತಯಾ ಸೋಽಪಿ ಗತ್ವಾ ಶಿವಪುರಂ ಸುಖೀ ॥೫೩॥

ಕ್ರೀಡತೇ ನಾತ್ರ ಸಂದೇಹೋ ದ್ವಿತೀಯ ಇವ ಶಂಕರಃ ।
ತತ್ರ ಭುಕ್ತ್ವಾ ಮಹಾಭೋಗಾನ್ ಯಾವದಿಚ್ಛಾ ದ್ವಿಜೋತ್ತಮಾಃ ॥

---

ನನ್ನು ನೋಡುತ್ತಲೂ ಇರುವ ಈಶ್ವರವಿಗ್ರಹವನ್ನು ಮಾಡಿ ವಿಧಿವತ್ತಾಗಿ ಪ್ರತಿಷ್ಠೆ ಮಾಡಿದವನು ಶಿವಸಾಯುಜ್ಯ (ಮೋಕ್ಷ) ವನ್ನು ಹೊಂದ ವನು.

೫೨-೫೪. ಎಲೈ ಬ್ರಾಹ್ಮಣ ಶ್ರೇಷ್ಠರೇ, ದೇವತೆಗಳಿಗೆ ದೇವರಾದ, ಇಂದ್ರಾದಿಗಳಿಗೂ ನಿಯಾಮಕನಾಗಿರುವ, ತ್ರಿಪುರಾಸುರನನ್ನು ಕೊಂದವ ನಾಗಿಯೂ, ಬಿಲ್ಲು, ಬಾಣಗಳನ್ನು ಧರಿಸಿದವನಾಗಿರುವ, ಪಾರ್ವತಿ ಯೊಡನೆ ಇರುವವನಾದ, ಅರ್ಧ ಚಂದ್ರನನ್ನು ಅಲಂಕಾರ ಮಾಡಿ ಕೊಂಡಿರುವ ರಥದಲ್ಲಿ ಕುಳಿತುಕೊಂಡವನಾಗಿಯೂ, ಬ್ರಹ್ಮನೇ ಸಾರಥಿ (ರಥ ನಡೆಸುವವನು) ಯಾಗಿರುವ ಈಶ್ವರ ವಿಗ್ರಹವನ್ನು ಯಾವನು ಮಾಡುವನೋ, (ಎಂದರೆ ಅಂತಹ ಈಶ್ವರ ವಿಗ್ರಹವನ್ನು ಮಾಡುವನೋ ಮತ್ತು ಪ್ರತಿಷ್ಠೆ ಮಾಡುವನೋ ಎಂದು ತಾತ್ಪರ್ಯ) ಅವನು ಶಿವಪುರಕ್ಕೆ ಹೋಗಿ ಶಿವನಂತೆಯೇ ಇದ್ದು, ಸುಖವಾಗಿ ರಮಿಸು ತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಅಲ್ಲಿ ಆತನು ತನಗೆ ಅಪೇಕ್ಷೆ ಯಿರುವ ತನಕ ಎರಡನೆಯ ಈಶ್ವರನೇ ಇದ್ದಹಾಗೆ, ದಿವ್ಯವಾದ ಸೌಖ್ಯ ಗಳನ್ನು ಅನುಭವಿಸಿ, ವೇದಾಂತ ವಿಚಾರವನ್ನು ಮಾಡಿ, ಬರುವ ಬ್ರಹ್ಮ ಜ್ಞಾನವನ್ನು ಹೊಂದಿ ಅಲ್ಲಿಯೇ ಮೋಕ್ಷವನ್ನು ಪಡೆಯುತ್ತಾನೆ,

**ಜ್ಞಾನಂ ವಿಚಾರಿತಂ ಲಬ್ಧ್ವಾ ತತ್ರೈವ ಸ ವಿಮುಚ್ಯತೇ ।**
**ಗಂಗಾಧರಂ ಸುಖಾಸೀನಂ ಚಂದ್ರಶೇಖರ ಮೇವ ಚ ॥೫೫॥**

**ಗಂಗಯಾ ಸಹಿತಂ ಚೈವ ವಾಮೋತ್ಸಂಗೇಽಂಬಿಕಾಽನ್ವಿತಂ ।**
**ವಿನಾಯಕಂ ತಥಾ ಸ್ಕಂದಂ ಜ್ಯೇಷ್ಠಾಂ ದುರ್ಗಾಂ ಸುಶೋಭನಾಂ ॥**

**ಭಾಸ್ಕರಂ ಚ ತಥಾ ಸೋಮಂ ಬ್ರಹ್ಮಾಣೀಂ ಚ ಮಹೇಶ್ವರೀಂ ।**
**ಕೌಮಾರೀಂ ವೈಷ್ಣವೀಂ ದೈವೀಂ ವಾರಾಹೀಂ ವರದಾಂ ತಥಾ ॥**

**ಇಂದ್ರಾಣೀಂ ಚೈವ ಚಾಮುಂಡಾಂ ವೀರಭದ್ರಸಮನ್ವಿತಾಂ ।**
**ವಿಘ್ನೇಶೇನ ಚ ಯೋ ಧೀಮಾನ್ ಶಿವಸಾಯುಜ್ಯ ಮಾಪ್ನುಯಾತ್॥**

**ಲಿಂಗಮೂರ್ತಿಂ ಮಹಾಜ್ವಾಲಾ ಮಾಲಾ ಸಂವೃತ ಮವ್ಯಯಂ ।**
**ಲಿಂಗಸ್ಯ ಮಧ್ಯೇ ವೈ ಕೃತ್ವಾ ಚಂದ್ರಶೇಖರ ಮೀಶ್ವರಂ ॥೫೯॥**

---

೫೫–೫೮. ಯಾವ ಬುದ್ಧಿವಂತನು, ಸುಖವಾಗಿ ಕುಳಿತುಕೊಂಡಿರುವ ಮತ್ತು ಗಂಗೆಯನ್ನು ತಲೆಯಲ್ಲಿ ಧರಿಸಿರುವ ಹಾಗೆಯೇ, ಗಂಗೆಯೊಡನೆಯೂ, ಎಡದ ತೊಡೆಯಮೇಲೆ ಕೂತಿರುವ ಪಾರ್ವತಿಯೊಡನೆಯೂ, ಕೂಡಿರುವ ಚಂದ್ರಶೇಖರನನ್ನೂ ಮತ್ತು ಹಿರಿಯವನಾದ ಗಣಪತಿಯನ್ನೂ, ಷಣ್ಮುಖನನ್ನೂ, ಸುಂದರಿಯಾದ ದುರ್ಗಾ ದೇವಿಯನ್ನೂ ಸೂರ್ಯನನ್ನೂ, ಚಂದ್ರನನ್ನೂ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ. ವೈಷ್ಣವೀ, ವಾರಾಹೀ, ವರ ಕೊಡುವ ಇಂದ್ರಾಣೀ, ಚಾಮುಂಡಿ, ಎಂಬ ಸಪ್ತಮಾತೃಕಾದೇವಿಯರನ್ನೂ, ಗಣಪತಿಯೊಡನೆ ಪ್ರತಿಷ್ಠೆ ಮಾಡುವನೋ, ಅವನು ಶಿವನ ಸಾಯುಜ್ಯವನ್ನು ಹೊಂದುತ್ತಾನೆ.

೫೯–೬೨. ಮಾಲೆಯಾಗಿ ಹೊರಟಿರುವ ದೊಡ್ಡ ಪ್ರಭೆಗಳಿಂದ ತುಂಬಿರುವ, ಮತ್ತು ಸ್ಥಿರವಾದ ಲಿಂಗಮೂರ್ತಿಯನ್ನು ಮಾಡಿ, ಅದರ ಮಧ್ಯದಲ್ಲಿ ಚಂದ್ರಶೇಖರನಾದ (ಈಶ್ವರನನ್ನೂ) ಲಿಂಗದ ಮೇಲೆ ಹಂಸಾಕಾರದಲ್ಲಿರುವ ಬ್ರಹ್ಮನನ್ನೂ, ಲಿಂಗದ ಕೆಳಭಾಗದಲ್ಲಿ ಕೆಳಮುಖ ಮಾಡಿಕೊಂಡಿರುವ ವರಾಹ ರೂಪನಾದ ವಿಷ್ಣುವನ್ನೂ, ಅದರ ಬಲ

ವ್ಯೋಮ್ನಿ ಕುರ್ಯಾತ್ತಥಾ ಲಿಂಗಂ ಬ್ರಹ್ಮಾಣಂ ಹಂಸರೂಪಿಣಂ ।
ವಿಷ್ಣುಂ ವರಾಹರೂಪೇಣ ಲಿಂಗಸ್ಯಾಧ ಸ್ತ್ವಧೋ ಮುಖಂ ॥೬೦॥
ಬ್ರಹ್ಮಾಣಂ ದಕ್ಷಿಣೇ ತಸ್ಯ ಕೃತಾಂಜಲಿ ಪುಟಂ ಸ್ಥಿತಂ ।
ಮಧ್ಯೇ ಲಿಂಗಂ ಮಹಾ ಘೋರಂ ಮಹಾಂಭಸಿ ಚ ಸಂಸ್ಥಿತಂ ॥೬೧॥
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಸಾಯುಜ್ಯ ಮಾಪ್ನುಯಾತ್ ।
ಕ್ಷೇತ್ರ ಸಂರಕ್ಷಕಂ ದೇವಂ ತಥಾ ಪಾಶುಪತಂ ಪ್ರಭುಂ ॥೬೨॥
ಕೃತ್ವಾ ಭಕ್ತ್ಯಾ ಯಥಾ ನ್ಯಾಯಂ ಶಿವಲೋಕೇ ಮಹೀಯತೇ ।

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಷಟ್ಸಪ್ತತಿತಮೋಽಧ್ಯಾಯಃ

---

ಭಾಗದಲ್ಲೇ ಕೈಮುಗಿದು ನಿಂತಿರುವ ಬ್ರಹ್ಮವಿಗ್ರಹವನ್ನೂ ಮಾಡಿ, ಅಂಥಾ ದುಷ್ಟ ಭಯಂಕರವಾದ ಲಿಂಗವನ್ನು ಪ್ರತಿಷ್ಠೆ ಮಾಡುವ ಮುಂಚೆ, ಪವಿತ್ರವಾದ ಹೆಚ್ಚಾದ ನೀರಿನಲ್ಲಿಟ್ಟು ಎಂದರೆ ಜಲಾಧಿವಾಸವನ್ನು ಮಾಡಿಸಿ, ದಿವ್ಯವಾದ ಮಂಟಪ ಮಧ್ಯದಲ್ಲಿ ಭಕ್ತಿಯಿಂದ ಪ್ರತಿಷ್ಠೆಮಾಡಿದರೆ ಶಿವನ ಸಾಯುಜ್ಯವನ್ನು ಹೊಂದುತ್ತಾನೆ. ಮತ್ತು ಈಶ್ವರನಿಗೆ ಸಂಬಂಧಪಟ್ಟವನಾಗಿಯೂ, ಸಮರ್ಥನೂ, ಆದ ಕ್ಷೇತ್ರಪಾಲಕ ವಿಗ್ರಹವನ್ನು ಮಾಡಿ, ಭಕ್ತಿಯಿಂದ ಶಾಸ್ತ್ರದಲ್ಲಿ ಹೇಳಿದಂತೆಯೇ ಪ್ರತಿಷ್ಠೆ ಮಾಡಿದರೆ, ಆ ಭಕ್ತನು ಶಿವಲೋಕದಲ್ಲಿಯೂ ಪೂಜಿಸಲ್ಪಡುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.

## ಶ್ರೀ ಲಿಂಗಮಹಾಪುರಾಣದ ಎಪ್ಪತ್ತಾರನೆಯ ಅಧ್ಯಾಯದ

# ಟಿಪ್ಪಣಿಯು

(೧) ನೆಯ ಶ್ಲೋಕದಲ್ಲಿ **“ಸ್ವೇಚ್ಛಾ ವಿಗ್ರಹ ಸಂಭವಂ”** ಎಂಬುದಾಗಿ ಹೇಳಿದ್ದಾರೆ. ಅದರ ವಿವರವೇನೆಂದರೆ, ನಿಜವಾಗಿ ಯಾವ ಶರೀರವೂ ಪರಮಾತ್ಮನಿಗೆ, ನಮಗೆ ಇರುವಂತೆ, ಇರುವುದಿಲ್ಲ. ಇದು ವೇದಾಂತಗಳ ಸಿದ್ಧಾಂತ. ಅದರೂ, ಭಕ್ತರ ಅನುಗ್ರಹಕ್ಕಾಗಿ ಪರಮಾತ್ಮನು ತನ್ನ ಮಾಯೆಯಿಂದ ಬೇಕಾದ ಶರೀರವನ್ನು ತೆಗೆದುಕೊಳ್ಳುವನು. ಇದರಿಂದ ಅವನು ನಮ್ಮ ದೃಷ್ಟಿಗೆ ಒಬ್ಬ ಆಕಾರವುಳ್ಳ ಮನುಷ್ಯಾದಿಗಳಂತೆ ಕಾಣಿಸಿಕೊಳ್ಳುತ್ತಾನೆ. ಯಾವಾಗ ಅವನು ಈ ರೀತಿ ಮಾಯೆಯಿಂದ ಶರೀರವನ್ನು ತೆಗೆದುಕೊಳ್ಳುತ್ತಾನೋ ಆವಾಗ ಅವತಾರವೆಂದು ತಿಳಿಯಬೇಕು. **“ಅಜೋಽಪಿ ಸನ್ ಅವ್ಯಯಾತ್ಮಾ ಭೂತಾನಾ ಮೀಶ್ವರೋಽಪಿ ಸನ್ ಪ್ರಕೃತಿಂ ಸ್ವಾ ಮಧಿಷ್ಠಾಯ ಸಂಭವಾ ಮ್ಯಾತ್ಮ ಮಾಯಯಾ। ಪರಿತ್ರಾಣಾಯ ಸಾಧೂನಾಂ ವಿನಾ ಶಾಯ ಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥”** ಎಂದು ಗೀತೆಯಲ್ಲಿ ಭಗವಂತನು ಆಡಿದ ಮಾತುಗಳನ್ನು ಗಮನಿಸಿದರೆ ಈ ವಿಷಯಗಳು ಸ್ಪಷ್ಟವಾಗುವುವು. ಈ ರೀತಿಯಾಗಿ ತನ್ನ ಇಚ್ಛಾನುಸಾರವಾಗಿ, ಮಾಯೆಯಿಂದ ಈಶ್ವರನು ಶರೀರವನ್ನು ತೆಗೆದುಕೊಂಡುದನ್ನು ಸಂಗ್ರಹಿಸಿ, ಈ ಅಧ್ಯಾಯದಲ್ಲಿ ಆಯಾಯ ಆಕಾರಗಳುಳ್ಳ ವಿಗ್ರಹಗಳನ್ನು, ಕಲ್ಲು, ಲೋಹ, ಮುಂತಾದುವುಗಳಿಂದ ಮಾಡಿಸಿ, ಪ್ರತಿಷ್ಠೆ ಮಾಡಿಸಬೇಕೆಂತಲೂ, ಅದರಿಂದ ಬರುವ ಫಲಗಳು ಹೀಗೆ ಹೀಗೆ ಇರುತ್ತವೆಯೆಂತಲೂ ಹೇಳಿರುತ್ತಾರೆ.

(೬) ಇಲ್ಲಿ ಶೈವಂ, ಕೌಮಾರಂ, ಐಶಾನಂ, ವೈಷ್ಣವಂ, ಬ್ರಾಹ್ಮಂ ಪ್ರಾಜಾಪತ್ಯಂ, ಎಂಬುವ ಪದಗಳಿಗೆ ಅರ್ಥವನ್ನು ಅವರವರು ಇರುವ ಲೋಕಗಳೆಂದು ಹೇಳಬೇಕು. ಮುಂದೆ **“ಜನಲೋಕಂ ಮಹಸ್ತಥಾ”** ಎಂಬುದಾಗಿ ಹೇಳಿದುದನ್ನು ನೋಡಿದರೆ ಇದು ಕಂಡು ಬರುತ್ತದೆ.

(೮) ಹಿಂದೆ ಎಪ್ಪತ್ತನೆಯ ಅಧ್ಯಾಯದಲ್ಲಿ ಈಶ್ವರನಿಂದ ಜಗತ್ತು ಹುಟ್ಟಿದ ಕ್ರಮವನ್ನು ವಿಸ್ತಾರವಾಗಿ ಹೇಳಿರುತ್ತಾರೆ. ಇಲ್ಲಿ ಅದರ ವಿವರ ಅನಾವಶ್ಯಕ. ಆದರೆ ಸ್ವಲ್ಪ ಇಲ್ಲಿ ತಿಳಿಯಬೇಕು. ಮೂಲದಲ್ಲಿ ಯಾವ ಕ್ರಮವೂ ಇಲ್ಲದೆ ಸೃಷ್ಟಿ ಮಾಡಿದನೆಂದು ಹೇಳಿರುವಂತಿದೆ. ಇಂತಹ ಸಂದರ್ಭದಲ್ಲಿ, ಸಾಂಖ್ಯ ಶಾಸ್ತ್ರದಲ್ಲಿ ಹೇಳಿದಂತೆ ಕ್ರಮವನ್ನು ಇಟ್ಟುಕೊಳ್ಳಬೇಕು. ಮೂಲ ಪ್ರಕೃತಿಯಿಂದ ಮಹತ್ತತ್ವವೂ, ಅದರಿಂದ ಅಹಂಕಾರ ತತ್ವವೂ, ಇದರಿಂದ ಪಂಚತನ್ಮಾತ್ರಗಳೂ, ಪಂಚ ಜ್ಞಾನೇಂದ್ರಿಯಗಳೂ, ಪಂಚ ಕರ್ಮೇಂದ್ರಿಯಗಳೂ, ಮನಸ್ಸು, ಪಂಚ ತನ್ಮಾತ್ರಗಳಿಂದ ಆಕಾಶ ಮುಂತಾದ ಪಂಚ ಮಹಾ ಭೂತಗಳೂ ಹುಟ್ಟಿದುವೆಂಬುದು ಸಾಂಖ್ಯ ಶಾಸ್ತ್ರದ ಕ್ರಮ. ಪ್ರಕೃತಿಯೆಂದರೆ ಈ ಜಡವಾದ ಪ್ರಪಂಚಕ್ಕೆ,ಘಟಕ್ಕೆ ಮಣ್ಣಿನಂತೆಯೇ,ಮೂಲಕಾರಣವಾದ ತತ್ವ; ಇದೇ ಎಲ್ಲಕ್ಕೂ ಮೊದಲಾಗಿದ್ದುದು. ಇದು ಸತ್ವ,ರಜಸ್ಸು,ತಮಸ್ಸುಗಳೆಂಬ ಮೂರು ಗುಣ ಸ್ವರೂಪದಲ್ಲಿರುವುದು. ಇದಕ್ಕೆ ಪ್ರಧಾನವೆಂತಲೂ, ಪ್ರಕೃತಿಯೆಂತಲೂ ಹೆಸರು. ಇದರಿಂದಲೇ ಮಹತ್ತತ್ವ ಹುಟ್ಟಿತು. ಮಹತ್ ಎಂದರೆ ಬುದ್ಧಿಯೆಂದರ್ಥ, ಅಹಂಕಾರವೆಂದರೆ ನಾನು ಎಂಬ ಅಭಿಮಾನವುಳ್ಳ ವಸ್ತು. ತನ್ಮಾತ್ರಗಳೆಂದರೆ, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಸೂಕ್ಷ್ಮವಾದ ಗುಣಗಳಲ್ಲಿ ಒಂದೊಂದು ಗುಣ ವಿಶೇಷವುಳ್ಳ ವಸ್ತುಗಳು. ಇಂದ್ರಿಯಗಳು ಕಿವಿ, ಕಣ್ಣು, ಮೂಗು, ನಾಲಿಗೆ, ಚರ್ಮ, ಇವುಗಳು ಸೂಕ್ಷ್ಮವಾಗಿರುವ ಮತ್ತು ತಿಳಿವಳಿಕೆಯನ್ನು ಕೊಡುವ ಜ್ಞಾನೇಂದ್ರಿಯಗಳು ಐದು. ವಾಕ್, ಪಾಣಿ (ಕೈ) ಪಾದ, ಪಾಯು, (ಮಲವಿಸರ್ಜನೆಯ ದ್ವಾರ) ಉಪಸ್ಥ, ಈ ಸ್ಥಾನಗಳಲ್ಲಿರುವ ಆಯಾಯಾ ಕೆಲಸಕ್ಕೆ ಸಾಧನವಾದ ಕರ್ಮೇಂದ್ರಿಯಗಳು ಐದು. ಮನಸ್ಸೂ ಸೇರಿ ಇವು ಹನ್ನೊಂದು ಆಗುತ್ತವೆ. ಆಕಾಶ, ವಾಯು, ಅಗ್ನಿ, ಜಲ, ಪೃಥಿವೀ. ಇವುಗಳು ಐದು ಪಂಚ ಮಹಾ ಭೂತಗಳು. ಇವುಗಳು ಒಟ್ಟಿನಲ್ಲಿ ಇಪ್ಪತ್ತುನಾಲ್ಕು ವಸ್ತುಗಳಾಗುತ್ತವೆ. ಆತ್ಮನೂ, ಸೇರಿ ಇಪ್ಪತ್ತೈದು ವಸ್ತುಗಳಾಗುತ್ತವೆ. ಈ ಸಂಖ್ಯೆಯ ವಸ್ತುಗಳುಳ್ಳವನು ಜೀವನು. ಅವನನ್ನು ಇಲ್ಲಿ **"ಪಂಚ ವಿಂಶತಿಕಂ ಸಾಕ್ಷಾತ್ ಪುರುಷಂ"** ಎಂಬುದಾಗಿ ಕರೆದಿದ್ದಾರೆ. ಹಿಂದೆ ಹೇಳಿದಂತೆ ಸೃಷ್ಟಿ ಕ್ರಮವನ್ನು ನೋಡಿದರೆ **"ಅಹಂಕಾರಾತ್"** ಎಂಬು

ದಕ್ಕೆ ನಾನು ಎಂಬ ಭಾವದಿಂದ ಎಂಬುದಾಗಿ ಅರ್ಥ ಮಾಡಬೇಕು. ಅಥವಾ ಈ ಅಹಂಭಾವವು ಎಲ್ಲಿ ಬರುತ್ತದೆಯೋ ಅದು ಎಂದು ಹೇಳಬೇಕು. ಅದು ಬುದ್ಧಿಯೆಂದು ಹೇಳಲ್ಪಡುವ ಮಹತ್ತೇ ಆಗುತ್ತದೆ. ಹೀಗೆಯೇ "ಇಂದ್ರಿಯಾತ್" ಎಂಬ ಪದಕ್ಕೆ ಇಂದ್ರಿಯಗಳು ಹುಟ್ಟುವ ಸ್ಥಾನದಿಂದ, ಎಂದು ಅರ್ಥ ಮಾಡಬೇಕು. ಇಂದ್ರಿಯದಿಂದ ಇಂದ್ರಿಯ ಹುಟ್ಟುವ ಹಾಗಿಲ್ಲ. ಆದ್ದರಿಂದ ಮೂಲವನ್ನು ಅನುವಾದ ಮಾಡುವಾಗ ಕೊಂಚ ವಿವರಿಸಿ ಹೇಳಿದೆ.

(೧೧) ಇಲ್ಲಿ "**ಲೀಲಯಾ ಪರಮೇಶ್ವರಂ**" ಎಂಬುದಾಗಿದೆ. ಇದರಿಂದ ಅನಾಯಾಸವಾಗಿ ಪರಮೇಶ್ವರನನ್ನು ಈಶ್ವರನೇ ಸೃಷ್ಟಿಮಾಡಿದನೆಂದು ಅರ್ಥವಾಗುತ್ತದೆ. ತನ್ನನ್ನು ತಾನೇ ಸೃಷ್ಟಿಮಾಡಿ ಕೊಳ್ಳುವುದು ಲೋಕಾನುಭವಕ್ಕೆ ವಿರುದ್ಧವಾಗಿದೆ. ಆದರೂ ಇದರ ಅಭಿಪ್ರಾಯ ಹೀಗಿರುತ್ತದೆ. ಹಿಂದೆ ಎಪ್ಪತ್ತನೆಯ ಅಧ್ಯಾಯದಲ್ಲಿ

**ಬುದ್ಧ್ಯಾ ಚ ಭಗವಾನೀಶಃ ಸರ್ವತಃ ಪರಮೇಶ್ವರಃ** ॥೫೮॥
**ಏತೈ ರಾವರಣೈ ರಂಡಂ ಸಪ್ತಭಿಃ ಪ್ರಾಕೃತೈ ರ್ವೃತಂ ।**

ಎಂಬುದಾಗಿ ಹೇಳಿದೆ. ಅದರಲ್ಲಿ ಈ ಬ್ರಹ್ಮಾಂಡವನ್ನು ಆವರಿಸಿಕೊಂಡಿರುವುದಾಗಿಯೂ, ಪ್ರಕೃತಿಯಿಂದ ಹುಟ್ಟಿರುವುದಾಗಿಯೂ, ಇರುವ ಈಶ್ವರನ ಅಂಶಗಳಾದ ದೇವತೆಗಳನ್ನು ಉದಹರಿಸುವಾಗ "**ಸರ್ವತಃ ಪರಮೇಶ್ವರಃ**" ಎಂದು ಪರಮೇಶ್ವರನೆಂದು ಹೆಸರುಳ್ಳ ಈಶ್ವರಾಂಶವೇ ಆಗಿರುವ ಪ್ರಕೃತಿಯಿಂದ ಹುಟ್ಟಿದ ತತ್ವವನ್ನು ಹೇಳುತ್ತಾರೆ. ಅದನ್ನೇ ಇಲ್ಲಿಯೂ ಹೇಳಿರುತ್ತಾರೆಂದು ತಿಳಿಯಬೇಕು.

(೧೪) "**ಶಿವಸಾಯುಜ್ಯಂ**" ಎಂಬುದಾಗಿ ಇಲ್ಲಿ ಹೇಳಿದೆ. ಮತ್ತೂ ಅನೇಕ ಕಡೆಗಳಲ್ಲೂ ಈ ಪದವು ಬರುತ್ತದೆ. ಇದಕ್ಕೆ ಹೀಗೆ ಅರ್ಥವು. "**ಸಾಯುಜ್ಯ ಮೇಕಾತ್ಮತ್ವಂ**" ಎಂಬುದಾಗಿ ಪೂಜ್ಯಪಾದ ಶ್ರೀ ಶಂಕರರು (ಬೃ) ಭಾಷ್ಯದಲ್ಲಿ ವ್ಯಾಖ್ಯಾನಿಸಿರುತ್ತಾರೆ. ಕೆಲವು ಕಡೆ ಟೀಕಾಚಾರ್ಯರು "**ಸಮಾನದೇಹತಾ**" ಎಂಬುದಾಗಿ ಟೀಕಿಸಿರುತ್ತಾರೆ.

ಈ ಎರಡು ಅರ್ಥಗಳನ್ನೂ ಹೇಳಬಹುದು. ಪರಮಾತ್ಮನ ಜ್ಞಾನವು ಬರುವ ಮುಂಚೆ, ಉಪಾಸಕನು ಪರಮಾತ್ಮನ ಸ್ವರೂಪದಲ್ಲೇ ಇರಲು ಸಾಧ್ಯವಿಲ್ಲ. ಅದು ಬಂದಮೇಲೆ ಇರಲು ಸಾಧ್ಯ. ಆದಕಾರಣ ಶ್ರೀ ಶಂಕರರು ಆಡಿದಂತೆಯೇ ಶಿವನೊಡನೆ ಏಕಾತ್ಮತ್ವವನ್ನು ಎಂದರೆ ಐಕ್ಯವನ್ನು, ಅದ್ವೈತವನ್ನು ಹೊಂದುತ್ತಾನೆಂದೂ, ಅರ್ಥವನ್ನು ಹೇಳಬಹುದು. ಇದು ಜ್ಞಾನ ಬಂದ ಮೇಲೆಂದು ತಿಳಿಯಬೇಕು. ಅದು ಬರುವ ಮುಂಚೆ ಈಶ್ವರನಂತೆಯೇ ಸಮಾನವಾದ (ಮಾಯಿಕವಾದ) ಶರೀರವುಳ್ಳವನಾಗಿರುತ್ತಾನೆಂದೂ, ವಿಶಿಷ್ಟಾದ್ವೈತದಂತೆ ಸಾರೂಪ್ಯಮುಕ್ತಿಯನ್ನು ಪಡೆಯುತ್ತಾನೆಂದೂ ಹೇಳಬಹುದು. ಈ ರೀತಿಯಾದ ಸಾಯುಜ್ಯವು ಈಶ್ವರ ಪೂಜೆಮಾಡಿದವರಿಗೆ ಉಪಾಸಕರಿಗೆ ಸಿಕ್ಕುವುದು.

(೩೦) **"ನಾಗಟಂಕಧರಂ"** ಈ ಪದದಲ್ಲಿ ನಾಗಪದಕ್ಕೆ ಆನೇದಂತವೆಂದರ್ಥ: ಪ್ರಮಾಣ.

**ನಾಗಃ ಪನ್ನಗಮಾತಂಗ ಕ್ರೂರಚಾರಿಷು ತೋಯದೇ ।**
**ನಾಗಕೇಸರ ಪುನ್ನಾಗ ನಾಗದಂತಕ ಮುಸ್ತಕೇ ॥**

ಎಂದು ವಿಶ್ವಕೋಶ. ಟಂಕ, ಎಂದರೆ ಗುದ್ದಲಿ, ಎಂದರ್ಥ. ಪ್ರಮಾಣ– **ಟಂಕಃ ಕಪಿತ್ಥಭೇದೇಸ್ಯಾನ್ನಾಮಾನಾಂತರ ಖನಿತ್ರಯೋಃ ।** (ವಿಶ್ವಃ) ಇದರಿಂದ ನಾವು ಈ ಎರಡು ಆಯುಧಗಳನ್ನೂ ಧರಿಸಿದವನೆಂಬುದಾಗಿ ಅರ್ಥಮಾಡಿಕೊಳ್ಳಬೇಕು.

(೩೭) **"ಅಣಿಮಾದಿ"** ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವಗಳೆಂದು ಎಂಟು ಐಶ್ವರ್ಯಗಳು.

(೪೩) **"ವಿಷ್ಣೋಃ ಕಲೇಬರಂ"** ಎಂಬುದಕ್ಕೆ ಟೀಕಾಕಾರರು ಮೇಲೆ ಕಂಡುಬರುವ ಅರ್ಥವನ್ನು ಬಿಟ್ಟು, ನೃಸಿಂಹಾವತಾರ ಮಾಡಿದ ವಿಷ್ಣುವಿನ ಶರೀರದಲ್ಲಿದ್ದ ಚರ್ಮವೆಂದು ಅರ್ಥಮಾಡಿರುತ್ತಾರೆ. ಹೀಗೆ ಮಾಡಲು ವಿಷ್ಣುವಿನ ಶರೀರವನ್ನು ಈಶ್ವರನು ಹೊತ್ತುಕೊಂಡುದು ಎಲ್ಲಿಯೂ ಕಾಣದಿರುವುದೇ ಮುಖ್ಯಕಾರಣ. ಈ ಅರ್ಥವನ್ನು ಮಾಡುವುದು ಕ್ಲೇಶವಾಗಿದ್ದಲ್ಲಿ ವಿಷ್ಣುವಿನ ಶರೀರವನ್ನು ಧರಿಸಿದವನೆಂದು ಇರುವ ಅರ್ಥವನ್ನು ಇಟ್ಟುಕೊಳ್ಳಬಹುದು. ಮಾಯೆಯಿಂದ ಈಶ್ವರನಿಗೆ ಯಾವ ಶರೀರವನ್ನು ಬೇಕಾದರೂ ಧರಿಸುವ ಶಕ್ತಿಯಿರುತ್ತದೆ.

**ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತಾರನೆಯ ಅಧ್ಯಾಯದ ಟಿಪ್ಪಣಿ, ಮುಗಿದುದು.**

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಸಪ್ತಸಪ್ತತಿತಮೋಽಧ್ಯಾಯಃ

॥ ಋಷಯ ಊಚುಃ ॥

ಲಿಂಗಪ್ರತಿಷ್ಠಾ ಪುಣ್ಯಂ ಚ ಲಿಂಗಸ್ಥಾಪನ ಮೇವ ಚ ।
ಲಿಂಗಾನಾಂ ಚೈವ ಭೇದಾಶ್ಚ ಶ್ರುತಂ ತವ ಮುಖಾದಿಹ ॥ ೧ ॥

ಮೃದಾದಿ ರತ್ನ ಪರ್ಯಂತೈಃ ದ್ರವ್ಯೈಃ ಕೃತ್ವಾ ಶಿವಾಲಯಂ ।
ಯತ್ಫಲಂ ಲಭತೇ ಮರ್ತ್ಯಃ ತತ್ಫಲಂ ವಕ್ತು ಮರ್ಹಸಿ ॥ ೨ ॥

॥ ಸೂತ ಉವಾಚ ॥

ಯಸ್ಯ ಭಕ್ತೋಽಪಿ ಲೋಕೇಽಸ್ಮಿನ್ ಪುತ್ರದಾರ ಗೃಹಾದಿಭಿಃ ।
ಬಾಧ್ಯ ತೇ ಜ್ಞಾನಯುಕ್ತಶ್ಚೇ ನ್ನ ಚ ತಸ್ಯ ಗೃಹೈಃ ಸ್ತು ಕಿಂ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತು ಏಳನೆಯ ಅಧ್ಯಾಯವು.

೧. ಋಷಿಗಳು ಸೂತನನ್ನು ಕುರಿತು ಈ ರೀತಿ ಹೇಳಿದರು:- ಎಲೈ ಸೂತನೇ, ನಿನ್ನ ಮುಖದಿಂದ ಶಿವಲಿಂಗವನ್ನು ಮಾಡಿ ಪ್ರತಿಷ್ಠೆ ಮಾಡಿದರೆ ಬರುವ ಪುಣ್ಯವನ್ನೂ, ಲಿಂಗಗಳ ಪ್ರತಿಷ್ಠೆಮಾಡುವುದನ್ನೂ, ಆ ಲಿಂಗಗಳ ಭೇದಗಳನ್ನೂ (ಎಂದರೆ ಬೇರೆ ರೂಪಗಳನ್ನೂ) ನಾವು ಕೇಳಿದಂತಾಯಿತು.

೨. ಇನ್ನು ಮುಂದೆ ನೀನು ಮಣ್ಣಿನಿಂದ ಹಿಡಿದು ವಜ್ರದವರೆಗೂ ಇರುವ ದ್ರವ್ಯಗಳಿಂದ ಈಶ್ವರ ದೇವಸ್ಥಾನವನ್ನು ಮಾಡಿದರೆ ಯಾವ ಫಲವನ್ನು ಮನುಷ್ಯನು ಹೊಂದುತ್ತಾನೋ ಆ ಫಲವನ್ನು ಹೇಳಲು ಸಮರ್ಥನಾಗಿರುವೆ. ಆದುದರಿಂದ ದಯೆಯಿಟ್ಟು ಹೇಳು.

೩-೪. ಸೂತನು ಹೇಳಿದನು:-ಯಾವ ಈಶ್ವರನ ಭಕ್ತನು ಜ್ಞಾನಿಯಾಗುವ ಪಕ್ಷದಲ್ಲಿ, ಹೆಂಡತಿ, ಮಕ್ಕಳು, ಮನೆ, ಮುಂತಾದುವುಗಳಿಂದಲೂ ತೊಂದರೆ ಪಡುವುದಿಲ್ಲವೋ, ಆ ಈಶ್ವರನಿಗೆ ಮನೆಗಳಿಂದ ಯಾವ ಪ್ರಯೋಜನವೂ ಇಲ್ಲದಿರುವ ಕಾರಣ, ಅವುಗಳಿಂದ ಆಗಬೇಕಾ

ತಥಾಽಪಿ ಭಕ್ತಾಃ ಪರಮೇಶ್ವರಸ್ಯ ।
ಕೃತ್ವೇಷ್ಟ ಲೋಷ್ಟೈರಪಿ ರುದ್ರ ಲೋಕಂ ॥
ಪ್ರಯಾಂತಿ ದಿವ್ಯಂ ಹಿ ವಿಮಾನ ವರ್ಯಂ ।
ಸುರೇಂದ್ರ ಪದ್ಮೋದ್ಭವ ವಂದಿತಸ್ಯ ॥ ೪ ॥

ಬಾಲ್ಯಾತ್ತು ಲೋಷ್ಟೇನ ಶಿವಂ ಚ ಕೃತ್ವಾ ।
ಮೃದಾಽಪಿ ವಾ ಪಾಂಸುಭಿ ರಾದಿದೇವಂ ॥
ಗೃಹಂ ಚ ತಾದೃಗ್ವಿಧ ಮಸ್ಯ ಶಂಭೋಃ ।
ಸಂಪೂಜ್ಯ ರುದ್ರತ್ವ ಮವಾಪ್ನುವಂತಿ ॥ ೫ ॥

ತಸ್ಮಾತ್ ಸರ್ವಪ್ರಯತ್ನೇನ ಭಕ್ತ್ಯಾ ಭಕ್ತೈಃ ಶಿವಾಲಯಂ ।
ಕರ್ತವ್ಯಂ ಸರ್ವ ಯತ್ನೇನ ಧರ್ಮ ಕಾಮಾರ್ಥ ಸಿದ್ಧಯೇ ॥ ೬ ॥

ಕೇಸರಂ ನಾಗರಂ ವಾಽಪಿ ದ್ರಾವಿಡಂ ವಾ ತಥಾಪರಂ ।
ಕೃತ್ವಾ ರುದ್ರಾಲಯಂ ಭಕ್ತ್ಯಾ ಶಿವಲೋಕೇ ಮಹೀಯತೇ ॥ ೭ ॥

---

ದದ್ದೇನು ? ಏನೂ ಇಲ್ಲ. ಆದರೂ ಭಕ್ತರು ಈಶ್ವರನಿಗೆ, ಇಟ್ಟಿಗೆಗಳಿಂದಲೂ, ಮಣ್ಣಿ ಹೆಂಟೆಗಳಿಂದಲೂ, ದೇವಸ್ಥಾನವನ್ನು ಕಟ್ಟಿಕೊಟ್ಟು, ಇಂದ್ರ, ವಿಷ್ಣು, ಇವರುಗಳಿಂದ ನಮಸ್ಕರಿಸಲ್ಪಟ್ಟು, ದಿವ್ಯವಾದ ಮನೋಹರವಾದ ಉತ್ತಮ ವಿಮಾನವನ್ನು ಹತ್ತಿ ರುದ್ರಲೋಕಕ್ಕೆ ಹೋಗುತ್ತಾರೆ.

೫. ಬಾಲ್ಯದಲ್ಲಿ ಹುಡುಗತನದಿಂದಲಾದರೂ, ಮಣ್ಣಿನ ಹೆಂಟೆಯಿಂದಲೋ, ಮಣ್ಣಿನಿಂದಲೋ, ಅಥವಾ ಧೂಳಿಗಳಿಂದಲೋ ಈಶ್ವರನಿಗೆ ದೇವಸ್ಥಾನಗಳನ್ನು ಮಾಡಿ, ಅವನನ್ನು (ಆದಿ ದೇವನಾದ ಈಶ್ವರನನ್ನು) ಅವುಗಳಿಂದಲೇ ಪೂಜಿಸಿದವರು ರುದ್ರನ ಸ್ವರೂಪವನ್ನೇ ಹೊಂದುತ್ತಾರೆ. ಇದು ಸತ್ಯ.

೬. ಆದ್ದರಿಂದ ಸರ್ವಪ್ರಯತ್ನದಿಂದಲೂ, ಧರ್ಮ, ಅರ್ಥ, ಮತ್ತು ಕಾಮರೂಪವಾದ ಪುರುಷಾರ್ಥಗಳ ಸಾಧನೆಗಾಗಿ, ಭಕ್ತರು ಭಕ್ತಿಯಿಂದ ಈಶ್ವರ ದೇವಾಲಯವನ್ನು ಕಟ್ಟಿಸಬೇಕು.

೭. ಕೇಸರ, ನಾಗರ, ದ್ರಾವಿಡ, ಎಂದು ಶಿಲ್ಪಶಾಸ್ತ್ರದಲ್ಲಿ ಕರೆಯಲ್ಪಡುವ, ಮತ್ತು ಬೇರೆ ವಿಧವಾದ ಶಿವದೇವಸ್ಥಾನಗಳನ್ನು ಭಕ್ತಿಯಿಂದ ಕಟ್ಟಿಸಿದವನು ಶಿವಲೋಕದಲ್ಲಿ ಪೂಜಿಸಲ್ಪಡುತ್ತಾನೆ.

ಕೈಲಾಸಾಖ್ಯಂ ಚ ಯಃ ಕುರ್ಯಾತ್ ಪ್ರಾಸಾದಂ ಪರಮೇಷ್ಠಿನಃ ।
ಕೈಲಾಸ ಶಿಖರಾ ಕಾರೈ ರ್ವಿಮಾನೈ ರ್ಮೋದತೇ ಸುಖೀ ॥ ೮ ॥

ಮಂದರಂ ವಾ ಪ್ರಕುರ್ವೀತ ಶಿವಾಯ ವಿಧಿಪೂರ್ವಕಂ ।
ಭಕ್ತ್ಯಾ ವಿತ್ತಾನುಸಾರೇಣ ಉತ್ತಮಾಧಮ ಮಧ್ಯಮಂ ॥ ೯ ॥

ಮಂದರಾದ್ರಿ ಪ್ರತೀಕಾಶೈಃ ವಿಮಾನೈ ರ್ವಿಶ್ವತೋ ಮುಖೈಃ ।
ಅಪ್ಸರೋ ಗಣ ಸಂಕೀರ್ಣೈ ರ್ದೇವ ದಾನವ ದುರ್ಲಭೈಃ ॥೧೦॥

ಗತ್ವಾ ಶಿವಪುರಂ ರಮ್ಯಂ ಭುಕ್ತ್ವಾ ಭೋಗಾನ್ ಯಥೇಪ್ಸಿತಾನ್ ।
ಜ್ಞಾನ ಯೋಗಂ ಸಮಾಸಾದ್ಯ ಗಾಣಪತ್ಯಂ ಲಭೇನ್ನರಃ ॥೧೧॥

---

೮. ಕೈಲಾಸವೆಂದು ಹೆಸರುಳ್ಳ ದೇವಾಲಯವನ್ನು ಈಶ್ವರನಿಗೆ ಯಾವನು ಕಟ್ಟಿಸುವನೋ ಅವನು ಕೈಲಾಸ ಪರ್ವತದ ಮೇಲ್ಭಾಗದಂತಿರುವ ವಿಮಾನಗಳಿಂದ ವಿಹರಿಸುತ್ತಾ ಸುಖವಾಗಿರುತ್ತಾನೆ.

೯. ಮಂದರವೆಂದು ಕರೆಯಲ್ಪಡುವ ದೇವಾಲಯವನ್ನು ಉತ್ತಮ ರೀತಿಯಲ್ಲೋ ಅಥವಾ ಮಧ್ಯಮರೀತಿಯಲ್ಲೋ, ಅಥವಾ ಅಧಮ ರೀತಿಯಲ್ಲೋ, ಶಿಲ್ಪಶಾಸ್ತ್ರದಲ್ಲಿ ಹೇಳಿರುವಂತೆಯೋ, ಭಕ್ತನು ತನ್ನ ಐಶ್ವರ್ಯಕ್ಕೆ ಅನುಸಾರವಾಗಿ ಭಕ್ತಿಯಿಂದ ಶಿವನಿಗೋಸ್ಕರ ನಿರ್ಮಾಣ ಮಾಡಬೇಕು.

೧೦–೧೧. ಈ ರೀತಿ ಮಾಡಿದವನು ಮಂದರ ಪರ್ವತಕ್ಕೆ ಸಮಾನವಾಗಿಯೂ, ಎಲ್ಲಾ ಕಡೆಯಲ್ಲೂ ಹೋಗುವಂಥಾದ್ದಾಗಿಯೂ, ಅಪ್ಸರಃ ಸ್ತ್ರೀಯರ ಗುಂಪುಗಳಿಂದ ತುಂಬಿರುವುದಾಗಿಯೂ, ದೇವತೆಗಳಿಗೂ, ರಾಕ್ಷಸರಿಗೂ ಸಿಕ್ಕದಂಥಾದ್ದಾಗಿಯೂ ಇರುವ, ವಿಮಾನಗಳಿಂದ ಸುಂದರವಾದ ಶಿವಪುರಕ್ಕೆ ಹೋಗಿ, ಬೇಕಾದ ಸೌಖ್ಯವನ್ನು ಅನುಭವಿಸಿ, ಜ್ಞಾನಯೋಗವೆಂಬ ಮೋಕ್ಷಮಾರ್ಗವನ್ನು ಹೊಂದಿ, ಆ ಮನುಷ್ಯನು ಗಣಗಳ ಮೇಲಿನ ಅಧಿಕಾರವನ್ನು ಹೊಂದುವನು.

ಯಃ ಕುರ್ಯಾನ್ಮೇರು ನಾಮಾನಂ ಪ್ರಾಸಾದಂ ಪರಮೇಷ್ಠಿನಃ ।
ಸ ಯತ್ಫಲ ಮವಾಪ್ನೋತಿ ನ ತತ್ಸರ್ವೈಃ ಮಹಾಮಖೈಃ ॥೧೨॥
ಸರ್ವಯಜ್ಞ ತಪೋದಾನ ತೀರ್ಥ ವೇದೇಷು ಯತ್ಫಲಂ ।
ತತ್ಫಲಂ ಸಕಲಂ ಲಬ್ಧ್ವಾ ಶಿವವನ್ಮೋದತೇ ಚಿರಂ ॥೧೩॥
ನಿಷಧಂ ನಾಮ ಯಃ ಕುರ್ಯಾತ್ ಪ್ರಾಸಾದಂ ಭಕ್ತಿತಃ ಸುಧೀಃ ।
ಶಿವಲೋಕ ಮನುಪ್ರಾಪ್ಯ ಶಿವವನ್ಮೋದತೇ ಚಿರಂ ॥೧೪॥
ಕುರ್ಯಾದ್ವಾ ಯಃ ಶುಭಂ ವಿಪ್ರಾಃ ಹಿಮಶೈಲ ಮನುತ್ತಮಂ ।
ಹಿಮಶೈಲೋಪಮೈರ್ಯಾನೈಃ ಗತ್ವಾ ಶಿವಪುರಂ ಶುಭಂ ॥೧೫॥
ಜ್ಞಾನಯೋಗಂ ಸಮಾಸಾದ್ಯ ಗಾಣಪತ್ಯ ಮವಾಪ್ನುಯಾತ್ ।
ನೀಲಾದ್ರಿ ಶಿಖರಾಖ್ಯಂ ವಾ ಪ್ರಾಸಾದಂ ಯಃ ಸುಶೋಭನಂ ॥೧೬॥

---

೧೨-೧೩. ಯಾವನು ಮೇರುವೆಂಬ ಹೆಸರುಳ್ಳ ದೇವಾಲಯವನ್ನು ಈಶ್ವರನಿಗೆ ಕಟ್ಟಿಸಿದವನಾಗಿ ಯಾವ ಫಲವನ್ನು ಹೊಂದುತ್ತಾನೆಯೋ ಅದನ್ನು ಯಾವ ದೊಡ್ಡ ಯಾಗಗಳಿಂದಲೂ ಹೊಂದಲಾಗುವುದಿಲ್ಲ. ಎಲ್ಲಾ ಯಾಗಗಳಲ್ಲೂ, ತಪಸ್ಸುಗಳಲ್ಲೂ, ದಾನಗಳಲ್ಲೂ, ತೀರ್ಥಕ್ಷೇತ್ರಗಳಲ್ಲೂ, ವೇದಗಳಲ್ಲೂ,ಯಾವ ಫಲವು ಇರುವುದೋ ಆ ಫಲವನ್ನೆಲ್ಲವನ್ನೂ ಭಕ್ತನು ಹೊಂದಿ ಈಶ್ವರನಂತೆಯೇ ಬಹುಕಾಲ ಸಂತೋಷವಾಗಿರುತ್ತಾನೆ.

೧೪. ನಿಷಧವೆಂದು ಪ್ರಸಿದ್ಧವಾದ ದೇವಾಲಯವನ್ನು ಯಾವ ಬುದ್ಧಿವಂತನು ಭಕ್ತಿಯಿಂದ ಮಾಡುವನೋ ಅವನು ಶಿವಲೋಕಕ್ಕೆ ಹೋಗಿ ಅಲ್ಲಿ ಶಿವನಂತೆಯೇ ಬಹುಕಾಲ ಸಂತೋಷವಾಗಿರುತ್ತಾನೆ.

೧೫. ಎಲೈ ಬ್ರಾಹ್ಮಣರಾ, ಹಿಮಶೈಲವೆಂಬ ಶ್ರೇಷ್ಠವಾದ ಮತ್ತು ರಮ್ಯವಾದ ದೇವಾಲಯವನ್ನು ಯಾವನು ಮಾಡುವನೋ ಅವನು ಹಿಮಶೈಲಕ್ಕೆ ಸಮಾನವಾದ ವಿಮಾನಗಳಿಂದ ಮನೋಹರವಾದ ಶಿವಪುರಕ್ಕೆ ಹೋಗಿ ಜ್ಞಾನಮಾರ್ಗವನ್ನು ಸಂಪಾದಿಸಿ ಗಣಗಳ ಮೇಲಿನ ಪ್ರಭುತ್ವವನ್ನು ಹೊಂದುತ್ತಾನೆ.

೧೬-೧೭. ನೀಲಾದ್ರಿ ಶಿಖರವೆಂದು ಹೆಸರುಳ್ಳ ದೇವಾಲಯವನ್ನು ಯಾವನು ಚೆನ್ನಾಗಿ ಭಕ್ತಿಯಿಂದಲೂ, ತನ್ನ ದ್ರವ್ಯಾನುಕೂಲಕ್ಕೆ ತಕ್ಕಂತೆ

ಕೃತ್ವಾ ವಿತ್ತಾನುಸಾರೇಣ ಭಕ್ತ್ಯಾ ರುದ್ರಾಯ ಶಂಭವೇ ।
ಯತ್ಫಲಂ ಲಭತೇ ಮರ್ತ್ಯ ಸ್ತತ್ಫಲಂ ಪ್ರವದಾಮ್ಯಹಂ ॥೧೭॥

ಹಿಮ ಶೈಲೇ ಕೃತೇ ಭಕ್ತ್ಯಾ ಯತ್ಫಲಂ ಪ್ರಾಕ್ ತವೋದಿತಂ ।
ತತ್ಸಲಂ ಸಕಲಂ ಲಬ್ಧ್ವಾ ಸರ್ವದೇವ ನಮಸ್ಕೃತಃ ॥೧೮॥

ರುದ್ರಲೋಕ ಮನುಪ್ರಾಪ್ಯ ರುದ್ರೈಃ ಸಾರ್ಧಂ ಪ್ರಮೋದತೇ ।
ಮಹೇಂದ್ರ ಶೈಲ ನಾಮಾನಂ ಪ್ರಾಸಾದಂ ರುದ್ರಸಂಮತಂ ॥೧೯॥

ಕೃತ್ವಾ ಯತ್ಫಲ ಮಾಪ್ನೋತಿ ತತ್ಫಲಂ ಪ್ರವದಾಮ್ಯಹಂ ।
ಮಹೇಂದ್ರ ಪರ್ವತಾಕಾರೈ ರ್ವಿಮಾನೈ ರ್ವೃಷ ಸಂಯುತೈಃ ॥೨೦॥

ಗತ್ವಾ ಶಿವಪುರಂ ರಮ್ಯಂ ಭುಕ್ತ್ವಾ ಭೋಗಾನ್ ಯಥೇ ಪ್ಸಿತಾನ್।
ಜ್ಞಾನಂ ವಿಚಾರಿತಂ ರುದ್ರೈಃ ಸಂಪ್ರಾಪ್ಯ ಮುನಿಪುಂಗವಾಃ ॥೨೧॥

---

ಮಾಡಿ ಈಶ್ವರನಿಗೆ ಅರ್ಪಿಸಿ, ಯಾವ ಫಲವನ್ನು ಮನುಷ್ಯನು ಹೊಂದುವನೋ ಆ ಫಲವನ್ನು ನಾನು ಇನ್ನು ಮುಂದೆ ಹೇಳುತ್ತೇನೆ.

೧೮. ಹಿಮಶೈಲವೆಂಬ ದೇವಾಲಯವನ್ನು ಕಟ್ಟಿದರೆ ಯಾವ ಫಲವು ಬರುವುದೆಂದು ಹಿಂದೆ ನಿನಗೆ ಹೇಳಿದ್ದೆನೋ ಆ ಫಲವನ್ನೆಲ್ಲವನ್ನೂ ಹೊಂದಿ, ಎಲ್ಲಾ ದೇವರಿಂದಲೂ ನಮಸ್ಕರಿಸಲ್ಪಟ್ಟವನಾಗಿ, ರುದ್ರಲೋಕಕ್ಕೆಹೋಗಿ ರುದ್ರನೊಡನೆ ತಾನು ಸುಖವಾಗಿರುತ್ತಾನೆ.

೧೯. ಮಹೇಂದ್ರ ಶೈಲವೆಂಬ ಹೆಸರುಳ್ಳ, ರುದ್ರನಿಗೆ ಒಪ್ಪಿಗೆಯಾದ,ದೇವಾಲಯವನ್ನು ಮಾಡಿ,ಯಾವ ಫಲವನ್ನು ಹೊಂದುತ್ತಾನೋ ಆ ಫಲವನ್ನು ನಾನು ಹೇಳುತ್ತೇನೆ

೨೦–೨೧. ಎಲೈ ಮುನಿಶ್ರೇಷ್ಠರಿರಾ, ಭಕ್ತನು ಮಹೇಂದ್ರ ಪರ್ವತದಂತೆ ಆಕಾರವುಳ್ಳ ಮತ್ತು ಗೂಳಿಗಳಿಂದೊಡಗೂಡಿದ, ವಿಮಾನಗಳಿಂದ ಸುಂದರವಾದ, ಶಿವಪುರಕ್ಕೆ ಹೋಗಿ, ಅಲ್ಲಿ ಬೇಕಾದ ಭೋಗಗಳನ್ನು ಅನುಭವಿಸಿ, ರುದ್ರರೊಡನೆ ವಿಚಾರಮಾಡಿ, ತತ್ವಜ್ಞಾನವನ್ನು ಪಡೆದು ಮತ್ತು ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ವಿಷಯಗಳನ್ನು ವಿಷದಂತೆಯೇ (ದೂರ) ಬಿಟ್ಟು, ಶಿವನೊಡನೆ ಐಕ್ಯವನ್ನು ಹೊಂದುತ್ತಾನೆ.

ವಿಷಯಾನ್ ವಿಷವತ್ತ್ಯಕ್ತ್ವಾ ಶಿವಸಾಯುಜ್ಯ ಮಾಪ್ನುಯಾತ್ ।
ಹೇಮ್ನಾ ಯಸ್ತು ಪ್ರಕುರ್ವೀತ ಪ್ರಾಸಾದಂ ರತ್ನ ಶೋಭಿತಂ॥೨೨॥
ದ್ರಾವಿಡಂ ನಾಗರಂ ವಾಽಪಿ ಕೇಸರಂ ವಾ ವಿಧಾನತಃ ।
ಕೂಟಂ ವಾ ಮಂಡಪಂ ವಾಽಪಿ ಸಮಂ ವಾ ದೀರ್ಘ ಮೇವಚ ॥
ನ ತಸ್ಯ ಶಕ್ಯತೇ ವಕ್ತುಂ ಪುಣ್ಯಂ ಶತ ಯುಗೈರಪಿ ।
ಜೀರ್ಣಂ ವಾ ಪತಿತಂ ವಾಽಪಿ ಖಂಡಿತಂ ಸ್ಫುಟಿತಂ ತಥಾ ॥೨೪॥
ಪೂರ್ವವತ್ ಕಾರಯೇ ದ್ಯಸ್ತು ದ್ವಾರಾದ್ಯೈಃ ಸುಶುಭಂ ದ್ವಿಜಾಃ ।
ಪ್ರಾಸಾದಂ ಮಂಡಪಂ ವಾಽಪಿ ಪ್ರಾಕಾರಂ ಗೋಪುರಂ ತು ವಾ॥೨೫
ಕರ್ತು ರಪ್ಯಧಿಕಂ ಪುಣ್ಯಂ ಲಭತೇ ನಾತ್ರ ಸಂಶಯಃ ।
ವೃತ್ತ್ಯರ್ಥಂ ವಾ ಪ್ರಕುರ್ವೀತ ನರಃ ಕರ್ಮ ಶಿವಾಲಯೇ ॥೨೬॥

---

೨೨–೨೩. ಯಾವನು ರತ್ನಗಳಿಂದ ಶೋಭಿಸುವ ಚಿನ್ನದ ದೇವಾಲಯವನ್ನು ಮಾಡುವನೋ, ಅದನ್ನು, ದ್ರಾವಿಡ, ನಾಗರ, ಕೇಸರ, ಇವುಗಳಲ್ಲಿ ಯಾವ ವಿಧದಲ್ಲಾದರೂ, ಶಾಸ್ತ್ರ ರೀತಿಯಲ್ಲಿ ಮಾಡುವನೋ ಅಥವಾ ಪಟ್ಟಣದ ಕೋಟೆಯ ಬಾಗಿಲಂತೆಯೋ, ಮಂಟಪದಂತೆಯೋ, ಚಚ್ಚೌಕವಾಗಿಯೋ, ಉದ್ದವಾಗಿಯೋ, ಮಾಡುವನೋ, ಅವನ ಪುಣ್ಯವನ್ನು ನೂರು ಯುಗಗಳಾದರೂ, ಹೇಳಿ ಪೂರೈಸಲು ಸಾಧ್ಯವಿಲ್ಲ.

೨೪–೨೬. ಹಳೆಯದಾಗಿಯೂ, ಅಥವಾ ಬಿದ್ದು ಹೋಗಿದ್ದಾದರೂ, ಯಾರಿಂದಲಾದರೂ ಒಡೆಯಲ್ಪಟ್ಟದ್ದಾದರೂ, ಆಸ್ಫೋಟನೆಯಾಗಿ ಹೋದದ್ದಾದರೂ, ಒಟ್ಟನಲ್ಲಿ ಶಿಥಿಲವಾದ ದೇವಾಲಯವನ್ನು ಯಾವನು ಮೊದಲಿನಂತೆಯೇ ಬಾಗಿಲು ಮುಂತಾದುವುಗಳಿಂದ ಚೆನ್ನಾಗಿ ಜೀರ್ಣೋದ್ಧಾರ ಮಾಡಿಸುವನೋ, ಮತ್ತೂ ದೇವಸ್ಥಾನವನ್ನೋ ಅಥವಾ ಮಂಟಪವನ್ನೋ, ಸುತ್ತಲೂ ಇರುವ ಪ್ರಾಕಾರವನ್ನೋ (ಗೋಡೆಯನ್ನೋ) ಗೋಪುರವನ್ನೋ,ಯಾವುದನ್ನಾದರೂ, ಈ ರೀತಿ ಹಾಳಾದುದನ್ನು ಸರಿಪಡಿಸುವನೋ, ಅವನು ಅವುಗಳನ್ನು ಮಾಡಿದವನಷ್ಟು ಪುಣ್ಯವನ್ನೂ ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ತನ್ನ ಜೀವನಕ್ಕಾದರೂ ದೇವಾಲಯದಲ್ಲಿ ಮನುಷ್ಯನು ಕೆಲಸವನ್ನು ಮಾಡಬೇಕು.

ಯಃ ಸ ಯಾತಿ ನ ಸಂದೇಹಃ ಸ್ವರ್ಗ ಲೋಕಂ ಸಬಾಂಧವಃ ।
ಯಶ್ಚಾತ್ಮ ಭೋಗ ಸಿದ್ಧ್ಯರ್ಥಂ ಅಪಿ ರುದ್ರಾಲಯೇ ಸಕೃತ್ ॥೨೭॥
ಕರ್ಮ ಕುರ್ಯಾ ದ್ಯದಿ ಸುಖಂ ಲಬ್ಧ್ವಾ ಚಾಪಿ ಪ್ರಮೋದತೇ ।
ತಸ್ಮಾದಾಯತನಂ ಭಕ್ತ್ಯಾ ಯಃ ಕುರ್ಯಾ ನ್ಮುನಿಸತ್ತಮಾಃ ॥೨೮॥
ಕಾಷ್ಠೇಷ್ಟಕಾದಿಭಿ ರ್ಮರ್ತ್ಯಃ ಶಿವಲೋಕೇ ಮಹೀಯತೇ ।
ಪ್ರಸಾದಾರ್ಥಂ ಮಹೇಶಸ್ಯ ಪ್ರಾಸಾದೋ ಮುನಿಪುಂಗವಾಃ ॥೨೯॥
ಕರ್ತವ್ಯಃ ಸರ್ವಯತ್ನೇನ ಧರ್ಮ ಕಾಮಾರ್ಥ ಮುಕ್ತಯೇ ।
ಅಶಕ್ತ ಶ್ಚೇ ನ್ಮುನಿಶ್ರೇಷ್ಠಾಃ ಪ್ರಾಸಾದಂ ಕರ್ತು ಮುತ್ತಮಂ ॥೩೦॥

---

೨೭. ಯಾವನು ಹಿಂದೆ ಹೇಳಿದಂತೆ ಕೆಲಸಮಾಡುವನೋ ಅವನೂ ಕೂಡ ಬಂಧುಗಳೊಡನೆ ಸ್ವರ್ಗಲೋಕಕ್ಕೆ ಹೋಗುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಯಾವನು ತನ್ನ ಸೌಖ್ಯಲಾಭಕ್ಕಾಗಿ ಯಾದರೂ, ಈಶ್ವರ ದೇವಾಲಯದಲ್ಲಿ ಒಂದಾವೃತ್ತಿ ಕೆಲಸವನ್ನು ಮಾಡುವನೋ ಅವನು ಸುಖ ಸಾಧನವನ್ನು ಹೊಂದಿ ಸಂತೋಷವಾಗಿರು ತ್ತಾನೆ.

೨೮. ಆದುದರಿಂದ ಎಲೈ ಋಷಿಶ್ರೇಷ್ಠರಿರಾ, ಯಾವನು ದೇವಾ ಲಯಗಳನ್ನು ಮರ, ಇಟ್ಟಿಗೆ, ಮುಂತಾದುವುಗಳಿಂದ ಮಾಡುವನೋ ಆ ಮನುಷ್ಯನು ಶಿವಲೋಕದಲ್ಲಿ ಪೂಜಿಸಲ್ಪಡುತ್ತಾನೆ.

೨೯–೩೦. ಈಶ್ವರನ ಅನುಗ್ರಹವನ್ನೂ ಮತ್ತು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನೂ ಹೊಂದಲು, ಈಶ್ವರನಿಗೆ ಎಲ್ಲಾ ಪ್ರಯತ್ನ ದಿಂದಲೂ, ದೇವಾಲಯವನ್ನು ಕಟ್ಟಿಸಬೇಕು. ಶ್ರೇಷ್ಠವಾದ ದೇವಾ ಲಯವನ್ನು ಕಟ್ಟಲು ಸಾಧ್ಯವಿಲ್ಲದವನು, ಅಲ್ಲಿ ಗುಡಿಸುವುದು, ಮುಂತಾದ ಕೆಲಸಗಳನ್ನು ಮಾಡುವುದರಿಂದಲೂ, ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ.

ಸಂ ಮಾರ್ಜನಾದಿ ಭಿ ರ್ವಾಽಪಿ ಸರ್ವಾನ್ ಕಾಮಾನವಾಪ್ನುಯಾತ್
ಸಂಮಾರ್ಜನಂ ತು ಯಃ ಕುರ್ಯಾ ನ್ಮಾರ್ಜನ್ಯಾ ಮೃದುಸೂಕ್ಷ್ಮಯಾ
ಚಾಂದ್ರಾಯಣ ಸಹಸ್ರಸ್ಯ ಫಲಂ ಮಾಸೇನ ಲಭ್ಯತೇ।
ಯಃ ಕುರ್ಯಾದ್ವಸ್ತ್ರಪೂತೇನ ಗಂಧ ಗೋಮಯ ವಾರಿಣಾ ॥೩೨॥
ಆಲೇಪನಂ ಯಥಾ ನ್ಯಾಯಂ ವರ್ಷ ಚಾಂದ್ರಾಯಣಂ ಲಭೇತ್।
ಅರ್ಧ ಕ್ರೋಶಂ ಶಿವಕ್ಷೇತ್ರಂ ಶಿವಲಿಂಗಾ ತ್ಸಮಂತತಃ ॥೩೩॥
ಯಸ್ತ್ಯಜೇ ದ್ದು ಸ್ತ್ಯಜಾನ್ ಪ್ರಾಣಾನ್ ಶಿವಸಾಯುಜ್ಯ ಮಾಪ್ನುಯಾತ್ ।
ಸ್ವಾಯಂ ಭುವಸ್ಯ ಮಾನಂ ಹಿ ತಥಾ ಬಾಣಸ್ಯ ಸುವ್ರತಾಃ ॥೩೪॥

---

೩೧. ಮೃದುವಾಗಿಯೂ, ಸಣ್ಣದಾಗಿಯೂ ಇರುವ ಪರಕೆಯಿಂದ ಯಾವನು ಶಿವದೇವಸ್ಥಾನದಲ್ಲಿ ಗುಡಿಸುವನೋ ಅವನು ಸಾವಿರ ಚಾಂದ್ರಾಯಣ ವ್ರತವನ್ನು ಮಾಡಿ ಬರುವ ಫಲವನ್ನು ಒಂದೇ ತಿಂಗಳಲ್ಲಿ ಹೊಂದುತ್ತಾನೆ.

೩೨. ಯಾವನು ಬಟ್ಟೆಯಿಂದ ಶೋಧಿಸಿದ, ಸುಗಂಧವಾದ ನೀರಿನಿಂದಲೂ, ಸಗಣಿ ನೀರಿನಿದಲೂ, ದೇವಸ್ಥಾನದಲ್ಲಿ ಬಳಿಯುವನೋ (ಸಾರಿಸುವನೋ) ಅವನು ಶಾಸ್ತ್ರೋಕ್ತವಾಗಿ ಒಂದು ವರ್ಷದವರೆಗೂ ಮಾಡಿದ ಚಾಂದ್ರಾಯಣ ವ್ರತದ ಫಲವನ್ನು ಹೊಂದುತ್ತಾನೆ.

೩೩. ಶಿವಲಿಂಗದಿಂದ ಹಿಡಿದು ಸುತ್ತಲೂ ಅರ್ಧ ಹರಿದಾರಿದೂರ ಇರುವ ಶಿವಕ್ಷೇತ್ರದಲ್ಲಿ ಯಾವನು ಬಿಡಲಸಾಧ್ಯವಾದ ಪ್ರಾಣವನ್ನು ಬಿಡುವನೋ ಇವನು ಶಿವನೊಡನೆ ಐಕ್ಯವನ್ನೇ ಹೊಂದುತ್ತಾನೆ. (ಮುಕ್ತನಾಗುತ್ತಾನೆ.)

೩೪. ಎಲೈ ಒಳ್ಳೆವ್ರತ (ನಿಯಮ) ಗಳುಳ್ಳ ಋಷಿಗಳಾ, ಕೇಳಿ. ತಾನಾಗಿ ಉದ್ಭವಿಸಿದ ಜ್ಯೋತಿರ್ಲಿಂಗದ ಕ್ಷೇತ್ರವೂ, ಲಿಂಗದ ಸುತ್ತಲೂ ಅರ್ಧ ಹರಿದಾರಿಯ ವಿಸ್ತಾರವುಳ್ಳದ್ದು.

ಸ್ವಾಯಂಭುವೇ ತದರ್ಧಂ ಸ್ಯಾತ್ ಸ್ಯಾದಾ ರ್ಷೇ ಚ ತದರ್ಧಕಂ ।
ಮಾನುಷೇ ಚ ತದರ್ಧಂ ಸ್ಯಾತ್ ಕ್ಷೇತ್ರಮಾನಂ ದ್ವಿಜೋತ್ತಮಾಃ ॥
ಏವಂ ಯತೀನಾ ಮಾವಾಸೇ ಕ್ಷೇತ್ರ ಮಾನಂ ದ್ವಿಜೋತ್ತಮಾಃ ।
ರುದ್ರಾವತಾರೇ ಚಾದ್ಯಂ ಯಚ್ಛಿಷ್ಯೇ ಚೈವ ಪ್ರಶಿಷ್ಯಕೇ ॥೩೬॥
ನರಾವತಾರೇ ತಚ್ಛಿಷ್ಯೇ ತಚ್ಛಿಷ್ಯೇ ಚ ಪ್ರಶಿಷ್ಯಕೇ ।
ಶ್ರೀ ಪರ್ವತೇ ಮಹಾಪುಣ್ಯೇ ತಸ್ಯ ಪ್ರಾಂತೇ ಚ ವಾ ದ್ವಿಜಾಃ ॥೩೭॥
ವಾರಾಣಸ್ಯಾಂ ತಥಾಽ ಪ್ಯೇವ ಮವಿಮುಕ್ತೇ ವಿಶೇಷತಃ ॥೩೮॥

---

೩೫. ಎಲೈ ಬ್ರಾಹ್ಮಣೋತ್ತಮರಿರಾ, ಕೇಳಿ, ಬೇರೆ ತಾನಾಗಿ ಉದ್ಭವಿಸಿದ ಲಿಂಗಗಳ ಸ್ಥಾನದಲ್ಲಿ ಅರ್ಧಹರಿದಾರಿಯ (ಎಂದರೆ ಕಾಲು ಭಾಗ ಶಿವಕ್ಷೇತ್ರವಾಗುವುದು. ಋಷಿಗಳು ಸ್ಥಾಪಿಸಿದ ಲಿಂಗದ ಸ್ಥಾನ ದಲ್ಲಿ ಹಿಂದೆ ಹೇಳಿದುದರ ಅರ್ಧಭಾಗವು (ಎಂದರೆ ಅರೆಕಾಲು ಭಾಗವು) ಶಿವಕ್ಷೇತ್ರವಾಗುವುದು. ಮನುಷ್ಯರು ಸ್ಥಾಪಿಸಿದ ಲಿಂಗ ಸ್ಥಾನದಲ್ಲಿ ಅರೆಕಾಲಿನ ಅರ್ಧಭಾಗವು ಶಿವಕ್ಷೇತ್ರವಾಗುವುದು. ಈ ರೀತಿಯಾಗಿ ಕ್ಷೇತ್ರದ ಅಳತೆಯೆಂದು ತಿಳಿಯಬೇಕು.

೩೬–೩೭. ಎಲೈ ಬ್ರಾಹ್ಮಣೋತ್ತಮರಿರಾ, ಸಂನ್ಯಾಸಿಗಳು ವಾಸ ಮಾಡುವ ಸ್ಥಾನದಲ್ಲಿ ಶಿವಕ್ಷೇತ್ರದ ಪ್ರಮಾಣವು (ಹದಿನಾರನೆಯ ಒಂದುಭಾಗವಾಗಿರುವುದು. ಎಲೈ ಬ್ರಾಹ್ಮಣರಾ, ಏಳನೆಯ ಅಧ್ಯಾಯದಲ್ಲಿ ಹೇಳಿದ ರುದ್ರನು ಶ್ವೇತ ಮುಂತಾದ ಅವತಾರ ಮಾಡಿದ ಸ್ಥಾನಗಳಲ್ಲಿಯೂ, ಮನುಷ್ಯರೂಪದಲ್ಲಿ ಅವತಾರ ಮಾಡಿದ ಸ್ಥಾನ ದಲ್ಲೂ, ಮತ್ತು ಅವನ ಶಿಷ್ಯರೂ, ಶಿಷ್ಯರ ಶಿಷ್ಯರೂ, ಇರುವ ಸ್ಥಾನ ದಲ್ಲೂ, ಶ್ರೀಪರ್ವತದಲ್ಲೂ, ಬಹಳ ಪವಿತ್ರವಾದ ಅದರ ಸುತ್ತಮುತ್ತಿನ ಪ್ರದೇಶದಲ್ಲೂ.) ಯಾವನು ಪ್ರಾಣಗಳನ್ನು ಬಿಡುವನೋ, ಅವನು ಶಿವ ಸಾಯುಜ್ಯವನ್ನು ಹೊಂದುತ್ತಾನೆ.

೩೮–೩೯. ಕಾಶಿಯಲ್ಲೂ, ಅಲ್ಲಿಯೂ, ಅವಿಮುಕ್ತೇಶ್ವರನ (ವಿಶ್ವೇ ಶ್ವರನ) ಪ್ರದೇಶದಲ್ಲೂ, ಕೇದಾರದಲ್ಲೂ, ದೊಡ್ಡ ಕ್ಷೇತ್ರವಾದ ಪ್ರಯಾಗ

ಕೇದಾರೇ ಚ ಮಹಾಕ್ಷೇತ್ರೇ ಪ್ರಯಾಗೇ ಚ ವಿಶೇಷತಃ ।
ಕುರುಕ್ಷೇತ್ರೇ ಚ ಯಃ ಪ್ರಾಣಾನ್ ಸಂತ್ಯಜೇದ್ಯಾತಿ ನಿರ್ವೃತಿಂ ॥೩೯॥
ಪ್ರಭಾಸೇ ಪುಷ್ಕರೇಽವಂತ್ಯಾಂ ತಥಾ ಚೈವಾಮರೇಶ್ವರೇ ।
ವಣೀಶೇ (ಶೈ) ಲಾಕುಲೇ ಚೈವ ಮೃತೋ ಯಾತಿ ಶಿವಾತ್ಮತಾಂ ॥
ವಾರಾಣಸ್ಯಾಂ ಮೃತೋ ಜಂತು ರ್ನ ಜಾತು ಜಂತು ತಾಂ ವ್ರಜೇತ್
ತ್ರಿವಿಷ್ಟಪೇಽವಿಮುಕ್ತೇ ಚ ಕೇದಾರೇ ಸಂಗಮೇಶ್ವರೇ ॥೪೧॥
ಶಾಲಕೇ ವಾ ತ್ಯಜೇತ್ ಪ್ರಾಣನ್ ತಥಾ ವೈ ಜಂಬುಕೇಶ್ವರೇ ।
ಶುಕ್ರೇಶ್ವರೇ ವಾ ಗೋಕರ್ಣೇ ಭಾಸ್ಕರೇಶೇ ಗುಹೇಶ್ವರೇ ॥೪೨॥
ಹಿರಣ್ಯಗರ್ಭೇ ನಂದೀಶೇ ಸ ಯಾತಿ ಪರಮಾಂ ಗತಿಂ ।
ನಿಯಮೈಃ ಶೋಷ್ಯ ಯೋ ದೇಹಂ ತ್ಯಜೇತ್ ಕ್ಷೇತ್ರೇ ಶಿವಸ್ಯ ತು ॥

---

ದಲ್ಲೂ, ಯಾವನು ಪ್ರಾಣವನ್ನು ಬಿಡುವನೋ ಅವನು ಮೋಕ್ಷವನ್ನು ಹೊಂದುತ್ತಾನೆ.

೪೦. ಪ್ರಭಾಸ ಕ್ಷೇತ್ರದಲ್ಲೂ, ಪುಷ್ಕರ, ಅವಂತೀ, ಕಾಡುಗುಡ್ಡಗಳಿಂದ ವ್ಯಾಪಿಸಲ್ಪಟ್ಟ ಅಮರೇಶ್ವರ, ಈ ಮೂರು ಕ್ಷೇತ್ರಗಳಲ್ಲೂ ಸತ್ತವನು ಶಿವನ ಸ್ವರೂಪವನ್ನೇ ಹೊಂದುತ್ತಾನೆ.

೪೧–೪೨. ಕಾಶಿಯಲ್ಲಿ ಸತ್ತ ಪ್ರಾಣಿಯು ತಿರುಗಿ ಜಂತುತ್ವವನ್ನು ಹೊಂದುವುದಿಲ್ಲ. (ಎಂದರೆ ತಿರುಗಿ ಯಾವ ಜನ್ಮವನ್ನೂ ಹೊಂದುವುದಿಲ್ಲ.) ತ್ರಿವಿಷ್ಟಪ, ಅವಿಮುಕ್ತ, ಕೇದಾರೇಶ್ವರ, ಸಂಗಮೇಶ್ವರ, ಶಾಲಕ, ಜಂಬುಕೇಶ್ವರ, ಗೋಕರ್ಣ, ಭಾಸ್ಕರೇಶ್ವರ, ಗುಹೇಶ್ವರ, ಹಿರಣ್ಯಗರ್ಭ, ನಂದೀಶ್ವರ, ಈ ರೀತಿಯ ಹೆಸರಿನ ಈಶ್ವರ ಲಿಂಗಗಳನ್ನು ಪ್ರತಿಷ್ಠೆ ಮಾಡಿರುವ ಕ್ಷೇತ್ರಗಳಲ್ಲಿ ಯಾವನು ಪ್ರಾಣವನ್ನು ಬಿಡುತ್ತಾನೆಯೋ ಅವನು ಉತ್ತಮವಾದ ಗತಿಯನ್ನು ಹೊಂದುತ್ತಾನೆ.

೪೩–೪೪. ಎಲೈ ಮುನಿಶ್ರೇಷ್ಠರಿರಾ, ಯಾವನು ಶಿವಕ್ಷೇತ್ರಗಳಲ್ಲಿ ತನ್ನ ಶರೀರವನ್ನು ವ್ರತಗಳಿಂದ (ಉಪವಾಸ ಮುಂತಾದ ನಿಯಮ

**ಸ ಯಾತಿ ಶಿವತಾಂ ಯೋಗೀ ಮಾನುಷೇ ದೈವಿಕೇಽಪಿ ವಾ ।**
**ಆರ್ಷೇ ವಾಽಪಿ ಮುನಿಶ್ರೇಷ್ಠಾಃ ತಥಾ ಸ್ವಾಯಂಭುವೇಽಪಿ ವಾ ॥**
**ಸ್ವಯಂ ಭೂತೇ ತಥಾ ದೇವೇ ನಾತ್ರಕಾರ್ಯಾ ವಿಚಾರಣಾ ।**
**ಅಥಾಯಾಗ್ನಿಂ ಶಿವಕ್ಷೇತ್ರೇ ಸಂಪೂಜ್ಯ ಪರಮೇಶ್ವರಂ ॥೪೫॥**
**ಸ್ವ ದೇಹಪಿಂಡಂ ಜುಹುಯಾ ದ್ಯಃ ಸ ಯಾತಿ ಪರಾಂ ಗತಿಂ ।**
**ಯಾವ ತ್ತಾವನ್ನಿರಾಹಾರೋ ಭೂತ್ವಾ ಪ್ರಾಣಾನ್ ಪರಿತ್ಯಜೇತ್ ॥**
**ಶಿವಕ್ಷೇತ್ರೇ ಮುನಿಶ್ರೇಷ್ಠಾಃ ಶಿವಸಾಯುಜ್ಯ ಮಾಪ್ನುಯಾತ್ ।**
**ಛಿತ್ವಾ ಪಾದದ್ವಯಂ ಚಾಪಿ ಶಿವಕ್ಷೇತ್ರೇ ವಸೇತ್ತು ಯಃ ॥೪೭॥**

---

ಗಳಿಂದ) ಒಣಗಿಸಿ, ಅನಂತರ ದೇಹವನ್ನು ಬಿಡುವನೋ ಆ ಯೋಗಿಯು ಶಿವಸ್ವರೂಪವನ್ನೇ ಹೊಂದುತ್ತಾನೆ. ಮನುಷ್ಯರಿಂದಾಗಲಿ, ದೇವತೆಗಳಿಂದಾಗಲಿ, ಋಷಿಗಳಿಂದಾಗಲಿ, ಸ್ಥಾಪಿಸಲ್ಪಟ್ಟ, ಶಿವಕ್ಷೇತ್ರದಲ್ಲೂ ಮತ್ತು ತಾನಾಗಿಯೇ ಉದ್ಭವಿಸಿದ ಶಿವನ ಕ್ಷೇತ್ರದಲ್ಲೂ, ಜ್ಯೋತಿರ್ಲಿಂಗವಿರುವ ಕ್ಷೇತ್ರದಲ್ಲೂ, ದೇಹವನ್ನು ಬಿಟ್ಟ ಆ ಯೋಗಿಯು ಶಿವಸ್ವರೂಪವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದಿಲ್ಲ.

೪೫. ಯಾವನು ಶಿವಕ್ಷೇತ್ರದಲ್ಲಿ ಯಜ್ಞೇಶ್ವರನನ್ನು ಸ್ಥಾಪಿಸಿ, ಮತ್ತು ಈಶ್ವರನನ್ನು ಪೂಜಿಸಿ, ಆ ಯಜ್ಞೇಶ್ವರನಲ್ಲಿಯೇ ತನ್ನ ದೇಹಪಿಂಡವನ್ನು ಹೋಮ ಮಾಡುವನೋ (ಎಂದರೇ ಅಲ್ಲಿಯೇ ಶಾಸ್ತ್ರೀಯವಾಗಿ ತನ್ನ ಶರೀರವನ್ನು ಅಗ್ನಿಯಲ್ಲಿ ಬಿಡುವನೋ) ಅವನು ಉತ್ತಮವಾದ ಗತಿಯನ್ನು (ಶಿವಲೋಕವನ್ನೂ, ಮೋಕ್ಷವನ್ನೂ) ಹೊಂದುತ್ತಾನೆ.

೪೬. ಎಲೈ ಮುನಿಶ್ರೇಷ್ಠರಿರಾ, ಯಾವನು ಪ್ರಾಣಬಿಡುವ ಪರ್ಯಂತ ಆಹಾರವಿಲ್ಲದೇ ಇದ್ದು, ಅನಂತರ ಶಿವಕ್ಷೇತ್ರದಲ್ಲಿ ಪ್ರಾಣವನ್ನು ಬಿಡುವನೋ ಅವನು ಶಿವನ ಸಾಯುಜ್ಯವನ್ನು ಹೊಂದುವನು.

೪೭. ಯಾವನು ಶಿವಕ್ಷೇತ್ರಗಳಲ್ಲಿ ಎರಡು ಕಾಲುಗಳನ್ನೂ ಕತ್ತರಿಸಿಕೊಂಡು, ಶಿವಕ್ಷೇತ್ರವನ್ನು ಬಿಡದೆ ವಾಸಮಾಡುತ್ತಾನೆಯೋ ಅವನು ಶಿವಸ್ವರೂವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದಿಲ್ಲ.

ಸ ಯಾತಿ ಶಿವತಾಂ ಚೈವ ನಾತ್ರ ಕಾರ್ಯ ವಿಚಾರಣಾ ।
ಕ್ಷೇತ್ರಸ್ಯ ದರ್ಶನಂ ಪುಣ್ಯಂ ಪ್ರವೇಶ ಸ್ತ್ವ ಚ್ಛತಾಧಿಕಃ ॥೪೮॥
ತಸ್ಮಾ ಚ್ಛತಗುಣಂ ಪುಣ್ಯಂ ಸ್ಪರ್ಶನಂ ಚ ಪ್ರದಕ್ಷಿಣಂ ।
ತಸ್ಮಾ ಚ್ಛತಗುಣಂ ಪುಣ್ಯಂ ಜಲಸ್ನಾನ ಮತಃ ಪರಂ ॥೪೯॥
ಕ್ಷೀರಸ್ನಾನಂ ತತೋ ವಿಪ್ರಾಃ ಶತಾಧಿಕ ಮನುತ್ತಮಂ ।
ದಧ್ನಾ ಸಹಸ್ರ ಮಾಖ್ಯಾತಂ ಮಧುನಾ ತಚ್ಛತಾಧಿಕಂ ॥೫೦॥
ಘೃತ ಸ್ನಾನೇನ ಚಾನಂತಂ ಶಾರ್ಕರೇ ತಚ್ಛತಾಧಿಕಂ ।
ಶಿವಕ್ಷೇತ್ರ ಸಮೀಪಸ್ಥಾಂ ನದೀಂ ಪ್ರಾಪ್ಯಾವ ಗಾಹ್ಯ ಚ ॥೫೧॥

---

೪೮. ಕ್ಷೇತ್ರ ಸಂದರ್ಶನವು ಪುಣ್ಯಕರವಾದುದು. ಕ್ಷೇತ್ರದೊಳಗೆ ಹೋಗುವುದು ದರ್ಶನಕ್ಕಿಂತಲೂ, ನೂರರಷ್ಟು ಹೆಚ್ಚಿನ ಪುಣ್ಯವುಳ್ಳದ್ದು. ಇದಕ್ಕಿಂತಲೂ ಕ್ಷೇತ್ರವನ್ನು ಮುಟ್ಟುವುದೂ, ಪ್ರದಕ್ಷಿಣೆ ಮಾಡುವುದೂ, ನೂರರಷ್ಟು ಇಮ್ಮಡಿಯಾದ ಪುಣ್ಯವುಳ್ಳದ್ದು.

೪೯-೫೦. ಅದಕ್ಕಿಂತಲೂ ಈಶ್ವರನಿಗೆ ಜಲಾಭಿಷೇಕ ಮಾಡುವುದು ನೂರರಷ್ಟು ಹೆಚ್ಚು ಪುಣ್ಯವುಳ್ಳದ್ದು. ಇದಕ್ಕಿಂತಲೂ, ಹಾಲಿನ ಅಭಿಷೇಕವು ನೂರರಷ್ಟು ಹೆಚ್ಚಿನ ಪುಣ್ಯಕರವಾದುದು. ಎಲೈ ಬ್ರಾಹ್ಮಣರಾ, ಅದಕ್ಕಿಂತಲೂ, ಮೊಸರಿನ ಅಭಿಷೇಕವು ಸಾವಿರಪಾಲು ಪುಣ್ಯವುಳ್ಳದ್ದು. ಅದಕ್ಕಿಂತಲೂ ಜೇನುತುಪ್ಪದ ಅಭಿಷೇಕವು ನೂರುಪಾಲು ಹೆಚ್ಚಾದ ಪುಣ್ಯವುಳ್ಳದ್ದು. ಅದಕ್ಕಿಂತಲೂ ತುಪ್ಪದ ಅಭಿಷೇಕವು ಕೊನೆಗಾಣದ ಪುಣ್ಯವನ್ನು ಕೊಡುವ ಶಕ್ತಿಯುಳ್ಳದ್ದು. ಸಕ್ಕರೆಯ ಅಭಿಷೇಕವು ನೂರರಷ್ಟು ಹೆಚ್ಚಿನ ಪುಣ್ಯಕರವಾದ ಸ್ವಭಾವವುಳ್ಳದ್ದು.

೫೧. ಶಿವಕ್ಷೇತ್ರದ ಸಮೀಪದಲ್ಲಿರುವ ನದಿಗೆ ಹೋಗಿ ಸ್ನಾನವನ್ನು ಮಾಡಿ ಅನ್ನವಿಲ್ಲದೇ ತನ್ನ ದೇಹವನ್ನು ಯಾವನು ಬಿಡುವನೋ ಅವನು ಶಿವಲೋಕದಲ್ಲಿ ಪೂಜಿಸಲ್ಪಡುತ್ತಾನೆ.

**ತ್ಯಜೇದ್ದೇಹಂ ವಿಹಾಯಾನ್ನಂ ಶಿವಲೋಕೇ ಮಹೀಯತೇ ।**
**ಶಿವಕ್ಷೇತ್ರ ಸಮೀಪಸ್ಥಾಃ ನದ್ಯಃ ಸರ್ವಾಃ ಸುಶೋಭನಾಃ ॥೫೨॥**
**ವಾಪೀ ಕೂಪ ತಟಾಕಾಶ್ಚ ಶಿವತೀರ್ಥಾ ಇತಿ ಸ್ಮೃತಾಃ ।**
**ಸ್ನಾತ್ವಾ ತೇಷು ನರೋ ಭಕ್ತ್ಯಾ ತೀರ್ಥೇಷು ದ್ವಿಜಸತ್ತಮಾಃ ॥೫೩॥**
**ಬ್ರಹ್ಮಹತ್ಯಾಽಽದಿಭಿಃ ಪಾಪೈಃ ಮುಚ್ಯತೇ ನಾತ್ರ ಸಂಶಯಃ ।**
**ಪ್ರಾತಃ ಸ್ನಾತ್ವಾ ಮುನಿಶ್ರೇಷ್ಠಾಃ ಶಿವತೀರ್ಥೇಷು ಮಾನವಃ ॥೫೪॥**
**ಅಶ್ವಮೇಧ ಫಲಂ ಪ್ರಾಪ್ಯ ರುದ್ರಲೋಕಂ ಸ ಗಚ್ಛತಿ ।**
**ಮಧ್ಯಾಹ್ನೇ ಶಿವತೀರ್ಥೇಷು ಸ್ನಾತ್ವಾ ಭಕ್ತ್ಯಾ ಸಕೃನ್ನರಃ ॥೫೫॥**
**ಗಂಗಾ ಸ್ನಾನ ಸಮಂ ಪುಣ್ಯಂ ಲಭತೇ ನಾತ್ರ ಸಂಶಯಃ ।**
**ಅಸ್ತಂ ಗತೇ ತಥಾ ಚಾರ್ಕೇ ಸ್ನಾತ್ವಾ ಗಚ್ಛೇಚ್ಛಿವಂ ಪದಂ ॥೫೬॥**

---

೫೨. ಶಿವಕ್ಷೇತ್ರದ ಸಮೀಪದಲ್ಲಿರುವ ಎಲ್ಲ ನದಿಗಳೂ ಪವಿತ್ರತೆಯಲ್ಲಿ ಶ್ರೇಷ್ಠವಾದವುಗಳು. ಇವೂ ಮತ್ತು ಇಂತಹ ಕೊಳ, ಬಾವಿ, ಕೆರೆಗಳು ಇವೆಲ್ಲವೂ ಶಿವತೀರ್ಥಗಳೆಂದು ಭಾವಿಸಲ್ಪಟ್ಟಿವೆ.

೫೩. ಎಲೈ ಬ್ರಾಹ್ಮಣೋತ್ತಮರಾ, ಆ ತೀರ್ಥಗಳಲ್ಲಿ ಭಕ್ತಿಯಿಂದ ಸ್ನಾನಮಾಡಿದ ಮನುಷ್ಯನು ಬ್ರಹ್ಮಹತ್ಯೇ ಮುಂತಾದ ಪಾಪಗಳಿಂದ ಬಿಡಲ್ಪಡುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೫೪. ಎಲೈ ಮುನಿಶ್ರೇಷ್ಠರಿರಾ, ಶಿವತೀರ್ಥದಲ್ಲಿ ಬೆಳಿಗ್ಗೆ ಮನುಷ್ಯನು ಸ್ನಾನಮಾಡುವವನು ಅಶ್ವಮೇಧಯಾಗದ ಫಲವನ್ನು ಹೊಂದಿ, ಅನಂತರದಲ್ಲಿ ರುದ್ರ ಲೋಕಕ್ಕೆ ಹೋಗುತ್ತಾನೆ.

೫೫. ಮಧ್ಯಾಹ್ನದಲ್ಲಿ ಮನುಷ್ಯನು ಭಕ್ತಿಯಿಂದ ಶಿವತೀರ್ಥದಲ್ಲಿ ಒಂದಾವೃತ್ತಿ ಸ್ನಾನಮಾಡುವವನು, ಗಂಗಾಸ್ನಾನಕ್ಕೆ ಸಮಾನವಾದ ಪುಣ್ಯವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೫೬. ಸೂರ್ಯನು ಅಸ್ತವಾಗುವಾಗಲೂ ಶಿವತೀರ್ಥದಲ್ಲಿ ಸ್ನಾನ ಮಾಡಿದ ಮನುಷ್ಯನು ಪಾಪಕವಚವನ್ನು ತೆಗೆದುಹಾಕಿ ಶಿವನ ಸ್ಥಾನವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಪಾಪ ಕಂಚುಕ ಮುತ್ಸೃಜ್ಯ ಶಿವತೀರ್ಥೇಷು ಮಾನವಃ ।
ದ್ವಿಜಾ ಸ್ತ್ರಿಷವಣಂ ಸ್ನಾತ್ವಾ ಶಿವತೀರ್ಥೇ ಸಕೃನ್ನರಃ ॥೫೭॥
ಶಿವ ಸಾಯುಜ್ಯ ಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಪುರಾ ತು ಸೂಕರಃ ಕಶ್ಚಿತ್ ಶ್ವಾನಂ ದೃಷ್ಟ್ವಾ ಭಯಾತ್ ಪಥಿ॥೫೮॥
ಪ್ರಸಂಗಾ ದ್ವಾರ ಮೇಕಂ ತು ಶಿವತೀರ್ಥೇಽವಗಾಹ್ಯ ಚ ।
ಮೃತಃ ಸ್ವಯಂ ದ್ವಿಜಶ್ರೇಷ್ಠಾ ಗಾಣಪತ್ಯ ಮವಾಪ್ತವಾನ್ ॥೫೯॥
ಯಃ ಪ್ರಾತ ರ್ದೇವ ದೇವೇಶಂ ಶಿವಂ ಲಿಂಗ ಸ್ವರೂಪಿಣಂ ।
ಪಶ್ಯೇತ್ ಸ ಯಾತಿ ಸರ್ವಸ್ಮಾ ದಧಿಕಾಂ ಗತಿಮೇವ ಚ ॥೬೦॥
ಮಧ್ಯಾಹ್ನೇ ಚ ಮಹಾದೇವಂ ದೃಷ್ಟ್ವಾ ಯಜ್ಞಫಲಂ ಲಭೇತ್ ।
ಸಾಯಾಹ್ನೇ ಸರ್ವಯಜ್ಞಾನಾಂ ಫಲಂ ಪ್ರಾಪ್ಯ ವಿಮುಚ್ಯತೇ ॥

---

೫೭. ಎಲೈ ಬ್ರಾಹ್ಮಣರಾ, ಶಿವತೀರ್ಥದಲ್ಲಿ ಮೂರುಹೊತ್ತು ಒಂದಾವೃತ್ತಿ, ಸ್ನಾನಮಾಡಿದ ಮನುಷ್ಯನು ಶಿವಸಾಯುಜ್ಯವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ವಿಚಾರ ಮಾಡಬೇಕಾದುದಿಲ್ಲ.

೫೮–೫೯. ಎಲೈ ಬ್ರಾಹ್ಮಣಶ್ರೇಷ್ಠರಿರಾ, ಹಿಂದೆ ಒಂದು ಹಂದಿಯು ಹಾದಿಯಲ್ಲಿ ಒಂದು ನಾಯಿಯನ್ನು ನೋಡಿ, ಭೀತಿಯಿಂದ (ಓಡಿಬರುತ್ತಾ) ದಾರಿಯಲ್ಲಿ ಸಿಕ್ಕಿದ ಶಿವತೀರ್ಥದಲ್ಲಿ ಬಂದು ಒಂದುವಾರ ಮುಳುಗಿ ಸತ್ತುಹೋಯಿತು. ಅನಂತರದಲ್ಲಿ ಅದು (ಪರಲೋಕದಲ್ಲಿ) ಗಣಗಳ ಮೇಲೆ ಪ್ರಭುತ್ವವನ್ನು ವಹಿಸಿತು.

೬೦. ಯಾವನು ದೇವದೇವೋತ್ತಮನಾದ ಮತ್ತು ಲಿಂಗರೂಪದಲ್ಲಿರುವ ಶಿವನನ್ನು ಬೆಳಿಗ್ಗೆ ನೋಡುವನೋ ಅವನು ಎಲ್ಲಕ್ಕಿಂತಲೂ ಮೇಲಾದ ಗತಿಯನ್ನು ಹೊಂದುತ್ತಾನೆ.

೬೧. ಮಧ್ಯಾಹ್ನದಲ್ಲಿ ಈಶ್ವರನನ್ನು ನೋಡಿದವನು ಯಾಗದ ಫಲವನ್ನು ಹೊಂದುತ್ತಾನೆ. ಸಾಯಂಕಾಲದಲ್ಲಿ ಶಿವನನ್ನು ನೋಡಿದವನು ಎಲ್ಲಾ ಯಾಗಗಳ ಫಲವನ್ನೂ ಹೊಂದಿ ಮೋಕ್ಷವನ್ನು ಪಡೆಯುತ್ತಾನೆ.

ಮಾನಸೈ ರ್ವಾಚಿಕೈಃ ಪಾಪೈಃ ಕಾಯಿಕೈಶ್ಚ ಮಹತ್ತರೈಃ ।
ತಥೋ ಪ ಪಾತಕೈ ಶ್ಚೈವ ಪಾಪೈ ಶ್ಚೈವಾನುಪಾತಕೈಃ ॥೬೨॥

ಸಂಕ್ರಮೇ ದೇವ ಮೀಶಾನಂ ದೃಷ್ಟ್ವಾ ಲಿಂಗಾಕೃತಿಂ ಪ್ರಭುಂ ।
ಮಾಸೇನ ಯತ್ಕೃತಂ ಪಾಪಂ ತ್ಯಕ್ತ್ವಾ ಯಾತಿ ಶಿವಂ ಪದಂ ॥೬೩॥

ಅಯನೇ ಚಾರ್ಧಮಾಸೇನ ದಕ್ಷಿಣೇ ಚೋತ್ತರಾಯಣೇ ।
ವಿಷುವೇ ಚೈವ ಸಂಪೂಜ್ಯ ಪ್ರಯಾತಿ ಪರಮಾಂ ಗತಿಂ ॥೬೪॥

ಪ್ರದಕ್ಷಿಣ ತ್ರಯಂ ಕುರ್ಯಾ ದ್ಯಃ ಪ್ರಸಾದಂ ಸಮಂತತಃ ।
ಸವ್ಯಾ ಪ ಸವ್ಯ ನ್ಯಾಯೇನ ಮೃದುಗತ್ಯಾ ಶುಚಿ ರ್ನರಃ ॥೬೫॥

---

೬೨. ಹಾಗೆಯೇ ಅಂತಹ ಭಕ್ತನು ಕಾಯಿಕ, ವಾಚಿಕ, ಮಾನಸಿಕಗಳಾದ ಮಹಾಪಾತಕಗಳಿಂದಲೂ, ಉಪಪಾತಕಗಳಿಂದಲೂ, ಅನುಪಾತಕಗಳಿಂದಲೂ ಬಿಡಲ್ಪಡುತ್ತಾನೆ.

೬೩. ಸಂಕ್ರಮಣ ಕಾಲದಲ್ಲಿ ಲಿಂಗಾಕಾರದಲ್ಲಿರುವ ಮತ್ತು ಪ್ರಭುವಾಗಿಯೂ, ಪ್ರಕಾಶಮಾನವಾಗಿಯೂ, ಇರುವ ಈಶ್ವರನನ್ನು ನೋಡಿದರೆ ಒಂದು ತಿಂಗಳಲ್ಲಿ ಮಾಡಿದ ಪಾಪವನ್ನು ಕಳೆದುಕೊಂಡು ಭಕ್ತನು ಶಿವಸ್ಥಾನವನ್ನು ಹೊಂದುತ್ತಾನೆ.

೬೪. ದಕ್ಷಿಣಾಯನದಲ್ಲೂ, ಉತ್ತರಾಯಣದಲ್ಲೂ, ಹಗಲು, ರಾತ್ರಿ, ಸಮವಾಗಿ ಬರುವ ಕಾಲದಲ್ಲೂ, ಈಶ್ವರನನ್ನು ಪೂಜಿಸಿದವನು ಅರ್ಧ ತಿಂಗಳಲ್ಲಿ ಮಾಡಿರಬಹುದಾದ ಪಾಪಗಳನ್ನು ಕಳೆದುಕೊಂಡು ಉತ್ತಮವಾದ ಗತಿಯನ್ನು ಹೊಂದುತ್ತಾನೆ.

೬೫. ಯಾವನು ಶುಚಿಯಾಗಿ ದೇವಾಲಯವನ್ನು ಸುತ್ತಲೂ ಪ್ರದಕ್ಷಿಣೆಯಾಗಿಯೂ, ಅಪ್ರದಕ್ಷಿಣೆಯಾಗಿಯೂ, ಸೋಮಸೂತ್ರ ವಿಧಿಯನ್ನು ಅನುಸರಿಸಿ ಮೂರುಸುತ್ತು ಮಂದವಾದ (ನಿಧಾನವಾದ) ನಡೆಗೆಯಿಂದ ಸುತ್ತಿಬರುವನೋ ಅವನು ಎಲ್ಲಾ ಕಾಲದಲ್ಲೂ ಅಶ್ವಮೇಧ ಯಾಗದ ಫಲವನ್ನು ಹೊಂದುತ್ತಾನೆ.

ಪದೇ ಪದೇಽಶ್ವಮೇಧಸ್ಯ ಯಜ್ಞಸ್ಯ ಫಲ ಮಾಪ್ನುಯಾತ್ ।
ವಾಚಾ ಯಸ್ತು ಶಿವಂ ನಿತ್ಯಂ ಸಂರೌತಿ ಪರಮೇಶ್ವರಂ ॥೬೬॥

ಸೋಽಪಿ ಯಾತಿ ಶಿವಂ ಸ್ಥಾನಂ ಪ್ರಾಪ್ಯಂ ಕಿಂ ಪುನರೇವಚ ।
ಕೃತ್ವಾ ಮಂಡಲಕಂ ಕ್ಷೇತ್ರಂ ಗಂಧ ಗೋಮಯ ವಾರಿಣಾ ॥೬೭॥

ಮುಕ್ತಾ ಫಲ ಮಯೈ ಶ್ಚೂರ್ಣೈ ರಿಂದ್ರನೀಲ ಮಯೈ ಸ್ತಥಾ ।
ಪದ್ಮರಾಗ ಮಯೈ ಶ್ಚೈವ ಸ್ಫಾಟಿಕೈಶ್ಚ ಸು ಶೋಭನೈಃ ॥೬೮॥

ತಥಾ ಮಾರಕತೈ ಶ್ಚೈವ ಸೌವರ್ಣೈ ರಾಜತೈ ಸ್ತಥಾ ।
ತದ್ವರ್ಣೈ ರ್ಲೌಕಿಕೈಶ್ಚೈವ ಚೂರ್ಣೈ ರ್ವಿತ್ತ ವಿವರ್ಜಿತೈಃ ॥೬೯॥

ಆ ಲಿಖ್ಯ ಕಮಲಂ ಭದ್ರಂ ದಶ ಹಸ್ತ ಪ್ರಮಾಣತಃ ।
ಸಕರ್ಣಿಕಂ ಮಹಾಭಾಗಾ ಮಹಾದೇವ ಸಮೀಪತಃ ॥೭೦॥

ತತ್ರಾ ವಾಹ್ಯ ಮಹಾದೇವಂ ನವಶಕ್ತಿ ಸಮನ್ವಿತಂ ।
ಪಂಚಭಿಶ್ಚ ತಥಾ ಷಡ್ಭಿಃ ಅಷ್ಟಾಭಿ ಶ್ಚೇಷ್ಟದಂ ಪರಂ ॥೭೧॥

---

೬೬. ಯಾವನು ನಿತ್ಯವೂ ಈಶ್ವರನನ್ನು ಶಿವ, ಎಂಬುದಾಗಿ ಗಟ್ಟಿಯಾಗಿ ಕೂಗಿಕೊಳ್ಳುತ್ತಾನೆಯೋ ಅವನೂ ಕೂಡ ಶಿವನ ಸ್ಥಾನವನ್ನು ಹೊಂದುತ್ತಾನೆ. ಇದಕ್ಕಿಂತಲೂ ಮಿಗಿಲಾದ ಪ್ರಾಪ್ಯವಾದ ಫಲವೇನಿದೆ?

೬೭-೭೦. ಎಲೈ ಪೂಜ್ಯರೇ, ಶಿವಕ್ಷೇತ್ರದಲ್ಲಿ ಚಂದನದ ನೀರಿನಿಂದಲೂ ಮತ್ತು ಸಗಣಿ ನೀರಿನಿಂದಲೂ, ಮಂಡಲವನ್ನು ಶುದ್ಧಿ ಮಾಡಿ ಮುತ್ತುಗಳೂ, ನೀಲಮಣಿಗಳೂ, ಹವಳಗಳೂ, ಸ್ಫಟಿಕಗಳೂ, ಹಸುರು ಕಲ್ಲುಗಳು, ಇವುಗಳ ಪುಡಿಗಳಿಂದಲೂ ಮತ್ತು ಚಿನ್ನ, ಬೆಳ್ಳಿ, ಇವುಗಳ ಹುಡಿಗಳಿಂದಲೂ ಅಥವಾ ಇವುಗಳ ಬಣ್ಣವುಳ್ಳ ಮತ್ತು ದುಡ್ಡಿಲ್ಲದ (ಸುಲಭ ಸಾಧ್ಯವಾದ) ಲೋಹಗಳ ಪುಡಿಗಳಿಂದಲೂ, ಈಶ್ವರನ ಸಮೀಪದಲ್ಲಿ ಮಾಡಿದ ಮಂಡಲದ ಮೇಲೆ ಕರ್ಣಿಕೆಯೊಡನೆ, ಮಂಗಳಕರವಾದ ಪದ್ಮವನ್ನು ಬರೆದು,

೭೧-೭೩. ಅದರಲ್ಲಿ ನವಶಕ್ತಿ ದೇವತೆಗಳೊಡನೆ ಈಶ್ವರನನ್ನು "ಸದ್ಯೋಜಾತಾದಿ" ಐದು ಮಂತ್ರಗಳಿಂದಲೂ, "ಹೃದಯಾಯ"

ಪುನರಷ್ಟಾಭಿ ರೀಶಾನಂ ದಶಾರೇ ದಶಭಿ ಸ್ತಥಾ ।
ಪುನ ರ್ಬಾಹ್ಯೇ ಚ ದಶಭಿಃ ಸಂಪೂಜ್ಯ ಪ್ರಣಿ ಪತ್ಯ ಚ ॥೭೨॥
ನಿವೇದ್ಯ ದೇವದೇವಾಯ ಕ್ಷಿತಿ ದಾನ ಫಲಂ ಲಭೇತ್ ।
ಶಿಲಾ ಪಿಷ್ಟಾದಿಭಿ ರ್ವಾಽಪಿ ಪದ್ಮಮಾಲಿಖ್ಯ ನಿರ್ಧನಃ ॥೭೩॥
ಪೂರ್ವೋಕ್ತ ಮಖಿಲಂ ಪುಣ್ಯಂ ಲಭತೇ ನಾತ್ರ ಸಂಶಯಃ ।
ದ್ವಾದಶಾರಂ ತಥಾಽಽಲಿಖ್ಯ ಮಂಡಲೇ ಪದ್ಮ ಮುತ್ತಮಂ ॥೭೪॥
ರತ್ನ ಚೂರ್ಣಾದಿಭಿ ಶ್ಚೂರ್ಣೈಃ ತಥಾ ದ್ವಾದಶ ಮೂರ್ತಿಭಿಃ ।
ಮಂಡಲಸ್ಯ ಚ ಮಧ್ಯೇ ತು ಭಾಸ್ಕರಂ ಸ್ಥಾಪ್ಯ ಪೂಜಯೇತ್ ॥೭೫॥

---

ಎಂಬುವಮಂತ್ರದಿಂದ ಹಿಡಿದು ಆರುಮಂತ್ರಗಳಿಂದಲೂ ಆವಾಹನೆಮಾಡಿ, ಅನಂತರದಲ್ಲಿ ಇಷ್ಟಾರ್ಥವನ್ನು ಕೊಡುವ ಪರಮೇಶ್ವರನನ್ನು ಎಂಟು ಮಂತ್ರಗಳಿಂದ ಪದ್ಮದ ಒಳಭಾಗದಲ್ಲೂ, ಈಶಾನನನ್ನು ಪದ್ಮದ ಹೊರ ಭಾಗದಲ್ಲೂ, ಆವಾಹನೆಮಾಡಿ, ಹತ್ತುದಳ ಪದ್ಮದಲ್ಲಿ ಒಳಗೂ, ಹೊರಗೂ, ಹತ್ತು ಹತ್ತು ಮಂತ್ರಗಳಿಂದ ಆವಾಹನೆ ಮಾಡಿ, ಪೂಜಿಸಿ, ನೀವೇದನ ಮಾಡಿ, ನಮಸ್ಕರಿಸಿದವನು ಭೂದಾನ ಮಾಡಿದ ಫಲವನ್ನು ಹೊಂದು ವನು.

೭೩. ದರಿದ್ರನು ರಂಗೋಲೀ (ಬಿಳಿಯ ಕಲ್ಲಿನ ಹುಡಿ) ಮುಂತಾ ದುವುಗಳಿಂದಲಾದರೂ, ಪದ್ಮವನ್ನು ಬರೆದು ಶಿವನನ್ನು ಪೂಜಿಸಿದರೆ ಹಿಂದೆ ಹೇಳಿದ ಎಲ್ಲಾ ಫಲವನ್ನೂ ಆ ಭಕ್ತನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೭೪–೭೫. ಮಂಡಲದಲ್ಲಿ ಶ್ರೇಷ್ಠವಾದ ಹನ್ನೆರಡು ದಳಗಳಿರುವ ಪದ್ಮ ವನ್ನು ರತ್ನಪುಡಿ, ಮುಂತಾದ ಪುಡಿಗಳಿಂದ ಬರೆದು, ಮಂಡಲ ಮಧ್ಯ ದಲ್ಲಿ ಹನ್ನೆರಡು ಮೂರ್ತಿಗಳಿಂದ ಕೂಡಿದ ಸೂರ್ಯನನ್ನು ಸ್ಥಾಪನೆ ಮಾಡಿ (ಎಂದರೆ ಹನ್ನೆರಡು ಸೂರ್ಯ ಮೂರ್ತಿಗಳನ್ನು ಸ್ಥಾಪಿಸಿ) ಪೂಜಿಸಬೇಕು. ಅಥವಾ, ನವಗ್ರಹಗಳೊಡನೆ ಸುತ್ತುವರಿದ ಸೂರ್ಯ ಮೂರ್ತಿಯನ್ನು ಸ್ಥಾಪಿಸಿ ಪೂಜಿಸಬೇಕು. ಈ ರೀತಿ ಪೂಜಿಸಿದವನು ಸೂರ್ಯ ಸಾಯುಜ್ಯ ವನ್ನು ಹೊಂದುತ್ತಾನೆ.

ಗ್ರಹೈಃ ಶ್ಚ ಸಂವೃತಂ ವಾಽಪಿ ಸೂರ್ಯಸಾಯುಜ್ಯ ಮಾಪ್ನುಯಾತ್ ।
ಏವಂ ಪ್ರಾಕೃತ ಮಪ್ಯಾರ್ಯಾಂ ಷಡಸ್ರಂ ಪರಿಕಲ್ಪ್ಯ ಚ ॥೭೬॥
ಮಧ್ಯ ದೇಶೇ ಚ ದೇವೇಶೀಂ ಪ್ರಕೃತಿಂ ಬ್ರಹ್ಮರೂಪಿಣೀಂ ।
ದಕ್ಷಿಣೇ ಸತ್ವಮೂರ್ತಿಂ ಚ ವಾಮತಶ್ಚ ರಜೋ ಗುಣಾಂ ॥೭೭॥
ಅಗ್ರತಸ್ತು ತಮೋ ಮೂರ್ತಿಂ ಮಧ್ಯೇ ದೇವೀಂ ತಥಾಽಂಬಿಕಾಂ ।
ಪಂಚ ಭೂತಾನಿ ತನ್ಮಾತ್ರಾ ಪಂಚಕಂ ಚೈವ ದಕ್ಷಿಣೇ ॥೭೮॥
ಕರ್ಮೇಂದ್ರಿಯಾಣಿ ಪಂಚೈವ ತಥಾ ಬುದ್ಧೀಂದ್ರಿಯಾಣಿ ಚ ।
ಉತ್ತರೇ ವಿಧಿವತ್ ಪೂಜ್ಯ ಷಡಸ್ರೇ ಚೈವ ಪೂಜಯೇತ್ ॥೭೯॥
ಆತ್ಮಾನಂ ಚಾಂತರಾತ್ಮಾನಂ ಯುಗಲಂ ಬುದ್ಧಮೇವ ಚ ।
ಅಹಂಕಾರಂ ಚ ಮಹತಾ ಸರ್ವ ಯಜ್ಞ ಫಲಂ ಲಭೇತ್ ॥೮೦॥

---

೭೬–೮೦. ಹಾಗೆಯೇ ಪ್ರಕೃತಿ ಮಂಡಲವನ್ನೂ ರಚಿಸಬೇಕು. ಹೇಗೆಂದರೆ ಆರು ದಳವುಳ್ಳ ಪದ್ಮವನ್ನು ಬರೆದು ಅನಂತರದಲ್ಲಿ ಮಂಡಲದ ನಡುವೆ, ಪೂಜ್ಯಳಾಗಿಯೂ, ದೇವನಾಯಕಳಾಗಿಯೂ ಇರುವ ಬ್ರಹ್ಮನ ರೂಪವುಳ್ಳ ಪ್ರಕೃತಿ ದೇವಿಯನ್ನೂ, ಬಲದಲ್ಲಿ ಸತ್ವಗುಣವುಳ್ಳ ಮೂರ್ತಿಯನ್ನೂ ಎಡದಲ್ಲಿ ರಜೋಗುಣವುಳ್ಳ ಮೂರ್ತಿಯನ್ನೂ, ಮುಂಭಾಗದಲ್ಲಿ ತಮೋಗುಣವುಳ್ಳ ಮೂರ್ತಿಯನ್ನೂ, ತಿರುಗಿ ಮಧ್ಯದಲ್ಲಿ ಪಾರ್ವತೀ ದೇವಿಯನ್ನೂ ಸಹ, ಮತ್ತು ಪಂಚ ಭೂತಗಳನ್ನೂ, ಪೃಥಿವೀ ಜಲ ತೇಜಸ್ಸು ವಾಯು ಆಕಾಶಗಳನ್ನೂ, ಪಂಚ ತನ್ಮಾತ್ರಗಳನ್ನೂ, (ಸೂಕ್ಷ್ಮವಾದ ಶಬ್ದ ಸ್ಪರ್ಶ ರೂಪ ರಸ ಗಂಧಾತ್ಮಕವಾದ ಸೂಕ್ಷ್ಮಕಾರಣ ಗುಣರೂಪವಾದ ವಸ್ತುಗಳನ್ನೂ) ದಕ್ಷಿಣದಲ್ಲೂ; ಪಂಚ ಜ್ಞಾನೇಂದ್ರಿಯಗಳನ್ನೂ, ಪಂಚ ಕರ್ಮೇಂದ್ರಿಯಗಳನ್ನೂ, ಉತ್ತರದಲ್ಲೂ; ನಿಯಮ ಪೂರ್ವಕವಾಗಿ ಪೂಜಿಸಿ, ಆರು ದಳವುಳ್ಳ ಪದ್ಮದಲ್ಲಿ ಆತ್ಮನನ್ನೂ (ಜೀವನನ್ನೂ) ಅಂತರ್ಯಾಮಿಯಾದ ಈಶ್ವರನನ್ನೂ, ಒಟ್ಟಿನಲ್ಲಿ ಈ ಇಬ್ಬರನ್ನೂ ಮತ್ತು ಬುದ್ಧಿಯನ್ನೂ, ಅಹಂಕಾರವನ್ನೂ ಸಹ ಪೂಜಿಸಬೇಕು. ಇದರಿಂದ ಎಲ್ಲಾ ಯಾಗಗಳ ಫಲವನ್ನೂ ಭಕ್ತನು ಅನುಭವಿಸುತ್ತಾನೆ.

ಏವಂ ವಃ ಕಥಿತಂ ಸರ್ವಂ ಪ್ರಾಕೃತಂ ಮಂಡಲಂ ಪರಂ ।
ಅತೋ ವಕ್ಷ್ಯಾಮಿ ವಿಪ್ರೇಂದ್ರಾಃ ಸರ್ವಕಾಮಾರ್ಥಸಾಧನಂ ॥೮೧॥
ಗೋಚರ್ಮಮಾತ್ರಮಾಲಿಖ್ಯ( ಪ್ಯ) ಮಂಡಲಂಗೋಮಯೇನ ತು ।
ಚತುರಸ್ರಂ ವಿಧಾನೇನ ಚಾದ್ಭಿರಭ್ಯುಕ್ಷ್ಯ ಮಂತ್ರವಿತ್ ॥೮೨॥
ಅಲಂ ಕೃತ್ಯ ವಿತಾನಾದ್ಯೈಃ ಶ್ಛತ್ರೈ ರ್ವಾऽಪಿ ಮನೋಹರೈಃ ।
ಬುದ್ಬುದೈ ರರ್ಧಚಂದ್ರೈಶ್ಚ ಹೈಮೈ ರಶ್ವತ್ಥ ಪತ್ರಕೈಃ ॥೮೩॥
ಸಿತೈ ರ್ವಿಕಸಿತೈಃ ಪದ್ಮೈಃ ರಕ್ತೈ ರ್ನೀಲೋತ್ಪಲೈ ಸ್ತಥಾ ।
ಮುಕ್ತಾದಾಮೈ ರ್ವಿತಾನಾಂತೇ ಲಂಬಿತೈಸ್ತು ಸಿತೈ ರ್ಧ್ವಜೈಃ ॥
ಸಿತ ಮೃತ್ಪಾತ್ರ ಕೈ ಶ್ಚೈವ ಸುಶ್ಲಕ್ಷ್ಣೈಃ ಪೂರ್ಣಕುಂಭಕೈಃ ।
ಫಲ ಪಲ್ಲವ ಮಾಲಾಭಿ ರ್ವ್ಯಜಯುಂ ತೀಭಿ ರಂಶುಕೈಃ ॥೮೫॥

---

೮೧. ಎಲೈ ಬ್ರಾಹ್ಮಣರೇ, ಈ ರೀತಿಯಾಗಿ ಎಲ್ಲಾ ಪ್ರಕೃತಿಗೆ ಸಂಬಂಧಿಸಿದ ಮಂಡಲವನ್ನೂ ಸಹ ಹೇಳಿದ್ದಾಯಿತು. ಇನ್ನು ಮುಂದೆ ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವ ಮಂಡಲ ರಚನೆ, ಪೂಜಾಕ್ರಮ, ಇವನ್ನು ಹೇಳುತ್ತೇನೆ.

೮೨–೮೭. ಸಗಣಿಯಿಂದ ಗೋವಿನ ಚರ್ಮದಷ್ಟು ಪ್ರಮಾಣದಲ್ಲಿ ಮಂಡಲವನ್ನು ಚೌಕವಾಗಿ ಬರೆದು, ಸಗಣಿಯಿಂದ ಅದನ್ನು ಸಾರಿಸಿ, ಮಂತ್ರವನ್ನು ಬಲ್ಲವನು ಶಾಸ್ತ್ರೋಕ್ತವಾಗಿ ನೀರಿನಿಂದ ಅದನ್ನು ಪ್ರೋಕ್ಷಿಸಿ, ಚುಮುಕಿಸಿ, ಅನಂತರದಲ್ಲಿ ಮನೋಹರವಾದ ಮೇಲ್ಕಟ್ಟು ಮುಂತಾದುವುಗಳಿಂದಲೂ, ಛತ್ರಿಗಳಿಂದಲೂ, ಸುಂದರವಾದ ಗುಂಡು ಗಳಿಂದಲೂ, ಅರ್ಧ ಚಂದ್ರದ ಆಕಾರವುಳ್ಳ ತಗಡುಗಳಿಂದಲೂ, ಚಿನ್ನದ ಅಶ್ವತ್ಥಮರದ ಎಲೆಗಳಿಂದಲೂ, ಬಿಳಪು, ಕೆಂಪು, ಕಪ್ಪು, ಬಣ್ಣ ಗಳುಳ್ಳ, ಅರಳಿದ ಕಮಲಗಳಿಂದಲೂ, ಮೇಲ್ಕಟ್ಟಿನಲ್ಲಿ ಜೋತಾಡುತ್ತಿ ರುವ ಮುತ್ತಿನ ಹಾರಗಳಿಂದಲೂ, ಬೆಳ್ಳಗಿರುವ ಪತಾಕೆಗಳಿಂದಲೂ, ಬೆಳ್ಳಗಿರುವ, ಬಹಳ ನುಣುಪಾಗಿರುವ ಮಣ್ಣಿನ ಪಾತ್ರೆಗಳಿಂದಲೂ,

ಪಂಚಾ ಶದ್ದೀಪ ಮಾಲಾಭಿ ರ್ಧೂಪೈಃ ಪಂಚ ವಿಧೈಸ್ತಥಾ ।
ಪಂಚಾಶದ್ದಲ ಸಂಯುಕ್ತ ಮಾಲಿಖೇ ತ್ಪದ್ಮ ಮುತ್ತಮಂ ॥೮೬॥
ತತ್ತ ದ್ವರ್ಣೈ ಸ್ತಥಾ ಚೂರ್ಣೈಃ ಶ್ವೇತಚೂರ್ಣೈ ರಥಾಪಿ ವಾ ।
ಏಕ ಹಸ್ತ ಪ್ರಮಾಣೇನ ಕೃತ್ವಾ ಪದ್ಮಂ ವಿಧಾನತಃ ॥೮೭॥
ಕರ್ಣಿಕಾಯಾಂ ನ್ಯಸೇದ್ದೇವಂ ದೇವ್ಯಾ ದೇವೇಶ್ವರಂ ಭವಂ ।
ವರ್ಣಾನಿ ಚ ನ್ಯಸೇತ್ಪತ್ರೇ ರುದ್ರೈಃ ಪ್ರಾಗಾ ದ್ಯನುಕ್ರಮಾತ್ ॥೮೮॥
ಪ್ರಣವಾದಿ ನಮೋಽಂತಾನಿ ಸರ್ವವರ್ಣಾನಿ ಸು ವ್ರತಾಃ ।
ಸಂಪೂಜ್ಯೈವಂ ಮುನಿಶ್ರೇಷ್ಠಾ ಗಂಧ ಪುಷ್ಪಾದಿಭಿಃ ಕ್ರಮಾತ್ ॥

---

ಪೂರ್ಣ ಕುಂಭಗಳಿಂದಲೂ, ಹಣ್ಣು ಮತ್ತು ಚಿಗುರಿನ ಮಾಲಿಕೆಗಳಿಂದಲೂ, ತೋರಣ ಮಾಲೆಗಳಿಂದಲೂ, ಬಟ್ಟೆಗಳ ಬಾವುಟಗಳಿಂದಲೂ, ಐವತ್ತು ದೀಪಗಳ ಸಾಲುಗಳಿಂದಲೂ, ಐದು ವಿಧವಾದ ಧೂಪಗಳಿಂದಲೂ, ಆ ಮಂಡಲವನ್ನು ಅಲಂಕಾರ ಮಾಡಿ, ಮಧ್ಯದಲ್ಲಿ ಆಯಾಯಾ ಬಣ್ಣದ ಚೂರ್ಣದಿಂದಾಗಲೀ, ಅಥವಾ ಬಿಳೀ ಬಣ್ಣದ ಚೂರ್ಣದಿಂದಾಗಲೀ, ಒಂದು ಮೊಳದಷ್ಟು ಪ್ರಮಾಣದಲ್ಲಿ ಐವತ್ತು ದಳವುಳ್ಳ ಪದ್ಮವನ್ನು ಶಾಸ್ತ್ರೀಯವಾಗಿ ಬರೆದು,

೮೮. ಆ ಪದ್ಮದ ಕರ್ಣಿಕೆಯಲ್ಲಿ, ಎಂದರೆ ಕಮಲದ ಮಧ್ಯ ದೇಶದಲ್ಲಿ, ದೇವಿಯೊಡನೆ ಪ್ರಕಾಶಿಸುವ ದೇವೋತ್ತಮನಾದ ಈಶ್ವರನನ್ನು ಸ್ಥಾಪಿಸಬೇಕು. ಮತ್ತು ಆ ಕಮಲದ ದಳಗಳಲ್ಲಿ ಪೂರ್ವದಿಂದ ಕ್ರಮವಾಗಿ ರುದ್ರರ ಮಂತ್ರ ಬೀಜಗಳಾದ ಅಕ್ಷರಗಳನ್ನು ಬರೆಯಬೇಕು.

೮೯. ಎಲೈ ಒಳ್ಳೆಯ ನಿಯಮಗಳುಳ್ಳ ಮುನಿಶ್ರೇಷ್ಠರಿರಾ, ಎಲ್ಲಾ ಅಕ್ಷರಗಳನ್ನು ಓಂಕಾರವೇ ಮೊದಲಾಗಿಯೂ, ನಮಃ ಎಂಬುದೇ ಕೊನೆಯಾಗಿಯೂ, ಬರೆಯಬೇಕು. ಅನಂತರದಲ್ಲಿ ಗಂಧ, ಹುವ್ವು, ಮುಂತಾದುವುಗಳಿಂದ ಕ್ರಮವಾಗಿ ಪೂಜೆಮಾಡಿ, ಐವತ್ತು ಜನ ಬ್ರಾಹ್ಮಣರನ್ನು ನಿಯಮದಿಂದ ಭೋಜನ ಮಾಡಿಸಬೇಕು.

**ಬ್ರಾಹ್ಮಣಾನ್ ಭೋಜಯೇತ್ ತತ್ರ ಪಂಚಾಶ ದ್ವಿಧಿ ಪೂರ್ವಕಂ ।**
**ಅಕ್ಷಮಾಲೋ ಪವೀತಂ ಚ ಕುಂಡಲಂ ಚ ಕಮಂಡಲುಂ ॥೯೦॥**
**ಆಸನಂ ಚ ತಥಾ ದಂಡ ಮುಷ್ಣೀಷಂ ವಸ್ತ್ರಮೇವ ಚ ।**
**ದತ್ವಾ ತೇಷಾಂ ಮುನೀಂದ್ರಾಣಾಂ ದೇವದೇವಾಯ ಶಂಭವೇ॥೯೧॥**
**ಮಹಾಚರುಂ ನಿವೇದ್ಯೈವಂ ಕೃಷ್ಣಂ ಗೋಮಿಥುನಂ ತಥಾ ।**
**ಅಂತೇ ಚ ದೇವದೇವಾಯ ದಾಪಯೇ ಚ್ಚೂರ್ಣಮಂಡಲಂ ॥೯೨॥**
**ಯಾಗೋಪಯೋಗ ದ್ರವ್ಯಾಣಿ ಶಿವಾಯ ವಿನಿವೇದಯೇತ್ ।**
**ಓಂ ಕಾರಾದ್ಯಂ ಜಪೇದ್ಧೀಮಾನ್ ಪ್ರತಿವರ್ಣ ಮನುಕ್ರಮಾತ್ ॥**
**ಏವ ಮಾಲಿಖ್ಯ ಯೋ ಭಕ್ತ್ಯಾ ಸರ್ವ ಮಂಡಲ ಮುತ್ತಮಂ ।**
**ಯತ್ಫಲಂ ಲಭತೇ ಮರ್ತ್ಯ ಸ್ತದ್ವದಾಮಿ ಸಮಾಸತಃ ॥೯೪॥**

---

೯೦-೯೨. ರುದ್ರಾಕ್ಷ ಮಾಲಿಕೆಯನ್ನೂ ಯಜ್ಞೋಪವೀತವನ್ನೂ ವಂಟಿಯನ್ನೂ, ಕಮಂಡಲುವನ್ನೂ, ಮಣಿಯನ್ನೂ ಮತ್ತು ದಂಡವನ್ನೂ, ರುಮಾಲನ್ನೂ, ಬಟ್ಟೆಯನ್ನೂ ಆ ಮುನಿಶ್ರೇಷ್ಠರಿಗೆ ಕೊಟ್ಟು, ಅನಂತರದಲ್ಲಿ ದೇವದೇವನಾದ ಈಶ್ವರನಿಗೆ ಹೆಚ್ಚಾಗಿ ಚರುವನ್ನು, ಬಸಿಯದಿರುವ ಮತ್ತು ಒಳಗೇ ಬೆಂದಂಥ ಅನ್ನವನ್ನು, ನಿವೇದನಮಾಡಿ ಹಾಗೆಯೇ ಕಪ್ಪಾದ ಎರಡು ಹಸುಗಳನ್ನೂ ನಿವೇದನಮಾಡಿ, ಕೊನೆಯಲ್ಲಿ ಚೂರ್ಣದಿಂದ ಬರೆದ ಮಂಡಲವನ್ನು ದೇವ ದೇವನಾದ ಶಿವನಿಗೆ ಸಮರ್ಪಿಸ ಬೇಕು.

೯೩. ಮತ್ತು ಯಜ್ಞಗಳಲ್ಲಿ ಉಪಯೋಗಿಸುವ ಪದಾರ್ಥಗಳನ್ನು ಶಿವನಿಗೆ ಸಮರ್ಪಿಸಬೇಕು. (ಅಥವಾ ಯಜ್ಞಗಳಲ್ಲಿ ಉಪಯೋಗಿಸುವ ಪುರೋಡಾಶ ಮುಂತಾದ ಹವಿರ್ದ್ರವ್ಯಗಳನ್ನು ನಿವೇದನೆ ಮಾಡಬೇಕು.) ಮತ್ತು ಶಾಸ್ತ್ರೀಯ ಜ್ಞಾನವುಳ್ಳವನು ಓಂಕಾರವೇ ಮೊದಲಾಗಿರು ವಂತೆಯೇ ಎಲ್ಲಾ (ಶಿವನಾಮದ) ಅಕ್ಷರಗಳನ್ನೂ ಕ್ರಮವಾಗಿ ಜಪ ಮಾಡಬೇಕು.

೯೪. ಯಾವ ಮನುಷ್ಯನು ಉತ್ತಮವಾದ ಸರ್ವ ಮಂಡಲವನ್ನೂ ಭಕ್ತಿಯಿಂದ ಬರೆದು ಅನಂತರದಲ್ಲಿ ಅದನ್ನು ಶಿವನಿಗೆ ಸಮರ್ಪಿಸಿ ಯಾವ

**ಸಾಂಗಾನ್ ವೇದಾನ್ ಯಥಾ ನ್ಯಾಯಂ ಅಧೀತ್ಯ ವಿಧಿ ಪೂರ್ವಕಂ।**
**ಇಷ್ಟ್ವಾ ಯಜ್ಞೈರ್ಯಥಾನ್ಯಾಯಂ ಜ್ಯೋತಿಷ್ಟೋಮಾದಿಭಿಃ**
**ಕ್ರಮಾತ್ ॥೯೫॥**

**ತತೋ ವಿಶ್ವಜಿದಂತ್ಯೈಶ್ಚ ಪುತ್ರಾನುತ್ಪಾದ್ಯ ತಾದೃಶಾನ್।**
**ವಾನಪ್ರಸ್ಥಾಶ್ರಮಂ ಗತ್ವಾ ಸದಾರಃ ಸಾಗ್ನಿರೇವ ಚ ॥೯೬॥**

**ಚಾಂದ್ರಾಯಣಾದಿಕಾಃ ಸರ್ವಾಃ ಕೃತ್ವಾ ನ್ಯಸ್ಯ ಕ್ರಿಯಾ ದ್ವಿಜಾಃ।**
**ಬ್ರಹ್ಮವಿದ್ಯಾ ಮಧೀತ್ಯೈವ ಜ್ಞಾನಮಾಸಾದ್ಯ ಯತ್ನತಃ ॥೯೭॥**

**ಜ್ಞಾನೇನ ಜ್ಞೇಯ ಮಾಲೋಕ್ಯ ಯೋಗೀ ಯತ್ಕಾಮ ಮಾಪ್ನು**
**ಯಾತ್।**
**ತತ್ಫಲಂ ಲಭತೇ ಸರ್ವಂ ವರ್ಣ ಮಂಡಲ ದರ್ಶನಾತ್ ॥೯೮॥**

---

ಫಲವನ್ನು ಪಡೆಯುವನೋ ಅದನ್ನು ಇನ್ನು ಮುಂದೆ ಸಂಕ್ಷೇಪವಾಗಿ ಹೇಳುತ್ತೇನೆ.

೯೫–೯೮. (ಶಿಕ್ಷಾ, ವ್ಯಾಕರಣ, ನಿರುಕ್ತ ಛಂದಸ್ಸು, ಜ್ಯೋತಿಷ ಕಲ್ಪಗಳೆಂಬ) ಅಂಗಗಳೊಡನೆ ವೇದಗಳನ್ನು ನಿಯಮಗಳಿಂದ ಅಧ್ಯಯನ ಮಾಡಿ ಕಲಿತು, ಅನಂತರದಲ್ಲಿ ಶಾಸ್ತ್ರೋಕ್ತವಾಗಿ ಜ್ಯೋತಿಷ್ಟೋಮವೇ ಮುಂತಾದ ಯಾಗಗಳನ್ನು, ವಿಶ್ವಜಿತ್ತೆಂಬ ಯಾಗವೇ ಕೊನೆಯಾಗಿರುವವುಗಳನ್ನು, ಕ್ರಮವಾಗಿ ಮಾಡಿ, ತನ್ನಂತೆಯೇ ವೇದಾಧ್ಯಯನವನ್ನು ಮಾಡಿ, ಯಾಗಗಳನ್ನು ಮಾಡುವಂಥ ಮಕ್ಕಳನ್ನೂ ಪಡೆದು, ಆಮೇಲೆ ಪತ್ನಿಯೊಡನೆಯೂ, ಔಪಾಸನಾಗ್ನಿಯೊಡನೆಯೂ, (ಕಾಡಿಗೆ ಹೋಗಿ) ವಾನಪ್ರಸ್ಥಾಶ್ರಮವನ್ನು ಹೊಂದಿ, ಚಾಂದ್ರಾಯಣವೇ ಮುಂತಾದ ಎಲ್ಲಾ ತಪಸ್ಸುಗಳನ್ನೂ (ಪ್ರಾಯಶ್ಚಿತ್ತಗಳನ್ನು) ಮಾಡಿ, ಅನಂತರದಲ್ಲಿ ಎಲ್ಲ ಕರ್ಮಗಳನ್ನೂ ಬಿಟ್ಟು (ಎಂದರೆ ವಿಧಿವತ್ತಾಗಿ ಸಂನ್ಯಾಸವನ್ನು ತೆಗೆದುಕೊಂಡು) ಬ್ರಹ್ಮ ವಿದ್ಯೆಯನ್ನೂ ಕಲಿತು, ಕಷ್ಟಪಟ್ಟಾದರೂ ಜ್ಞಾನವನ್ನು ಹೊಂದಿ, ತಿಳಿಯಬೇಕಾದ ಬ್ರಹ್ಮವಸ್ತುವನ್ನು ಜ್ಞಾನದೃಷ್ಟಿಯಿಂದಲೇ ಕಂಡು, ಅಥವಾ ಜ್ಞೇಯ

ಯೇನ ಕೇನಾಽಪಿ ವಾ ಮರ್ತ್ಯಃ ಪ್ರಲಿಪ್ಯಾಯತನಾಗ್ರತಃ ।
ಉತ್ತರೇ ದಕ್ಷಿಣೇ ವಾಽಪಿ ಪೃಷ್ಠತೋ ವಾ ದ್ವಿಜೋತ್ತಮಾಃ॥೯೯॥
ಚತುಷ್ಕೋಣಂ ತು ವಾ ಚೂರ್ಣೈಃ ಅಲಂಕೃತ್ಯ ಸಮಂತತಃ ।
ಪುಷ್ಪಾಕ್ಷತಾದಿಭಿಃ ಪೂಜ್ಯ ಸರ್ವ ಪಾಪೈಃ ಪ್ರಮುಚ್ಯತೇ ॥೧೦೦॥
ಯಸ್ತು ಗರ್ಭಗೃಹಂ ಭಕ್ತ್ಯಾ ಸ ಕೃದಾಲಿಪ್ಯ ಸರ್ವತಃ ।
ಚಂದನಾದ್ಯೈಃ ಸ ಕರ್ಪೂರೈಃ ಗಂಧದ್ರವ್ಯೈಃ ಸಮಂತತಃ ॥೧೦೧॥
ವಿಕೀರ್ಯ ಗಂಧ ಕುಸುಮೈಃ ಧೂಪೈಃ ಧೂಪ್ಯ ಚತುರ್ವಿಧೈಃ ।
ಪ್ರಾರ್ಥಯೇ ದ್ದೇವ ಮೀಶಾನಂ ಶಿವಲೋಕಂ ಸ ಗಚ್ಛತಿ ॥೧೦೨॥

---

ವಾದ ಪ್ರಪಂಚವನ್ನು ಜ್ಞಾನ ರೂಪನಾದ ಬ್ರಹ್ಮ ಸ್ವರೂಪದಿಂದಲೇ ಕಂಡು, ಎಂದರೆ, ಎಲ್ಲ ಪ್ರಪಂಚವನ್ನೂ ಬ್ರಹ್ಮನಿಗಿಂತಲೂ, ಬೇರೆಯಾಗಿ ನಿಜವಾಗಿ ಕಾಣದೇ, ಯೋಗಿಯು ಯಾವ ಫಲವನ್ನು ಹೊಂದುವನೋ, ಆ ಫಲವನ್ನು ಎಲ್ಲವನ್ನೂ ಹಿಂದೆ ಹೇಳಿದ ಅಕ್ಷರಗಳು, ಮತ್ತು ಮಂಡಲ, ಇವುಗಳ ದರ್ಶನದಿಂದ ಹೊಂದುತ್ತಾನೆ.

೯೯-೧೦೦. ಎಲೈ ಬ್ರಾಹ್ಮಣ ಶ್ರೇಷ್ಠರೇ, ಮನುಷ್ಯನು ಯಾವುದರಿಂದಲಾದರೂ, ದೇವಸ್ಥಾನದ ಉತ್ತರ ಭಾಗದಲ್ಲೋ, ದಕ್ಷಿಣ ಭಾಗದಲ್ಲೋ, ಎಲ್ಲಿಯಾದರೂ ಚೆನ್ನಾಗಿ ನೆಲವನ್ನುಸಾರಿಸಿ, ಸುತ್ತಲೂ ನಾಲ್ಕು ಮೂಲೆಗಳಾಗಿರುವ, ಪದ್ಮವನ್ನು ಹಿಟ್ಟುಗಳಿಂದ ಬರೆದು, ಅಲಂಕಾರ ಮಾಡಿ, ಹುವ್ವು, ಅಕ್ಷತೆ, ಇವುಗಳಿಂದ ಪೂಜಿಸಿದವನು ಎಲ್ಲಾ ಪಾಪಗಳಿಂದಲೂ ಬಿಡಲ್ಪಡುತ್ತಾನೆ.

೧೦೧-೧೦೨. ಯಾವನು ಗರ್ಭಗುಡಿಯನ್ನು ಸುತ್ತಲೂ ಒಂದಾವೃತ್ತಿ ಚಂದನವೇ ಮುಂತಾದ, ಪಚ್ಚಕರ್ಪೂರದಿಂದ ಕೂಡಿದ, ಗಂಧದ್ರವ್ಯಗಳಿಂದ ಚೆನ್ನಾಗಿ ಲೇಪನಮಾಡಿ ಅನಂತರದಲ್ಲಿ ಎಲ್ಲಾ ಕಡೆಯಲ್ಲೂ ಪರಿಮಳವಾದ ಹೂವ್ವನ್ನು ಎರಚಿ, ನಾಲ್ಕು ವಿಧವಾದ ಧೂಪಗಳಿಂದ, ಸುಗಂಧವನ್ನು ತುಂಬಿ, ಈಶ್ವರ ದೇವನನ್ನು ಪ್ರಾರ್ಥನೆ ಮಾಡುವನೋ ಅವನು ಶಿವಲೋಕಕ್ಕೆ ಹೋಗುತ್ತಾನೆ.

ತತ್ರ ಭುಕ್ತ್ವಾ ಮಹಾಭೋಗಾನ್ ಕಲ್ಪಕೋಟಿ ಶತಂ ನರಃ ।
ಸ್ವ (ಸ) ದೇಹ ಗಂಧ ಕುಸುಮೈಃ ಪೂರಯನ್ ಶಿವಮಂದಿರಂ ॥
ಕ್ರಮಾತ್ ಗಂಧರ್ವ ಮಾಸಾದ್ಯ ಗಂಧರ್ವೈಶ್ಚ ಸುಪೂಜಿತಃ ।
ಕ್ರಮಾ ದಾಗತ್ಯ ಲೋಕೇಽಸ್ಮಿನ್ ರಾಜಾ ಭವತಿ ವೀರ್ಯವಾನ್ ॥
ಆದಿದೇವೋ ಮಹಾದೇವಃ ಪ್ರಲಯ ಸ್ಥಿತಿ ಕಾರಕಃ ।
ಸರ್ಗಶ್ಚ ಭುವನಾಧೀಶಃ ಸರ್ವ ವ್ಯಾಪೀ ಸದಾಶಿವಃ ॥೧೦೫॥

---

೧೦೩–೧೦೪. ಈ ರೀತಿಯಲ್ಲಿ ಶಿವನನ್ನು ಪ್ರಾರ್ಥಿಸಿದ ಮನುಷ್ಯನು, ಆ ಶಿವಲೋಕದಲ್ಲಿ ದಿವ್ಯವಾದ ಸೌಖ್ಯಗಳನ್ನು ಒಂದು ನೂರು ಕೋಟಿ ಕಲ್ಪಗಳು ಆಗುವ ಪರ್ಯಂತ ಅನುಭವಿಸಿ, ತನ್ನ ದೇಹದಿಂದಲೇ ಕಷ್ಟಪಟ್ಟು, ಸಂಪಾದಿಸಿದ ಗಂಧದ್ರವ್ಯಗಳಿಂದಲೂ, ಹುವ್ವುಗಳಿಂದಲೂ, ಈಶ್ವರನ ಗುಡಿಯನ್ನು (ಹಿಂದೆ ಹೇಳಿದ ರೀತಿಯಲ್ಲಿ) ತುಂಬುತ್ತಾ ಇರುವವನು ಕ್ರಮವಾಗಿ ಗಂಧರ್ವಲೋಕವನ್ನು ಪಡೆದು, ಅಲ್ಲಿ ಗಂಧರ್ವರಿಂದ ಸತ್ಕರಿಸಲ್ಪಟ್ಟವನಾಗಿ, ಕ್ರಮವಾಗಿ ಅಲ್ಲಿಂದ ಈ ಲೋಕಕ್ಕೆ ಬಂದು, ಇಲ್ಲಿ ಪರಾಕ್ರಮಶಾಲಿಯಾದ ರಾಜನಾಗಿ ಹುಟ್ಟುತ್ತಾನೆ.

೧೦೫–೧೦೬ ಈ ಸದಾಶಿವನು ಎಲ್ಲರಿಗೂ ಮೊದಲಿನವನಾಗಿರುವ ದೇವನು. ಮತ್ತು ಜಗತ್ತನ್ನು ಕಾಪಾಡುವವನೂ, ಸಂಹರಿಸುವವನೂ, ಪುನಃ ಸೃಷ್ಟಿಮಾಡುವವನೂ, ಆದ ಮಹಾದೇವನು (ಈಶ್ವರನು) ಮತ್ತು ಎಲ್ಲ ಲೋಕಗಳಿಗೂ ಅಧಿಪತಿಯಾಗಿ ಎಲ್ಲ ಕಡೆಗಳಲ್ಲೂ ಇರುವವನು. ಶಿವನ ರೂಪದಲ್ಲಿರುವ ಬ್ರಹ್ಮನಿಂದ ಅಮೃತವೆಂಬ ಮೋಕ್ಷಕ್ಕೆ ಕಾರಣವಾಗಿರುವ ಶ್ರೇಷ್ಠವಾದ ವಸ್ತು, ಎಂದರೆ ಜ್ಞಾನವನ್ನು ಎಲ್ಲರೂ ಸ್ವೀಕರಿಸ ತಕ್ಕದ್ದು. ಸ್ಫುಟವಾಗಿ ಕಾಣಿಸಿಕೊಳ್ಳುವವನಾಗಿಯೂ, ಕಾಣಿಸದಿರುವವನಾಗಿಯೂ ಇರುವ, ಎಂದರೆ ಪ್ರಪಂಚವನ್ನು ಸೃಷ್ಟಿಮಾಡಿದ ಅನಂತರದಲ್ಲಿ ಪ್ರಪಂಚರೂಪದಿಂದಲೇ ತಾನು ಕಾಣಿಸಿ ಕೊಳ್ಳುತ್ತಲೂ, ಪ್ರಪಂಚವನ್ನು ಸಂಹರಿಸಿದ ಮೇಲೆ ಪ್ರಳಯದಲ್ಲಿ ಕಾಣಿಸಿ ಕೊಳ್ಳದೇ

ಶಿವ ಬ್ರಹ್ಮಾವ್ಯತಂ ಗ್ರಾಹ್ಯಂ ಮೋಕ್ಷಸಾಧನ ಮುತ್ತಮಂ ।
ವ್ಯಕ್ತಾವ್ಯಕ್ತಂ ಸದಾ ನಿತ್ಯಂ ಅಚಿಂತ್ಯಂ ಅರ್ಚಯೇತ್ಪ್ರಭುಂ ॥೧೦೬॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸಪ್ತ ಸಪ್ತತಿತಮೋಽಧ್ಯಾಯಃ

---

ಕಾರಣವಾದ, ಲಯಾಧಿಷ್ಠಾನದ ರೂಪದಲ್ಲಿ ಸೂಕ್ಷ್ಮವಾಗಿಯೂ ಇರುವಂಥ ಮತ್ತು ಯಾವಾಗಲೂ ಇರುವವನಾಗಿಯೂ, ಯೋಚನೆ ಮಾಡುವುದಕ್ಕೂ, ಊಹಿಸುವುದಕ್ಕೂ, ಸುಲಭವಾಗಿ ಆಗದಿರುವ ಈಶ್ವರನನ್ನು ಯಾವಾಗಲೂ ಪೂಜಿಸಬೇಕು.

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



ಶ್ರೀ ಲಿಂಗಮಹಾಪುರಾಣದಲ್ಲಿ ಎಪ್ಪತ್ತೇಳನೆಯ ಅಧ್ಯಾಯದ

# ಟಿಪ್ಪಣಿಯು

(೧) ಈ ಅಧ್ಯಾಯದಲ್ಲಿ ಶಿವದೇವಾಲಯವನ್ನು ನಿರ್ಮಾಣಮಾಡಿದರೆ ಬರುವ ಫಲವೂ, ಶಿವಕ್ಷೇತ್ರ ಮಾನವೂ ಅಳತೆಯೂ, ಮಂಡಲಗಳೂ ಹೇಳಲ್ಪಡುತ್ತವೆ.

(೩೨) ಇಲ್ಲಿ ಚಾಂದ್ರಾಯಣವೆಂದರೆ ಹೀಗೆ ಅರ್ಥವು. ಮೂರು ಹೊತ್ತೂ ಸ್ನಾನಮಾಡುತ್ತಾ ಹುಣ್ಣಿಮೆಯದಿನ ಹದಿನೈದು ತುತ್ತು ಅನ್ನವನ್ನು ಊಟಮಾಡಿ, ಅನಂತರದಲ್ಲಿ ಕೃಷ್ಣಪಕ್ಷದ ಪಾಡ್ಯದಿಂದ ಕ್ರಮವಾಗಿ, ಒಂದೊಂದು ತುತ್ತು ಕಡಿಮೆಯಾಗಿ ಊಟಮಾಡುತ್ತಾ ಚತುರ್ದಶೀ ದಿನದಲ್ಲಿ ಒಂದು ತುತ್ತು ಆಹಾರವನ್ನು ಮಾತ್ರ ಊಟಮಾಡಿ ನಿಲ್ಲಿಸಬೇಕು. ಅನಂತರದಲ್ಲಿ ಅಮಾವಾಸ್ಯೆಯ ದಿವಸ ಉಪವಾಸಮಾಡಿ, ಶುಕ್ಲಪಕ್ಷದ ಪಾಡ್ಯದಿಂದ ಒಂದೊಂದೇ ತುತ್ತನ್ನು ಹೆಚ್ಚುಮಾಡಿಕೊಳ್ಳುತ್ತಾ ಊಟಮಾಡಬೇಕು. ಹುಣ್ಣಿಮೆಯ ದಿನಕ್ಕೆ ತಂದು ನಿಲ್ಲಿಸಬೇಕು. ಹೀಗೆ ನಿಯಮವಾಗಿರುವುದಕ್ಕೆ ಚಾಂದ್ರಾಯಣವೆಂದು ಹೆಸರು ಪಿಪೀಲಕಾ ಮಧ್ಯವೆಂದು ಈ ಚಾಂದ್ರಾಯಣಕ್ಕೆ ಹೆಸರು. ಪಿಪೀಲಿಕಾ ಮಧ್ಯ, ಯವಮಧ್ಯಮ, ಯತಿ ಚಾಂದ್ರಾಯಣ, ಶಿಶು ಚಾಂದ್ರಾಯಣ ಎಂಬುದಾಗಿ ನಾಲ್ಕು ಬಗೆಯ ಚಾಂದ್ರಾಯಣಗಳನ್ನು ಧರ್ಮ ಶಾಸ್ತ್ರದಲ್ಲಿ ಹೇಳಲಾಗಿದೆ.

(೬೨) ಇಲ್ಲಿ "**ಮಹತ್ತರೈಃ ಪಾಪೈಃ**" ಎಂಬುವುದಕ್ಕೆ ಪಂಚ ಮಹಾ ಪಾಪಗಳೆಂದರ್ಥವು. ಅವುಗಳು ಹೀಗಿವೆ:—ಬ್ರಹ್ಮಹತ್ಯೆ, ಮದ್ಯಪಾನ, ಸುವರ್ಣವನ್ನು ಅಪಹರಿಸುವುದು, ಗುರು ಪತ್ನಿಯ ಸಂಬಂಧವನ್ನು ಮಾಡುವುದು, ಇಂಥಾ ಪಾಪಗಳನ್ನು ಮಾಡಿದವರೊಡನೆ ಸಂಬಂಧವನ್ನು ಮಾಡುವುದು, ಈ ಐದು ಮಹಾಪಾತಕಗಳು. ಗೋವಧೆ, ಪರಪತ್ನೀಗಮನ, ಮುಂತಾದುವುಗಳು, ಉಪಪಾತಕಗಳು. ಇವುಗಳು ಅನೇಕವಾಗಿ ಧರ್ಮಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುತ್ತವೆ.

(೬೫) ಇಲ್ಲಿ "**ಸವ್ಯಾಪಸವ್ಯ ನ್ಯಾಯೇನ**" ಎಂಬುವುದಕ್ಕೆ ಪ್ರದಕ್ಷಿಣೆಯಾಗಿಯೂ, ಅಪ್ರದಕ್ಷಿಣೆಯಾಗಿಯೂ, ಎಂಬುದಾಗಿ ಅರ್ಥವನ್ನು ಮಾಡಿದೆ. ಇದರ ತಾತ್ಪರ್ಯವೇನೆಂದರೆ, ಈಶ್ವರ ದೇವಸ್ಥಾನವನ್ನು ಮೊದಲು ಪ್ರದಕ್ಷಿಣೆ ಮಾಡುವಾಗ ಸೋಮಸೂತ್ರದ ಪರ್ಯಂತ ಹೋಗಿ, ಪುನಃ ಹಿಂದಕ್ಕೆ ಬಂದು ಅನಂತರದಲ್ಲಿ ಪ್ರದಕ್ಷಿಣೆಯಾಗಿ ಸುತ್ತುವ ಪದ್ಧತಿಯು ಇರುವುದು. ಅಪ್ರದಕ್ಷಿಣೆಯಾಗಿ ಸುತ್ತುವ ಸಂಭವವಿದೆಯೆಂದು ತಿಳಿಯಬೇಕು. ಈ ತಾತ್ಪರ್ಯದಿಂದ ಹಾಗೆ ಹೇಳಿರುವರು.

(೬೧) ಇಲ್ಲಿ ಮಂಡಲ ಪೂಜಾ ವಿಧಾನವು ಈ ಪುರಾಣದಲ್ಲಿ ಮುಂದೆ ಹೇಳಲ್ಪಟ್ಟಿದೆ. ಶೈವಾಗಮದಲ್ಲೂ ಪೂಜಾ ವಿಧಾನವು ಹೇಳಲ್ಪಟ್ಟಿದೆ. ಅದರಿಂದಲೇ ವಿಸ್ತಾರವಾಗಿ ಅದನ್ನು ತಿಳಿಯಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತೇಳನೆಯ
ಅಧ್ಯಾಯದ ಟಿಪ್ಪಣಿಯು ಮುಗಿದುದು.



अथ श्री लिंगमहापुराणे पूर्वभागे
अष्टसप्ततितमोऽध्यायः

**ಅಷ್ಟ ಸಪ್ತತಿಕೇಽಧ್ಯಾಯೋ ವಸ್ತ್ರ ಪೂತ ಜಲೇನ ಚ ।**
**ಸರ್ವಾಃ ಕ್ರಿಯಾಃ ಅಹಿಂಸಾಯಾ ಭಕ್ತೇಃ ಮಹಾತ್ಮ್ಯ ಮುಚ್ಯತೇ ॥**

**॥ ಸೂತ ಉವಾಚ ॥**

**ವಸ್ತ್ರ ಪೂತೇನ ತೋಯೇನ ಕಾರ್ಯಂ ಚೈವೋಪಲೇಪನಂ ।**
**ಶಿವಕ್ಷೇತ್ರೇ ಮುನಿಶ್ರೇಷ್ಠಾ ಸಾಽನ್ಯಥಾ ಸಿದ್ಧಿ ರಿಷ್ಯತೇ ॥ ೧ ॥**

**ಆಪಃ ಪೂತಾ ಭವಂ ತ್ಯೇತಾಃ ವಸ್ತ್ರಪೂತಾಃ ಸಮುದ್ಧೃತಾಃ ।**
**ಅಫೇನಾ ಮುನಿಶಾರ್ದೂಲಾ ನಾದೇಯಾಶ್ಚ ವಿಶೇಷತಃ ॥ ೨ ॥**

**ತಸ್ಮಾದ್ವೈ ಸರ್ವ ಕಾರ್ಯಾಣಿ ದೈವಿಕಾನಿ ದ್ವಿಜೋತ್ತಮಾಃ ।**
**ಅದ್ಭಿಃ ಕಾರ್ಯಾಣಿ ಪೂತಾಭಿಃ ಸರ್ವ ಕಾರ್ಯ ಪ್ರಸಿದ್ಧಯೇ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯವು

ಈ ಎಪ್ಪತ್ತೆಂಟನೆಯ ಅಧ್ಯಾಯದಲ್ಲಿ, ವಸ್ತ್ರದಿಂದ ಶೋಧಿಸಿದ ಪರಿಶುದ್ಧವಾದ ಜಲದಿಂದ ಎಲ್ಲಾ ಕಾರ್ಯಗಳನ್ನೂ ಮಾಡಬೇಕೆಂದೂ, ಅಂತಹ ಜಲದ ಮಹಿಮೆಯನ್ನೂ, ಅಹಿಂಸೆಯ ಮಹಾತ್ಮ್ಯವನ್ನೂ ಹೇಳಿರುವುದು.

೧. ಸೂತನು ಹೇಳಿದನು. ಎಲೈ ಮುನಿಶ್ರೇಷ್ಠರೇ, ಶಿವಕ್ಷೇತ್ರದಲ್ಲಿ ವಸ್ತ್ರದಿಂದ ಶೋಧಿಸಿ ಪರಿಶುದ್ಧವಾದ ನೀರಿನಿಂದ ಉಪಲೇಪನಾದಿ ಕಾರ್ಯಗಳನ್ನು ಮಾಡಬೇಕು. ಇಲ್ಲದಿದ್ದಲ್ಲಿ ಮಾಡಿದ ಕಾರ್ಯಗಳೆಲ್ಲವೂ ನಿಷ್ಫಲವಾಗುವುವು.

೨. ಓ ಋಷಿಶ್ರೇಷ್ಠರೇ, ವಸ್ತ್ರದಿಂದ ಶೋಧಿಸಿ ಪರಿಶುದ್ಧವಾಗಿರುವ, ನೊರೆಯಿಲ್ಲದಿರುವ ಮತ್ತು ನದಿಯ ಸಂಬಂಧವಾದ, ಮೇಲಕ್ಕೆ ಎತ್ತಿರುವ ನೀರು ಹೆಚ್ಚಾಗಿ ಪರಿಶುದ್ಧವಾದುದು.

೩. ಎಲೈ ಬ್ರಾಹ್ಮಣ ಶ್ರೇಷ್ಠರೇ, ಸರ್ವ ವಿಧವಾದ ಕಾರ್ಯಗಳ ಸಿದ್ಧಿಗೋಸ್ಕರ, ದೇವತಾ ಸಂಬಂಧವಾದ ಕಾರ್ಯಗಳನ್ನು ಮಾಡಬೇಕಾ

ಜಂತುಭಿಃ ಮಿಶ್ರಿತಾ ಹ್ಯಾಪಃ ಸೂಕ್ಷ್ಮಾಭಿಸ್ತಾನ್ನಿಹತ್ಯ ತು ।
ಯತ್ಪಾಪಂ ಸಕಲಂ ಚಾದ್ಭಿ ರಪೂತಾಭಿ ಶ್ಚಿರಂ ಲಭೇತ್ ॥ ೪ ॥
ಸಂಮಾರ್ಜನೇ ತಥಾ ನೃ ಣಾಂ ಮಾರ್ಜನೇ ಚ ವಿಶೇಷತಃ ।
ಅಗ್ನೌ ಕಂಡನಕೇ ಚೈವ ಪೇಷಣೇ ತೋಯ ಸಂಗ್ರಹೇ ॥ ೫ ॥
ಹಿಂಸಾ ಸದಾ ಗೃಹಸ್ಥಾನಾಂ ತಸ್ಮಾದ್ಧಿಂಸಾಂ ವಿವರ್ಜಯೇತ್ ।
ಅಹಿಂಸೇಯಂ ಪರೋ ಧರ್ಮಃ ಸರ್ವೇಷಾಂ ಪ್ರಾಣಿನಾಂ ದ್ವಿಜಾಃ॥
ತಸ್ಮಾತ್ಸರ್ವ ಪ್ರಯತ್ನೇನ ವಸ್ತ್ರಪೂತಂ ಸಮಾಚರೇತ್ ।
ತದ್ದಾನ ಮಭಯಂ ಪುಣ್ಯಂ ಸರ್ವ ದಾನೋತ್ತಮೋತ್ತಮಂ॥ ೭ ॥

---

ದರೆ, ಮೇಲೆ ಹೇಳಿರುವ ಪವಿತ್ರವಾದ ನೀರನ್ನು ಉಪಯೋಗಿಸಬೇಕೆಂದು ತಾತ್ಪರ್ಯವು.

೪. ಸಾಮಾನ್ಯವಾಗಿ ನೀರಿನಲ್ಲಿರತಕ್ಕ ಸೂಕ್ಷ್ಮವಾದ ಹುಳುಗಳು ಇರುತ್ತವೆ. ಅವುಗಳನ್ನು ಕೊಂದರೆ ಎಷ್ಟುಪಾಪವು ಬರುವುದೋ ಅಪರಿಶುದ್ಧವಾದ ನೀರನ್ನು ಉಪಯೋಗಿಸಿದರೂ, ಆ ಸಕಲ ಪಾಪಗಳೂ ಬರುವುವು.

೫-೬. ಎಲೈ ಬ್ರಾಹ್ಮಣರೇ, ಗೃಹಸ್ಥನಿಗೆ, ನೆಲವನ್ನು ಗುಡಿಸು ವಾಗಲೂ, ಮೈ ತೊಳೆದು ಕೊಳ್ಳುವಾಗಲೂ, ಅಗ್ನಿಯಲ್ಲಿ ಅಡಿಗೆ ಮಾಡು ವಾಗಲೂ, ಕಂಡನಕವನ್ನು, ಬೀಸಣಿಗೆ ಮುಂತಾದವುಗಳಿಂದ ಬೀಸು ವಿಕೆಯನ್ನು, ಜರಡಿಯಿಂದ ವಂದರಿಯಾಡುವಾಗಲೂ, ಮಾಡುವಾಗಲೂ, ನೀರನ್ನು ಶೇಖರಿಸಿ ಇಡುವುದರಲ್ಲೂ, ಪ್ರಾಣಿಗಳ ಹಿಂಸೆಯು ಸಂಭವಿಸು ವುದು. ಎಲ್ಲ ಪ್ರಾಣಿಗಳಿಗೂ ಹಿಂಸೆಯನ್ನು ಮಾಡದಿರುವಿಕೆಯೇ ಮುಖ್ಯ ಧರ್ಮವಾಗಿರುವುದರಿಂದ, ಹಿಂಸೆ ಮಾಡುವುದನ್ನು ಬಿಟ್ಟುಬಿಡಬೇಕು,

೭. ಆದುದರಿಂದ (ನೀರನ್ನು) ಸರ್ವ ಪ್ರಯತ್ನದಿಂದಲೂ ಬಟ್ಟೆ ಯಿಂದ ಶೋಧಿಸಿದ ನೀರನ್ನು, ಉಪಯೋಗಿಸಬೇಕು. ಆ ಶೋಧಿಸಿದ ನೀರಿನ ದಾನವು ನರಕ ಮುಂತಾದುದರ ಭಯವನ್ನು ಹೋಗಲಾಡಿಸುವು ದಾಗಿಯೂ, ಪುಣ್ಯವನ್ನು ಉಂಟುಮಾಡುವುದಾಗಿಯೂ, ಎಲ್ಲ ದಾನಗ ಳಲ್ಲೂ ಅತ್ಯುತ್ತಮವಾದ ದಾನ ವೆನಿಸಿಕೊಂಡೂ ಇರುವುದು.

ತಸ್ಮಾತ್ತು ಪರಿಹರ್ತವ್ಯಾ ಹಿಂಸಾ ಸರ್ವತ್ರ ಸರ್ವದಾ ।
ಮನಸಾ ಕರ್ಮಣಾ ವಾಚಾ ಸರ್ವದಾಽಹಿಂಸಕಂ ನರಂ ॥ ೮ ॥
ರಕ್ಷಂತಿ ಜಂತವಃ ಸರ್ವೇ ಹಿಂಸಕಂ ಬಾಧಯಂತಿ ಚ ।
ತ್ರೈಲೋಕ್ಯ ಮಖಿಲಂ ದತ್ವಾ ಯತ್ಫಲಂ ವೇದಪಾರಗೇ ॥ ೯ ॥
ತತ್ಫಲಂ ಕೋಟಿಗುಣಿತಂ ಲಭತೇಽಹಿಂಸಕೋ ನರಃ ।
ಮನಸಾ ಕರ್ಮಣಾ ವಾಚಾ ಸರ್ವ ಭೂತ ಹಿತೇ ರತಾಃ ॥೧೦॥
ದಯಾ ದರ್ಶಿತ ಪಂಥಾನೋ ರುದ್ರಲೋಕಂ ವ್ರಜಂತಿ ಚ ।
ಸ್ವಾಮಿವತ್ಪರಿ ರಕ್ಷಂತಿ ಬಹೂನಿ ವಿವಿಧಾನಿ ಚ ॥೧೧॥

---

೮. ಆದುದರಿಂದ ಎಲ್ಲೂ, ಯಾವಾಗಲೂ, ಮನಸ್ಸು, ಮಾತು, ಅಥವಾ ಕರ್ಮದಿಂದಲಾಗಲೀ ಇತರರಿಗೆ ಹಿಂಸೆಯನ್ನು ಮಾಡಬಾರದು. ಜಂತುಗಳಿಗೆ ಹಿಂಸೆಯನ್ನು ಮಾಡಿದಿರುವ ಮನುಷ್ಯನನ್ನು ಅವು ಯಾವಾಗಲೂ ಕಾಪಾಡುತ್ತಿರುತ್ತವೆ. 'ಅಲ್ಲದೆ ಹಿಂಸೆಯನ್ನು ಮಾಡುವವನನ್ನು ಆ ಜಂತುಗಳು ಬಾಧಿಸುತ್ತವೆ.

೯. ವೇದಾಧ್ಯಯನ ಸಂಪನ್ನನಾದವನಿಗೆ ಮೂರು ಲೋಕವನ್ನೂ ದಾನಮಾಡಿದರೆ ಎಷ್ಟು ಪುಣ್ಯ ಫಲವು ಬರುವುದೋ, ಹಿಂಸೆಯನ್ನು ಮಾಡದಿರುವ ಮನುಷ್ಯನಿಗೆ ಆ ಫಲದ ಕೋಟಿಯಷ್ಟು ಫಲವು ಲಭಿಸುವುದು.

೧೦. ಮನಸ್ಸಿನಿಂದಲಾಗಲೀ, ಕರ್ಮದಿಂದಲಾಗಲೀ, ಮಾತಿನಿಂದಲಾಗಲೀ, ಯಾರು ಎಲ್ಲ ಪ್ರಾಣಿಗಳನ್ನೂ, ಕಾಪಾಡುವುದರಲ್ಲೇ ಆಸಕ್ತರಾಗಿರುವರೋ, ದಯಾಶೀಲರಾಗಿರುವರೋ, ಅಂಥವರು ಆ ದಯೆಯಿಂದ ಸದ್ಗತಿಯ ಮಾರ್ಗವನ್ನು ಕಾಣುತ್ತಾ ರುದ್ರಲೋಕವನ್ನು ಹೊಂದುವರು.

೧೧. ಯಾರು ಯಜಮಾನನಂತೆ ನಾನಾವಿಧವಾದ ಅನೇಕ ಕುಟುಂಬಗಳನ್ನು ತಮ್ಮ ಪುತ್ರ ಪೌತ್ರರಂತೆ, ಎಂದರೆ ಬಹು ಮಮತೆಯಿಂದ, ಅವರ ಅರಿಷ್ಟಗಳನ್ನು ನಿವಾರಿಸಿ, ಇಷ್ಟಗಳನ್ನು ಒದಗಿಸಿ, ರಕ್ಷಿಸುವರೋ, ಅವರು ರುದ್ರಲೋಕವನ್ನು ಪಡೆಯುವರು.

ಯೇ ಪುತ್ರ ಪೌತ್ರವ ತ್ಸ್ನೇಹಾತ್ ರುದ್ರಲೋಕಂ ವ್ರಜಂತಿ ತೇ ।
ತಸ್ಮಾತ್ಸರ್ವ ಪ್ರಯತ್ನೇನ ವಸ್ತ್ರಪೂತೇನ ವಾರಿಣಾ ॥೧೨॥
ಕಾರ್ಯ ಮಭ್ಯುಕ್ಷಣಂ ನಿತ್ಯಂ ಸ್ನಪನಂ ಚ ವಿಶೇಷತಃ।
ತ್ರೈಲೋಕ್ಯ ಮಖಿಲಂ ಹತ್ವಾ ಯತ್ಫಲಂ ಪರಿಕೀರ್ತ್ಯತೇ ॥೧೩॥
ಶಿವಾಲಯೇ ನಿಹತ್ಯೈಕ ಮಪಿ ತತ್ಸಕಲಂ ಲಭೇತ್ ।
ಶಿವಾರ್ಥಂ ಸರ್ವದಾ ಕಾರ್ಯಾ ಪುಷ್ಪಹಿಂಸಾ ದ್ವಿಜೋತ್ತಮಾಃ ॥೧೪॥

---

೧೨. ಆದುದರಿಂದ ಸರ್ವಪ್ರಯತ್ನದಿಂದಲೂ, ಬಟ್ಟೆಯಿಂದ ಶೋಧಿಸಿದ ನೀರಿನಿಂದಲೇ ವಿಶೇಷವಾಗಿ ಪ್ರೋಕ್ಷಿಸುವಿಕೆಯನ್ನೂ, ಸ್ನಾನವನ್ನೂ ಮಾಡಬೇಕು.

೧೩. ಸಾಮಾನ್ಯವಾಗಿ ಹಿಂಸೆಯನ್ನು ಎಲ್ಲೂ ಮಾಡಬಾರದು. ಅದರಲ್ಲೂ, ಶಿವಾಲಯದಲ್ಲಿ ಒಂದು ಹಿಂಸೆಯನ್ನು ಮಾಡಿದರೂ ಮೂರು ಲೋಕವನ್ನೂ ಕೊಂದರೆ ಎಷ್ಟು ಪಾಪವು ಬರುವುದೋ ಅಷ್ಟೆಲ್ಲ ಪಾಪಗಳೂ, ಆ ಒಂದು ಹತ್ಯದಿಂದಲೇ ಬರುವುವು. ಲೋಕದಲ್ಲಿ ಉತ್ಸರ್ಗ ಅಥವಾ ಸಾಮಾನ್ಯ, ಮತ್ತು ಅಪವಾದ ಅಥವಾ ವಿಶೇಷ, ಎಂದು ಎರಡು ಬಗೆಯ ಧರ್ಮಶಾಸ್ತ್ರಗಳುಂಟು. ಉತ್ಸರ್ಗ ಶಾಸ್ತ್ರವನ್ನು ಆಚರಿಸುವಾಗ ವಿಶೇಷ ಶಾಸ್ತ್ರದೊಡನೆ ಲೋಕದಲ್ಲಿ ವಿರೋಧವು ಕಂಡುಬರುತ್ತದೆ. ಆವಾಗ ಅಪವಾದ ಶಾಸ್ತ್ರದಿಂದ ಉತ್ಸರ್ಗ ಶಾಸ್ತ್ರಕ್ಕೆ ಸಂಕೋಚವನ್ನು ಕಲ್ಪಿಸಬೇಕಾಗುವುದು. ಹೇಗೆಂದರೆ "ಮಾಹಿಂಸ್ಯಾತ್ ಸರ್ವಾಭೂತಾನಿ" ಎಂದರೆ ಯಾವ ಪ್ರಾಣಿಯನ್ನೂ ಹಿಂಸಿಸಬಾರದು, ಎಂಬ ಈ ಸಾಮಾನ್ಯ ವಿಧಿವಾಕ್ಯಕ್ಕೆ ಯಜ್ಞದಲ್ಲಿ ಮಾಡುವ ಪಶುಹಿಂಸೆಯು ನಿಷಿದ್ಧವಲ್ಲವು. ಎಂಬ ವಿಶೇಷ ರೂಪವಾದ ಅಪವಾದ ಶಾಸ್ತ್ರದಿಂದ ಸಂಕೋಚಪಡಿಸಿ ಅರ್ಥವನ್ನು ಹೇಳುವರು.

೧೪. ಈಶ್ವರನ ಪೂಜೆಗೋಸ್ಕರವಾಗಿ ಪುಷ್ಪ, ಪತ್ರ, ಫಲಗಳ ಹಿಂಸೆಯನ್ನು ಮಾಡಬಹುದು. ಎಂದರೆ ಪೂಜೆಗೋಸ್ಕರವಾಗಿ ಹೂವನ್ನು ಕೊಯಿದಾಗ ಅವಕ್ಕೆ ಎಂದರೆ ಗಿಡಬಳ್ಳಿಗಳಿಗೂ ಹೂವುಮುಂತಾದುದಕ್ಕೂ ಉಂಟಾದ ಹಿಂಸೆಯು ನಿಷಿದ್ಧವಲ್ಲವು. ಹಾಗೆಯೇ ಯಜ್ಞಕ್ಕೋಸ್ಕರ

ಯಜ್ಞಾರ್ಥಂ ಪಶುಹಿಂಸಾ ಚ ಕ್ಷತ್ರಿಯೈ ರ್ದುಷ್ಟಶಾಸನಂ ।
ವಿಹಿತಾ ವಿಹಿತಂ ನಾಸ್ತಿ ಯೋಗಿನಾಂ ಬ್ರಹ್ಮವಾದಿನಾಂ ॥೧೫॥

ಯತಃ ತಸ್ಮಾನ್ನ ಹಂತವ್ಯಾ ನಿಷಿದ್ಧಾನಾಂ ನಿಷೇವಣಾತ್ ।
ಸರ್ವ ಕರ್ಮಾಣಿ ವಿನ್ಯಸ್ಯ ಸಂನ್ಯಸ್ತಾ ಬ್ರಹ್ಮವಾದಿನಃ ॥೧೬॥

ನ ಹಂತವ್ಯಾಃ ಸದಾ ಪೂಜ್ಯಾಃ ಪಾಪಕರ್ಮ ರತಾಃ ಅಪಿ ।
ಪವಿತ್ರಾಸ್ತು ಸ್ತ್ರಿಯಃ ಸರ್ವಾಃ ಅತ್ರೇಶ್ಚ ಕುಲಸಂಭವಾಃ ॥೧೭॥

ಬ್ರಹ್ಮಹತ್ಯಾ ಸಮಂ ಪಾಪಂ ಆತ್ರೇಯೀಂ ವಿನಿಹತ್ಯ ಚ ।
ಸ್ತ್ರಿಯಃ ಸರ್ವಾ ನ ಹಂತವ್ಯಾಃ ಪಾಪಕರ್ಮರತಾ ಅಪಿ ॥೧೮॥

---

ಮಾಡಿದ ಪಶುಹಿಂಸೆಯೂ, ಅದರಂತೆಯೇ ಶಿಷ್ಟರನ್ನು ಕಾಪಾಡುವುದಕ್ಕಾಗಿ ಧರ್ಮರಕ್ಷಣೆಗಾಗಿ, ಅಧರ್ಮವನ್ನು ಅಡಗಿಸಲು ರಾಜರು ದುಷ್ಟರಿಗೆ ಕೊಡುವ ಹಿಂಸೆಯೂ ನಿಷಿದ್ಧವಲ್ಲವು.

೧೫–೧೬. ದುಷ್ಟರ ಶಾಸನದಲ್ಲೂ, ಅಪವಾದವನ್ನು ಹೇಳುತ್ತಾರೆ. ಜ್ಞಾನಿಗಳಾದ ಸಾಮಾನ್ಯ ಜನರಂತೆ ರಾಗದ್ವೇಷಭಿಮಾನಗಳಿಲ್ಲದ, ಬ್ರಹ್ಮವಾದಿಗಳಿಗೆ, ವಿಹಿತವಾದ ಅಥವಾ ನಿಷಿದ್ಧವಾದ, ಕಾರ್ಯವಾವುದೂ ಇಲ್ಲವು. ಆದುದರಿಂದ ಸರ್ವವಿಷಯೋಪಭೋಗಗಳನ್ನೂ ತೊರೆದು ವೈರಾಗ್ಯದಿಂದ ಜ್ಞಾನಿಗಳಾಗಿರುವ ಬ್ರಹ್ಮವಾದಿಗಳನ್ನೂ ಯೋಗಿಗಳನ್ನೂ ನಿಷಿದ್ಧವಾದ ಕಾರ್ಯಗಳನ್ನು ಮಾಡುವಂತೆ ಕಂಡುಬಂದರೂ, ಕೊಲ್ಲಬಾರದು.

೧೭. ಹೆಂಗಸರನ್ನು ಯಾವಾಗಲೂ ಕೊಲ್ಲಬಾರದು. ಅಲ್ಲದೆ ಅವರನ್ನು ಗೌರವಿಸಬೇಕು. ಏಕೆಂದರೆ ಯಾವಾಗಲೂ, ಅವರು, ಒಂದು ವೇಳೆ ಪಾಪಕರ್ಮದಲ್ಲಿ ಆಸಕ್ತರಾಗಿದ್ದರೂ, ಪೂಜ್ಯರಾಗಿಯೇ ಇರುವರು. ಆದುದರಿಂದ ಅವರನ್ನು ಕೊಲ್ಲಬಾರದು. ಹಾಗಿರಲು ಪತಿವ್ರತೆಯರಾಗಿರುವ, ಅದರಲ್ಲೂ ವಿಶೇಷವಾಗಿ ಅತ್ರಿಕುಲದಲ್ಲಿ ಹುಟ್ಟಿರುವ, ಸ್ತ್ರೀಯರು ಯಾವಾಗಲೂ ಪೂಜ್ಯರು!

೧೮. ಅತ್ರಿ ಗೋತ್ರೋತ್ಪನ್ನರಾದ ಸ್ತ್ರೀಯರನ್ನು ಕೊಂದರೆ ಬ್ರಹ್ಮಹತ್ಯೆಗೆ ಸಮವಾದ ಪಾಪವು ಬರುವುದು. ಆದುದರಿಂದ ಪಾಪಕರ್ಮದಲ್ಲಿ ಆಸಕ್ತರಂತೆ ಕಂಡುಬಂದರೂ ಆ ಸ್ತ್ರೀಯರನ್ನು ಕೊಲ್ಲಬಾರದು

ನ ಯಜ್ಞಾರ್ಥಂ ಸ್ತ್ರಿಯೋ ಗ್ರಾಹ್ಯಾಃ ಸರ್ವೈಸ್ಸರ್ವತ್ರ ಸರ್ವದಾ ।
ಸರ್ವ ವರ್ಣೇಷು ವಿಪ್ರೇಂದ್ರಾಃ ಪಾಪಕರ್ಮರತಾ ಅಪಿ ॥೧೯॥

ಮಲಿನಾ ರೂಪವತ್ಯಶ್ಚ ವಿರೂಪಾ ಮಲಿನಾಂಬರಾಃ ।
ನ ಹಂತವ್ಯಾ ಸ್ಸದಾ ಮರ್ತ್ಯೈಃ ಶಿವವಚ್ಛಂಕಯಾ ತಥಾ ॥೨೦॥

ವೇದ ಬಾಹ್ಯ ವ್ರತಾ ಚಾರಾಃ ಶ್ರೌತಸ್ಮಾರ್ತ ಬಹಿಷ್ಕೃತಾಃ ।
ಪಾಷಂಡಿನ ಇತಿ ಖ್ಯಾತಾಃ ನ ಸಂಭಾಷ್ಯಾ ದ್ವಿಜಾತಿಭಿಃ ॥೨೧॥

---

೧೯. ಎಲೈ ಬ್ರಾಹ್ಮಣ ಶ್ರೇಷ್ಠರೇ, ಎಲ್ಲೂ ಯಾವಾಗಲೂ, ಯಾವ ಜಾತಿಯಲ್ಲೂ, ಯಜ್ಞಕ್ಕೋಸ್ಕರವಾಗಿ ಯಾದರೂ, ಸ್ತ್ರೀಯರನ್ನು, ಅವರು ಪಾಪ ಕರ್ಮದಲ್ಲಿ ಆಸಕ್ತರಾಗಿದ್ದರೂ ಸರಿಯೇ, ಹಿಂಸಿಸಬಾರದು.

೨೦. ಮಹಿಳೆಯರು ಸುಂದರಿಯರಾಗಿದ್ದರೂ, ಇಲ್ಲದಿದ್ದರೂ, ಕೊಳಕರಾಗಿದ್ದರೂ, ಕೊಳೆಯಾದ ಬಟ್ಟೆಯನ್ನು ಉಟ್ಟಿರುವವರಾಗಿದ್ದರೂ ಅಂತಹ ಸ್ತ್ರೀಯರನ್ನೂ, ಮನುಷ್ಯರು, ಅವರಲ್ಲಿ ಪವಿತ್ರವಾದ ಅಗ್ನಿಯು ಇದೆ, ಎಂದು ಶ್ರುತಿ ಇರುವುದರಿಂದ, ತಿಳಿದು, ಸ್ತ್ರೀಯರು ಅಗ್ನಿಯಂತೆ ಯಾವಾಗಲೂ ಕೊಳೆಯನ್ನು ಸುಟ್ಟು ಶುದ್ಧಿಯನ್ನುಂಟುಮಾಡುವವರಾಗಿ ಇರುವರೆಂದೂ, ಅಲ್ಲದೆ ಅವರಲ್ಲಿ ಶಿವಸ್ವರೂಪದ ಭಾವನೆಯಿಂದ, ಗೌರವಿಸಬೇಕೆಂದೂ ಭಾವವು.

೨೧–೨೨. ಶ್ರುತ್ಯುಕ್ತವಾದ ರೀತಿಯನ್ನು ಬಿಟ್ಟು ವ್ಯವಹರಿಸುವ, ಶ್ರೌತಸ್ಮಾರ್ತಧರ್ಮಗಳಿಂದ ಬಹಿಷ್ಕರಿಸಲ್ಪಟ್ಟ ಪಾಷಂಡಿಗಳೊಡನೆ ದ್ವಿಜರು ಎಂದರೆ ತ್ರೈವರ್ಣಿಕರು ವ್ಯವಹರಿಸ ಕೂಡದು. ಅವರನ್ನು ಮುಟ್ಟಬಾರದು. ಅವರನ್ನು ನೋಡಲೂ ಬಾರದು. ಒಂದು ವೇಳೆ ನೋಡಿದರೆ ಅದರ ದೋಷಪರಿಹಾರಕ್ಕೋಸ್ಕರ ಸೂರ್ಯನನ್ನು ನೋಡಬೇಕು. ಈ ರೀತಿ

ನ ಸ್ಪ್ರಷ್ಟವ್ಯಾ ನ ದ್ರಷ್ಟವ್ಯಾಃ ದೃಷ್ಟ್ವಾ ಭಾನುಂ ಸಮೀಕ್ಷತೇ ।
ತಥಾಽಪಿ ತೇ ನ ವಧ್ಯಾಶ್ಚ ನೃಪೈ ರನ್ಯೈಶ್ಚ ಜಂತುಭಿಃ ॥೨೨॥
ಪ್ರಸಂಗಾ ದ್ವಾಽಪಿ ಯೋ ಮರ್ತ್ಯಃ ಸತಾಂ ಸಕೃದಹೋ ದ್ವಿಜಾಃ ।
ರುದ್ರಲೋಕ ಮವಾಪ್ನೋತಿ ಸಮಭ್ಯರ್ಚ್ಯ ಮಹೇಶ್ವರಂ ॥೨೩॥
ಭವಂತಿ ದುಃಖಿತಾಃ ಸರ್ವೇ ನಿರ್ದಯಾ ಮುನಿಸತ್ತಮಾಃ ।
ಭಕ್ತಿಹೀನಾ ನರಾಃ ಸರ್ವೇ ಭವೇ ಪರಮ ಕಾರಣೇ ॥೨೪॥
ಯೋ ಭಕ್ತ್ಯಾ ದೇವದೇವಸ್ಯ ಶಿವಸ್ಯ ಪರಮೇಷ್ಠಿನಃ ।
ಭಾಗ್ಯವಂತೋ ವಿಮುಚ್ಯಂತೇ ಭುಕ್ತ್ವಾ ಭೋಗಾನಿಹೈವ ತು ॥೨೫॥

---

ಅತಿ ನಿಂದ್ಯರಾದರೂ ಕೂಡ ಅಂತಹ ಪಾಷಂಡಿಗಳಾಗಿರಬಹುದಾದ ಸ್ತ್ರೀಯರನ್ನು ಯಾವ ರಾಜನೇ ಆಗಲಿ, ಕೊಲ್ಲಬಾರದು. ಅಹಿಂಸೆ ಎಂಬ ಧರ್ಮದ ಪಾಲನೆಯು ಅಷ್ಟು ಸೂಕ್ಷ್ಮವಾದುದೆಂದು ತಾತ್ಪರ್ಯವು.

೨೩. ಇನ್ನು ಮುಂದೆ ಶಿವಾರ್ಚನ ಮತ್ತು ಶಿವಭಕ್ತಿ ಮಾಹಾತ್ಮ್ಯ ಇವನ್ನು ಹೇಳುವರು. ಎಲೈ ಬ್ರಾಹ್ಮಣರೇ, ಯಾವನಾದರೂ ಮನುಷ್ಯನು, ಸತ್ಪುರುಷರ ಸಹವಾಸದಿಂದ ಮತ್ತೆ ಯಾವುದಾದರೂ ಒಂದು ಪ್ರಸಂಗದಿಂದ ಒಂದು ಸಾರಿಯಾದರೂ ಮಹೇಶ್ವರನ ಪೂಜೆಯನ್ನು ಮಾಡಿದರೆ ರುದ್ರಲೋಕವನ್ನು ಹೊಂದುವನು.

೨೪. ಎಲೈ ಮುನಿಶ್ರೇಷ್ಠರೇ, ಅತ್ಯಂತ ಕರುಣಾನಿಧಿಯಾದ, ಆ ಪರಮೇಶ್ವರನಲ್ಲಿ ಯಾರು ಭಕ್ತಿಯನ್ನಿಡದೇ ದಯಾಹೀನರಾಗಿಯೂ, ಇರುವರೋ ಅವರೆಲ್ಲರೂ ದುಃಖವನ್ನು ಹೊಂದುವರು.

೨೫. ಯಾರು ದೇವದೇವನಾದ ಪರಮೇಶ್ವರನಲ್ಲಿ ಭಕ್ತಿಯನ್ನಿಡುವರೋ ಅವರು ಭಾಗ್ಯವಂತರಾಗಿ ಈ ಲೋಕದಲ್ಲಿ ಭೋಗವನ್ನು ಅನುಭವಿಸಿ, ಅನಂತರ ಸಂಸಾರದಿಂದ ಮುಕ್ತಿಯನ್ನೂ ಹೊಂದುವರು.

ಪುತ್ರೇಷು ದಾರೇಷು ಗೃಹೇಷು ನೄಣಾಂ ।
ಭಕ್ತಂ ಯಥಾ ಚಿತ್ತ ಮಥಾದಿ ದೇವೇ ॥
ಸಕೃತ್ ಪ್ರಸಂಗಾ ದ್ಯತಿ ತಾಪಸಾನಾಂ ।
ತೇಷಾಂ ನ ದೂರಃ ಪರಮೇಶ ಲೋಕಃ ॥೨೬॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಭಕ್ತಿಮಹಿಮ ವರ್ಣನಂ ನಾಮ ಅಷ್ಟಸಪ್ತತಿತಮೋಽಧ್ಯಾಯಃ

---

೨೬. ಮನುಷ್ಯರಿಗೆ ಹೇಗೆ ಪುತ್ರರಲ್ಲಿ, ಹೆಂಡಿತಿಯಲ್ಲಿ, ಮನೆಗಳಲ್ಲಿ ಮನಸ್ಸು ಭಾಗವಾಗಿ ಅಭಿಮಾನವುಳ್ಳದ್ದಾಗಿರುವುದೋ, ಎಂದರೆ ಮನುಷ್ಯನಿಗೆ ಪುತ್ರದಾರಾದಿ ಸಂಬಂಧದಿಂದ ಅವರವರಲ್ಲಿ ಹೇಗೆ ಪ್ರೀತಿಯು ಹುಟ್ಟುವದೋ ಹಾಗೆ, ಯತಿ ಮತ್ತು ತಾಪಸರ ಸಂಗದಿಂದ ಎಂದರೆ ಸಹವಾಸ ಮುಂತಾದ ಸಂಬಂಧದಿಂದ ಆದಿ ದೇವನಾದ ಶಿವನಲ್ಲಿ ಸ್ವಲ್ಪವಾದರೂ, ಭಕ್ತಿಯು ಹುಟ್ಟಿದರೆ, ಅಂಥವನಿಗೆ ಶಿವಲೋಕವು ದೂರವಾಗುವುದಿಲ್ಲವು. ಎಂದರೆ ಅವನು ಶಿವಲೋಕವನ್ನು ಹೊಂದುವನೆಂದು ತಾತ್ಪರ್ಯವು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಭಕ್ತಿಯ ಮಹಿಮೆಯನ್ನು ವಿವರಿಸಿರುವ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಏಕೋನಾಶೀತಿತಮೋಽಧ್ಯಾಯಃ

**ಲೈಂಗೇ ಕೋನಾಶೀತಿತಮ ಉಚ್ಛಿಷ್ಟಾದಿಕ ಪೂಜನಾತ್ ।**
**ಫಲಂ ಪೂಜಾ ದರ್ಶನಸ್ಯ ದೀಪದಾನಸ್ಯ ಚೋಚ್ಯತೇ ॥**

**॥ ಋಷಯ ಊಚುಃ ॥**

**ಕಥಂ ಪೂಜ್ಯೋ ಮಹಾದೇವೋ ಮರ್ತ್ಯೈಃ ಮಂದೈರ್ಮಹಾಮತೇ**
**ಅ(ಕ)ಲ್ಪಾಯುಷ್ಯೆ ರಲ್ಪವೀರ್ಯೈ ರಲ್ಪಸತ್ವೈಃ ಪ್ರಜಾಪತಿಃ ॥ ೧ ॥**
**ಸಂವತ್ಸರ ಸಹಸ್ರೈಶ್ಚ ತಪಸಾ ಪೂಜ್ಯ ಶಂಕರಂ ।**
**ನ ಪಶ್ಯಂತಿ ಸುರಾಶ್ಚಾಪಿ ಕಥಂ ದೇವಂ ಯಜಂತಿ ತೇ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿಎಪ್ಪತ್ತೊಂಬತ್ತನೆಯ ಅಧ್ಯಾಯವು.

ಈ ಎಪ್ಪತ್ತೊಂಬತ್ತನೆಯ ಅಧ್ಯಾಯದಲ್ಲಿ ಉಚ್ಛಿಷ್ಟಾದಿಗಳನ್ನು ಪೂಜೆಮಾಡುವುದರಿಂದ ಬರುವ ಫಲವೂ, ಪೂಜೆಯನ್ನು ನೋಡುವುದರಿಂದ, ಹಾಗೂ, ದೀಪದಾನವನ್ನು ಮಾಡುವುದರಿಂದ ಬರುವ ಫಲವೂ ಹೇಳಲ್ಪಡುವುದು.

೧. ಋಷಿಗಳು ಹೇಳಿದರು: ಎಲೈ ಮಹಾಮತಿಯಾದ ಸೂತ ಮುನಿಯೇ, ಸ್ವಲ್ಪ ಆಯಸ್ಸುಳ್ಳವರಾಗಿಯೂ, ಅಲ್ಪ ವೀರ್ಯರಾಗಿಯೂ, ಅಲ್ಪಶಕ್ತಿಯುಳ್ಳವರಾಗಿಯೂ, ಮಂದರಾಗಿಯೂ, ಇರುವ ಮನುಷ್ಯರಿಂದ ಪ್ರಜೆಗಳಿಗೆ ಒಡೆಯನಾದ ಶಿವನು ಹೇಗೆ ಪೂಜಿಸಲ್ಪಡುವನು?

೨. ದೇವತೆಗಳೂ ಕೂಡ ಸಾವಿರಾರು ವರ್ಷಗಳು ಈಶ್ವರನನ್ನು ಕುರಿತು ತಪಸ್ಸು ಮಾಡಿದರೂ ಅವನನ್ನು ನೋಡಲಾರರು. ಅಂತಹ ಶಿವನನ್ನು ಮಾನವರು ಹೇಗೆ ತಾನೆ ಪೂಜೆಮಾಡಲು ಯೋಗ್ಯರು? ಅಂತಹ ಪವಿತ್ರನಾದ ಈಶ್ವರನನ್ನು ಅಪವಿತ್ರರಾದ ಈ ಮಾನವರು ಪೂಜಿಸಲು ತಕ್ಕ ಯೋಗ್ಯತೆಯನ್ನು ಸುಲಭವಾಗಿಯೂ ಶೀಘ್ರವಾಗಿಯೂ ಪಡೆಯಲಾರರೆಂದು ಭಾವವು.

॥ ಸೂತ ಉವಾಚ ॥

ಕಥಿತಂ ತಥ್ಯಮೇವಾತ್ರ ಯುಷ್ಮಾಭಿ ರ್ಮುನಿಪುಂಗವಾಃ ।
ತಥಾಽಪಿ ಶ್ರದ್ಧಯಾ ದೃಶ್ಯಃ ಪೂಜ್ಯ ಸ್ಸಂಭಾಷ್ಯ ಏವಚ ॥ ೩ ॥

ಪ್ರಸಂಗಾ ಚ್ಚೈವ ಸಂಪೂಜ್ಯ ಭಕ್ತಿಹೀನೈ ರಪಿ ದ್ವಿಜಾಃ ।
ಭಾವಾನುರೂಪ ಫಲದೋ ಭಗವಾನಿತಿ ಕೀರ್ತಿತಃ ॥ ೪ ॥

ಉಚ್ಛಿಷ್ಟಃ ಪೂಜಯನ್ಯಾತಿ ಪೈಶಾಚಂ ತು ದ್ವಿಜಾಧಮಃ ।
ಸಂಕ್ರುದ್ಧೋ ರಾಕ್ಷಸಂ ಸ್ಥಾನಂ ಪ್ರಾಪ್ನುಯಾ ನ್ಮೂಢಧೀರ್ದ್ವಿಜಾಃ ॥

ಅಭಕ್ಷ್ಯಭಕ್ಷೀ ಸಂಪೂಜ್ಯ ಯಾಕ್ಷಂ ಪ್ರಾಪ್ನೋತಿ ದುರ್ಜನಃ ।
ಗಾನಶೀಲಶ್ಚ ಗಾಂಧರ್ವಂ ನೃತ್ಯಶೀಲಸ್ತಥೈವ ಚ ॥ ೬ ॥

---

೩. ಸೂತ ಮುನಿಯು ಹೇಳಿದನು: ಎಲೈ ಋಷಿಶ್ರೇಷ್ಠರೇ, ನೀವು ಈಗ ಹೇಳಿದ ಈ ವಿಷಯವು ಸತ್ಯವಾದುದು. ಆದರೂ ಕೂಡ ಈಶ್ವರನು ಶ್ರದ್ಧೆಯಿಂದ ಕೂಡಿದ ಭಕ್ತರಿಂದ ಪೂಜಿಸಲೂ, ನೋಡಲೂ ಮತ್ತು ಮಾತನಾಡಿಸಲೂ ಶಕ್ಯನು. ಅಚಲವೂ ಅನನ್ಯವೂ ಆಗಿರುವ ಶ್ರದ್ಧೆಯಿಂದ ಈಶ್ವರನನ್ನು ಪೂಜಿಸಿದರೆ ಅವನು ಪ್ರಸನ್ನನಾಗುವನೆಂದು ಭಾವವು.

೪. ಎಲೈ ಬ್ರಾಹ್ಮಣರೇ, ಭಕ್ತಿಹೀನರಾದವರಿಂದಲೂ, ಈಶ್ವರನು ಪ್ರಾಸಂಗಿಕವಾಗಿ ಪೂಜೆಮಾಡಲ್ಪಟ್ಟರೂ ಅವರವರ ಮನೋಭಾವನೆಗೆ ತಕ್ಕಂತೆ ಫಲವನ್ನು ಕೊಡುವನೆಂದು ಹೇಳಲ್ಪಟ್ಟವನಾದುದರಿಂದ, ಪೂಜೆ ಮಾಡುವವರ ಮನೋಭಾವನೆಗಳಿಗೆ ತಕ್ಕಂತೆ ಫಲವನ್ನು ತಪ್ಪದೆ ಕೊಡುವನು.

೫. ಬ್ರಾಹ್ಮಣರಲ್ಲಿ ಅಧಮನಾಗಿಯೂ ಉಚ್ಛಿಷ್ಟನಾಗಿಯೂ ಇರುವ ಮನುಷ್ಯನು ಶಿವನನ್ನು ಪೂಜಿಸಿದರೆ ಅವನಿಗೆ ಪಿಶಾಚಲೋಕವು ಪ್ರಾಪ್ತವಾಗುವುದು. ಮೂಢಮತಿಯಾಗಿಯೂ, ಕೋಪಿಷ್ಠನಾಗಿಯೂ, ಇರುವ ಮನುಷ್ಯನು ಪೂಜಿಸಿದರೆ ಅವನಿಗೆ ರಾಕ್ಷಸಸ್ಥಾನವು ಪ್ರಾಪ್ತವಾಗುವುದು.

೬–೭. ತಿನ್ನಬಾರದ ವಸ್ತುವನ್ನು ತಿನ್ನತಕ್ಕವನು ಪೂಜಿಸಿದರೆ ಯಕ್ಷಲೋಕವನ್ನು ಹೊಂದುವನು. ಗಾನಶೀಲನು ಮತ್ತು ನರ್ತಕನು

ಖ್ಯಾತಿಶೀಲಸ್ತ್ರಥಾ ಚಾಂದ್ರಂ ಸ್ತ್ರೀಷು ಸಕ್ತ್ರೋ ನರಾಧಮಾಃ ।
ಮದಾರ್ತಃ ಪೂಜಯನ್ ರುದ್ರಂ ಸೋಮಸ್ಥಾನಮವಾಪ್ನುಯಾತ್
ಗಾಯತ್ರ್ಯಾ ದೇವಮಭ್ಯರ್ಚ್ಯ ಪ್ರಾಜಾಪತ್ಯ ಮವಾಪ್ನುಯಾತ್ ।
ಬ್ರಾಹ್ಮಂ ಹಿ ಪ್ರಣವೇನೈವ ವೈಷ್ಣವಂ ಚಾ ಭಿನಂದ್ಯ ಚ ॥ ೮ ॥
ಶ್ರದ್ಧಯಾ ಸಕೃದೇವಾಪಿ ಸಮಭ್ಯರ್ಚ್ಯ ಮಹೇಶ್ವರಂ ।
ರುದ್ರಲೋಕ ಮನುಪ್ರಾಪ್ಯ ರುದ್ರೈಃ ಸಾರ್ಧಂ ಪ್ರಮೋದತೇ ॥ ೯ ॥
ಸಂಶೋಧ್ಯ ಚ ಶುಭಂ ಲಿಂಗ ಮಮರಾ ಸುರಪೂಜಿತಂ ।
ಜಲೈಃ ಪೂತೈಃ ತಥಾ ಪೀಠೇ ದೇವಮಾವಾಹ್ಯ ಭಕ್ತಿತಃ ॥೧೦॥
ದೃಷ್ಟ್ವಾ ದೇವಂ ಯಥಾನ್ಯಾಯಂ ಪ್ರಣಿಪತ್ಯ ಚ ಶಂಕರಂ ।
ಕಲ್ಪಿತೇ ಚಾಸನೇ ಸ್ಥಾಪ್ಯ ಧರ್ಮಜ್ಞಾನಮಯೇ ಶುಭೇ ॥೧೧॥

---

ರುದ್ರನನ್ನು ಪೂಜಿಸಿ ಗಾಂಧರ್ವಲೋಕವನ್ನು ಹೊಂದುವನು. ಕೀರ್ತಿ ಕಾಮನೆಯುಳ್ಳವನು. ರುದ್ರನನ್ನು ಪೂಜಿಸಿದರೆ ಬುಧಲೋಕವನ್ನೂ, ಸ್ತ್ರೀಯರಲ್ಲಿ ಆಸಕ್ತನಾದ ನರಾಧಮನೂ, ಮದಿಸಿದವನೂ, ರುದ್ರನನ್ನು ಪೂಜಿಸಿದರೆ ಚಂದ್ರಸ್ಥಾನವನ್ನೂ ಹೊಂದುವರು.

೮. ಗಾಯತ್ರೀ ಮಂತ್ರದಿಂದ ಶಿವನನ್ನು ಪೂಜಿಸಿದರೆ ಪ್ರಜಾಪತಿಯ ಸ್ಥಾನವನ್ನೂ, ಓಂಕಾರದಿಂದ ಪೂಜಿಸಿದರೆ ಬ್ರಹ್ಮನ, ವಿಷ್ಣುವಿನ, ಸ್ಥಾನವನ್ನೂ ಹೊಂದುವರು.

೯. ಶ್ರದ್ಧೆಯಿಂದ ಒಂದು ಸಾರಿಯಾದರೂ ಮಹೇಶ್ವರನನ್ನು ಪೂಜಿಸಿದರೆ ರುದ್ರಲೋಕವನ್ನು ಪಡೆದು ಅಲ್ಲಿ ಏಕಾದಶರುದ್ರರೊಡನೆ ಸೇರಿ ಆ ಭಕ್ತನು ಆನಂದಿಸುವನು.

೧೦. ದೇವಾಸುರರಿಂದ ಪೂಜಿಸಲ್ಪಟ್ಟ, ನಿರ್ದುಷ್ಟವಾದ ಈಶ್ವರ ಲಿಂಗವನ್ನು ಹುಡುಕಿತಂದು ಇಟ್ಟುಕೊಂಡು, ಪರಿಶುದ್ಧವಾದ ನೀರಿನಿಂದ ತೊಳೆದು ಪೀಠದಲ್ಲಿ ಶಿವನನ್ನು ಭಕ್ತಿಯಿಂದ ಆವಾಹನೆ ಮಾಡಬೇಕು.

೧೧-೧೨. ದೇವನನ್ನು ನೋಡಿ ಶಾಸ್ತ್ರಾನುಸಾರವಾಗಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಧರ್ಮಮಯವಾಗಿಯೂ, ಜ್ಞಾನಮಯ

ವೈರಾಗ್ಯೈ ಶ್ವರ್ಯ ಸಂಪನ್ನೇ ಸರ್ವಲೋಕ ನಮಸ್ಕೃತೇ ।
ಓಂಕಾರ ಪದ್ಮ ಮಧ್ಯೇ ತು ಸೋಮ ಸೂರ್ಯಾಗ್ನಿ ಸಂಭವೇ ॥೧೨॥
ಪಾದ್ಯ ಮಾಚಮನಂ ಚಾರ್ಘ್ಯಂ ದತ್ವಾ ರುದ್ರಾಯ ಶಂಭವೇ ।
ಸ್ನಾಪಯೇ ದ್ದಿವ್ಯ ತೋಯ್ಯೈಶ್ಚ ಘೃತೇನ ಪಯಸಾ ತಥಾ ॥೧೩॥
ದಧ್ನಾ ಚ ಸ್ನಾಪಯೇ ದ್ರುದ್ರಂ ಶೋಧಯೇಚ್ಚ ಯಥಾ ವಿಧಿ ।
ತತಃ ಶುದ್ಧಾಂಬುನಾ ಸ್ನಾಪ್ಯ ಚಂದನಾದ್ಯೈ ಶ್ಚ ಪೂಜಯೇತ್ ॥೧೪॥
ರೋಚನಾ ದ್ಯೈಶ್ಚ ಸಂಪೂಜ್ಯ ದಿವ್ಯ ಪುಷ್ಪೈಶ್ಚ ಪೂಜಯೇತ್ ।
ಬಿಲ್ವಪತ್ರೈ ರಖಂಡೈಶ್ಚ ಪದ್ಮೈ ರ್ನಾನಾ ವಿಧೈ ಸ್ತಥಾ ॥೧೫॥

---

ವಾಗಿಯೂ, ಶುಭವಾಗಿಯೂ, ವೈರಾಗ್ಯ ಮತ್ತು ಐಶ್ವರ್ಯ ಸಂಪನ್ನ ವಾಗಿಯೂ, ಎಲ್ಲಾ ಜನಗಳಿಂದಲೂ ನಮಸ್ಕರಿಸಲ್ಪಡುತಕ್ಕುದಾಗಿಯೂ, ಪದ್ಮವನ್ನು ಕೆತ್ತಿದ ಅದರ ಮಧ್ಯದಲ್ಲಿ ಕೆತ್ತಿರುವ ಓಂಕಾರವನ್ನುಳ್ಳದ್ದಾಗಿಯೂ ಮತ್ತು ಸೋಮ, ಸೂರ್ಯ, ಅಗ್ನಿಗಳಿಂದ ಹುಟ್ಟಿದ ಕಾಂತಿಯುಳ್ಳದ್ದಾಗಿಯೂ, ಇರುವ ಕಲ್ಪಿತವಾದ ಆಸನದಲ್ಲಿ ಶಂಕರನನ್ನು ಸ್ಥಾಪಿಸಿ, ಅರ್ಘ್ಯಪಾದ್ಯಾಚಮನಗಳನ್ನು ಕೊಡಬೇಕು.

೧೩–೧೪. ಗಂಧಾದಿ ಸುವಾಸನೆಯುಳ್ಳ ನೀರಿನಿಂದ ಸ್ನಾನ ಮಾಡಿಸಿ, ಅನಂತರದಲ್ಲಿ ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ, ಎಳನೀರು ಇವುಗಳಿಂದ ಅಭಿಷೇಕಮಾಡಿ, ಆ ಮೇಲೆ ಶುದ್ಧೋದಕದಿಂದ ಸ್ನಾನಮಾಡಿಸಿ, ಅನಂತರದಲ್ಲಿ ವಸ್ತ್ರ ಯಜ್ಞೋಪವೀತಗಳನ್ನು ಸಮರ್ಪಿಸಿ, ಚಂದನ ಗಂಧಾದಿಗಳಿಂದ ಪೂಜಿಸಬೇಕು.

೧೫. ಗೋರೋಚನಾದಿಗಳಿಂದಲೂ, ಚೆನ್ನಾಗಿ ಅರಳಿರುವ ಹೂಗಳಿಂದಲೂ, ಖಂಡವಾಗದಿರುವ, ಅಂದರೆ ಮೂರು ದಳಗಳಿರುವ, ಬಿಲ್ವಪತ್ರಗಳಿಂದಲೂ, ನಾನಾ ವಿಧವಾದ ತಾವರೇ ಹೂಗಳಿಂದಲೂ, ಶಂಭುವನ್ನು ಭಕ್ತನು ಪೂಜಿಸಬೇಕು.

ನೀಲೋತ್ಪಲೈಶ್ಚ ರಾಜೀವೈ ರ್ನಂದ್ಯಾವರ್ತೈಶ್ಚ ಮಲ್ಲಿಕೈಃ ।
ಚಂಪಕೈ ರ್ಜಾತಿ ಪುಷ್ಪೈಶ್ಚ ವಕುಲೈಃ ಕರವೀರಕೈಃ ॥೧೬॥
ಶಮೀ ಪುಷ್ಪೈ ರ್ಬೃಹತ್ಪುಷ್ಪೈ ರುನ್ಮತ್ತಾಗಸ್ತ್ಯಜೈ ರಪಿ ।
ಅಪಾಮಾರ್ಗ ಕದಂಬೈ ಶ್ಚ ಭೂಷಣೈ ರಪಿ ಶೋಭಿನೈಃ ॥೧೭॥
ದತ್ವಾ ಪಂಚ ವಿಧಂ ಧೂಪಂ ಪಾಯಸಂ ಚ ನಿವೇದನಂ ।
ದಧಿ ಭಕ್ತಂ ಚ ಮಧ್ವಾಜ್ಯ ಪರಿಪ್ಲುತ ಮತಃ ಪರಂ ॥೧೮॥
ಶುದ್ಧಾನ್ನಂ ಚೈವ ಮುದ್ಗಾನ್ನಂ ಷಡ್ವಿಧಂ ಚ ನಿವೇದಯೇತ್ ।
ಅಥ ಪಂಚವಿಧಂ ವಾಽಪಿ ಸಘೃತಂ ವಿನಿವೇದಯೇತ್ ॥೧೯॥
ಕೇವಲಂ ಚಾಪಿ ಶುದ್ಧಾನ್ನ ಮಾಢಕಂ ತಂಡುಲಂ ಪಚೇತ್ ।
ಕೃತ್ವಾ ಪ್ರದಕ್ಷಿಣಂ ಚಾಂತೇ ನಮಸ್ಕೃತ್ಯ ಮುಹು ರ್ಮುಹುಃ ॥೨೦॥

---

೧೬–೧೭. ಕುವಲಯಗಳಿಂದಲೂ, ಕಮಲಗಳಿಂದಲೂ, ನಂದ್ಯಾವರ್ತ ಹೂಗಳಿಂದಲೂ, ಮಲ್ಲಿಗೇ ಹೂಗಳಿಂದಲೂ, ಸಂಪಿಗೇ, ಜಾಜಿ, ಪಗಡೇ, ಕಣಿಗಲು, ಶಮೀ, ಬೃಹತೀ, ಉನ್ಮತ್ತಿ, ಅಗಸ್ತ್ಯಜ, ಮುಂತಾದ ಹೂಗಳಿಂದಲೂ, ಉತ್ತರಣೆಯ ಸಮೂಹದಿಂದಲೂ, ಮನೋಹರವಾದ ಭೂಷಣಗಳಿಂದಲೂ, ದೇವನನ್ನು ಪೂಜಿಸಬೇಕು.

೧೮–೧೯. ಗಂಧ, ಚಂದನ, ಸಾಂಬ್ರಾಣಿ, ಮುಂತಾದ ಐದು ವಿಧವಾದ ಧೂಪವನ್ನು ಹಾಕಿದ ಮೇಲೆ ದೀಪವನ್ನು ಸಮರ್ಪಿಸಿ, ಪಾಯಸವನ್ನೂ ಮತ್ತು ಮೊಸರನ್ನೂ, ಜೇನುತುಪ್ಪ, ತುಪ್ಪದಿಂದ ಮಾಡಿರುವ ಅನ್ನ, ಶುದ್ಧಾನ್ನ, ಹುಗ್ಗಿ, ಗುಡಾನ್ನ, ಶಾಲ್ಯನ್ನ, ಮೊದಲಾದ, ಆರು ವಿಧವಾದ ಅನ್ನವನ್ನೂ ನೈವೇದ್ಯ ಮಾಡಬೇಕು. ಅಥವಾ ಅನಂತರದಲ್ಲಿ ತುಪ್ಪದಿಂದ ಕೂಡಿರುವ ಐದು ವಿಧವಾದ ಅನ್ನವನ್ನೂ ನೈವೇದ್ಯ ಮಾಡಬೇಕು.

೨೦. ಒಂದು ಕೊಳಗ ಬರಿಯ ಅನ್ನವನ್ನೂ, ನಿವೇದನ ಮಾಡಬೇಕು. ಅನಂತರ ಬಾರಿಬಾರಿಗೂ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು.

ಸ್ತುತ್ವಾ ಚ ದೇವ ಮೀಶಾನಂ ಪುನಃ ಸಂಪೂಜ್ಯ ಶಂಕರಂ ।
ಈಶಾನಂ ಪುರುಷಂ ಚೈವ ಅಘೋರಂ ವಾಮ ಮೇವ ಚ ॥೨೧॥

ಸದ್ಯೋಜಾತಂ ಜಪಂ ಶ್ಚಾಪಿ ಪಂಚಭಿಃ ಪೂಜಯೇ ಚ್ಛಿವಂ ।
ಅನೇನ ವಿಧಿನಾ ದೇವಃ ಪ್ರಸೀದತಿ ಮಹೇಶ್ವರಃ ॥೨೨॥

ವೃಕ್ಷಾಃ ಪುಷ್ಪಾದಿ ಪತ್ರಾದ್ಯೈ ರುಪಯುಕ್ತಾಃ ಶಿವಾರ್ಚನೇ ।
ಗಾವಶ್ಚೈವ ದ್ವಿಜ ಶ್ರೇಷ್ಠಾಃ ಪ್ರಯಾಂತಿ ಪರಮಾಂ ಗತಿಂ ॥೨೩॥

ಪೂಜಯೇ ದ್ಯಃ ಶಿವಂ ರುದ್ರಂ ಶರ್ವಂ ಭವ ಮಜಂ ಸಕೃತ್ ।
ಸ ಯಾತಿ ಶಿವಸಾಯುಜ್ಯಂ ಪುನರಾವೃತ್ತಿ ವರ್ಜಿತಂ ॥೨೪॥

ಅರ್ಚಿತಂ ಪರಮೇಶಾನಂ ಭವಂ ಶರ್ವ ಮುಪಾಸಿತಂ ।
ಸಕೃ ತ್ಪ್ರಸಂಗಾ ದ್ವಾ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ॥೨೫॥

---

೨೧–೨೨. ಈಶಾನನನ್ನು ಸ್ತೋತ್ರಮಾಡಿ, ಶಂಕರನನ್ನು ಪೂಜಿಸಿ, ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ, ಎಂದು ಜಪಮಾಡಿ, ಆ ಐದು ನಾಮಗಳಿಂದ ಪೂಜಿಸಬೇಕು. ಈ ರೀತಿಯಾದ ಪೂಜೆಯಿಂದ ಮಹೇಶ್ವರನು ಪ್ರಸನ್ನನಾಗುವನು.

೨೩. ಎಲೈ ಬ್ರಾಹ್ಮಣಶ್ರೇಷ್ಠರೇ, ಶಿವನ ಪೂಜೆಗೋಸ್ಕರ ಹೂಗಳನ್ನು, ಪತ್ರಗಳನ್ನು ಕೊಡುವ ಮರಗಳೂ ಸಹ, ಆ ಶಿವನ ಪೂಜೆಗೆ ಹಾಲು ಮುಂತಾದ ಸಾಮಗ್ರಿಗಳನ್ನೊದಗಿಸುವ ಹಸುಗಳೂ ಸಹ ಒಳ್ಳೆಯ ಗತಿಯನ್ನು ಹೊಂದುವುವು.

೨೪. ಯಾವನು ಶಿವ, ರುದ್ರ, ಶರ್ವ, ಭವ, ಅಜ, ಎಂಬ ಹೆಸರುಗಳಿಂದ ಪ್ರಸಿದ್ಧಿಯುಳ್ಳ ಮಹೇಶ್ವರನನ್ನು ಪೂಜಿಸುವನೋ, ಅವನು ಪುನರಾವೃತ್ತಿ ರಹಿತವಾದ ಶಿವನ ಸಮೀಪವನ್ನು ಹೊಂದಿ ಸಾಯುಜ್ಯ ಮೋಕ್ಷವನ್ನೂ ಪಡೆಯುವನು.

೨೫. ಪರಮೇಶಾನ, ಭವ, ಶರ್ವ, ಮುಂತಾದ ಹೆಸರುಗಳುಳ್ಳ ಮಹೇಶ್ವರನನ್ನು ಯಾರೊಡನೆಯಾದರೂ, ಒಂದು ಸಾರಿಯಾದರೂ ನೋಡಿ ಪೂಜಿಸಿ ಉಪಾಸನೆ ಮಾಡಿದರೆ ಅಂತಹ ಭಕ್ತನು ಎಲ್ಲಾ ಪಾಪಗಳಿಂದಲೂ ಬಿಡಲ್ಪಡುವನು.

ಪೂಜಿತಂ ವಾ ಮಹಾದೇವಂ ಪೂಜ್ಯಮಾನ ಮಥಾಪಿ ವಾ ।
ದೃಷ್ಟ್ವಾ ಪ್ರಯಾತಿ ವೈ ಮರ್ತ್ಯೋ ಬ್ರಹ್ಮಲೋಕಂ ನ ಸಂಶಯಃ ॥
ಶ್ರುತ್ವಾಽನು ಮೋದಯೇಚ್ಚಾಪಿ ಸ ಯಾತಿ ಪರಮಾಂ ಗತಿಂ ।
ಯೋ ದದ್ಯಾತ್ ಘೃತದೀಪಂ ಚ ಸಕೃಲ್ಲಿಂಗಸ್ಯ ಚಾಗ್ರತಃ ॥೨೭॥
ಸತಾಂ ಗತಿ ಮವಾಪ್ನೋತಿ ಸ್ವಾಶ್ರಮೈ ರ್ದುರ್ಲಭಾಂ ಸ್ಥಿರಾಂ ।
ದೀಪವೃಕ್ಷಂ ಪಾರ್ಥಿವಂ ವಾ ದಾರವಂ ಚ ಶಿವಾಲಯೇ ॥೨೮॥
ದತ್ವಾ ಕುಲಶತಂ ಸಾಗ್ರಂ ಶಿವಲೋಕೇ ಮಹೀಯತೇ ।
ಆಯಸಂ ತಾಮ್ರಜಂ ವಾಽಪಿ ರೌಪ್ಯಂ ಸೌವರ್ಣಕಂ ತಥಾ ॥೨೯॥

---

೨೬. ಪೂಜೆಮಾಡಿರುವ, ಪೂಜೆಮಾಡಲ್ಪಡುತ್ತಲಿರುವ, ಮಹಾದೇವನನ್ನು ನೋಡಿದರೂ ಕೂಡ, ಆ ಮನುಷ್ಯನು ನಿಶ್ಚಯವಾಗಿಯೂ ಬ್ರಹ್ಮಲೋಕವನ್ನು ಪಡೆಯುವನು.

೨೭. ಯಾವನು ಶಿವಪೂಜೆಯ ವಿಷಯವನ್ನು ಕೇಳುವನೋ, ಪೂಜೆಮಾಡುವಂತೆ ಮತ್ತೊಬ್ಬನನ್ನು ಒಪ್ಪಿಸಿ ಪ್ರೇರಣೆಮಾಡುವನೋ, ಅವನೂ ಉತ್ತಮವಾದ ಗತಿಯನ್ನು ಹೊಂದುವನು. ಯಾವನು ಶಿವಲಿಂಗದ ಸಮೀಪದಲ್ಲಿ ತುಪ್ಪದ ದೀಪವನ್ನು ದಾನ ಮಾಡುವನೋ, ಅವನು ತನ್ನ ಆಶ್ರಮ ಧರ್ಮವನ್ನು ನಿಯಮವಾಗಿ ಪರಿಪಾಲಿಸುವುದರಿಂದಲೂ, ಹೊಂದಲಸಾಧ್ಯವಾದ, ಸ್ಥಿರವಾದ, ಉತ್ತಮವಾದ ಗತಿಯನ್ನು ಹೊಂದುವನು.

೨೮. ಮಣ್ಣಿನಿಂದ ಮಾಡಿರುವ, ಅಥವಾ ಮರದಿಂದ ಮಾಡಿದ್ದಾದರೂ ಸರಿಯೇ, ದೀಪದ ಕಂಬವನ್ನು ಯಾವನು ದಾನಮಾಡುವನೋ, ಅವನು ತನ್ನ ನೂರು ಕುಲದವರೊಡನೆ ಶಿವಲೋಕದಲ್ಲಿ ಪೂಜಿಸಲ್ಪಡುವನು.

೨೯–೩೦. ಯಾವನು ಕಬ್ಬಿಣದಿಂದ ಮಾಡಿದ, ಅಥವಾ ತಾಮ್ರದ, ಬೆಳ್ಳಿಯ ಅಥವಾ ಚಿನ್ನದ, ದೀಪವನ್ನು ಶಿವನಿಗೆ ಸಮರ್ಪಿಸುವನೋ,

ಶಿವಾಯ ದೀಪಂ ಯೋ ದದ್ಯಾ ದ್ವಿಧಿನಾ ವಾಽಪಿ ಭಕ್ತಿತಃ ।
ಸೂರ್ಯಾಯುತ ಸಮೈಃ ಶ್ಲಕ್ಷ್ಣೈ ರ್ಯಾನೈಃ ಶಿವಪುರಂ ವ್ರಜೇತ್ ॥೩೦॥
ಕಾರ್ತಿಕೇ ಮಾಸಿ ಯೋ ದದ್ಯಾತ್ ಘೃತದೀಪಂ ಶಿವಾಗ್ರತಃ ।
ಸಂಪೂಜ್ಯಮಾನಂ ವಾ ಪಶ್ಯೇ ದ್ವಿಧಿನಾ ಪರಮೇಶ್ವರಂ ॥೩೧॥
ಸ ಯಾತಿ ಬ್ರಹ್ಮಣೋ ಲೋಕಂ ಶ್ರದ್ಧಯಾ ಮುನಿಸತ್ತಮಾಃ ।
ಆವಾಹನಂ ಸುಸಾನ್ನಿಧ್ಯಂ ಸ್ಥಾಪನಂ ಪೂಜನಂ ತಥಾ ॥೩೨॥
ಸಂ ಪ್ರೋಕ್ತಂ ರುದ್ರಗಾಯತ್ರ್ಯಾ ಆಸನಂ ಪ್ರಣವೇನ ವೈ ।
ಪಂಚಭಿಃ ಸ್ನಪನಂ ಪ್ರೋಕ್ತಂ ರುದ್ರಾದ್ಯೈಶ್ಚ ವಿಶೇಷತಃ ॥೩೩॥
ಏವಂ ಸಂಪೂಜಯೇ ನ್ನಿತ್ಯಂ ದೇವದೇವ ಮುಮಾಪತಿಂ ।
ಬ್ರಹ್ಮಾಣಂ ದಕ್ಷಿಣೇ ತಸ್ಯ ಪ್ರಣವೇನ ಸಮರ್ಚಯೇತ್ ॥೩೪॥

---

ಅಂತಹ ಭಕ್ತನು ಸೂರ್ಯನಂತೆ ಬಹಳ ತೇಜಸ್ಸುಳ್ಳವನಾಗಿ, ಮೃದುವಾಗಿರುವ ವಾಹನದಲ್ಲಿ ಕುಳಿತು ಕೈಲಾಸವನ್ನು ಹೊಂದುವನು.

೩೧. ಓ ಮುನಿಶ್ರೇಷ್ಠರೇ, ಕಾರ್ತಿಕಮಾಸದಲ್ಲಿ ಯಾವನು ಶಿವನ ಹತ್ತಿರ ತುಪ್ಪದ ದೀಪವನ್ನು ದಾನಕೊಡುವನೋ ಮತ್ತು ವಿಧಿಪೂರ್ವಕವಾಗಿ ಪೂಜೆಮಾಡಲ್ಪಡುತ್ತಿರುವ ಈಶ್ವರನನ್ನು ನೋಡುವನೋ ಅವನು ಬ್ರಹ್ಮಲೋಕವನ್ನು ಪಡೆಯುವನು.

೩೨. ರುದ್ರಗಾಯತ್ರೀ ಮಂತ್ರದಿಂದ ಆವಾಹನೆ, ಸುಸಾನ್ನಿಧಳಿ ಪ್ರಾರ್ಥನೆ, ಸ್ಥಾಪನೆ, ಪೂಜೆ, ಇವುಗಳನ್ನು ಮಾಡಬೇಕು. ಪ್ರಣವ ಮಂತ್ರದಿಂದ ಆಸನವನ್ನು ಸಮರ್ಪಿಸಬೇಕು.

೩೩. 'ಸದ್ಯೋಜಾತಂ ಪ್ರಪದ್ಯಾಮಿ' 'ವಾಮದೇವಾಯನಮೋ' 'ಅಘೋರೇಭ್ಯೋ' 'ತತ್ಪುರುಷಾಯ ವಿದ್ಮಹೆ' 'ಈಶಾನಸ್ಸರ್ವವಿದ್ಯಾನಾಂ' ಈ ಐದು ಮಂತ್ರಗಳಿಂದಲಲೂ, ವಿಶೇಷವಾದ, ರುದ್ರ, ಚಮೆ ಮುಂತಾದುವುಗಳಿಂದಲೂ, ಸ್ನಾನ ಮಾಡಿಸಬೇಕು. ಈ ರೀತಿಯಾಗಿ ದೇವದೇವನಾದ ಉಮಾಪತಿಯನ್ನು ನಿತ್ಯವೂ ಪೂಜಿಸಬೇಕು.

೩೪–೩೫. ಪ್ರಣವಮಂತ್ರದಿಂದ ಶಿವನ ದಕ್ಷಿಣದಲ್ಲಿ ಬ್ರಹ್ಮನನ್ನೂ, ಉತ್ತರದಲ್ಲಿ ದೇವದೇವನಾದ ವಿಷ್ಣುವನ್ನೂ, ಗಾಯತ್ರೀ ಮಂತ್ರ

**ಉತ್ತರೇ ದೇವ ದೇವೇಶಂ ವಿಷ್ಣುಂ ಗಾಯತ್ರಿಯಾ ಯಜೇತ್ ।**
**ವಹ್ನೌ ಹುತ್ವಾ ಯಥಾ ನ್ಯಾಯಂ ಪಂಚಭಿಃ ಪ್ರಣವೇನ ಚ ॥೩೫॥**
**ಸ ಯಾತಿ ಶಿವ ಸಾಯುಜ್ಯಂ ಏವಂ ಸಂಪೂಜ್ಯ ಶಂಕರಂ ।**
**ಇತಿ ಸಂಕ್ಷೇಪತಃ ಪ್ರೋಕ್ತೋ ಲಿಂಗಾರ್ಚನ ವಿಧಿಕ್ರಮಃ ॥೩೬॥**
**ವ್ಯಾಸೇನ ಕಥಿತಃ ಪೂರ್ವಂ ಶ್ರುತ್ವಾ ರುದ್ರ ಮುಖಾತ್ಸ್ವಯಂ ॥೩೭॥**

**ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಶಿವಾರ್ಚನವಿಧಿ**
**ರ್ನಾಮ ಏಕೋನಾಶೀತಿ ತಮೋಽಧ್ಯಾಯಃ**

---

ದಿಂದಲೂ, ಪೂಜಿಸಬೇಕು. ಅನಂತರ ಪ್ರಣವ ಮಂತ್ರದಿಂದಲೂ, ಸದ್ಯೋಜಾತಾದಿ ಐದು ಮಂತ್ರಗಳಿಂದಲೂ, ಅಗ್ನಿಯಲ್ಲಿ ಹೋಮ ಮಾಡಬೇಕು. ಈ ರೀತಿಯಾಗಿ ಯಾವನು ನಿತ್ಯವೂ ಶಂಕರನನ್ನು ಆರಾಧಿಸುವನೋ ಅಂತಹ ಭಕ್ತನು ಶಿವನ ಸಮೀಪವನ್ನು ಹೊಂದುವನು.

೩೬-೩೭. ರುದ್ರನಿಂದ ತಾನಾಗಿಯೇ ಲಿಂಗಾರ್ಚನೆಯ ವಿಧಿಕ್ರಮವು ಹೇಗೆ ಉಪದೇಶಿಸಲ್ಪಟ್ಟಿತ್ತೋ ಹಾಗೆಯೇ ವ್ಯಾಸರಿಂದ ಪೂರ್ವದಲ್ಲಿ ಹೇಳಲ್ಪಟ್ಟ ಈ ಲಿಂಗಾರ್ಚನೆಯ ವಿಧಿಯು ಈಗ ಸಂಕ್ಷೇಪವಾಗಿ ನನ್ನಿಂದ ಹೇಳಲ್ಪಟ್ಟಿರುವುದು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಶಿವಾರ್ಚನೆಯ
ಪ್ರಯೋಗದ ವಿವರಗಳನ್ನುತಿಳಿಸಿರುವ ಎಪ್ಪತ್ತೊಂಬತ್ತನೆಯ ಅಧ್ಯಾಯವು,
ಮುಗಿದುದು

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಅಶೀತಿತಮೋಧ್ಯಾಯಃ

ಲೈಂಗಾಶೀತಿ ತಮೋಽಧ್ಯಾಯೇ ದೇವಾನಾಂ ಯಾನಹೇತುತಃ ।
ಕೈಲಾಸ ವೈಭವಂ ಸಮ್ಯಕ್ಪಾಶ ಮೋಕ್ಷಶ್ಚ ವರ್ಣ್ಯತೇ ॥

॥ ಋಷಯ ಊಚುಃ ॥

ಕಥಂ ಪಶುಪತಿಂ ದೃಷ್ಟ್ವಾ ಪಶು ಪಾಶ ವಿಮೋಕ್ಷಣಂ ।
ಪಶುತ್ವಂ ತತ್ಯಜುರ್ದೇವಾ ಸ್ತನ್ನೋ ವಕ್ತು ಮಿಹಾರ್ಹಸಿ ॥ ೧ ॥

॥ ಸೂತ ಉವಾಚ ॥

ಪುರಾ ಕೈಲಾಸ ಶಿಖರೇ ಭೋಗ್ಯಾಖ್ಯೇ ಸ್ವ ಪುರೇ ಸ್ಥಿತಂ ।
ಸಮೇತ್ಯ ದೇವಾಃ ಸರ್ವಜ್ಞ ಮಾಜಗ್ಮುಸ್ತತ್ಪ್ರಸಾದತಃ ॥ ೨ ॥

---

ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತನೆಯ ಅಧ್ಯಾಯವು.

ಈ ಎಂಬತ್ತನೆಯ ಅಧ್ಯಾಯದಲ್ಲಿ ದೇವತೆಗಳು ಕೈಲಾಸಕ್ಕೆ ಹೋದ ಕಾರಣ, ಆ ಕೈಲಾಸಲೋಕದಲ್ಲಿನ ವೈಭವದ ವರ್ಣನೆಯೂ, ಪಶುಗಳಂತೆ ಅಜ್ಞಾನಿಗಳಾಗಿರುವ ಜನರ ಸಂಸಾರಪಾಶವು ಬಿಡುಗಡೆಯಾಗುವ ರೀತಿಯ ವರ್ಣನೆಯೂ, ಚನ್ನಾಗಿ ಹೇಳಲ್ಪಡುವುದು.

೧. ಋಷಿಗಳು ಹೇಳಿದರು: ಎಲೈ ಸೂತಮುನಿಯೇ, ಪಶುಗಳ ಪಶುತ್ವವನ್ನು ನಾಶಮಾಡುವ, ಪಶುಪತಿಯಾದ ಶಿವನನ್ನು ನೋಡಿ ದೇವತೆಗಳು ಹೇಗೆ ಪಶುತ್ವವನ್ನು ಕಳೆದುಕೊಂಡರು? ಈ ವಿಷಯವನ್ನು ಈಗ ನಮಗೆ ತಿಳಿಸಬೇಕು, ಎಂದು ಕೇಳಿದರು.

೨. ಪೂರ್ವದಲ್ಲಿ ಕೈಲಾಸ ಶಿಖರದಲ್ಲಿರುವ "ಭೋಗ್ಯಾ" ಎಂಬ ತನ್ನ ಊರಿನಲ್ಲಿ ಇರುವ ಸರ್ವಜ್ಞನಾದ ಶಿವನ ಸಮೀಪಕ್ಕೆ ಅವನ ಅನುಗ್ರಹಕ್ಕೋಸ್ಕರವಾಗಿ ದೇವತೆಗಳೆಲ್ಲರೂ ಸೇರಿ ಬಂದರು.

ಹಿತಾಯ ಸರ್ವ ದೇವಾನಾಂ ಬ್ರಹ್ಮಣಾ ಚ ಜನಾರ್ದನಃ ।
ಗರುಡಸ್ಯ ತಥಾ ಸ್ಕಂಧಂ ಆರುಹ್ಯ ಪುರುಷೋತ್ತಮಃ ॥ ೩ ॥
ಜಗಾಮ ದೇವತಾಭಿ ರ್ವ್ಯೈ ದೇವದೇವಾಂತಿಕಂ ಹರಿಃ ।
ಸರ್ವೇ ಸಂಪ್ರಾಪ್ಯ ದೇವಸ್ಯ ಸಾರ್ಥಂ ಗಿರಿವರಂ ಶುಭಂ ॥ ೪ ॥
ಸೇಂದ್ರಾ ಸಸಾಧ್ಯಾಃ ಸಯಮಾಃ ಪ್ರಣೇಮು ರ್ಗಿರಿ ಮುತ್ತಮಂ ।
ಭಗವಾನ್ ವಾಸುದೇವೋಽಸೌ ಗರುಡಾ ದ್ಗರುಡಧ್ವಜಃ ॥ ೫ ॥
ಅವತೀರ್ಯ ಗಿರಿಂ ಮೇರು ಮಾರುರೋಹ ಸುರೋತ್ತಮೈಃ ॥
ಸಕಲ ದುರಿತಹೀನಂ ಸರ್ವದಂ ಭೋಗಮುಖ್ಯಂ ।
ಮುದಿತ ಕುರರವೃಂದಂ ನಾದಿತಂ ನಾಗವೃಂದೈಃ ॥

---

೩. ಎಲ್ಲ ದೇವತೆಗಳ ಹಿತಕ್ಕೋಸ್ಕರವಾಗಿ ಜನಾರ್ದನನಾದ ಮತ್ತು ಪುರುಷಶ್ರೇಷ್ಠನಾದ ವಿಷ್ಣುವೂ, ಗರುಡನ ಹೆಗಲನ್ನು ಹತ್ತಿ ಕೊಂಡು, ದೇವತೆಗಳ ಮತ್ತು ಬ್ರಹ್ಮನೊಡನೆ, ದೇವದೇವನಾದ ಶಿವನ ಸಮೀಪಕ್ಕೆ ಹೊರಟರು.

೪. ಇಂದ್ರ, ಸಾಧ್ಯರು, ಯಮ, ಮುಂತಾದವರಿಂದ ಕೂಡಿದ ದೇವತೆಗಳೆಲ್ಲರೂ, ವಿಷ್ಣುವಿನೊಂದಿಗೆ ಶ್ರೇಷ್ಠವಾದ ಕೈಲಾಸ ಪರ್ವತ ವನ್ನು ಸೇರಿ, ಆ ಪರ್ವತವನ್ನು ನಮಸ್ಕರಿಸಿದರು.

೫. ಗರುಡಧ್ವಜನಾದ, ಭಗವಂತನಾದ ಆ ವಿಷ್ಣುವು ಗರುಡ ನಿಂದ ಕೆಳಗಿಳಿದು ದೇವತೆಗಳೊಡನೆ ಮೇರು ಪರ್ವತವನ್ನು ಹತ್ತಿದನು.

೬. ಆ ಪರ್ವತವು ನಾನಾ ಪ್ರಕಾರವಾದ, ಪಾಪಗಳಿಂದ ರಹಿತ ವಾದ, ಇಷ್ಟಾರ್ಥವನ್ನು ಕೊಡುವ, ಶ್ರೇಷ್ಠವಾದ ಭೋಗಸಾಮಗ್ರಿ ಗಳನ್ನುಳ್ಳ, ಸ್ವಚ್ಛಂದವಾಗಿ, ಸ್ವತಂತ್ರವಾಗಿ ತಿರುಗುವುದರಿಂದ ಆನಂದ ಪಡುತ್ತಿರುವ ಜಂತುಗಳನ್ನುಳ್ಳ, ಆನೆಗಳ ಕೂಗಿನಿಂದ ಪ್ರತಿಧ್ವನಿತವಾಗು ತ್ತಿರುವ, ವಿಹಾರಕ್ಕಾಗಿ ಬಂದಿರುವ ಅಪ್ಸರೆಯರ ಮತ್ತು ಗಂಧರ್ವರ ಮನೋಹರವಾದ ಸಂಗೀತ ಶಬ್ದದಿಂದ ಕೂಡಿರುವ, ಕೆಳಭಾಗದ ತಪ್ಪಲು ಪ್ರದೇಶದಲ್ಲಿ ಕತ್ತಲೆಯನ್ನುಳ್ಳ, ವನದಲ್ಲಿ ಹೂಗಳ ಮೇಲೆಯೂ

ಮಧುರ ರಣಿತ ಗೀತಂ ಸಾನುಕೂಲಾಂಧ ಕಾರಂ ।
ಪದರಚಿತ ವನಾಂತಂ ಕಾಂತ ವಾತಾಂತ ತೋಯಂ ॥ ೬ ॥

ಭವನ ಶತಸಹಸ್ರೈ ರ್ಜುಷ್ಟ ಮಾದಿತ್ಯ ಕಲ್ಪೈಃ ।
ಲಲಿತ ಗತಿ ವಿದಗ್ಧೈ ರ್ಹಂಸ ವೃಂದೈಶ್ಚ ಭಿನ್ನಂ ॥
ಧವಖದಿರ ಪಲಾಶೈ ಶ್ಚಂದನಾದ್ಯೈಶ್ಚ ವೃಕ್ಷೈಃ ।
ದ್ವಿಜವರ ಗಣ ವೃಂದೈಃ ಕೋಕಿಲಾದ್ಯೈ ರ್ದ್ವಿರೇಫೈಃ ॥ ೭ ॥

ಕ್ವಚಿ ದಶೇಷ ಸುರದ್ರುಮ ಸಂಕುಲಂ ।
ಕುರಬಕೈಃ ಪ್ರಿಯಕೈ ಸ್ತಿಲಕೈ ಸ್ತಥಾ ॥
ಬಹು ಕದಂಬ ತಮಾಲ ಲತಾ ವೃತಂ ।
ಗಿರಿವರಂ ಶಿಖರೈ ರ್ವಿವಿಧೈ ಸ್ತಥಾ ॥ ೮ ॥

---

ನೀರಿನ ಮೇಲೆಯೂ, ಬೀಸಿ, ನಿಧಾನವಾಗಿಯೂ, ಪರಿಮಳಯುಕ್ತ ವಾಗಿಯೂ, ಬೀಸುತ್ತಿರುವ ಗಾಳಿಯಿಂದ ಕೂಡಿದ್ದಾಗಿ ಪ್ರಕಾಶಿಸು ತ್ತಿತ್ತು.

೭. ಅಲ್ಲದೆ ಆ ಗಿರಿಯು ಸೂರ್ಯನ ತೇಜಸ್ಸಿಗೆ ಸದೃಶವಾದ ತೇಜ ಸ್ಸುಳ್ಳ ಸಾವಿರಾರು ಮನೆಗಳಿಂದ ಕೂಡಿರುವ, ಮನೋಹರವಾದ ನಡಗೆ ಗಳಿಂದ ಕೂಡಿರುವ ಹಂಸಪಕ್ಷಿಗಳ ಸಮೂಹಗಳನ್ನುಳ್ಳ, ಆಲ, ಅತ್ತಿ, ಮುತ್ತುಗ, ಚಂದನ, ಮುಂತಾದ ಪ್ರಸಿದ್ಧವಾದ, ಮರಗಳಿಂದ ಕೂಡಿ ರುವ, ಬ್ರಾಹ್ಮಣಶ್ರೇಷ್ಠರಿಂದ ಕೂಡಿರುವ, ಕೋಕಿಲೆಗಳಿಂದಲೂ, ಭ್ರಮರಗಳಿಂದಲೂ, ತುಂಬಿರುವ, ಮತ್ತು,

೮. ಕೆಲವೆಡೆಗಳಲ್ಲಿ, ಮಂದಾರ, ಪಾರಿಜಾತ, ಸಂತಾನ, ಕಲ್ಪ ವೃಕ್ಷ, ಹರಿಚಂದನಾದಿ, ದೇವದ್ರುಮಗಳಿಂದ ಕೂಡಿರುವ, ಗೋರಂಟೆ, ಹೊನ್ನೆ, ತಿಲಕ, ಮುಂತಾದ ಮರಗಳಿಂದ ಶೋಭಿಸುತ್ತಿರುವ, ಬಾಳೆ, ಹೊಂಗೆ, ಮುಂತಾದ ವೃಕ್ಷಗಳಿಂದ ರಾರಾಜಿಸುತ್ತಿರುವ, ಅನೇಕವಾದ ಶಿಖರಗಳಿಂದ ಕೂಡಿರುವ, ಆ ಮೇರುಪರ್ವತವನ್ನು ವಿಷ್ಣುವು ದೇವತೆ ಗಳೊಡನೆ ಹತ್ತಿದನು.

ಗಿರೇಃ ಪೃಷ್ಠೇ ಪರಂ ಶಾರ್ವಂ ಕಲ್ಪಿತಂ ವಿಶ್ವಕರ್ಮಣಾ ।
ಕ್ರೀಡಾರ್ಥಂ ದೇವದೇವಸ್ಯ ಭವಸ್ಯ ಪರಮೇಷ್ಠಿನಃ ॥೯॥

ಅಪಶ್ಯಂ ಸ್ತತ್ಪುರಂ ದೇವಾಃ ಸೇಂದ್ರೋಪೇಂದ್ರಾಃ ಸಮಾಹಿತಾಃ ।
ಪ್ರಣೇಮುಃ ದೂರತ ಶ್ಚೈವ ಪ್ರಭಾವಾದೇವ ಶೂಲಿನಃ ॥೧೦॥

ಸಹಸ್ರ ಸೂರ್ಯ ಪ್ರತಿಮಂ ಮಹಾಂತಂ ।
ಸಹಸ್ರಶಃ ಸರ್ವ ಗುಣೈಶ್ಚ ಭಿನ್ನಂ ॥
ಜಗಾಮ ಕೈಲಾಸಗಿರಿಂ ಮಹಾತ್ಮಾ ।
ಮೇರು ಪ್ರಭಾಗೇ ಪುರ ಮಾದಿದೇವಃ ॥೧೧॥

ತತೋಽಥ ನಾರೀ ಗಜ ವಾಜಿ ಸಂಕುಲಂ ।
ರಥೈ ರನೇಕೈ ರಮರಾರಿ ಸೂದನಃ ॥
ಗಣೈ ರ್ಗಣೇಶೈ ಶ್ಚ ಗಿರೀಂದ್ರ ಸನ್ನಿಭಂ ।
ಮಹಾ ಪುರದ್ವಾರ ಮಜೋ ಹರಿಶ್ಚ ॥೧೨॥

---

೯. ಪರ್ವತದ ಕೆಳಭಾಗದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನಿಂದ ಮಾಡಲ್ಪಟ್ಟ ಶ್ರೇಷ್ಟವಾದ, ಈಶ್ವರನ ಕ್ರೀಡಾರ್ಥವಾಗಿ ನಿರ್ಮಿಸಿರುವ ಶಿವನ ಪಟ್ಟಣವಾದ "ಭೋಗ್ಯ" ವನ್ನು ಬ್ರಹ್ಮೇಂದ್ರಾದಿಗಳಿಂದ ಕೂಡಿದ ದೇವತೆಗಳು ನೋಡಿ ಸಂತೋಷಯುಕ್ತರಾದರು.

೧೦. ಈಶ್ವರನ ಪ್ರಭಾವದಿಂದ ಸಂತೋಷಗೊಂಡವರಾಗಿ ದೂರ ದಿಂದಲೇ ಆ ಪಟ್ಟಣವನ್ನು ನಮಸ್ಕರಿಸಿದರು.

೧೧. ಸಾವಿರ ಸೂರ್ಯರಂತೆ ಪ್ರಕಾಶಿಸುತ್ತಿರುವ, ದೊಡ್ಡದಾಗಿರುವ, ಎಲ್ಲ ವಿಧವಾದ ಗುಣಗಳಿಂದ ಸಾವಿರ ಬಗೆಯಲ್ಲಿ ಭಿನ್ನವಾಗಿರುವ, ಮೇರು ಪರ್ವತದ ತುದಿಯಲ್ಲಿರುವ ಆ ಕೈಲಾಸಪರ್ವತವನ್ನು ಕುರಿತು, ಆ ದೇವ ನಾದ, ಮಹಾತ್ಮನಾದ, ವಿಷ್ಣುವು ಹೊರಟನು.

೧೨. ರಾಕ್ಷಸರನ್ನು ನಾಶಮಾಡಿದ ವಿಷ್ಣುವು ಮತ್ತು ಬ್ರಹ್ಮನು, ಸ್ತ್ರೀಯರಿಂದಲೂ ಆನೆಗಳಿಂದಲೂ, ಕುದುರೆಗಳಿಂದಲೂ, ಕೂಡಿರುವ, ಅನೇಕ ರಥಗಳಿಂದ ತುಂಬಿರುವ, ಪ್ರಮಥಗಣಗಳಿಂದಲೂ, ಅವುಗಳ

ಅಥ ಜಾಂಬೂನದ ಮಯೈಃ ಭವನೈರ್ಮಣಿ ಭೂಷಿತೈಃ ।
ವಿಮಾನೈ ರ್ವಿವಿಧಾಕಾರೈಃ ಪ್ರಾಕಾರೈಶ್ಚ ಸಮಾವೃತಂ ॥೧೩॥

ದೃಷ್ಟ್ವಾ ಶಂಭೋಃ ಪುರಂ ಬಾಹ್ಯಂ ದೇವೈಃ ಸ ಬ್ರಹ್ಮಕೈಃ ಹರಿಃ ।
ಪ್ರಹೃಷ್ಟ ವದನೋ ಭೂತ್ವಾ ಪ್ರವಿವೇಶ ತತಃ ಪುರಂ ॥೧೪॥

ಹರ್ಮ್ಯ ಪ್ರಾಸಾದ ಸಂಬಾಧಂ ಮಹಾಟ್ಟಾಲ ಸಮನ್ವಿತಂ ।
ದ್ವಿತೀಯಂ ದೇವದೇವಸ್ಯ ಚತುರ್ದ್ವಾರಂ ಸು ಶೋಭನಂ ॥೧೫॥

ವಜ್ರ ವೈಡೂರ್ಯ ಮಾಣಿಕ್ಯ ಮಣಿಜಾಲೈಃ ಸಮಾವೃತಂ ।
ದೋಲಾ ವಿಕ್ಷೇಪ ಸಂಯುಕ್ತಂ ಘಂಟಾ ಚಾಮರ ಭೂಷಿತಂ ॥

ಮೃದಂಗ ಮುರಜೈ ರ್ಜುಷ್ಟಂ ವೀಣಾ ವೇಣು ನಿನಾದಿತಂ ।
ನೃತ್ಯದ್ಭಿಃ ಅಪ್ಸರಃ ಸಂಘೈಃ ಭೂತಸಂಘೈಶ್ಚ ಸಂವೃತಂ ॥೧೭॥

---

ಅಧಿಪತಿಗಳಿಂದಲೂ ಕೂಡಿರುವ, ಮೇರುವಿಗೆ ಸಮಾನವಾಗಿರುವ ಶಿವನ ಆವಾಸಸ್ಥಾನವಾದ, ಭೋಗ್ಯಪುರದ ಕೋಟೆಯ ಬಾಗಿಲಿನಿಂದ ಒಳ ಹೊಕ್ಕರು.

೧೩–೧೪. ಸುವರ್ಣಮಯವಾಗಿರುವ ಮತ್ತು, ರತ್ನಗಳನ್ನು ಕೆತ್ತಿರುವ, ಮನೆಗಳನ್ನುಳ್ಳ, ರತ್ನಮಯವಾದ, ವಿಮಾನಗಳಿಂದ ಕೂಡಿದ ಮತ್ತು, ನಾನಾ ಪ್ರಕಾರವಾದ ಕೋಟೆಗಳಿಂದ ಕೂಡಿರುವ, ಈಶ್ವರನ ಪಟ್ಟಣದ ಹೊರಭಾಗವನ್ನು ದೇವತೆಗಳಿಂದಲೂ, ಬ್ರಹ್ಮನಿಂದಲೂ, ಕೂಡಿರುವ ಹರಿಯು ನೋಡಿ ಸಂತೋಷಪಟ್ಟವನಾಗಿ, ಅನಂತರ ಪಟ್ಟಣವನ್ನು ಪ್ರವೇಶಿಸಿದನು.

೧೫. ದೊಡ್ಡ ಉಪ್ಪರಿಗೆಯ ಮನೆಗಳಿಂದಲೂ, ಅರಮನೆಗಳಿಂದಲೂ ಕಿಕ್ಕಿರಿದಿರುವ, ಅಂತಃ ಪುರಗಳಿಂದ ಶೋಭಿಸುತ್ತಿರುವ, ನಾಲ್ಕು ಬಾಗಿಲುಗಳಿಂದ ಶೋಭಿಸುತ್ತಿರುವ ಮತ್ತು,

೧೬–೧೭. ವಜ್ರ, ವೈಡೂರ್ಯ, ಮಾಣಿಕ್ಯ, ರತ್ನ, ಸಮೂಹಗಳಿಂದ ಪ್ರಕಾಶಿಸುವ, ಅಲ್ಲಲ್ಲಿ ತೂಗುಹಾಕಿರುವ ಉಯ್ಯಾಲೆಗಳಿಂದ ಕೂಡಿರುವ, ಘಂಟೆಗಳಿಂದಲೂ ಚಾಮರಗಳಿಂದಲೂ ವಿರಾಜಿಸುವ, ಮೃದಂಗ, ಖಂಜರಿ, ವೀಣೆ, ಕೊಳಲು ಮುಂತಾದ ಮನೋಹರವಾದ ವಾದ್ಯಗಳ ಧ್ವನಿಗಳನ್ನುಳ್ಳ,

ದೇವೇಂದ್ರ ಭವನಾಕಾರೈಃ ಭವನೈ ರ್ದೃಷ್ಟಿಮನೋಹರೈಃ ।
ಪ್ರಾಸಾದ ಶೃಂಗೇ ಷ್ವಥ ಪೌರನಾರ್ಯಃ ।
ಸಹಸ್ರಶಃ ಪುಷ್ಪ ಫಲಾಕ್ಷತಾದ್ಯೈಃ ॥
ಸ್ಥಿತಾಃ ಕರೈಸ್ತಸ್ಯ ಹರೇಃ ಸಮಂತಾತ್ ।
ಪ್ರಚಿಕ್ಷಿಪು ರ್ಮೂರ್ಧ್ನಿ ಯಥಾ ಭವಸ್ಯ ॥೧೮॥

ದೃಷ್ಟ್ವಾನಾರ್ಯಸ್ತದಾ ವಿಷ್ಣುಂ ಮದಘೂರ್ಣಿತ ಲೋಚನಾಃ ।
ವಿಶಾಲ ಜಘನಾಃ ಸದ್ಯೋ ನನೃತು ರ್ಮುಮುದುರ್ಜಗುಃ ॥೧೯॥

ಕಾಶ್ಚಿದ್ದೃಷ್ಟ್ವಾ ಹರಿಂ ನಾರ್ಯಃ ಕಿಂಚಿತ್ಪ್ರಹಸಿತಾನನಾಃ ॥೨೦॥
ಕಿಂಚಿ ದ್ವಿಸ್ರಸ್ತ ವಸ್ತ್ರಾಶ್ಚ ಸ್ರಸ್ತಕಾಂಚೀಗುಣಾ ಜಗುಃ ।
ಚತುರ್ಥಂ ಪಂಚಮಂ ಚೈವ ಷಷ್ಠಂ ಚ ಸಪ್ತಮಂ ತಥಾ ॥೨೧॥

---

ನರ್ತನಮಾಡುತ್ತಲಿರುವ ಅಪ್ಸರ ಸ್ತ್ರೀಯರಿಂದಲೂ, ಭೂತಗಳಿಂದಲೂ ಕೂಡಿರುವ, ಅಮರಾವತಿಯಂತೆ ಮನೋಹರವಾದ ಮನೆಗಳಿಂದ ಕೂಡಿರುವ, ಪರಮೇಶ್ವರನ ಎರಡನೆಯ ಪಟ್ಟಣವನ್ನು ಪ್ರವೇಶಿಸಿದನು.

೧೮. ಉಪ್ಪರಿಗೆಗಳ ಮಹಡಿ ಮೇಲ್ಭಾಗಗಳಲ್ಲಿ ಪಟ್ಟಣದ ಸಾವಿರಾರು ಜನ ಹೆಂಗಸರು ತಮ್ಮ ಕೈಗಳಲ್ಲಿ, ಹುವ್ವು, ಹಣ್ಣು, ಅಕ್ಷತೆ, ಮುಂತಾದ ಮಂಗಳ ದ್ರವ್ಯಗಳನ್ನು ಹಿಡಿದುಕೊಂಡು ನಿಂತವರಾಗಿ, ಆ ವಿಷ್ಣುವಿನ ಸುತ್ತಲೂ ಮತ್ತು ತಲೆಯ ಮೇಲೂ, ಪುಷ್ಪಾಕ್ಷತೆಗಳನ್ನು ಈಶ್ವರನ ತಲೆಯ ಮೇಲೆ ತಳಿಯುವಂತೆ ತಳಿದರು. ಮಂಗಳ ದ್ರವ್ಯಗಳಿಂದ ದೇವತೆಗಳೊಡನೆ ಇರುವ ವಿಷ್ಣುವನ್ನು ಸ್ವಾಗತಿಸಿದರೆಂದು ಭಾವವು.

೧೯. ಸ್ತ್ರೀಯರೆಲ್ಲರೂ ಆ ವಿಷ್ಣುವನ್ನು ನೋಡಿ, ಅವನ ಆಕಾರಕ್ಕೆ ಮದಿಸಿದವರಾಗಿ, ಆ ಮದದಿಂದ ಅತ್ತಿತ್ತ ಚಲಿಸುತ್ತಿರುವ ಕಣ್ಣುಗಳುಳ್ಳವರಾಗಿ, ತತ್‌ಕ್ಷಣದಲ್ಲಿಯೇ ಆನಂದದಿಂದ ಹಾಡಿ ಸಂತೋಷದಿಂದ ನರ್ತನಮಾಡಿದರು.

೨೦. ಕೆಲವು ಸ್ತ್ರೀಯರು ವಿಷ್ಣುವನ್ನು ನೋಡಿ, ಮುಗುಳುನಗೆಗಳನ್ನು ಬೀರಿ, ಮತ್ತೆ ಕೆಲವರು ತಾವೇತಾವಾಗಿ ಡಾಬುಗಳು ಕಳಚಿದ್ದರಿಂದ, ಕೆಳಗೆಜಾರಿಹೋದ ಸೀರೆಗಳುಳ್ಳವರಾಗಿ, ಆನಂದದಿಂದ ಹಾಡಿದರು.

೨೧–೨೨. ನಾಲ್ಕು, ಐದು, ಆರು ಮತ್ತು ಏಳನೆಯ, ಎಂಟು,

ಅಷ್ಟಮಂ ನವಮಂ ಚೈವ ದಶಮಂ ಚ ಪುರೋತ್ತಮಂ ।
ಅತೀತ್ಯಾಽಽಸಾದ್ಯ ದೇವಸ್ಯ ಪುರಂ ಶಂಭೋಃ ಸು ಶೋಭನಂ ॥೨೨॥
ಸಂ ವೃತ್ತಂ ಸುತರಾಂ ಶುಭ್ರಂ ಕೈಲಾಸ ಶಿಖರೇ ಶುಭೇ ।
ಸೂರ್ಯಮಂಡಲ ಸಂಕಾಶೈಃ ವಿಮಾನೈಶ್ಚ ವಿಭೂಷಿತಂ ॥೨೩॥
ಸ್ಫಟಿಕೈ ರ್ಮಂಡಪೈಃ ಶುಭ್ರೈಃ ಜಾಂಬೂನದ ಮಯೈ ಸ್ತಥಾ ।
ನಾನಾರತ್ನ ಮಯೈ ಶ್ಚೈವ ದಿಗ್ವಿದಿಕ್ಷು ವಿಭೂಷಿತಂ ॥೨೪॥
ಗೋಪುರೈ ರ್ಗೋಪತೇಃ ಶಂಭೋಃ ನಾನಾಭೂಷಣ ಭೂಷಿತೈಃ ।
ಅನೇಕೈಃ ಸರ್ವತೋ ಭದ್ರೈಃ ಸರ್ವ ರತ್ನ ಮಯೈ ಸ್ತಥಾ ॥೨೫॥
ಪ್ರಾಕಾರೈ ರ್ವಿವಿಧಾಕಾರೈ ರಷ್ಟಾವಿಂಶತಿಭಿ ರ್ವೃತಂ ।
ಉಪದ್ವಾರೈ ರ್ಮಹಾದ್ವಾರೈಃ ವಿದಿಕ್ಷು ವಿವಿಧೈಃ ದೃಢೈಃ ॥೨೬॥

---

ಒಂಬತ್ತು ಮತ್ತು ಹತ್ತನೆಯ ಪಟ್ಟಣಗಳನ್ನೆಲ್ಲವನ್ನೂ ದಾಟಿ, ಹನ್ನೊಂದನೆಯದಾದ ಈಶ್ವರನ ಪಟ್ಟಣವನ್ನು ನೋಡಿ ಸಂತೋಷ ಪಟ್ಟವರಾಗಿ, ಆ ಪಟ್ಟಣವನ್ನು ವಿಷ್ಣು ಮುಂತಾದವರು ಹೊಕ್ಕರು.

೨೩–೨೪. ಮಂಗಳಕರವಾದ ಆ ಕೈಲಾಸದ ಶಿಖರದಲ್ಲಿ ಶುಭ್ರವಾಗಿಯೂ, ಗುಂಡಾಗಿಯೂ ಇರುವ, ಸೂರ್ಯಮಂಡಲದಂತೆ ಹೊಳೆಯುತ್ತಿರುವ ವಿಮಾನಗಳಿಂದ ರಂಜಿಸುತ್ತಿರುವ, ಅಲ್ಲಲ್ಲಿರುವ ಸ್ಫಟಿಕದಿಂದಲೂ ಮತ್ತು ಚಿನ್ನದಿಂದಲೂ ಮಾಡಿರುವ ಮಂಟಪಗಳಿಂದ ಶೋಭಿಸುತ್ತಿರುವ, ಮತ್ತು,

೨೫–೨೬. ಈಶ್ವರನ ಪಟ್ಟಣದ ಮೇಲ್ಭಾಗದಲ್ಲಿ ನಾನಾವಿಧವಾದ ರತ್ನಾದಿ ಭೂಷಣಗಳಿಂದ ನಿರ್ಮಿಸಿದ ಗೋಪುರಗಳನ್ನುಳ್ಳ, ಎಲ್ಲೆಲ್ಲೂ ಮಂಗಳಕರವಾದ, ರತ್ನದಿಂದ ನಿರ್ಮಿತವಾದ, ನಾನಾ ಆಕಾರವಾದ ಕೋಟೆಗಳಿಂದ ಕೂಡಿರುವ, ಎಲ್ಲಾ ದಿಕ್ಕುಗಳಲ್ಲೂ ಮತ್ತು ದಿಕ್ಕುಗಳ ಮೂಲೆ ವಿದಿಕ್ಕುಗಳಲ್ಲೂ, ಇಪ್ಪತ್ತೆಂಟು ಕೋಟೆಯ ಬಾಗಿಲು ಮತ್ತು ಚಿಕ್ಕ ಚಿಕ್ಕ ದಿಡ್ಡಿಯ ಬಾಗಿಲುಗಳಿಂದ ಕೂಡಿರುವ, ಮತ್ತು,

ಗುಹ್ಯಾಲಯೈ ರ್ಗುಹ್ಯಗುಹ್ಯೈಃ ಗುಹಸ್ಯ ಭವನೈಃ ಶುಭೈಃ ।
ಗ್ರಾವ್ಯೈರನ್ಯೈರ್ಮಹಾಭಾಗಾಃಮೌಕ್ತಿಕೈಃ ದೃಷ್ಟಿಮೋಹನೈಃ ॥
ಗಣೇಶಾಯತನೈ ರ್ದಿವ್ಯೈಃ ಪದ್ಮರಾಗ ಮಯೈ ಸ್ತಥಾ ।
ಚಂದನೈ ರ್ವಿವಿಧಾಕಾರೈಃ ಪುಷ್ಪೋದ್ಯಾನೈಶ್ಚ ಶೋಭನೈಃ ॥೨೮॥
ತಡಾಕೈ ರ್ದೀರ್ಘಿಕಾಭಿಶ್ಚ ಹೇಮಸೋಪಾನ ಪಂಕ್ತಿಭಿಃ ।
ಸ್ತ್ರೀಣಾಂ ಗತಿಜಿತೈಃ ಹಂಸೈಃ ಸೇವಿತಾಭಿಃ ಸಮಂತತಃ ॥೨೯॥
ಮಯೂರೈ ಶ್ಚೈವ ಕಾರಂಡೈಃ ಕೋಕಿಲೈ ಶ್ಚಕ್ರ ವಾಕಕೈಃ ।
ಶೋಭಿತಾಭಿಶ್ಚ ವಾಪೀಭಿ ರ್ದಿವ್ಯಾಮೃತಜಲೈ ಸ್ತಥಾ ॥೩೦॥
ಸಂಲಾಪಾಲಾಪ ಕುಶಲೈಃ ಸರ್ವಾಭರಣ ಭೂಷಿತೈಃ ।
ಸ್ತನಭಾರಾವ ನಮ್ರೈಶ್ಚ ಮದ ಘೂರ್ಣಿತ ಲೋಚನೈಃ ॥೩೧॥

---

೨೭–೨೮. ಗುಹ್ಯರ ಮನೆಗಳಿಂದಲೂ, ಗುಪ್ತಗುಹೆಗಳಿಂದಲೂ, ಸ್ಕಂದನ ಮನೆಗಳಿಂದಲೂ ಮಂಗಳಕರಗಳಾದ ಪ್ರಾಚೀನ ಗೃಹಗಳಿಂದಲೂ ಕೂಡಿರುವ, ಕಣ್ಣುಗಳನ್ನು ಕೋರೈಸುವ ಮುತ್ತುಗಳಿಂದಲೂ, ಕೆಂಪು ಪದ್ಮರಾಗ ರತ್ನಗಳಿಂದಲೂ ನಿರ್ಮಿಸಲ್ಪಟ್ಟ, ಪ್ರಮಥಗಣಗಳ ಮತ್ತು ಅವುಗಳ ಒಡೆಯರ, ಹಾಗೂ ಗಣಪತಿಯ ಮನೆಗಳಿಂದ ರಾಜಿಸುವ, ಚಂದನವೃಕ್ಷಗಳಿಂದಲೂ, ಮನೋಹರವಾದ ಪುಷ್ಪೋದ್ಯಾನಗಳಿಂದಲೂ ಕಂಗೊಳಿಸುವ ಮತ್ತು,

೨೯–೩೦. ಕೆರೆಗಳಿಂದಲೂ, ಚಿನ್ನದಿಂದ ಮಾಡಿದ ಮೆಟ್ಟಿಲುಗಳುಳ್ಳ ಬಾವಿಗಳಿಂದಲೂ ಕೂಡಿರುವ, ಅದರ ಸುತ್ತಲೂ, ಮಂದಗಮನೆಯರಾದ ಸ್ತ್ರೀಯರ ಮಂದ ನಡೆಗೆಗಳನ್ನು ಜಯಿಸಿರುವ ಹಂಸಗಳಿಂದ ಕೂಡಿರುವ, ನವಿಲುಗಳಿಂದಲೂ, ಕಾರಂಡವೆಂಬ ಪಕ್ಷಿಜಾತಿಗಳಿಂದಲೂ, ಕೋಕಿಲೆಗಳಿಂದಲೂ, ಚಕ್ರವಾಕ ಪಕ್ಷಿಗಳಿಂದಲೂ, ಅಮೃತಕ್ಕೆ ಸಮಾನವಾದ ರುಚಿಯುಳ್ಳ, ನೀರಿನಿಂದ ಕೂಡಿರುವ ಭಾವಿಗಳಿಂದ, ಶೋಭಿಸುತ್ತಿರುವ ಮತ್ತು,

೩೧–೩೨. ಪರಸ್ಪರ ಹೇಳಿ, ಕೇಳಿ, ಮಾತನಾಡುವುದರಲ್ಲಿಯೂ, ಸಂಬೋಧಿಸಿ ಮಾತನಾಡುವುದರಲ್ಲಿಯೂ, ಕುಶಲರಾದ, ಒಡವೆಗಳಿಂದ

ಗೇಯನಾದರತೈ ರ್ದಿವ್ಯೈಃ ರುದ್ರಕನ್ಯಾ ಸಹಸ್ರಕೈಃ ।
ನೃತ್ಯದ್ಭಿರಪ್ಸರಸ್ಸಂಘೈ ರಮರ್ತ್ಯೈರಪಿ ದುರ್ಲಭೈಃ ॥೩೨॥
ಪ್ರಫುಲ್ಲಾಂಬುಜ ವೃಂದಾದ್ಯೈ ಸ್ತಥಾ ದ್ವಿಜವರೈರಪಿ ।
ರುದ್ರ ಸ್ತ್ರೀಗಣ ಸಂಕೀರ್ಣೈಃ ಜಲಕ್ರಿಡಾ ರತೈ ಸ್ತಥಾ ॥೩೩॥
ರಥೋತ್ಸವ ರತೈಶ್ಚೈವ ಲಲಿತೈಶ್ಚ ಪದೇಪದೇ ।
ಗ್ರಾಮ ರಾಗಾನುರಕ್ತೈಶ್ಚಪದ್ಮರಾಗ ಸಮಪ್ರಭೈಃ ॥೩೪॥
ಸ್ತ್ರೀಸಂಘೈ ರ್ದೇವದೇವಸ್ಯ ಭವಸ್ಯ ಪರಮಾತ್ಮನಃ ।
ದೃಷ್ಟ್ವಾ ವಿಸ್ಮಯ ಮಾಪನ್ನಾ ಸ್ತಸ್ಥುರ್ದೇವಾಃ ಸಮಂ ತತಃ ॥೩೫॥
ತತ್ರೈವ ದದೃಶುರ್ದೇವಾಃ ವೃಂದಂ ರುದ್ರಗಣಸ್ಯ ಚ ।
ಗಣೇಶ್ವರಾಣಾಂ ವೀರಾಣಾ ಮಪಿ ವೃಂದಂ ಸಹಸ್ರಶಃ ॥೩೬॥

---

ಅಲಂಕೃತರಾದ, ಸ್ತನಭಾರಗಳಿಂದ ಸ್ವಲ್ಪ ಬಗ್ಗಿದವರಾಗಿರುವ, ಮದದಿಂದ ಅತ್ತಿತ್ತ ಚಲಿಸುತ್ತಿರುವ ಕಣ್ಣಾಲುಗಳ್ಳ, ಹಾಡುವುದರಲ್ಲಿ ಆಸಕ್ತರಾದ ಸಾವಿರಾರು ಜನ ರುದ್ರಕನ್ಯೆಯರಿಂದಲೂ, ದೇವತೆಗಳಿಗೂ ಹೊಂದಲಸಾಧ್ಯವಾದ ನರ್ತನಗಳನ್ನು ಮಾಡುತ್ತಿರುವ, ಅಪ್ಸರೆಯರ ಸಮೂಹದಿಂದಲೂ ಕೂಡಿದ, ಮತ್ತು,

೩೩–೩೫. ಚೆನ್ನಾಗಿ ಅರಳಿರುವ ಕಮಲಸಮೂಹಗಳಿಂದ ರಂಜಿಸುವ, ಉತ್ತಮವಾದ ಪಕ್ಷಿಗಳಿಂದಲೂ, ಜಲಕ್ರೀಡೆಯನ್ನು ಆಡುತ್ತಿರುವ ರುದ್ರಕನ್ಯೆಯರಿಂದಲೂ ಮತ್ತು ಕಾಮೋತ್ಸವದಲ್ಲಾಸಕ್ತರಾಗಿರುವ ಮೃದುಶರೀರವುಳ್ಳ, ಪದ್ಮರಾಗವೆಂಬ ಕೆಂಪುರತ್ನದ ಕಾಂತಿಯಂತೆ ಕೆಂಪಾದ ಕಾಂತಿಯುಳ್ಳ ಸ್ತ್ರೀಸಮೂಹದಿಂದ ಶೋಭಿಸುವ, ಪರಮಾತ್ಮನಾದ ಶಿವನ ಪಟ್ಟಣವಾದ '' ಭೋಗ್ಯ '' ವನ್ನು ನೋಡಿ ಆಶ್ಚರ್ಯ ಗೊಂಡವರಾಗಿ ಆ ದೇವತೆಗಳು ಒಟ್ಟಾಗಿ ಸೇರಿ ಸುತ್ತಲೂ ನಿಂತುಕೊಂಡರು.

೩೬. ದೇವತೆಗಳು ಅಲ್ಲಿ ಪ್ರಮಥಗಣಗಳ ಗುಂಪನ್ನು ಮತ್ತು ಸಾವಿರಾರು ಜನ ವೀರರಾದ, ಆ ಪ್ರಮಥಗಣಗಳ ಅಧಿಪತಿಗಳ ಗುಂಪನ್ನೂ, ನೋಡಿದರು.

ಸುವರ್ಣ ಕೃತಸೋಪಾನಾನ್ವಜ್ರ ವೈಡೂರ್ಯ ಭೂಷಿತಾನ್ ।
ಸ್ಫಾಟಿಕಾನ್ ದೇವದೇವಸ್ಯ ದದೃಶುಸ್ತೇ ವಿಮಾನಕಾನ್ ॥೩೭॥
ತೇಷಾಂ ಶೃಂಗೇಷು ಹೃಷ್ಟಾಶ್ಚ ನಾರ್ಯಃ ಕಮಲಲೋಚನಾಃ ।
ವಿಶಾಲ ಜಘನಾ ಯಕ್ಷ್ಯಾ ಗಂಧರ್ವಾ ಪ್ಸರಸ ಸ್ತಥಾ ॥೩೮॥
ಕಿನ್ನರ್ಯಃ ಕಿನ್ನರಾಶ್ಚೈವ ಭುಜಂಗಾಃ ಸಿದ್ಧಕನ್ಯಕಾಃ ।
ನಾನಾ ವೇಷಧರಾ ಶ್ಚಾನ್ಯಾ ನಾನಾಭೂಷಣ ಭೂಷಿತಾಃ ॥೩೯॥
ನಾನಾ ಪ್ರಭಾವ ಸಂಯುಕ್ತಾ ನಾನಾ ಭೋಗರತಿ ಪ್ರಿಯಾಃ ।
ನೀಲೋತ್ಪಲ ದಲಪ್ರಖ್ಯಾಃ ಪದ್ಮ ಪತ್ರಾಯತೇಕ್ಷಣಾಃ ॥೪೦॥
ಪದ್ಮ ಕಿಂಜಲ್ಕ ಸಂಕಾಶೈ ರಂಶುಕೈರತಿ ಶೋಭನಾಃ ।
ವಲಯೈ ರ್ನೂಪುರೈ ಹಾರೈಃ ಛತ್ರೈಶ್ಚಿತ್ರೈ ಸ್ತಥಾಂಶುಕೈಃ ॥೪೧॥

---

೩೭. ಚಿನ್ನದಿಂದಮಾಡಿದ ಮೆಟ್ಟಿಲುಗಳನ್ನುಳ್ಳ, ವಜ್ರ, ವೈಡೂರ್ಯಗಳನ್ನು ಮೆಟ್ಟಿರುವ, ಸ್ಫಟಿಕದಿಂದ ಮಾಡಿದ, ದೇವದೇವನಾದ ಶಿವನ ಸುಂದರ ವಿಮಾನಗಳನ್ನು ಆ ದೇವತೆಗಳು ನೋಡಿದರು.

೩೮–೩೯. ಅವುಗಳ ಮೇಲ್ಭಾಗದಲ್ಲಿ ಕಮಲದಂತೆ ಕಣ್ಣುಳ್ಳ ಸ್ತ್ರೀಯರೂ, ವಿಶಾಲವಾದ ಜಘನ ಪ್ರದೇಶಗಳನ್ನುಳ್ಳ ಯಕ್ಷಸ್ತ್ರೀಯರೂ, ಗಂಧರ್ವಸ್ತ್ರೀಯರೂ, ಅಪ್ಸರೆಯರೂ, ಕಿನ್ನರೆಯರೂ, ಕಿನ್ನರರೂ, ಸರ್ಪಸ್ತ್ರೀಯರೂ, ಸಿದ್ಧಕನ್ನಿಕೆಯರೂ, ಇನ್ನೂ ಕೆಲವರು ನಾನಾ ವಿಧವಾದ ಅಲಂಕಾರಗಳನ್ನು ಮಾಡಿಕೊಂಡವರಾಗಿದ್ದರು. ಮತ್ತು,

೪೦. ಆ ಮಹಿಳೆಯರು ಅನೇಕ ವಿಧವಾದ ಪ್ರಭಾವಗಳಿಂದ ಕೂಡಿ ನಾನಾವಿಧವಾದ ಸೌಖ್ಯಾನುಭವ ಮತ್ತು ರತಿಸುಖದಲ್ಲಿ ಆಸಕ್ತರಾಗಿ ಕನ್ನೈದಿಲೆಯ ದಳದಂತೆ ಕಪ್ಪಾಗಿಯೂ, ವಿಶಾಲವಾಗಿಯೂ ಮತ್ತು ತಾವರೆಯಂತೆ ಕೆಂಪಾಗಿಯೂ, ಅಗಲವಾಗಿಯೂ ಇರುವ ಕಣ್ಣುಗಳಿಂದ ಕೂಡಿದವರಾಗಿದ್ದರು. ಮತ್ತು,

೪೧. ಆ ಸ್ತ್ರೀಯರು ತಾವರೆಯ ಕೇಸರಗಳಂತೆ ತೆಳ್ಳಗೂ, ಮನೋಹರವಾಗಿಯೂ ಇರುವ ಸೀರೆಗಳನ್ನುಟ್ಟು, ಬಳೆಗಳನ್ನೂ, ಕಾಲ್ಕಡಗ

ಭೂಷಿತಾ ಭೂಷಿತೈಶ್ಚಾನ್ಯೈಃ ಮಂಡಿತಾ ಮಂಡನ ಪ್ರಿಯಾಃ ।
ದೃಷ್ಟ್ವಾಽಥ ವೃಂದಂ ಸುರಸುಂದರೀಣಾಂ ।
ಗಣೇಶ್ವರಾಣಾಂ ಸುರಸುಂದರೀಣಾಂ ॥
ಜಗ್ಮುರ್ಗಣೇಶಸ್ಯ ಪುರಂ ಸುರೇಶಾಃ ।
ಪುರದ್ವಿಷಃ ಶಕ್ರ ಪುರೋಗಮಾಶ್ಚ ॥೪೨॥
ದೃಷ್ಟ್ವಾ ಚ ತಸ್ಥುಃ ಸುರಸಿದ್ಧ ಸಂಘಾಃ ।
ಪುರಸ್ಯ ಮಧ್ಯೇ ಪುರುಹೂತ ಪೂರ್ವಾಃ ॥
ಭವಸ್ಯ ಬಾಲಾರ್ಕ ಸಹಸ್ರ ವರ್ಣಂ ।
ವಿಮಾನ ಮಾದ್ಯಂ ಪರಮೇಶ್ವರಸ್ಯ ॥೪೩॥
ಅಥ ತಸ್ಯ ವಿಮಾನಸ್ಯ ದ್ವಾರಿ ಸಂಸ್ಥಂ ಗಣೇಶ್ವರಂ ।
ನಂದಿನಂ ದದೃಶುಃ ಸರ್ವೇ ದೇವಾಃ ಶಕ್ರ ಪುರೋಗಮಾಃ ॥೪೪॥

---

ಗಳನ್ನೂ, ಹಾರಗಳನ್ನೂ, ಛತ್ರಿಗಳನ್ನೂ, ನಾನಾಬಣ್ಣದ ಮೇಲುಹೊದಿಕೆಗಳನ್ನೂ, ಧರಿಸಿ, ಅಲಂಕರಿಸಿಕೊಳ್ಳುವುದರಲ್ಲೇ ಆಸಕ್ತರಾಗಿ, ಬೇರೆ ಬೇರೆ ಒಡವೆಗಳಿಂದ ಅಲಂಕರಿಸಿಕೊಂಡು ಸಂತೋಷದಿಂದ ಇದ್ದರು.

೪೨. ಇಂದ್ರನೇ ಮೊದಲಾದ ದೇವತೆಗಳೆಲ್ಲರೂ, ಸ್ವರ್ಗಸುಂದರಿಯರಾದ ಅಪ್ಸರೆಯರೇ ಮುಂತಾದವರ ಗುಂಪನ್ನೂ ಮತ್ತು ಪ್ರಮಥಗಣಗಳ ಅಧಿಪತಿಗಳ ಸುಂದರ ಸ್ತ್ರೀಯರ ಗುಂಪನ್ನೂ ನೋಡಿದವರಾಗಿ, ಪ್ರಮಥಗಣಗಳಿಗೆಲ್ಲಕ್ಕೂ ಒಡೆಯನಾಗಿರುವ ಆ ಪರಮೇಶ್ವರನ ಪಟ್ಟಣವನ್ನು ಹೊಕ್ಕರು.

೪೩. ಇಂದ್ರನೇ ಮೊದಲಾದ ದೇವತೆಗಳೂ ಮತ್ತು ಸಿದ್ಧರೂ, ಆ ಪಟ್ಟಣದ ಮಧ್ಯದಲ್ಲಿರುವ, ಸಾವಿರಾರು ಜನ ಪ್ರಾತಃ ಕಾಲದ ಸೂರ್ಯನಂತೆ ಪ್ರಕಾಶವುಳ್ಳ ಆ ಪರಮೇಶ್ವರನ ವಿಮಾನವನ್ನು ನೋಡುತ್ತ ನಿಂತುಕೊಂಡರು.

೪೪. ಆನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ, ಆ ವಿಮಾನದ ಬಾಗಿಲಿನಲ್ಲಿರುವ ಪ್ರಮಥಗಣಗಳಿಗೆ ಅಧಿಪತಿಯಾದ ನಂದಿಯನ್ನು ನೋಡಿದರು.

ತಂ ದೃಷ್ಟ್ವಾ ನಂದಿನಂ ಸರ್ವೇ ಪ್ರಣಮ್ಯಾಹು ರ್ಗಣೇಶ್ವರಂ ।
ಜಯೇತಿ ದೇವಾ ಸ್ತಂ ದೃಷ್ಟ್ವಾ ಸೋಽಪ್ಯಾಹ ಚ ಗಣೇಶ್ವರಃ ॥೪೫॥
ಭೋ ಭೋ ದೇವಾಃ ಮಹಾಭಾಗಾಃ ಸರ್ವೇ ನಿರ್ಧೂತ ಕಲ್ಮಷಾಃ ।
ಸಂಪ್ರಾಪ್ತಾಃ ಸರ್ವ ಲೋಕೇಶಾ ವಕ್ತು ಮರ್ಹಥ ಸುವ್ರತಾಃ ॥
ತಮಾಹು ರ್ವರದಂ ದೇವಂ ವಾರಣೇಂದ್ರ ಸಮಪ್ರಭಂ ।
ಪಶು ಪಾಶ ವಿಮೋಕ್ಷಾರ್ಥಂ ದರ್ಶಯಾಸ್ಮಾನ್ಮಹೇಶ್ವರಂ ॥೪೭॥
ಪುರಾ ಪುರತ್ರಯಂ ದಗ್ಧಂ ಪಶುತ್ವಂ ಪರಿಭಾಷಿತಂ ।
ಶಂಕಿತಾಶ್ಚ ವಯಂ ತತ್ರ ಪಶುತ್ವಂ ಪ್ರತಿ ಸುವ್ರತ ॥೪೮॥
ವ್ರತಂ ಪಾಶುಪತಂ ಪ್ರೋಕ್ತಂ ಭವೇನ ಪರಮೇಷ್ಠಿನಾ ।
ವ್ರತೇನಾನೇನ ಭೂತೇಶ ಪಶುತ್ವಂ ನೈವ ವಿದ್ಯತೇ ॥೪೯॥

---

೪೫. ದೇವತೆಗಳೆಲ್ಲರೂ ಆ ನಂದಿಯನ್ನು ನೋಡಿ, ನಮಸ್ಕರಿಸಿ, ನಿನಗೆ ಜಯವಾಗಲಿ, ಎಂದು ಹೇಳಿದರು. ಅವನೂ ಪ್ರತಿಯಾಗಿ ಶುಭಾಶಂಸನೆಯನ್ನು ಮಾಡಿದನು.

೪೬. ಅನಂತರ ನಂದಿಯು ಆ ದೇವತೆಗಳನ್ನು ಕುರಿತು, ಎಲೈ ದೇವತೆಗಳಿರಾ, ನಿಷ್ಕಳಂಕರಾಗಿಯೂ, ನಿಯಮಪಾಲಕರಾಗಿಯೂ, ಎಲ್ಲ ಲೋಕಕ್ಕೂ ಒಡೆಯರಾಗಿ ಇರುವ ನೀವು ಎಲ್ಲರೂ ಇಲ್ಲಿಗೆ ಬಂದ ಕಾರಣವನ್ನು ತಿಳಿಸಲು ಯೋಗ್ಯರಾಗಿರುವಿರಿ, ಎಂದು ಹೇಳಿದನು.

೪೭. ಅನಂತರ ದೇವತೆಗಳು, ಐರಾವತದಂತೆ ಶುಭ್ರವಾಗಿರುವ ನಂದಿಯನ್ನು ಕುರಿತು, ಪಶುಗಳ ಪಶುತ್ವನಿವಾರಣೆಗೋಸ್ಕರ ಮಹೇಶ್ವರನನ್ನು ನಮಗೆ ದರ್ಶನ ಮಾಡಿಸು, ಎಂದು ಕೇಳಿದರು.

೪೮. ಸದಾಚಾರಶೀಲನಾದ ಎಲೈ ನಂದಿಯೇ, ಪೂರ್ವದಲ್ಲಿ, ತ್ರಿಪುರಾಸುರರ ಮೂರು ಪಟ್ಟಣಗಳನ್ನೂ ಸುಡುವಾಗ ಪಶುತ್ವವು ನಮಗೆ ಒದಗಿತು. ಆ ಪಶುತ್ವದ ವಿಷಯದಲ್ಲಿ ನಾವು ಭಯಗೊಂಡೆವು.

೪೯. ಭೂತಗಣಗಳಿಗೆ ಅಧಿಪತಿಯಾದ ನಂದಿಯೇ, ಆಗ ಈಶ್ವರನು ಪಾಶುಪತವೆಂಬ ವ್ರತವನ್ನು ಉಪದೇಶಮಾಡಿದನು. ಆ ವ್ರತವನ್ನು ಮಾಡುವುದರಿಂದ ಪಶುತ್ವವು ಸ್ವಲ್ಪವೂ ಉಳಿಯದೆ ನಷ್ಟವಾಗಿಹೋಗುವುದು. ಅಲ್ಲದೆ,

ಅಥ ದ್ವಾದಶ ವರ್ಷಂ ವಾ ಮಾಸ ದ್ವಾದಶಕಂ ತು ವಾ ।
ದಿನ ದ್ವಾದಶಕಂ ವಾಽಪಿ ಕೃತ್ವಾ ತದ್ವ್ರತ ಮುತ್ತಮಂ ॥೫೦॥
ಮುಚ್ಯಂತೇ ಪಶವಃ ಸರ್ವೇ ಪಶು ಪಾಶೈರ್ಭವಸ್ಯ ತು ।
ದರ್ಶಯಾಮಾಸ ತಾನ್ ದೇವಾನ್ ನಾರಾಯಣ ಪುರೋಗಮಾನ್॥
ನಂದೀ ಶಿಲಾದ ತನಯಃ ಸರ್ವ ಭೂತ ಗಣಾಗ್ರಣೀಃ ।
ತಂ ದೃಷ್ಟ್ವಾ ದೇವ ಮೀಶಾನಂ ಸಾಂಬಂ ಸಗಣ ಮವ್ಯಯಂ॥೫೨॥
ಪ್ರಣೇಮು ಸ್ತುಷ್ಟುವು ಶ್ಚೈವ ಪ್ರೀತಿಕಂಟಕಿತ ತ್ವಚಃ ।
ವಿಜ್ಞಾಪ್ಯ ಶಿತಿಕಂಠಾಯ ಪಶುಪಾಶ ವಿಮೋಕ್ಷಣಂ ॥೫೩॥
ತಸ್ಥು ಸ್ತದಾಽಗ್ರತಃ ಶಂಭೋಃ ಪ್ರಣಿಪತ್ಯ ಪುನಃ ಪುನಃ ।
ತತಃ ಸಂಪ್ರೇಕ್ಷ್ಯ ತಾನ್ ಸರ್ವಾನ್ ದೇವದೇವೋ ವೃಷಧ್ವಜಃ ॥

---

೫೦. ಹನ್ನೆರಡು ವರ್ಷಗಳಾಗಲೀ, ಹನ್ನೆರಡುತಿಂಗಳುಗಳಾಗಲೀ, ಅಥವಾ ಹನ್ನೆರಡು ದಿನಗಳಾಗಲೀ, ಈ ಉತ್ತಮವಾದ ಪಾಶುಪತವ್ರತವನ್ನು ಮಾಡಿದರೆ ಎಲ್ಲ ಪಶುಗಳೂ ತಮ್ಮ ಪಶುತ್ವವೆಂಬ ಬಲೆಯ ಸಿಕ್ಕಿನಿಂದ ಬಿಡುಗಡೆಯನ್ನು ಹೊಂದುತ್ತವೆ. ಎಂದೂ ಹೇಳಿದನು.

೫೧. ಆಗ ಎಲ್ಲಾ ಭೂತಗಳಿಗೂ ಮುಂದಾಳಾದ, ಶಿಲಾದ ಕುಮಾರನಾದ ನಂದಿಯು ವಿಷ್ಣುವೇ ಮೊದಲಾದ ದೇವತೆಗಳಿಗೆ ಈಶ್ವರನ ದರ್ಶನವನ್ನು ಮಾಡಿಸಿದನು.

೫೨. ಆ ದೇವತೆಗಳು ಪ್ರಮಥಗಣಗಳಿಂದ ಕೂಡಿರುವ ನಾಶರಹಿತನಾದ ಈಶಾನನಾದ ಆ ಶಿವನನ್ನು ನೋಡಿ, ಭಕ್ತಿಯಿಂದ ರೋಮಾಂಚವಾದ ಶರೀರವುಳ್ಳವರಾಗಿ, ಸ್ತೋತ್ರಮಾಡುತ್ತಾ ನಮಸ್ಕರಿಸಿದರು.

೫೩. ಅನಂತರದಲ್ಲಿ ಪಶುಗಳ ಪಶುತ್ವ ನಿವಾರಣೆಯನ್ನು ಮಾಡಿ ಅನುಗ್ರಹಿಸಿಬೇಕೆಂದು ಈಶ್ವರನಲ್ಲಿ ಅರಿಕೆಮಾಡಿಕೊಂಡು ಬಾರಿಬಾರಿಗೂ, ನಮಸ್ಕಾರ ಮಾಡುವವರಾಗಿ ಈಶ್ವರನ ಹತ್ತಿರ ಅವರು ನಿಂತುಕೊಂಡರು.

೫೪. ಅನಂತರದಲ್ಲಿ ದೇವದೇವನಾದ, ವೃಷಭವನ್ನೇ ಧ್ವಜವಾಗಿ ಉಳ್ಳ, ಬಾವುಟವಾಗಿವುಳ್ಳ, ಆ ಶಿವನು, ಬಂದಿರುವ ದೇವತೆಗಳೆಲ್ಲರನ್ನೂ

ವಿಶೋಧ್ಯ ತೇಷಾಂ ದೇವಾನಾಂ ಪಶುತ್ವಂ ಪರಮೇಶ್ವರಃ ।
ವ್ರತಂ ಪಾಶುಪತಂ ಚೈವ ಸ್ವಯಂ ದೇವೋ ಮಹೇಶ್ವರಃ ॥೫೫॥
ಉಪದಿಶ್ಯ ಮುನೀನಾಂ ಚ ಸಹಾಸ್ತೇ ಚಾಂಬಯಾ ಭವಃ ।
ತದಾ ಪ್ರಭೃತಿ ತೇ ದೇವಾಃ ಸರ್ವೇ ಪಾಶುಪತಾಃ ಸ್ಮೃತಾಃ ॥೫೬॥
ಪಶೂನಾಂ ಚ ಪತಿರ್ಯಸ್ಮಾತ್ತೇಷಾಂ ಸಾಕ್ಷಾದ್ಧಿ ದೇವತಾಃ ।
ತಸ್ಮಾತ್ಪಾಶುಪತಾಃ ಪ್ರೋಕ್ತಾಸ್ತಪಸ್ತೇಪುಶ್ಚ ತೇ ಪುನಃ ॥೫೭॥
ತತೋದ್ವಾದಶವರ್ಷಾಂತೇ ಮುಕ್ತಪಾಶಾಃ ಸುರೋತ್ತಮಾಃ ।
ಯಯುರ್ಯಥಾಗತಂ ಸರ್ವೇ ಬ್ರಹ್ಮಣಾ ಸಹ ವಿಷ್ಣುನಾ ॥೫೮॥
ಏತದ್ವಃ ಕಥಿತಂ ಸರ್ವಂ ಪಿತಾಮಹ ಮುಖಾ ಚ್ಛ್ರುತಂ ।
ಪುರಾ ಸನತ್ಕುಮಾರೇಣ ತಸ್ಮಾದ್ವ್ಯಾಸೇನ ಧೀಮತಾ ॥೫೯॥

---

ನೋಡಿ, ಇಂದ್ರಾದಿಗಳ ಪಶುಭಾವವನ್ನು ತನ್ನ ಮಹಿಮೆಯಿಂದ ನಿವಾರಿಸಿ,

೫೫. ಮಹೇಶ್ವರನು ದೇವತೆಗಳಿಗೂ, ಮುನಿಗಳಿಗೂ, ತಾನೇ ಪಾಶುಪತವ್ರತವನ್ನು ಉಪದೇಶಮಾಡಿ, ಪಾರ್ವತಿಯೊಡನೆ ಇದ್ದನು.

೫೬–೫೭. ಅಂದು ಮೊದಲು ದೇವತೆಗಳೆಲ್ಲರೂ, ಪಾಶುಪತವ್ರತವನ್ನು ಸ್ವೀಕರಿಸಿದರು. ಪಶುಪತಿಯಾದ ಈಶ್ವರನೇ ಸಾಕ್ಷಾತ್ತಾಗಿ ಉಪದೇಶ ಮಾಡಿದ್ದರಿಂದ ಆ ದೇವತೆಗಳು ಪಾಶುಪತರೆಂದು ಎನಿಸಿಕೊಂಡರು. ಪುನಃ ಆ ದೇವತೆಗಳು ತಪಸ್ಸನ್ನು ಮಾಡಿದರು.

೫೮. ಅನಂತರದಲ್ಲಿ ಆ ದೇವತೆಗಳು ಹನ್ನೆರಡು ವರ್ಷಗಳು ತಪಸ್ಸು ಮಾಡಿದ ಮೇಲೆ ಕೊನೆಯಲ್ಲಿ ಪಶುತ್ವದಿಂದ ಬಿಡುಗಡೆಯನ್ನು ಹೊಂದಿ ಬ್ರಹ್ಮ ಮತ್ತು ವಿಷ್ಣುವಿನೊಡನೆ, ತಮ್ಮ ಸ್ಥಾನಗಳಿಗೆ ತೆರಳಿದರು.

೫೯. ಪೂರ್ವದಲ್ಲಿ ಬ್ರಹ್ಮನಿಂದ ಸನತ್ಕುಮಾರನಿಗೆ ಹೇಳಲ್ಪಟ್ಟು, ಆ ಸನತ್ಕುಮಾರನು ಬುದ್ಧಿವಂತನಾದ ವ್ಯಾಸನಿಗೆ ತಿಳಿಸಿದ, ಈ ವಿಷಯವನ್ನು ನಾನು ನಿಮಗೆ ಹೇಳಿರುವೆನು.

ಯಃ ಶ್ರಾವಯೇಚ್ಛುಚಿ ರ್ವಿಪ್ರಾನ್ ಶ್ರುಣುಯಾದ್ವಾ ಶುಚಿರ್ನರಃ ।
ಸ ದೇಹಭೇದ ಮಾಸಾದ್ಯ ಪಶುಪಾಶೈಃ ಪ್ರಮುಚ್ಯತೇ ॥೬೦॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಪಾಶುಪತವ್ರತ
ಮಾಹಾತ್ಮ್ಯಂ ನಾಮ ಅಶೀತಿತಮೋಽಧ್ಯಾಯಃ

---

೬೦. ಯಾವನು ಶುಚಿಯಾಗಿ ಇದನ್ನು ಕೇಳುವನೋ ಮತ್ತು ಬ್ರಾಹ್ಮಣರಿಗೆ ಹೇಳುವನೋ ಅವನು ಜನ್ಮಾಂತರದಲ್ಲಿ ಬೇರೇ ದೇಹವನ್ನು ಹೊಂದದೆ, ಪಶುತ್ವದಿಂದ ಬಿಡುಗಡೆಯನ್ನು ಹೊಂದುವನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಪಾಶುಪತ ವ್ರತದ ಆಚರಣೆಯ ಮಹಿಮೆಯನ್ನು ವಿವರಿಸಿರುವ ಎಂಬತ್ತನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಏಕಾಶೀತಿ ತಮೋಽಧ್ಯಾಯಃ

**ಏಕಾಶೀತಿ ತಮೋಽಧ್ಯಾಯೋ ಪಶುಪಾಶ ವಿಮೋಚಕಂ ।**
**ಲಿಂಗ ಪೂಜಾ ವ್ರತಂ ಸಮ್ಯಕ್ ಶಿವ ಪ್ರೋಕ್ತಂ ನಿರೂಪ್ಯತೇ ॥**

**॥ ಋಷಯ ಊಚುಃ ॥**

**ವ್ರತಮೇತತ್ತ್ವಯಾ ಪ್ರೋಕ್ತಂ ಪಶುಪಾಶ ವಿಮೋಕ್ಷಣಂ ।**
**ವ್ರತಂ ಪಾಶುಪತಂ ಲೈಂಗಂ ಪುರಾ ದೇವೈ ರನುಷ್ಠಿತಂ ॥ ೧ ॥**
**ವಕ್ತು ಮರ್ಹಸಿ ಚಾಸ್ಮಾಕಂ ಯಥಾ ಪೂರ್ವಂ ತ್ವಯಾ ಶ್ರುತಂ ।**

**॥ ಸೂತ ಉವಾಚ ॥**

**ಪುರಾ ಸನತ್ಕುಮಾರೇಣ ಪೃಷ್ಟಃ ಶೈಲಾದಿರಾದರಾತ್ ॥ ೨ ॥**

---

**ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತೊಂದನೆಯ ಅಧ್ಯಾಯವು.**

ಎಂಬತ್ತೊಂದನೆಯ ಅಧ್ಯಾಯದಲ್ಲಿ ಪಶುಗಳ ಪಶುತ್ವವನ್ನು ಹೋಗಲಾಡಿಸುವ ಶಿವನಿಂದ ಹೇಳಲ್ಪಟ್ಟ ಲಿಂಗಪೂಜಾವ್ರತವು ವಿಸ್ತಾರವಾಗಿ ಹೇಳಲ್ಪಡುವುದು.

೧. ಋಷಿಗಳು ಹೇಳಿದರು :—ಎಲೈ ಸೂತ ಮಹಾಮುನಿಯೇ, ನಿನ್ನಿಂದಲೇ ಹೇಳಲ್ಪಟ್ಟಿರುವ, ಪಶುಗಳ ಪಶುತ್ವವನ್ನು ನಿವಾರಣೆ ಮಾಡುವ, ಶಿವಲಿಂಗ ಸಂಬಂಧವಾಗಿರುವ, ಪೂರ್ವದಲ್ಲಿ ದೇವತೆಗಳಿಂದ ಆಚರಿಸಲ್ಪಟ್ಟಿರುವ, ಪಾಶುಪತ ವ್ರತವನ್ನು ಪೂರ್ವದಲ್ಲಿ ನೀನು ಕೇಳಿದ್ದ ರೀತಿಯಲ್ಲಿಯೇ ನಮಗೂ ಹೇಳಬೇಕು.

೨. ಸೂತನು ಹೇಳಿದನು: ಪೂರ್ವದಲ್ಲಿ ಪಾಶುಪತ ವ್ರತವನ್ನು ಹೇಳಬೇಕೆಂದು ಸನತ್ಕುಮಾರನಿಂದ ಕೇಳಲ್ಪಟ್ಟ ನಂದಿಯು ಅವನಿಗೆ ಈ ಪಾಶುಪತ ವ್ರತವನ್ನು ಹೇಳಿದನು. ಅದೆಲ್ಲವನ್ನೂ ಹಾಗೆಯೇ ನಿಮಗೂ ನಾನು ಹೇಳುವೆನು.

ನಂದೀ ಪ್ರಾಹ ವಚಸ್ತಸ್ಮೈ ಪ್ರವದಾಮಿ ಸಮಾಸತಃ ।
ದೇವೈ ರ್ದೈತ್ಯೈಸ್ತಥಾ ಸಿದ್ಧೈ ರ್ಗಂಧರ್ವೈಃ ಸಿದ್ಧಚಾರಣೈಃ ॥ ೩ ॥
ಮುನಿಭಿಶ್ಚ ಮಹಾಭಾಗೈ ರನುಷ್ಠಿತ ಮನುತ್ತಮಂ ।
ವ್ರತಂ ದ್ವಾದಶಲಿಂಗಾಖ್ಯಂ ಪಶುಪಾಶ ವಿಮೋಕ್ಷಣಂ ॥ ೪ ॥
ಭೋಗದಂ ಯೋಗದಂ ಚೈವ ಕಾಮದಂ ಮುಕ್ತಿದಂ ಶುಭಂ ।
ಅವಿಯೋಗ ಕರಂ ಪುಣ್ಯಂ ಭಕ್ತಾನಾಂ ಭಯನಾಶನಂ ॥ ೫ ॥
ಷಡಂಗ ಸಹಿತಾ ನ್ವೇದಾ ನ್ಮಥಿತ್ವಾ ತೇನ ನಿರ್ಮಿತಂ ।
ಸರ್ವದಾನೋತ್ತಮಂ ಪುಣ್ಯ ಮಶ್ವಮೇಧಾ ಯುತಾಧಿಕಂ ॥ ೬ ॥
ಸರ್ವ ಮಂಗಲದಂ ಪುಣ್ಯಂ ಸರ್ವ ಶತ್ರು ವಿನಾಶನಂ ।
ಸಂಸಾರಾರ್ಣವ ಮಗ್ನಾನಾಂ ಜಂತೂನಾ ಮಪಿ ಮೋಕ್ಷದಂ ॥ ೭ ॥
ಸರ್ವ ವ್ಯಾಧಿ ಹರಂ ಚೈವ ಸರ್ವಜ್ವರ ವಿನಾಶನಂ ।
ದೇವೈ ರನುಷ್ಠಿತಂ ಪೂರ್ವಂ ಬ್ರಹ್ಮಣಾ ವಿಷ್ಣುನಾ ತಥಾ ॥ ೮ ॥

---

೩. ದೇವತೆಗಳಿಂದಲೂ, ರಾಕ್ಷಸರಿಂದಲೂ, ಸಿದ್ಧರಿಂದಲೂ, ಗಂಧರ್ವರಿಂದಲೂ, ಚಾರಣರಿಂದಲೂ, ಮಹಾ ಮುನಿಗಳಿಂದಲೂ, ಆಚರಿಸಲ್ಪಟ್ಟ, ಉತ್ತಮವಾದ ಮತ್ತು,

೪–೮. ಭೋಗವನ್ನೂ, ಚಿತ್ತವೃತ್ತಿನಿರೋಧ ಸಾಮರ್ಥ್ಯವನ್ನೂ, ಇಂದ್ರಿಯ ಜಯವನ್ನೂ, ಇವೇ ಮುಂತಾದ ಇಷ್ಟಾರ್ಥಗಳನ್ನೂ ಕಡೆಗೆ ಮುಕ್ತಿಯನ್ನೂ ಕೊಡುವ, ಮಂಗಳಕರವಾದ, ಯಾವಾಗಲೂ ಶಿವನ ಸಾಮೀಪ್ಯವನ್ನು ಕೊಡುವ, ಪುಣ್ಯಕರವಾದ, ಭಕ್ತರ ಭಯವನ್ನು ಹೋಗಲಾಡಿಸುವ, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ, ಮುಂತಾದ ಆರು ಅಂಗಗಳಿಂದ ಕೂಡಿರುವ, ವೇದಗಳ, ತಾತ್ಪರ್ಯವನ್ನು ವಿಚಾರದಿಂದ ಕಡೆದು ಅದರಿಂದ ತಿಳಿದು ನಿರ್ಮಿತವಾಗಿರುವ, ಎಲ್ಲ ದಾನಗಳಿಗಿಂತಲೂ ಉತ್ತಮವೂ, ಒಂದು ಅಶ್ವಮೇಧ ಯಾಗದಿಂದ ಬರುವ ಪುಣ್ಯದ ಸಾವಿರದಷ್ಟು ಪುಣ್ಯವನ್ನು ಕೊಡುವುದೂ, ಶುಭಪ್ರದವೂ, ಎಲ್ಲ ಶತ್ರುಗಳನ್ನು ನಾಶಮಾಡುವುದೂ, ಸಂಸಾರವೆಂಬ ಸಾಗರದಲ್ಲಿ ಬಿದ್ದು ನರಳುತ್ತಿರುವ ಪ್ರಾಣಿಗಳಿಗೆ ಮೋಕ್ಷವನ್ನು ಕೊಡುವುದೂ, ಎಲ್ಲ ವಿಧವಾದ

ಕೃತ್ವಾ ಕನೀಯಸಂ ಲಿಂಗಂ ಸ್ನಾಪ್ಯ ಚಂದನ ವಾರಿಣಾ ।
ಚೈತ್ರ ಮಾಸಾದಿ ವಿಪ್ರೇಂದ್ರಾಃ ಶಿವಲಿಂಗವ್ರತಂ ಚರೇತ್ ॥ ೯ ॥
ಕೃತ್ವಾ ಹೈಮಂ ಶುಭಂ ಪದ್ಮಂ ಕರ್ಣಿಕಾ ಕೇಸರಾನ್ವಿತಂ ।
ನವರತ್ನೈಶ್ಚ ಖಚಿತಂ ಅಷ್ಟಪತ್ರಂ ಯಥಾವಿಧಿ ॥೧೦॥
ಕರ್ಣಿಕಾಯಾಂ ನ್ಯಸೇಲ್ಲಿಂಗಂ ಸ್ಫಾಟಿಕಂ ಪೀಠಸಂಯುತಂ ।
ತತ್ರ ಭಕ್ತ್ಯಾ ಯಥಾನ್ಯಾಯ ಮರ್ಚಯೇದ್ಬಿಲ್ವ ಪತ್ರಕೈಃ ॥೧೧॥
ಸಿತೈಃ ಸಹಸ್ರ ಕಮಲೈಃ ರಕ್ತೈರ್ನೀಲೋತ್ಪಲೈ ರಪಿ ।
ಶ್ವೇತಾರ್ಕ ಕರ್ಣಿಕಾರೈಶ್ಚ ಕರವೀರೈ ರ್ಬಕೈರಪಿ ॥೧೨॥
ಏತೈರನ್ಯೈರ್ಯಥಾ ಲಾಭಂ ಗಾಯತ್ರ್ಯಾ ತಸ್ಯ ಸುವ್ರತಾಃ ।
ಸಂಪೂಜ್ಯ ಚೈವ ಗಂಧಾದ್ಯೈ ರ್ಧೂಪೈ ರ್ದೀಪೈಶ್ಚ ಮಂಗಲೈಃ॥೧೩॥

---

ಶೋಕಗಳನ್ನೂ ನಾಶಮಾಡುವುದೂ, ಎಲ್ಲ ವಿಧವಾದ ಜ್ವರಗಳನ್ನೂ ನಾಶ ಮಾಡುವುದೂ ಆದ, ಪೂರ್ವದಲ್ಲಿ ದೇವತೆಗಳಿಂಗಲೂ, ಬ್ರಹ್ಮನಿಂದಲೂ, ವಿಷ್ಣುವಿನಿಂದಲೂ ಆಚರಿಸಲ್ಪಟ್ಟ, ಹನ್ನೆರಡು ವಿಧವಾದ ಶಿವಲಿಂಗಗಳ ಪೂಜಾಕ್ರಮವನ್ನುಳ್ಳ, ಪಾಶುಪತ ವ್ರತವನ್ನು ನಾನು ನಿಮಗೆ ಹೇಳುವೆನು.

೯. ಎಲೈ ಬ್ರಾಹ್ಮಣ ಶ್ರೇಷ್ಠರೇ, ಚಿಕ್ಕದಾಗಿರತಕ್ಕ ಶಿವಲಿಂಗ ವನ್ನು ಚಂದನದ ನೀರಿನಿಂದ ಸ್ನಾನಮಾಡಿಸಿ, ಚೈತ್ರಮಾಸದಿಂದ ಪ್ರಾರಂಭಮಾಡಿ, ಶಿವಲಿಂಗ ವ್ರತವನ್ನು ಮಾಡಬೇಕು.

೧೦. ಕೇಸರಗಳಿಂದಲೂ, ಅವುಗಳ ಮಧ್ಯದಲ್ಲಿರುವ ದಿಂಡಿನಿಂದ ಲೂ, ಕೂಡಿರುವ, ನವರತ್ನಗಳಿಂದ ಮಾಡಿರುವ, ಎಂಟು ದಳಗಳುಳ್ಳ ಮಂಗಳಕರವಾದ ಚಿನ್ನದ ತಾವರೆಯ ಹೂವನ್ನು ಮಾಡಿಸಿ,

೧೧. ಆ ಕೇಸರಗಳ ಮಧ್ಯದ ದಿಂಡಿನ ಮೇಲೆ ಸ್ಫಟಿಕದಿಂದ ಮಾಡಿ ರುವ ಪೀಠಯುಕ್ತವಾದ ಲಿಂಗವನ್ನು ಸ್ಥಾಪಿಸಿ, ಯಥೋಕ್ತವಾಗಿ ಬಿಲ್ವ ಪತ್ರಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು.

೧೨–೧೩. ಎಲೈ ಯೋಗ್ಯರಾದ ಬ್ರಾಹ್ಮಣರೇ, ಸಾವಿರಾರು ಬೆಳ್ಳಿಯ ತಾವರೆಯ ಹೂಗಳಿಂದಲೂ ಮತ್ತು ಕೆಂದಾವರೆಗಳಿಂದಲೂ, ಕನ್ನೈದಿಲೆ

ನೀರಾಜನಾದ್ಯೈ ಶ್ಚಾನ್ಯೈಶ್ಚ ಲಿಂಗಮೂರ್ತಿಂ ಮಹೇಶ್ವರಂ ।
ಅಗರುಂ ದಕ್ಷಿಣೇ ದದ್ಯಾ ದಘೋರೇಣ ದ್ವಿಜೋತ್ತಮಾಃ ॥೧೪॥

ಪಶ್ಚಿಮೇ ಸದ್ಯಮಂತ್ರೇಣ ದಿವ್ಯಾಂ ಚೈವ ಮನಶ್ಶಿಲಾಂ ।
ಉತ್ತರೇ ವಾಮದೇವೇನ ಚಂದನಂ ವಾಽಪಿ ದಾಪಯೇತ್ ॥೧೫॥

ಪುರುಷೇಣ ಮುನಿಶ್ರೇಷ್ಠಾ ಹರಿತಾಲಂ ಚ ಪೂರ್ವತಃ ।
ಸಿತಾಗರೂದ್ಭವಂ ವಿಪ್ರಾ ಸ್ತಥಾ ಕೃಷ್ಣಾಗರೂದ್ಭವಂ ॥೧೬॥

ತಥಾ ಗುಗ್ಗುಲಧೂಪಂ ಚ ಸೌಗಂಧಿಕ ಮನುತ್ತಮಂ ।
ಸಿತಾರಂ ನಾಮ ಧೂಪಂ ಚ ದದ್ಯಾದೀಶಾಯ ಭಕ್ತಿತಃ ॥೧೭॥

---

ಹೂಗಳಿಂದಲೂ, ಬಿಳಿಯ ಎಕ್ಕದ ಹೂಗಳಿಂದಲೂ, ಶಂಖ ಪುಷ್ಪಗಳಿಂದಲೂ, ಕಣಿಗಲ ಹೂಗಳಿಂದಲೂ, ಬಕ ಪುಷ್ಪಗಳಿಂದಲೂ, ಇನ್ನೂ ಬೇರೆ ಬೇರೆ ಹೂಗಳಿಂದಲೂ, ರುದ್ರಗಾಯತ್ರಿಯಿಂದ ಪೂಜಿಸಿ, ಗಂಧಾದಿಗಳಿಂದ ಉಪಚರಿಸಿ, ಮಂಗಳಕರವಾದ ಧೂಪ, ದೀಪ ಮತ್ತು,

೧೪. ಎಲೈ ದ್ವಿಜೋತ್ತಮರೇ, ನೀರಾಜನಾದಿಗಳಿಂದಲೂ ಮತ್ತು ಇತರ ಪೂಜಾಸಾಮಗ್ರಿಗಳಿಂದಲೂ, ಲಿಂಗಮೂರ್ತಿಯಾದ ಮಹೇಶ್ವರನನ್ನು ಪೂಜೆಮಾಡಬೇಕು. ಅನಂತರ ಆ ಲಿಂಗದ ದಕ್ಷಿಣದಿಕ್ಕಿನಲ್ಲಿ "ಅಘೋರೇಭ್ಯೋ" ಎಂಬ ಮಂತ್ರದಿಂದ ಅಗುರು ಗಂಧವನ್ನೂ,

೧೫. ಪಶ್ಚಿಮದಿಕ್ಕಿನಲ್ಲಿ "ಸದ್ಯೋಜಾತಂ ಪ್ರಪದ್ಯಾಮಿ" ಎಂಬ ಮಂತ್ರದಿಂದ ಅತ್ಯುತ್ತಮವಾದ ಮನಶ್ಶಿಲೆಯನ್ನೂ, ಉತ್ತರದಲ್ಲಿ "ವಾಮದೇವಾಯನಮೋ" ಎಂಬ ಮಂತ್ರದಿಂದ ಚಂದನವನ್ನೂ, ಪೂರ್ವದಲ್ಲಿ "ತತ್ಪುರುಷಾಯ" ಎಂಬ ಮಂತ್ರದಿಂದ ಹರಿತಾಲವನ್ನೂ ಇಡಬೇಕು.

೧೬-೧೭. ಎಲೈ ಬ್ರಾಹ್ಮಣರೇ, ಬಿಳಿಯ ಅಗುರಿನ ಧೂಪವನ್ನೂ, ಕಪ್ಪು ಅಗುರಿನ ಧೂಪವನ್ನೂ ಹಾಗೆಯೇ ಅತಿ ಉತ್ತಮವಾದ ಪರಿಮಳವುಳ್ಳ ಗುಗ್ಗುಲದ ಧೂಪವನ್ನೂ, ಸಿತಾರವೆಂಬ ಧೂಪವನ್ನೂ, ಭಕ್ತಿಪೂರ್ವಕವಾಗಿ ಈಶ್ವರನಿಗೆ ಸಮರ್ಪಿಸಬೇಕು.

ಮಹಾಚರು ರ್ನಿವೇದ್ಯಃ ಸ್ಯಾ ದಾಢಕಾನ್ನ ಮಥಾಪಿ ವಾ ।
ಏತದ್ವಃ ಕಥಿತಂ ಪುಣ್ಯಂ ಶಿವಲಿಂಗ ಮಹಾವ್ರತಂ ॥೧೮॥
ಸರ್ವ ಮಾಸೇಷು ಸಾಮಾನ್ಯಂ ವಿಶೇಷೋಽಪಿ ಚ ಕೀರ್ತ್ಯತೇ ।
ವೈಶಾಖೇ ವಜ್ರ ಲಿಂಗಂ ಚ ಜ್ಯೇಷ್ಠೇ ಮಾರಕತಂ ತಥಾ ॥೧೯॥
ಆಷಾಢೇ ಮೌಕ್ತಿಕಂ ಲಿಂಗಂ ಶ್ರಾವಣೇ ನೀಲ ನಿರ್ಮಿತಂ ।
ಮಾಸಿ ಭಾದ್ರಪದೇ ಲಿಂಗಂ ಪದ್ಮರಾಗ ಮಯಂ ಶುಭಂ ॥೨೦॥
ಆಶ್ವಿನೇ ಚೈವ ವಿಪ್ರೇಂದ್ರಾಃ ಗೋಮೇದಕ ಮಯಂ ಶುಭಂ ।
ಪ್ರವಾಲೇನೈವ ಕಾರ್ತಿಕ್ಯಾಂ ತಥಾ ವೈ ಮಾರ್ಗ ಶೀರ್ಷಕೇ ॥೨೧॥
ವೈಡೂರ್ಯ ನಿರ್ಮಿತಂ ಲಿಂಗಂ ಪುಷ್ಯರಾಗೇಣ ಪುಷ್ಯಕೇ ।
ಮಾಘೇ ಚ ಸೂರ್ಯಕಾಂತೇನ ಫಾಲ್ಗುನೇ ಸ್ಫಾಟಿಕೇನ ಚ ॥೨೨॥

---

೧೮. ಅನಂತರ ಒಂದು ಕೊಳಗ ಅಕ್ಕಿಯ ಅನ್ನವನ್ನು, ಮಹಾನೈವೇದ್ಯವನ್ನು, ಮಾಡಬೇಕು. ಈ ರೀತಿಯಾಗಿ ಪುಣ್ಯಕರವಾದ ಶಿವಲಿಂಗ ಮಹಾವ್ರತವನ್ನು ನಿಮಗೆ ಹೇಳಿರುವೆನು.

೧೯–೨೦. ಲಿಂಗಮೂರ್ತಿಯಾದ ಈಶ್ವರನ ಪೂಜೆಗೆ ಪ್ರತಿ ತಿಂಗಳಲ್ಲಿಯೂ ಸಾಮಾನ್ಯ ಪೂಜೆಯನ್ನು ಹೇಳಿದೆನು. ವಿಶೇಷ ಪೂಜಾಕ್ರಮವನ್ನೂ ಹೇಳುವೆನು. ಹೇಗೆಂದರೆ, ಚೈತ್ರಮಾಸದಲ್ಲಿ, ಸ್ಫಟಿಕದಿಂದ ಮಾಡಿದ ಲಿಂಗವನ್ನೂ, ವೈಶಾಖ ಮಾಸದಲ್ಲಿ ವಜ್ರದಿಂದಾದ ಲಿಂಗವನ್ನೂ, ಜ್ಯೇಷ್ಠ ಮಾಸದಲ್ಲಿ ಮರಕತ ( ಪಚ್ಚೆ ) ದಿಂದ ಮಾಡಿದ ಲಿಂಗವನ್ನೂ, ಆಷಾಢ ಮಾಸದಲ್ಲಿ ಮುತ್ತಿನಿಂದ ಮಾಡಿದ ಲಿಂಗವನ್ನೂ, ಶ್ರಾವಣದಲ್ಲಿ ನೀಲ ಮಣಿಯಿಂದ ಮಾಡಿದ ಲಿಂಗವನ್ನೂ, ಭಾದ್ರಪದ ಮಾಸದಲ್ಲಿ ಕೆಂಪುರತ್ನ (ಪದ್ಮರಾಗ) ದಿಂದ ಮಾಡಿದ ಲಿಂಗವನ್ನೂ,

೨೧–೨೨. ಎಲೈ ಬ್ರಾಹ್ಮಣರೇ, ಆಶ್ವಯುಜಮಾಸದಲ್ಲಿ ಗೋಮೇದಿಕದಿಂದ ಮಾಡಿದ ಮಂಗಳಪ್ರದವಾದ ಲಿಂಗವನ್ನೂ, ಕಾರ್ತಿಕಮಾಸದಲ್ಲಿ ಹವಳದಿಂದ ಮಾಡಿರತಕ್ಕ ಲಿಂಗವನ್ನೂ, ಮಾರ್ಗಶೀರ್ಷದಲ್ಲಿ ವೈಡೂರ್ಯದಿಂದ ಮಾಡಿರತಕ್ಕ ಲಿಂಗವನ್ನೂ, ಪುಷ್ಯಮಾಸದಲ್ಲಿ ಪುಷ್ಯರಾಗದಿಂದ ಮಾಡಿರತಕ್ಕ ಲಿಂಗವನ್ನೂ ಮಾಘಮಾಸದಲ್ಲಿ ಸೂರ್ಯಕಾಂತಶಿಲೆಯಿಂದ ಮಾಡಿರತಕ್ಕ ಲಿಂಗವನ್ನೂ, ಫಾಲ್ಗುಣದಲ್ಲಿ ಸ್ಫಟಿಕದಿಂದ ಮಾಡಿದ ಲಿಂಗವನ್ನೂ ಉಪಯೋಗಿಸಬೇಕು. ಇವೇ ವಿಶೇಷ ರೂಪದ ಶಿವಲಿಂಗಗಳು.

ಸರ್ವಮಾಸೇಷು ಕಮಲಂ ಹೈಮ ಮೇಕಂ ವಿಧೀಯತೇ ।
ಅಲಾಭೇ ರಾಜತಂ ವಾಽಪಿ ಕೇವಲಂ ಕಮಲಂ ತು ವಾ ॥೨೩॥

ರತ್ನಾನಾಮ ಪ್ಯಲಾಭೇ ತು ಹೇಮ್ನಾ ವಾ ರಾಜತೇನ ವಾ ।
ರಜತಸ್ಯಾ ಪ್ಯಲಾಭೇ ತು ತಾಮ್ರ ಲೋಹೇನ ಕಾರಯೇತ್ ॥೨೪॥

ಶೈಲಂ ವಾದಾರುಜಂ ವಾಽಪಿ ಮೃನ್ಮಯಂ ವಾ ಸವೇದಿಕಂ ।
ಸರ್ವ ಗಂಧಮಯಂ ವಾಽಪಿ ಕ್ಷಣಿಕಂ ಪರಿಕಲ್ಪಯೇತ್ ॥೨೫॥

ಹೈಮಂತಿಕೇ ಮಹಾದೇವಂ ಶ್ರೀಪತ್ರೇಣೈವ ಪೂಜಯೇತ್ ।
ಸರ್ವ ಮಾಸೇಷು ಕಮಲಂ ಹೈಮ ಮೇಕ ಮಥಾಪಿ ವಾ ॥೨೬॥

ರಾಜತಂ ವಾಽಪಿ ಕಮಲಂ ಹೈಮ ಕರ್ಣಿಕ ಮುತ್ತಮಂ ।
ರಾಜತಸ್ಯಾ ಪ್ಯಭಾವೇ ತು ಬಿಲ್ವಪತ್ರೈಃ ಸಮರ್ಚಯೇತ್ ॥೨೭॥

---

೨೩. ಆ ವಿಶೇಷ ಲಿಂಗಗಳ ಪೂಜೆಗೆ ಎಲ್ಲ ತಿಂಗಳಲ್ಲೂ ಚಿನ್ನದಿಂದ ಮಾಡಿದ ಕಮಲವನ್ನುಪಯೋಗಿಸಬೇಕು. ಅದನ್ನು ಮಾಡಿಸಲು ಸಾಧ್ಯವಾಗದ ಪಕ್ಷದಲ್ಲಿ, ಬೆಳ್ಳಿಯಿಂದ ಮಾಡಿದ ಕಮಲವನ್ನಾಗಲೀ ಅಥವಾ ಸಾಧಾರಣವಾದ ಕಮಲವನ್ನಾಗಲೀ ಉಪಯೋಗಿಸಬೇಕು.

೨೪–೨೫. ಆ ವಿಶೇಷ ಲಿಂಗಗಳನ್ನು ಮೇಲೆ ಹೇಳಿರುವ ವಜ್ರ ವೈಡೂರ್ಯಾದಿ ರತ್ನಗಳಿಂದ ಮಾಡಲು ಸಾಧ್ಯವಾಗದ ಪಕ್ಷದಲ್ಲಿ ಪೂಜೆಯ ಸಮಯಕ್ಕೆ ಮಾತ್ರ ಚಿನ್ನದಿಂದಲಾಗಲೀ, ಬೆಳ್ಳಿಯಿಂದಲಾಗಲಿ, ಮಾಡಿದ ಲಿಂಗವನ್ನು ಉಪಯೋಗಿಸಬೇಕು. ಬೆಳ್ಳಿಯಿಂದಲೂ ಮಾಡಲು ಅಸಾಧ್ಯವಾದರೆ, ತಾಮ್ರದಿಂದಲಾಗಲೀ, ಕಲ್ಲಿನಿಂದಲಾಗಲೀ, ಮರದಿಂದಲಾಗಲೀ, ಮಣ್ಣಿನಿಂದಲಾಗಲಿ, ಗಂಧದಿಂದಲಾಗಲೀ, ಮಾಡಿರುವ, ಪೀಠ ಸಹಿತವಾದ ಲಿಂಗವನ್ನು ಪೂಜೆಗೆ ಉಪಯೋಗಿಸಬೇಕು.

೨೬–೨೭. ಹಿಮಂತ ಋತುವಿನಲ್ಲಿ ಈಶ್ವರನನ್ನು ಬಿಲ್ವಪತ್ರೆಗಳಿಂದ ಪೂಜಿಸಬೇಕು. ಎಲ್ಲಾ ತಿಂಗಳಲ್ಲಿಯೂ, ಒಂದನ್ನಾದರೂ ಚಿನ್ನದ ತಾವರೆಯ ಹುವ್ವನ್ನಾಗಲೀ ಅಥವಾ, ಮಧ್ಯಭಾಗದಲ್ಲಿ ಚಿನ್ನದ ದಿಂಡನ್ನುಳ್ಳ ಬೆಳ್ಳಿಯಿಂದ ಮಾಡಿದ ಕಮಲವನ್ನಾಗಲೀ ಪೂಜೆಮಾಡಬೇಕು. ಬೆಳ್ಳಿಯ ಕಮಲವೂ ಸಿಕ್ಕದಿದ್ದಲ್ಲಿ ಬಿಲ್ವಪತ್ರಗಳಿಂದಲೇ ಪೂಜಿಸಬೇಕು.

ಸಹಸ್ರ ಕಮಲಾಲಾಭೇ ತದರ್ಧೇನಾಪಿ ಪೂಜಯೇತ್ ।
ತದರ್ಧಾರ್ಧೇನ ವಾ ರುದ್ರ ಮಷ್ಟೋತ್ತರ ಶತೇನ ವಾ ॥೨೮॥

ಬಿಲ್ವಪತ್ರೇ ಸ್ಥಿತಾ ಲಕ್ಷ್ಮೀರ್ದೇವೀ ಲಕ್ಷಣ ಸಂಯುತಾ ।
ನೀಲೋತ್ಪಲೇಽಂಬಿಕಾ ಸಾಕ್ಷಾದುತ್ಪಲೇ ಷಣ್ಮುಖಃ ಸ್ವಯಂ ॥೨೯॥

ಪದ್ಮಾಶ್ರಿತೋ ಮಹಾದೇವಃ ಸರ್ವದೇವ ಪತಿಃ ಶಿವಃ ।
ತಸ್ಮಾತ್ಸರ್ವ ಪ್ರಯತ್ನೇನ ಶ್ರೀಪತ್ರಂ ನ ತ್ಯಜೇದ್ಬುಧಃ ॥೩೦॥

ನೀಲೋತ್ಪಲಂ ಚೋತ್ಪಲಂ ಚ ಕಮಲಂ ಚ ವಿಶೇಷತಃ ।
ಸರ್ವ ವಶ್ಯಕರಂ ಪದ್ಮಂ ಶಿಲಾ ಸರ್ವಾರ್ಥ ಸಿದ್ಧಿದಾ ॥೩೧॥

ಕೃಷ್ಣಾಗರು ಸಮುದ್ಭೂತಂ ಸರ್ವಪಾಪ ನಿಕೃಂತನಂ ।
ಗುಗ್ಗುಲು ಪ್ರಭೃತೀನಾಂ ಚ ದೀಪಾನಾಂ ಚ ನಿವೇದನಂ ॥೩೨॥

---

೨೮. ಮಹೇಶ್ವರನನ್ನು ಸಾವಿರಕಮಲಗಳಿಂದ ಪೂಜಿಸಬೇಕು. ಸಾವಿರ ಕಮಲಗಳು ಸಿಕ್ಕದಿದ್ದಲ್ಲಿ, ಐನೂರು ಕಮಲಗಳಿಂದಲಾದರೂ, ಐನೂರೂ ಸಿಕ್ಕದಿದ್ದಲ್ಲಿ, ಇನ್ನೂರೈವತ್ತು ಕಮಲಗಳಿಂದಲಾಗಲೀ ಅಥವಾ ನೂರೆಂಟು ಕಮಲಗಳಿಂದಲಾಗಲೀ ರುದ್ರನನ್ನು ಪೂಜಿಸಬೇಕು.

೨೯-೩೦. ಬಿಲ್ವಪತ್ರೆಯಲ್ಲಿ ಸರ್ವಲಕ್ಷಣ ಸಂಪನ್ನೆಯಾದ ಲಕ್ಷ್ಮಿಯೂ, ಕನ್ನೈದಿಲೆಯಲ್ಲಿ ಪಾರ್ವತಿಯೂ,ನೈದಿಲೆಯಲ್ಲಿ ಸಾಕ್ಷಾತ್ ಷಣ್ಮುಖನೂ, ಕಮಲದಲ್ಲಿ ಸರ್ವದೇವತೆಗಳಿಗೂ ಸ್ವಾಮಿಯಾದ ಶಿವನೂ, ವಾಸವಾಗಿರುವರು. ಆದರೂ ಶಿವನಿಗೆ ಅತಿ ಪ್ರಿಯವಾದುದರಿಂದ ಬಿಲ್ವಪತ್ರೆಯನ್ನೇ ಜ್ಞಾನಿಯಾದವನು ಪೂಜೆಗೆ ಉಪಯೋಗಿಸಬೇಕು.

೩೧. ಈಶ್ವರನ ಪೂಜೆಗೆ ಕನ್ನೈದಿಲೆಯನ್ನಾಗಲೀ, ವಿಶೇಷವಾಗಿ ಕಮಲವನ್ನಾಗಲೀ ಉಪಯೋಗಿಸಬೇಕು. ಪದ್ಮವು ಎಲ್ಲರ ಹೃದಯವನ್ನೂ ಆಕರ್ಷಿಸುವ ಶಕ್ತಿಯುಳ್ಳುದು. ಹಾಗೆಯೇ ಶಿಲೆಯು ಸರ್ವರ ಎಲ್ಲ ಬಗೆಯ ಇಷ್ಟಾರ್ಥವನ್ನೂ ಕೊಡುವ ಸಾಮರ್ಥ್ಯವುಳ್ಳುದು.

೩೨-೩೩. ಎಲ್ಲಾ ಪಾಪಗಳನ್ನೂ ನಾಶಮಾಡುವ, ಕರಿಯ ಅಗುರಿನ ಮತ್ತು ಗುಗ್ಗುಳ ಮುಂತಾದುವುಗಳ,ಮತ್ತು ಎಲ್ಲ ರೋಗಗಳನ್ನೂ ನಾಶ

ಸರ್ವರೋಗ ಕ್ಷಯಂ ಚೈವ ಚಂದನಂ ಸರ್ವ ಸಿದ್ಧಿದಂ ।
ಸೌಗಂಧಿಕಂ ತಥಾ ಧೂಪಂ ಸರ್ವ ಕಾಮಾರ್ಥ ಸಾಧಕಂ ॥೩೩॥

ಶ್ವೇತಾಗರೂದ್ಭವಂ ಚೈವ ತಥಾ ಕೃಷ್ಣಾಗರೂದ್ಭವಂ ।
ಸೌಮ್ಯಂ ಸಿತಾರಿ ಧೂಪಂ ಚ ಸಾಕ್ಷಾನ್ನಿರ್ವಾಣ ಸಿದ್ಧಿದಂ ॥೩೪॥

ಶ್ವೇತಾರ್ಕ ಕುಸುಮೇ ಸಾಕ್ಷಾಚ್ಚತುರ್ವಕ್ತ್ರಃ ಪ್ರಜಾಪತಿಃ ।
ಕರ್ಣಿಕಾರಸ್ಯ ಕುಸುಮೇ ಮೇಧಾ ಸಾಕ್ಷಾದ್ವ್ಯವಸ್ಥಿತಾ ॥೩೫॥

ಕರವೀರೇ ಗಣಾಧ್ಯಕ್ಷೋ ಬಕೇ ನಾರಾಯಣಃ ಸ್ವಯಂ ।
ಸುಗಂಧಿ ಷು ಚ ಸರ್ವೇಷು ಕುಸುಮೇಷು ನಗಾತ್ಮಜಾ ॥೩೬॥

ತಸ್ಮಾದೇತೈ ರ್ಯಥಾಲಾಭಂ ಪುಷ್ಪಧೂಪಾದಿಭಿಃ ಶುಭೈಃ ।
ಸ್ಪೂಜಯೇದ್ದೇವ ದೇವೇಶಂ ಭಕ್ತ್ಯಾ ವಿತ್ತಾನುಸಾರತಃ ॥೩೭॥

---

ಮಾಡುವ ಚಂದನದ, ಸುವಾಸನೆಯುಳ್ಳ ಧೂಪವನ್ನೂ, ಸಮರ್ಪಿಸುವುದರಿಂದ ಎಲ್ಲ ಇಷ್ಟಾರ್ಥಗಳೂ ನೆರವೇರುವುವು.

೩೪. ಬಿಳಿಯ ಅಗುರಿನ ಮತ್ತು ಕರಿಯ ಅಗುರಿನ ಧೂಪವನ್ನೂ, ಮೋಕ್ಷವನ್ನು ಕೊಡುವ ಸಿತಾರೀ ಎಂಬುವುದರ ಧೂಪವನ್ನೂ, ಉಪಯೋಗಿಸಬೇಕು.

೩೫–೩೬. ಈಶ್ವರನ ಪೂಜೆಗೆ ನಿಯಮಿತವಾದ ಬಿಳಿಯ ಎಕ್ಕದ ಹೂವಿನಲ್ಲಿ ಬ್ರಹ್ಮನೂ, ಶಂಖಪುಷ್ಪದಲ್ಲಿ ಮೇಧಾದೇವಿಯೂ, ಕಣಿಗಲು ಹುವ್ವಿನಲ್ಲಿ ಗಣಪತಿಯೂ, ಬಕಪುಷ್ಪದಲ್ಲಿ ನಾರಾಯಣನೂ, ಪರಿಮಳಯುತವಾದ ಎಲ್ಲಾ ಹೂಗಳಲ್ಲೂ, ಪಾರ್ವತಿಯೂ, ನೆಲೆಸಿರುವರು.

೩೭. ಆದುದರಿಂದ ದೊರೆತಷ್ಟು ಮಂಗಳಕರವಾದ ಹೂಗಳು ಮತ್ತು ಧೂಪಗಳು, ಇವುಗಳಿಂದ ತಮ್ಮ ತಮ್ಮ ಧನಗಳ ಅನುಕೂಲ್ಯಕ್ಕೆ ತಕ್ಕಂತೆ ಉಪಚಾರಗಳನ್ನು ಮಾಡಿ ದೇವದೇವನಾದ ಶಿವನನ್ನು ಭಕ್ತಿಯಿಂದ ಪೂಜಿಸಬೇಕು.

ನಿವೇದಯೇ ತ್ತತೋ ಭಕ್ತ್ಯಾ ಪಾಯಸಂ ಚ ಮಹಾಚರುಂ ।
ಸಘೃತಂ ಸೋಪದಂಶಂ ಚ ಸರ್ವದ್ರವ್ಯಸಮನ್ವಿತಂ ॥೩೮॥
ಶುದ್ಧಾನ್ನಂ ವಾಽಪಿ ಮುದ್ಗಾನ್ನಂ ಆಢಕಂ ಚಾರ್ಧಕಂ ತು ವಾ ।
ಚಾಮರಂ ತಾಲವೃಂತಂ ಚ ತಸ್ಮೈ ಭಕ್ತ್ಯಾ ನಿವೇದಯೇತ್ ॥೩೯॥
ಉಪಹಾರಾಣಿ ಪುಣ್ಯಾನಿ ನ್ಯಾಯೇನೈವಾರ್ಜಿತಾನ್ಯಪಿ ।
ನಾನಾವಿಧಾನಿ ಚಾರ್ಹಾಣಿ ಪ್ರೋಕ್ಷಿತಾನ್ಯಂಭಸಾ ಪುನಃ ॥೪೦॥
ನಿವೇದಯೇಚ್ಚ ರುದ್ರಾಯ ಭಕ್ತಿಯುಕ್ತೇನ ಚೇತಸಾ ।
ಕ್ಷೀರಾದ್ಯೈಃ ಸರ್ವದೇವಾನಾಂ ಸ್ಥಿತ್ಯರ್ಥ ಮಮೃತಂ ಧ್ರುವಂ ॥೪೧॥
ವಿಷ್ಣುನಾ ಜಿಷ್ಣುನಾ ಸಾಕ್ಷಾದನ್ನೇ ಸರ್ವಂ ಪ್ರತಿಷ್ಠಿತಂ ।
ಭೂತಾನಾ ಮನ್ನದಾನೇನ ಪ್ರೀತಿ ರ್ಭವತಿ ಶಂಕರೇ ॥೪೨॥

---

೩೮–೩೯. ಅನಂತರದಲ್ಲಿ ಭಕ್ತಿಯಿಂದ ಪಾಯಸವನ್ನೂ, ತುಪ್ಪದಿಂದಲೂ, ನಂಚಿಕೊಳ್ಳುವ ಉಪ್ಪಿನಕಾಯಿ ಮುಂತಾದ ಪದಾರ್ಥದಿಂದಲೂ, ಇನ್ನೂ ಇತರ ನಾನಾ ಬಗೆಯ ಪದಾರ್ಥಗಳಿಂದಲೂ ಕೂಡಿರುವ, ಮಹಾನೈವೇದ್ಯವನ್ನೂ ಮತ್ತು ಬರಿಯ ಅನ್ನವನ್ನೂ, ಅರ್ಧಕೊಳಗ ಅಥವಾ ಅದರ ಅರ್ಧವನ್ನಾಗಲೀ ಹುಗ್ಗಿಯನ್ನೂ, ನಿವೇದನ ಮಾಡಿ, ಚಾಮರವನ್ನೂ, ಬೀಸಣಿಗೆಯನ್ನೂ ಅರ್ಪಿಸಬೇಕು.

೪೦. ಪುಣ್ಯವಾದ, ನ್ಯಾಯವಾಗಿ ಸಂಪಾದಿಸಿದ, ನಾನಾ ವಿಧವಾದ, ಯೋಗ್ಯವಾದ, ಕಾಣಿಕೆಗಳನ್ನು ನೀರಿನಿಂದ ಪ್ರೋಕ್ಷಿಸಿ, ಭಕ್ತಿಯುಕ್ತವಾದ ಮನಸ್ಸಿನಿಂದ ರುದ್ರನಿಗೆ ಸಮರ್ಪಿಸಬೇಕು.

೪೧. ದೇವತೆಗಳ ಶಾಶ್ವತವಾದ ಸ್ಥಿತಿಗೋಸ್ಕರ, ವಿಷ್ಣುವು ಕ್ಷೀರಸಮುದ್ರದಿಂದ ಅಮೃತವನ್ನು ತೆಗೆದನು. ಅಂತಹ ಅಮೃತವು ಅನ್ನದಲ್ಲಿರುವುದು.

೪೨. ಪ್ರಾಣಿಗಳಿಗೆ ಅನ್ನದಾನ ಮಾಡುವುದರಿಂದ ಭಕ್ತನಿಗೆ ಈಶ್ವರನಲ್ಲಿ ಪ್ರೀತಿಯು ಹುಟ್ಟುವುದು. ಆದುದರಿಂದ ಈಶ್ವರನನ್ನು ಪೂಜಿಮಾಡಬೇಕು. ಅನ್ನದಲ್ಲಿ ಪಂಚ ಪ್ರಾಣಗಳೂ ಪ್ರತಿಷ್ಠಿಸಲ್ಪಟ್ಟಿರುವುವು.

ತಸ್ಮಾತ್ಸಂಪೂಜಯೇ ದ್ದೇವ ಮನ್ನೇ ಪ್ರಾಣಾಃ ಪ್ರತಿಷ್ಠಿತಾಃ ।
ಉಪಹಾರೇ ತಥಾ ತುಷ್ಟಿ ರ್ವ್ಯಂಜನೇ ಪವನಃ ಸ್ವಯಂ ॥೪೩॥
ಸರ್ವಾತ್ಮಕೋ ಮಹಾದೇವೋ ಗಂಧ ತೋಯೇ ಹ್ಯಪಾಂ ಪತಿಃ ।
ಪೀಠೇ ವೈ ಪ್ರಕೃತಿಃ ಸಾಕ್ಷಾನ್ಮಹದಾದ್ಯೈ ರ್ವ್ಯವಸ್ಥಿತಾ ॥೪೪॥
ತಸ್ಮಾ ದ್ದೇವಂ ಯಜೇದ್ಭಕ್ತ್ಯಾ ಪ್ರತಿಮಾಸಂ ಯಥಾ ವಿಧಿ ।
ಪೌರ್ಣಮಾಸ್ಯಾಂ ವ್ರತಂ ಕಾರ್ಯಂ ಸರ್ವಕಾಮಾರ್ಥ ಸಿದ್ಧಯೇ ॥
ಸತ್ಯಂ ಶೌಚಂ ದಯಾ ಶಾಂತಿಃ ಸಂತೋಷೋ ದಾನ ಮೇವ ಚ ।
ಪೌರ್ಣಮಾಸ್ಯಾಂ ಅಮಾವಾಸ್ಯಾ ಮುಪವಾಸಂ ಚ ಕಾರಯೇತ್ ॥
ಸಂವತ್ಸರಾಂತೇ ಗೋದಾನಂ ವೃಷೋತ್ಸರ್ಗಂ ವಿಶೇಷತಃ ।
ಭೋಜಯೇ ದ್ಬ್ರಾಹ್ಮಣಾನ್ಭಕ್ತ್ಯಾ ಶ್ರೋತ್ರಿಯಾನ್ವೇದ ಪಾರಗಾನ್

---

೪೩–೪೪. ಉಪಹಾರದಲ್ಲಿ ತುಷ್ಟಿಯೂ, ವ್ಯಂಜನ (ನಂಚಿಕೊಳ್ಳುವ ಪದಾರ್ಥ) ದಲ್ಲಿ ವಾಯುವೂ, ಎಲ್ಲರ ಹೃದಯದಲ್ಲೂ ಮಹಾದೇವನೂ, ಗಂಧದ ನೀರಿನಲ್ಲಿ ವರುಣನೂ, ಪೀಠದಲ್ಲಿ ಮಹತ್, ಅಂತಃಕರಣ, ಬುದ್ಧಿ, ಅಹಂಕಾರ ಇವುಗಳಿಂದ ಕೂಡಿರುವ ಪ್ರಕೃತಿಯೂ, ಇರುವರು.

೪೫. ಅದುದರಿಂದ ಪ್ರತಿ ತಿಂಗಳಲ್ಲಿಯೂ, ಪೂಜಾಕ್ರಮದಂತೆ ಭಕ್ತಿಯಿಂದ ಈಶ್ವರನನ್ನು ಪೂಜಿಸಬೇಕು. ಹುಣ್ಣಿಮೆಯ ದಿವಸ ಸಕಲ ಇಷ್ಟಾರ್ಥಗಳೂ ನೆರವೇರುವುದಕ್ಕೋಸ್ಕರ ಶಿವಪೂಜಾವ್ರತವನ್ನು ಮಾಡಬೇಕು.

೪೬–೪೭. ಈಶ್ವರನ ಪೂಜಾವ್ರತವನ್ನು ಮಾಡುವವನು ಸತ್ಯವನ್ನು ನುಡಿಯುವವನಾಗಿಯೂ, ದಯೆಯುಳ್ಳವನಾಗಿಯೂ, ಶಾಂತಿಯುಕ್ತನಾಗಿಯೂ, ಇತರರನ್ನು ಸಂತೋಷಪಡಿಸುವವನಾಗಿಯೂ, ದಾನವನ್ನು ಮಾಡಬೇಕು. ಮತ್ತು ಹುಣ್ಣಿಮೆ, ಅಮಾವಾಸ್ಯೆಗಳಲ್ಲಿ ಉಪವಾಸವನ್ನು ಮಾಡಬೇಕು. ಇದೇ ರೀತಿ ಒಂದು ವರ್ಷ ವ್ರತವನ್ನಾಚರಿಸಿ ಕೊನೆಯಲ್ಲಿ ಗೋದಾನವನ್ನೂ ವೃಷೋತ್ಸರ್ಗ (ಈಶ್ವರನ ಪ್ರೀತ್ಯರ್ಥವಾಗಿ ವೃಷಭವನ್ನು ಬಿಡುವಿಕೆ) ವನ್ನೂ ಮಾಡಿ, ವೇದಾಧ್ಯಯನಸಂಪನ್ನರೂ, ಶ್ರೋತ್ರಿಯರೂ ಆದ ಬ್ರಾಹ್ಮಣರ ಸಂತರ್ಪಣೆಯನ್ನು ಮಾಡಬೇಕು.

ತಲ್ಲಿಂಗಂ ಪೂಜಿತಂ ತೇನ ಸರ್ವದ್ರವ್ಯ ಸಮನ್ವಿತಂ ।
ಸ್ಥಾಪಯೇ ದ್ವಾ ಶಿವಕ್ಷೇತ್ರೇ ದಾಪಯೇದ್ವಾ ಬ್ರಾಹ್ಮಣಾಯ ಚ ॥
ಯ ಏವಂ ಸರ್ವ ಮಾಸೇಷು ಶಿವಲಿಂಗ ಮಹಾವ್ರತಂ ।
ಕುರ್ಯಾ ದ್ಭಕ್ತ್ಯಾ ಮುನಿಶ್ರೇಷ್ಠಾಃ ಸ ಏವ ತಪಸಾ ವರಃ ॥೪೯॥
ಸೂರ್ಯಕೋಟಿ ಪ್ರತೀಕಾಶೈ ರ್ವಿಮಾನೈಃ ರತ್ನಭೂಷಿತೈಃ ।
ಗತ್ವಾ ಶಿವಪುರಂ ದಿವ್ಯಂ ನೇಹಾಯಾತಿ ಕದಾಚನ ॥೫೦॥
ಅಥವಾ ಹ್ಯೇಕಮಾಸಂ ವಾ ಚರೇದೇವಂ ವ್ರತೋತ್ತಮಂ ।
ಶಿವಲೋಕ ಮವಾಪ್ನೋತಿ ನಾತ್ರಕಾರ್ಯಾ ವಿಚಾರಣಾ ॥೫೧॥

---

೪೮–೪೯. ಎಲೈ ಮುನಿಶ್ರೇಷ್ಠರೇ, ಎಲ್ಲ ಪೂಜಾದ್ರವ್ಯಗಳಿಂದಲೂ ಕೂಡಿರುವ ಮತ್ತು ಮೇಲೆ ಹೇಳಿದ ಎಲ್ಲಾ ನಿಯಮಗಳನ್ನೂ ಪಾಲಿಸುವ ಮನುಷ್ಯನು, ಈಶ್ವರನ ಲಿಂಗವನ್ನು ಪೂಜೆಮಾಡಬೇಕು. ಮತ್ತು ಶಿವಕ್ಷೇತ್ರದಲ್ಲಿ ಲಿಂಗವನ್ನು ಸ್ಥಾಪಿಸಿ, ಬ್ರಾಹ್ಮಣನಿಗೆ ದಾನಮಾಡಬೇಕು. ಯಾವನು ಇದೇ ರೀತಿಯಲ್ಲಿ ಪ್ರತಿ ತಿಂಗಳಲ್ಲಿಯೂ ಈ ಮಹಾಶಿವಪೂಜಾ ವ್ರತವನ್ನು ಭಕ್ತಿಯಿಂದ ಮಾಡುವನೋ ಅವನೇ ತಪಸ್ವಿಗಳಲ್ಲಿ ಶ್ರೇಷ್ಠನೆನಿಸಿಕೊಳ್ಳುವನು.

೫೦. ಅವನು ಕೋಟಿ ಸೂರ್ಯರಕಾಂತಿಗೆ ಸಮಾನವಾದ ಕಾಂತಿಯುಳ್ಳ, ಮತ್ತು ರತ್ನಾಭರಣಗಳಿಂದ ಅಲಂಕೃತವಾದ, ವಿಮಾನಗಳಲ್ಲಿ ಕುಳಿತು ಈಶ್ವರನ ಪಟ್ಟಣಕ್ಕೆ ಹೋಗುವನು. ಪುನಃ ಅವನು ಯಾವಾಗಲೂ, ಭೂಮಿಯಲ್ಲಿ ಹುಟ್ಟುವುದಿಲ್ಲ.

೫೧. ಪ್ರತಿ ತಿಂಗಳಲ್ಲೂ ಶಿವಪೂಜಾವ್ರತವನ್ನು ಮಾಡಿದರೂ ಅಥವಾ ಒಂದೇ ತಿಂಗಳಲ್ಲಿ ಶ್ರೇಷ್ಠವಾದ ಈ ವ್ರತವನ್ನು ಮಾಡಿದರೂ, ಆತನು ಶಿವಲೋಕವನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯ ಪಡಬೇಕಾದುದಿಲ್ಲ.

ಅಥವಾ ಸಕ್ತಚಿತ್ತಶ್ಚೇ ದ್ಯಾ(ದ್ಯೋಽ)ನ್ಯಾ ನ್ಸಂಚಿಂತಯೇದ್ವರಾನ್।
ವರ್ಷಮೇಕಂ ಚರೇದೇವಂ ತಾಂ ಸ್ತಾ ನ್ಪ್ರಾಪ್ಯ ಶಿವಂ ವ್ರಜೇತ್ ॥

ದೇವತ್ವಂ ವಾ ಪಿತೃತ್ವಂ ವಾ ದೇವರಾಜತ್ವ ಮೇವ ಚ।
ಗಾಣಾಪತ್ಯ ಪದಂ ವಾಽಪಿ ಸಕ್ತೋಽಪಿ ಲಭತೇ ನರಃ ॥೫೩॥

ವಿದ್ಯಾರ್ಥೀ ಲಭತೇ ವಿದ್ಯಾಂ ಭೋಗಾರ್ಥೀ ಭೋಗಮಾಪ್ನುಯಾತ್
ದ್ರವ್ಯಾರ್ಥೀ ಚ ನಿಧಿಂ ಪಶ್ಯೇತ್ ಆಯುಃ ಕಾಮ ಶ್ಚಿರಾಯುಷಂ ॥
ಯಾನ್ಯಾಂಶ್ಚಿಂತಯತೇ ಕಾಮಾಂ ಸ್ತಾಂಸ್ತಾ ನ್ಪ್ರಾಪ್ಯೇಹ ಮೋದತೇ
ಏಕಮಾಸ ವ್ರತಾದೇವ ಸೋಽಂತೇ ರುದ್ರತ್ವ ಮಾಪ್ನುಯಾತ್ ॥೫೫॥

---

೫೨. ಅಥವಾ ಸಕಾಮನಾದ ಫಲಾಶೆಯುಳ್ಳ ಮನುಷ್ಯನು ತನ್ನ ಮನಸ್ಸಿನಲ್ಲಿ ಯಾವ ಯಾವ ಇಷ್ಟವನ್ನು ಅಪೇಕ್ಷಿಸಿ ಒಂದು ವರ್ಷ ಶಿವಪೂಜಾವ್ರತವನ್ನು ಮಾಡುವನೋ ಅವನು ತನ್ನ ಇಷ್ಟಾರ್ಥಗಳನ್ನು ಪಡೆದು ಶಿವಲೋಕವನ್ನು ಹೊಂದುವನು.

೫೩. ಸಕಾಮನಾದರೂ, (ಫಲಾಪೇಕ್ಷೆಯಿಂದ ಕೂಡಿರುವವನಾದರೂ) ಹಾಗೆ ಪೂಜೆಮಾಡಿದ ಮನುಷ್ಯನು ದೇವತ್ವವನ್ನಾಗಲೀ, ಪಿತೃತ್ವವನ್ನಾಗಲೀ, ದೇವತೆಗಳ ರಾಜ್ಯವನ್ನಾಗಲಿ, ಗಣಪತಿಯ ಸ್ಥಾನವನ್ನಾಗಲಿ, ತಾನುಬಯಸಿದ್ದುದನ್ನು ಹೊಂದುವನು.

೫೪. ವಿದ್ಯಾರ್ಥಿಯು ಈ ಶಿವಪೂಜಾವ್ರತವನ್ನು ಮಾಡಿದರೆ ವಿದ್ಯೆಯನ್ನೂ, ಭೋಗಾಪೇಕ್ಷೆಯುಳ್ಳವನು ಭೋಗವನ್ನೂ, ದ್ರವ್ಯಾಭಿಲಾಷೆಯುಳ್ಳವನು ಹಣವನ್ನೂ, ಆಯುಸ್ಸನ್ನಪೇಕ್ಷಿಸುವವನು ಬಹುಕಾಲ ಬಾಳುವಿಕೆಯನ್ನೂ, ಹೊಂದುವನು.

೫೫. ಯಾವನು ಒಂದುತಿಂಗಳಾದರೂ, ಈ ಶಿವಪೂಜಾವ್ರತವನ್ನು ಮಾಡುವನೋ ಅವನು ತಾನು ಯಾವ ಯಾವ ಇಷ್ಟಗಳನ್ನು ಅಪೇಕ್ಷಿಸುವನೋ, ಅದನ್ನೆಲ್ಲವನ್ನೂ ಹೊಂದಿ, ಭೂಲೋಕದಲ್ಲಿ ಆನಂದವಾಗಿದ್ದು ಕೊನೆಗೆ ರುದ್ರತ್ವವನ್ನೂ ಹೊಂದುವನು.

ಇದಂ ಪವಿತ್ರಂ ಪರಮಂ ರಹಸ್ಯಂ ।
ವ್ರತೋತ್ತಮಂ ವಿಶ್ವಸೃಜಾಽಪಿ ಸೃಷ್ಟಂ ॥
ಹಿತಾಯ ದೇವಾಸುರ ಸಿದ್ಧ ಮರ್ತ್ಯ ।
ವಿದ್ಯಾಧರಾಣಾಂ ಪರಮಂ ಶಿವೇನ ॥೫೬॥

ಸಂಪೂಜ್ಯ ಪೂಜ್ಯಂ ವಿಧಿನೈವ ಮೀಶಂ ।
ಪ್ರಣಮ್ಯ ಮೂರ್ಧ್ನಾ ಸಹ ಭೃತ್ಯ ಪುತ್ರೈಃ ॥
ವ್ಯಪೋಹನಂ ನಾಮ ಜಪೇತ್ ಸ್ತವಂ ಚ ।
ಪ್ರದಕ್ಷಿಣಂ ಕೃತ್ಯ ಶಿವಂ ಪ್ರಯತ್ನಾತ್ ॥೫೭॥

ಪುರಾಕೃತಂ ವಿಶ್ವಸೃಜಾ ಸ್ತವಂ ಹಿ ।
ಹಿತಾಯ ದೇವೇನ ಜಗತ್ರಯಸ್ಯ ॥
ಪಿತಾಮಹೇನೈವ ಸುರೈಶ್ಚ ಸಾರ್ಧಂ ।
ಮಹಾನುಭಾವೇನ ಮಹಾರ್ಘ್ಯ ಮೇತತ್ ॥೫೮॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಪಶುಪಾಶ ವಿಮೋಚನ,
ಲಿಂಗಪೂಜಾಕಥನಂನಾಮ ಏಕಾಶೀತಿತಮೋಽಧ್ಯಾಯಃ

---

೫೬. ಪವಿತ್ರವಾಗಿಯೂ, ಶ್ರೇಷ್ಠವಾಗಿಯೂ, ರಹಸ್ಯವಾಗಿಯೂ, ವ್ರತಗಳಲೆಲ್ಲಾ ಶ್ರೇಷ್ಠವಾಗಿಯೂ, ಇರುವ ಈ ವ್ರತವನ್ನು ಲೋಕದ ಸೃಷ್ಟಿಕರ್ತನಾದ ಪರಮ ಶಿವನು, ದೇವತೆಗಳ, ರಾಕ್ಷಸರ, ಸಿದ್ಧರ, ಮನುಷ್ಯರ ಮತ್ತು ವಿದ್ಯಾಧರರ ಹಿತಕ್ಕೋಸ್ಕರವಾಗಿ ನಿರ್ಮಿಸಿದನು.

೫೭. ಈ ರೀತಿಯಾಗಿ ಹಿಂದೆ ಹೇಳಿದ ಪೂಜಾ ನಿಯಮದಂತೆ, ಪೂಜ್ಯನಾಗಿರುವ ಈಶ್ವರನನ್ನು ಮನೆಯ ಮಕ್ಕಳು ಮತ್ತು ಆಳುಗಳೊಡನೆ ಶಿರಸ್ಸಿನಿಂದ ನಮಸ್ಕರಿಸಿ, ಪ್ರದಕ್ಷಿಣೆಮಾಡಿ, ವ್ಯಪೋಹನ ಎಂಬ ಈ ಸ್ತೋತ್ರವನ್ನು ಪ್ರಯತ್ನ ಪೂರ್ವಕವಾಗಿ ಪಠನ ಮಾಡಬೇಕು.

೫೮. ಉತ್ಕೃಷ್ಟವಾದ ಈ ವ್ಯಪೋಹನವೆಂಬ ಸ್ತೋತ್ರವು, ಪೂರ್ವದಲ್ಲಿ ದೇವತೆಗಳೊಡಗೂಡಿದ, ಸೃಷ್ಟಿಕರ್ತನಾದ ಬ್ರಹ್ಮನಿಂದ ಮೂರು ಲೋಕಕ್ಕೂ ಹಿತವಾಗಲೆಂಬ ಉದ್ದೇಶದಿಂದ ಮಾಡಲ್ಪಟ್ಟಿತು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಪಶುಪಾಶ ವಿಮೋಚನೆಯ
ಲಿಂಗಪೂಜಾಕ್ರಮವನ್ನು ವಿವರಿಸಿರುವ ಎಂಬತ್ತೊಂದನೆಯ
ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
द्व्यशीतितमोऽध्यायः

**द्व्यशीति तम अध्यायो सर्वपाप प्रणाशनः ।**
**व्यपोहन स्तवः पुण्यो ब्रह्म प्रोक्तो निरूप्यते ॥**

**॥ सूत उवाच ॥**

**व्यपोहन स्तवं वक्ष्ये सर्व सिद्धि प्रदं शुभं ।**
**नंदिनश्च मुखाच्छ्रुत्वा कुमारेण महात्मना ॥ १ ॥**

**व्यासाय कथितं तस्माद्बहुमानेन वै मया ।**
**नमः शिवाय शुद्धाय निर्मलाय यशस्विने ॥ २ ॥**

**दुष्टांतकाय सर्वाय भवाय परमात्मने ।**
**पंचवक्त्रो दशभुजो ह्यक्ष पंच दशैर्युतः ॥ ३ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತೆರಡನೆಯ ಅಧ್ಯಾಯವು.

ಈ ಎಂಬತ್ತೆರಡೆನೆಯ ಅಧ್ಯಾಯದಲ್ಲಿ ಎಲ್ಲ ಪಾಪಗಳನ್ನೂ ನಾಶ ಮಾಡುವ ಬ್ರಹ್ಮನಿಂದ ಹೇಳಲ್ಪಟ್ಟ ವ್ಯಪೋಹನವೆಂಬ ಸ್ತೋತ್ರವು ಹೇಳಲ್ಪಡುವುದು.

೧. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ, ಎಲ್ಲ ಅಭೀಷ್ಟಗಳನ್ನೂ ಕೊಡುವ, ಶುಭವಾದ, ನಂದಿಯಿಂದ ಸ್ಕಂದನಿಗೆ ಹೇಳಲ್ಪಟ್ಟ, ನನ್ನಿಂದ ವ್ಯಾಸನಿಗೆ ಹೇಳಲ್ಪಟ್ಟ ವ್ಯಪೋಹನವೆಂಬ ಸ್ತೋತ್ರವನ್ನು ಹೇಳುವೆನು.

೨. ಶುದ್ಧನಾಗಿಯೂ, ನಿರ್ಮಲನಾಗಿಯೂ, ಕೀರ್ತಿಶಾಲಿಯಾಗಿಯೂ, ದುಷ್ಟರಿಗೆ ಕಷ್ಟವನ್ನು ಕೊಡುವವನಾಗಿಯೂ, ಪರಮಾತ್ಮನಾಗಿಯೂ ಇರುವ ಶಿವನಿಗೆ ನಮಸ್ಕಾರವು.

೩-೪. ಐದು ಮುಖವುಳ್ಳ, ಹತ್ತು ತೋಳುಗಳುಳ್ಳ, ಹದಿನೈದು ಕಣ್ಣು, ಇಂದ್ರಿಯಗಳುಳ್ಳ; ಶುದ್ಧವಾದ ಸ್ಫಟಿಕದಂತೆ ಬೆಳ್ಳಗಿರುವ, ಎಲ್ಲ ಆಭರಣಗಳಿಂದ ಅಲಂಕೃತನಾದ, ಎಲ್ಲ ವಿಷಯಗಳನ್ನೂ ತಿಳಿದಿರುವ, ಎಲ್ಲ

ಶುದ್ಧ ಸ್ಫಟಿಕ ಸಂಕಾಶಃ ಸರ್ವಾಭರಣ ಭೂಷಿತಃ ।
ಸರ್ವಜ್ಞಃ ಸರ್ವಗಃ ಶಾಂತಃ ಸರ್ವೋಽಪರಿ ಸು ಸಂಸ್ಥಿತಃ ॥ ೪ ॥

ಪದ್ಮಾಸನಸ್ಥಃ ಸೋಽಮೋಽಶಃ ಪಾಪ ಮಾಶು ವ್ಯಪೋಽಹತು ।
ಈಶಾನಃ ಪುರುಷಶ್ಚೈವ ಅಘೋಽರಃ ಸದ್ಯ ಏವ ಚ ॥ ೫ ॥

ವಾಮುದೇವಶ್ಚ ಭಗವಾನ್ ಪಾಪ ಮಾಶು ವ್ಯಪೋಽಹತು ।
ಅನಂತಃ ಸರ್ವ ವಿದ್ಯೇಶಃ ಸರ್ವಜ್ಞಃ ಸರ್ವದಃ ಪ್ರಭುಃ ॥ ೬ ॥

ಶಿವಧ್ಯಾನೈಕ ಸಂಪನ್ನಃ ಸ ಮೇ ಪಾಪಂ ವ್ಯಪೋಹತು ।
ಸೂಕ್ಷ್ಮಃ ಸುರಾಸುರೇಶಾನೋ ವಿಶ್ವೇಶೋ ಗಣ ಪೂಜಿತಃ ॥ ೭ ॥

ಶಿವಧ್ಯಾನೈಕ ಸಂಪನ್ನಃ ಸ ಮೇ ಪಾಪಂ ವ್ಯಪೋಽಹತು ।
ಶಿವೋತ್ತಮೋ ಮಹಾ ಪೂಜ್ಯಃ ಶಿವಧ್ಯಾನ ಪರಾಯಣಃ ॥ ೮ ॥

---

ಕಡೆಯಲ್ಲೂ ತಡೆಇಲ್ಲದೆ ಹೋಗುವ, ಶಾಂತನಾಗಿ ಎಲ್ಲರ ರಕ್ಷಣೆಯನ್ನೂ ಮಾಡುವ, ಪದ್ಮಾಸನದಲ್ಲಿ ಕುಳಿತಿರುವ, ಪಾರ್ವತಿಯೊಡಗೂಡಿದ ಶಿವನು ನಮ್ಮ ಪಾಪವನ್ನು ಜಾಗ್ರತೆಯಾಗಿ ನಾಶಮಾಡಲಿ.

೫. ಈಶಾನನೂ, ಪುರುಷನೂ, ಅಘೋರನೂ, ಸದ್ಯೋಜಾತನೂ, ವಾಮ ದೇವನೂ, ಆದ ಭಗವಂತನಾದ ಈಶ್ವರನು ನಮ್ಮ ಪಾಪವನ್ನು ಜಾಗ್ರತೆಯಾಗಿ ನಾಶಮಾಡಲಿ.

೬. ಅನಂತನೂ, ಎಲ್ಲ ವಿದ್ಯೆಗಳಿಗೂ, ಒಡೆಯನೂ, ಎಲ್ಲ ವಿಷಯ ಗಳನ್ನೂ ತಿಳಿದವನೂ, ಎಲ್ಲರ ಇಷ್ಟಗಳನ್ನೂ ಕೊಡುವವನೂ, ಎಲ್ಲರಿಗೂ ಸ್ವಾಮಿಯೂ, ಶಿವಧ್ಯಾನದಲ್ಲೇ ಆಸಕ್ತನೂ ಆದ ಶಿವನು ನನ್ನ ಎಲ್ಲಾ ಪಾಪಗಳನ್ನೂ ನಾಶಮಾಡಲಿ.

೭. ಸೂಕ್ಷ್ಮರೂಪನೂ, ದೇವಾಸುರರಿಗೆ ಒಡೆಯನೂ, ಪ್ರಪಂಚಕ್ಕೆ ಅಧಿಪತಿಯೂ, ಪ್ರಮಥ ಗಣಗಳಿಂದ ಪೂಜಿಸಲ್ಪಡುವವನೂ, ಶಿವಧ್ಯಾನ ದಲ್ಲೇ ಆಸಕ್ತನೂ ಆದ ಶಿವನು ನನ್ನ ಪಾಪಗಳನ್ನು ನಾಶಮಾಡಲಿ.

೮. ಈಶ್ವರರಲ್ಲೆಲ್ಲಾ ಉತ್ತಮನಾದ, ಅತ್ಯಂತ ಪೂಜ್ಯನೂ, ಶಿವಧ್ಯಾನದಲ್ಲಿ ಆಸಕ್ತನೂ, ಎಲ್ಲೆಲ್ಲೂ ತಡೆಯಿಲ್ಲದೇ ಹೋಗತಕ್ಕವನೂ,

ಸರ್ವಗಃ ಸರ್ವದಃ ಶಾಂತಃ ಸ ಮೇ ಪಾಪಂ ವ್ಯಪೋಹತು ।
ಏಕಾಕ್ಷೋ ಭಗವಾನೀಶೋ ಶಿವಾರ್ಚನ ಪರಾಯಣಃ ॥ ೯ ॥

ಶಿವಧ್ಯಾನೈಕ ಸಂಪನ್ನಃ ಸ ಮೇ ಪಾಪಂ ವ್ಯಪೋಹತು ।
ತ್ರಿಮೂರ್ತಿಃ ಭಗವಾನೀಶಃ ಶಿವಭಕ್ತಿ ಪ್ರಬೋಧಕಃ ॥೧೦॥

ಶಿವಧ್ಯಾನೈಕ ಸಂಪನ್ನಃ ಸ ಮೇ ಪಾಪಂ ವ್ಯಪೋಹತು ।
ಶ್ರೀಕಂಠಃ ಶ್ರೀಪತಿಃ ಶ್ರೀಮಾನ್, ಶಿವಧ್ಯಾನ ರತಃ ಸದಾ ॥೧೧॥

ಶಿವಾರ್ಚನರತಃ ಸಾಕ್ಷಾತ್ ಸ ಮೇ ಪಾಪಂ ವ್ಯಪೋಹತು ।
ಶಿಖಂಡೀ ಭಗವಾನ್ ಶಾಂತಃ ಶವಭಸ್ಮಾನು ಲೇಪನಃ ॥೧೨॥

ಶಿವಾರ್ಚನ ರತಃ ಶ್ರೀಮಾನ್ ಸ ಮೇ ಪಾಪಂ ವ್ಯಪೋಹತು ।
ತ್ರೈಲೋಕ್ಯ ನಮಿತಾ ದೇವೀ ಸೋಲ್ಕಾಕಾರಾ ಪುರಾತನೀ ॥೧೩॥

---

ಎಲ್ಲ ಇಷ್ಟಾರ್ಥಗಳನ್ನೂ ಕೊಡುವವನೂ, ಶಾಂತನೂ ಆದ ಶಿವನು ನನ್ನ ಪಾಪವನ್ನು ನಾಶಮಾಡಲಿ.

೯. ಒಂದೇ ಕಣ್ಣಿರುವವನೂ, ಭಗವಂತನೂ, ಲೋಕಕ್ಕೆ ಪ್ರಭುವೂ ಶಿವಾರ್ಚನೆಯಲ್ಲಿ ಆಸಕ್ತನೂ, ಶಿವಧ್ಯಾನದಲ್ಲೇ ಆಸಕ್ತನೂ, ಆದ ಆ ಶಿವನು ನನ್ನ ಪಾಪಗಳನ್ನು ನಾಶಮಾಡಲಿ.

೧೦. ಬ್ರಹ್ಮ, ವಿಷ್ಣು, ಮಹೇಶ್ವರರ ಸ್ವರೂಪನೂ, ಭಗವಂತನೂ, ಲೋಕಕ್ಕೆ ಒಡೆಯನೂ, ಶಿವನಲ್ಲಿ ಭಕ್ತಿಯನ್ನು ಹುಟ್ಟಿಸುವವನೂ, ಶಿವ ಧ್ಯಾನದಲ್ಲೇ ಆಸಕ್ತನಾದ ದೇವನು ನಮ್ಮ ಪಾಪವನ್ನು ನಾಶಮಾಡಲಿ

೧೧. ಶ್ರೀಕಂಠನೂ, ಶ್ರೀಪತಿಯೂ, ದೇವಧ್ಯಾನದಲ್ಲೇ ಯಾವಾಗಲೂ ಆಸಕ್ತನೂ, ಶಿವ ಪೂಜೆಯನ್ನು ಮಾಡುವುದರಲ್ಲಿ ಇಷ್ಟವುಳ್ಳವನೂ, ಆದ, ಪ್ರತ್ಯಕ್ಷನಾದ ಶಿವನು, ನನ್ನ ಪಾಪವನ್ನು ನಾಶಮಾಡಲಿ.

೧೨. ಶಿಖಂಡಿಯೂ, ಶಾಂತನೂ, ಶವಭಸ್ಮವನ್ನು ಬಳಿದುಕೊಳ್ಳುವವನೂ, ಶಿವನ ಪೂಜೆಯಲ್ಲಿ ಆಸಕ್ತನೂ, ಶ್ರೀಮಂತನೂ, ಆದ ಭಗವಾನ್ ಶಿವನು ನಮ್ಮ ಪಾಪವನ್ನು ನಾಶಮಾಡಲಿ.

೧೩. ಮೂರು ಲೋಕಕ್ಕೂ ನಮಸ್ಕಾರಾರ್ಹಳಾದ, ಮಿಂಚಿನ ಪ್ರಕಾಶ

**ದಾಕ್ಷಾಯಣೀ ಮಹಾದೇವೀ ಗೌರೀ ಹೈಮವತೀ ಶುಭಾ ।**
**ಏಕ ಪರ್ಣಾಗ್ರಜಾ ಸೌಮ್ಯಾ ತಥಾ ವೈ ಚೈಕ ಪಾಟಲಾ ॥೧೪॥**
**ಅಪರ್ಣಾ ವರದಾ ದೇವೀ ವರದಾನೈಕ ತತ್ಪರಾ ।**
**ಉಮಾ ಸುರಹರಾ ಸಾಕ್ಷಾತ್ಕೌಶಿಕೀ ವಾ ಕಪರ್ದಿನೀ ॥೧೫॥**
**ಖಟ್ವಾಂಗ ಧಾರಿಣೀ ದಿವ್ಯಾ ಕರಾಗ್ರ ತರು ಪಲ್ಲವಾ ।**
**ನೈಗ ಮೇಯಾದಿಭಿ ರ್ದಿವ್ಯೈಶ್ಚತುರ್ಭಿಃ ಪುತ್ರಕೈರ್ವೃತಾ ॥೧೬॥**
**ಮೇನಾಯಾ ನಂದಿನೀ ದೇವೀ ವಾರಿಜಾ ವಾರಿಜೇಕ್ಷಣಾ ।**
**ಅಂಬಾಯಾ ವೀತಶೋಕಸ್ಯ ನಂದಿನಶ್ಚ ಮಹಾತ್ಮನಃ ॥೧೭॥**
**ಶೋಭಾವತ್ಯಾಃ ಸಖೀ ಶಾಂತಾ ಪಂಚ ಚೂಡಾ ವರಪ್ರದಾ ।**
**ಸೃಷ್ಟ್ಯರ್ಥಂ ಸರ್ವ ಭೂತಾನಾಂ ಪ್ರಕೃತಿತ್ವಂ ಗತಾಽವ್ಯಯಾ ॥೧೮॥**

---

ದಂತೆ ಪ್ರಕಾಶಿಸುತ್ತಿರುವ, ಪುರಾತನಳಾದ, ಮಂಗಳಪ್ರದೆಯೂ, ಮಹಾದೇವಿಯೂ, ಹಿಮವಂತನ ಮಗಳೂ ಆದ ದಾಕ್ಷಾಯಣಿಯೂ,

೧೪–೧೬. ಏಕಪರ್ಣೆಯೆಂಬ ತನ್ನ ಅಕ್ಕನಸ್ವರೂಪಳೂ, ಏಕಪಾಟಲಾ ಎಂಬ ತನ್ನತಂಗಿಯ ಸ್ವರೂಪಳೂ, ಆಗಿರುವ ಸೌಮ್ಯಳಾದ ಪಾರ್ವತಿಯೂ, ವರವನ್ನು ಕೊಡುವವಳೂ, ವರವನ್ನು ಕೊಡುವುದರಲ್ಲಿಯೇ ಆಸಕ್ತಳೂ ಆಗಿರುವ, ಉಮೆಯೂ, ದೇವತೆಗಳ ಸಂಕಟವನ್ನು ನಾಶಮಾಡುವವಳೂ, ಪ್ರತ್ಯಕ್ಷವಾದ ಕೌಶಿಕಿಯೂ, ಕಪರ್ದಿನಿಯೂ, ಖಟ್ವಾಂಗವನ್ನು ಧರಿಸಿದವಳೂ, ಕೈಯ್ಯಲ್ಲಿ ಶಿವನ ಪೂಜೆಗೋಸ್ಕರವಾಗಿ, ಬಿಲ್ವವೃಕ್ಷದ ಚಿಗುರುಗಳನ್ನು ಹಿಡಿದಿರುವವಳೂ ಅಥವಾ ಮರದ ಚಿಗುರಿನಂತೆ ಮೃದುವಾಗಿಯೂ, ಕೆಂಪಾಗಿಯೂ ಇರುವ ಅಂಗೈಯ್ಯನ್ನುಳ್ಳವಳೂ, ನೈಗಮೇಯರೇ ಮೊದಲಾದ ನಾಲ್ಕುಜನ ಪುತ್ರರಿಂದ ಕೂಡಿರುವವಳೂ ಆದ ಪಾರ್ವತಿಯೂ,

೧೭. ಹಿಮವಂತನ ಹೆಂಡಿತಿಯಾದ ಮೇನಾದೇವಿಯ ಮಗಳೂ, ಕಮಲದಂತೆ ಕಣ್ಣುಳ್ಳವಳೂ, ದುಃಖ ವಿಲ್ಲದಿರುವ ಮಹಾತ್ಮನಾದ ನಂದಿಯ ತಾಯಿಯೂ ಆದ ಪಾರ್ವತಿಯು ನಮ್ಮ ಪಾಪಗಳನ್ನು ನಾಶ ಮಾಡಲಿ.

೧೮–೧೯. ಶೋಭಾವತೀ ಎಂಬ ತನ್ನ ಸಖಿಗೆ ಪ್ರಿಯಕರಳಾಗಿಯೂ, ಶಾಂತ ಸ್ವಭಾವವುಳ್ಳವಳಾಗಿಯೂ, ತಲೆಯಲ್ಲಿ ಐದು ಬಗೆಯ ಕೂದ

ತ್ರಯೋ ವಿಂಶತಿ ಭಿಸ್ತತ್ತ್ವೈ ರ್ಮಹದಾದ್ಯೈರ್ವಿಜ್ಯಂ ಭಿತಾ ।
ಲಕ್ಷ್ಮ್ಯಾದಿ ಶಕ್ತಿಭಿ ರ್ನಿತ್ಯಂ ನಮಿತಾ ನಂದ ನಂದಿನೀ ॥೧೯॥

ಮನೋನ್ಮನೀ ಮಹಾದೇವೀ ಮಾಯಾವೀ ಮಂಡನ ಪ್ರಿಯಾ ।
ಮಾಯಯಾ ಯಾ ಜಗತ್ಸರ್ವಂ ಬ್ರಹ್ಮಾದ್ಯಂ ಸಚರಾಚರಂ ॥೨೦॥

ಕ್ಷೋಭಿಣೀ ಮೋಹಿನೀ ನಿತ್ಯಂ ಯೋಗಿನಾಂ ಹೃದಿ ಸಂಸ್ಥಿತಾ ।
ಏಕಾಽನೇಕ ಸ್ಥಿತಾ ಲೋಕೇ ಇಂದೀವರ ನಿಭೇಕ್ಷಣಾ ॥೨೧॥

ಭಕ್ತ್ಯಾ ಪರಮಯಾ ನಿತ್ಯಂ ಸರ್ವ ದೇವೈ ರಭಿಷ್ಟುತಾ ।
ಗಣೇಂದ್ರಾಂ ಭೋಜ ಗರ್ಭೇಂದ್ರ ಯಮ ವಿತ್ತೇಶ ಪೂರ್ವಕೈಃ ॥

ಸಂಸ್ತುತಾ ಜನನೀ ತೇಷಾಂ ಸರ್ವೋಪದ್ರವ ನಾಶಿನೀ ।
ಭಕ್ತಾನಾ ಮಾರ್ತಿಹಾ ಭವ್ಯಾ ಭವ ಭಾವ ವಿನಾಶಿನೀ ॥೨೩॥

---

ಲಿನ ಗಂಟುಳ್ಳವಳಾಗಿಯೂ, ವರವನ್ನು ಕೊಡುವವಳಾಗಿಯೂ, ಪ್ರಾಣಿಗಳನ್ನು ಸೃಷ್ಟಿಸುವುದಕೋಸ್ಕರ ಪ್ರಕೃತಿ ಸ್ವರೂಪಳಾಗಿಯೂ, ನಾಶರಹಿತಳಾಗಿಯೂ, ಮಹತ್ತತ್ವವೇ ಮುಂತಾದ ಮೂವತ್ತು ತತ್ವಗಳಿಂದ ಕೂಡಿ ಪ್ರಕಾಶಿಸುತ್ತಿರುವ, ಲಕ್ಷ್ಮಿಯೇ ಮುಂತಾದ ಶಕ್ತಿ ದೇವತೆಯರಿಂದ ನಿತ್ಯವೂ ನಮಸ್ಕರಿಸಲ್ಪಡುತ್ತಿರುವ, ನಂದನ ಮಗಳಾಗಿಯೂ, ಇರುವ ಪಾರ್ವತಿಯು ನಮ್ಮ ಪಾಪಗಳನ್ನು ನಾಶಮಾಡಲಿ.

೨೦–೨೧. ಭಕ್ತರ ಅಭೀಷ್ಟವನ್ನು ಕೊಡುವ ಮತ್ತು ಭಕ್ತರಿಗೆ ಆನಂದವನ್ನುಂಟುಮಾಡುವ, ಶಿವನ ಪತ್ನಿಯಾದ ಪಾರ್ವತಿಯು ನಮ್ಮ ಪಾಪಗಳನ್ನು ಹೋಗಲಾಡಿಸಲಿ. ಸ್ವೇಚ್ಛೆಯಿಂದ ಜಗತ್ತನ್ನು ರಕ್ಷಿಸುವವಳೂ, ಶ್ರೇಷ್ಠಳಾದ ತಾಯಿಯೂ ಆದ, ಅಲಂಕಾರದಲ್ಲಿ ಪ್ರೀತಿಯುಳ್ಳವಳೂ, ತನ್ನ ಮಾಯೆಯಿಂದಲೇ ಸ್ಥಾವರಜಂಗಮಾತ್ಮಕವಾದ ಬ್ರಹ್ಮನೇ ಮೊದಲಾಗಿರುವ, ಸಮಸ್ತ ಪ್ರಪಂಚವನ್ನೆಲ್ಲವನ್ನೂ ಸೃಷ್ಟಿಸಿದವಳೂ, ಯಾವಾಗಲೂ ದುಷ್ಟರ ಮನಸ್ಸನ್ನು ಕಲಕುವವಳೂ, ಮೋಹಗೊಳಿಸುವ ರೂಪವುಳ್ಳವಳೂ, ಯೋಗಿಗಳ ಮನಸ್ಸಿನಲ್ಲಿ ನೆಲಸಿರುವಳೂ, ಲೋಕದಲ್ಲಿ ಒಂದೇ ಚೈತನ್ಯರೂಪಳಾಗಿಯೂ, ನಾನಾರೂಪವಾಗಿಯೂ, ಇರುವವಳೂ ಕಮಲದಂತೆ ಕಣ್ಣುಗಳುಳ್ಳವಳೂ, ಆದ ಪಾರ್ವತೀ ದೇವಿಯು ನಮ್ಮ ಪಾಪಗಳನೆಲ್ಲವನ್ನೂ ಹೋಗಲಾಡಿಸಲಿ.

೨೨–೨೬. ಎಲ್ಲಾ ದೇವತೆಗಳಿಂದಲೂ, ಬಹಳ ಭಕ್ತಿಯಿಂದ ಪ್ರತಿ

ಭುಕ್ತಿ ಮುಕ್ತಿ ಪ್ರದಾ ದಿವ್ಯಾ ಭಕ್ತಾನಾ ಮಪ್ರಯತ್ನತಃ ।
ಸಾ ಮೇ ಸಾಕ್ಷಾನ್ಮಹಾದೇವೀ ಪಾಪ ಮಾಶು ವ್ಯಪೋಹತು ॥೨೪॥
ಚಂಡಃ ಸರ್ವ ಗಣೇಶಾನೋ ಮುಖಾ ಚ್ಛಂಭೋ ರ್ವಿನಿರ್ಗತಃ ।
ಶಿವಾಽರ್ಚನ ರತಃ ಶ್ರೀಮಾನ್ ಸ ಮೇ ಪಾಪಂ ವ್ಯಪೋಹತು॥೨೫॥
ಶಾಲಂಕಾಯನ ಪುತ್ರಸ್ತು ಹಲ ಮಾರ್ಗೋತ್ಥಿತಃ ಪ್ರಭುಃ ।
ಜಾಮಾತಾ ಮರುತಾಂ ದೇವಃ ಸರ್ವಭೂತ ಮಹೇಶ್ವರಃ ॥೨೬॥
ಸರ್ವಗಃ ಸರ್ವದೃಕ್ ಶರ್ವಃ ಸರ್ವೇಶ ಸದೃಶಃ ಪ್ರಭುಃ ।
ಸನಾರಾಯಣಕ್ಕೈ ರ್ದೇವೈಃ ಸೇಂದ್ರ ಚಂದ್ರ ದಿವಾಕರೈಃ ॥೨೭॥
ಸಿದ್ಧೈಶ್ಚ ಯಕ್ಷಗಂಧರ್ವೈಃ ಭೂತೈ ರ್ಭೂತ ವಿಧಾಯಕೈಃ ।
ಉರಗೈಃ ಋಷಿಭಿಶ್ಚೈವ ಬ್ರಹ್ಮಣಾ ಚ ಮಹಾತ್ಮನಾ ॥೨೮॥

---

ದಿನದಲ್ಲೂ, ಸ್ತೋತ್ರಮಾಡಲ್ಪಟ್ಟ, ಗಣೇಶ, ಬ್ರಹ್ಮ, ಇಂದ್ರ ಯಮ, ಕುಬೇರ, ಮೊದಲಾದವರಿಂದಲೂ ಸ್ತೋತ್ರಮಾಡಲ್ಪಟ್ಟ, ಅವರಿಗೆಲ್ಲ ರಿಗೂ ಕಷ್ಟಗಳನ್ನು ನಿವಾರಣೆ ಮಾಡುವ, ಭಕ್ತರ ಸಂಕಟಗಳನ್ನು ನಾಶ ಮಾಡುವ, ಮಂಗಳಕರಳಾದ, ಸಂಸಾರದ ಮೋಹವನ್ನು ದೂರಮಾಡುವ ಐಹಿಕಾಮುಷ್ಮಿಕ ಭೋಗಗಳುಳ್ಳ ಜೀವನವನ್ನೂ, ಕೊನೆಗೆ ಮೋಕ್ಷ ವನ್ನೂ, ಭಕ್ತರ ಪ್ರಯತ್ನಕ್ಕೆ ಅನುಸರಿಸಿ, ಸಾವಕಾಶವಿಲ್ಲದೆಯೇ ಕೊಡುವ, ಇಂಥಾ ಮಹಾದೇವಿಯು ನಮ್ಮ ಸಕಲ ಪಾಪಗಳನ್ನೂ ನಾಶ ಮಾಡಲಿ. ಎಲ್ಲಾ ಗಣಗಳಿಗೂ ಒಡೆಯನಾದ, ಶಿವನ ಮುಖದಿಂದ ಉತ್ಪನ್ನನಾದ, ಪ್ರಚಂಡನಾದ, ಯಾವಾಗಲೂ ಶಿವನ ಪೂಜೆಯಲ್ಲಿ ಆಸ ಕ್ತನಾದ, ಮಹಾಮಹಿಮನಾದ ಗಣಪತಿಯು ನಮ್ಮ ವಿಘ್ನಗಳನ್ನು ನಾಶಮಾಡಲಿ. ಶಾಲಂಕಾಯನನ ಮಗನಾದ ಉಳುವ ದಾರಿಯಲ್ಲಿ ಹುಟ್ಟಿದ, ಮಹಾಶಕ್ತಿಯುಳ್ಳ, ಮರುತ್ತುಗಳಿಗೆ ಅಳಿಯನಾದ, ಸರ್ವಭೂತ ಗಳಿಗೂ ಒಡೆಯನಾದ, ನಂದೀಶ್ವರನು ನಮ್ಮ ಪಾಪಗಳನ್ನು ಹೋಗಲಾ ಡಿಸಲಿ.

೨೭–೨೯. ಎಲ್ಲಾ ಕಡೆಗಳಲ್ಲಿಯೂ, ಇರುವ ಎಲ್ಲವನ್ನೂ ತಿಳಿಯ ಬಲ್ಲ, ಶಿವನಿಗೆ ಸಮನಾದ, ನಾರಾಯಣನೇ ಮೊದಲಾದ ದೇವತೆ

ಸ್ತುತ ಸ್ತ್ರೈಲೋಕ್ಯ ನಾಥಸ್ತು ಮುನಿ ರಂತಃ ಪುರ ಸ್ಥಿತಃ ।
ಸರ್ವದಾ ಪೂಜಿತಃ ಸರ್ವೈ ರ್ನಂದೀ ಪಾಪಂ ವ್ಯಪೋಹತು ॥೨೯॥

ಮಹಾಕಾಯೋ ಮಹಾತೇಜಾ ಮಹಾದೇವ ಇವಾಽಪರಃ।
ಶಿವಾರ್ಚನ ರತಃ ಶ್ರೀಮಾನ್ ಸ ನೋ ಪಾಪಂ ವ್ಯಪೋಹತು ॥೩೦॥

ಮೇರು ಮಂದಾರ ಕೈಲಾಸ ತಟ ಕೋಟಿ ಪ್ರಭೇದನಃ ।
ಐರಾವತಾದಿಭಿ ರ್ದಿವ್ಯೈ ರ್ದಿಗ್ಗಜೈಶ್ಚ ಸುಪೂಜಿತಃ ॥೩೧॥

ಸಪ್ತ ಪಾತಾಳ ಪಾದಶ್ಚ ಸಪ್ತದ್ವೀಪೋರು ಜಂಘಕಃ ।
ಸಪ್ತಾಽರ್ಣವಾಂಕುಶ ಶ್ಚೈವ ಸರ್ವ ತೀರ್ಥೋದರಃ ಶಿವಃ ॥೩೨॥

ಆಕಾಶ ದೇಹೋ ದಿಗ್ಬಾಹುಃ ಸೋಮ ಸೂರ್ಯಾಗ್ನಿ ಲೋಚನಃ ।
ಹತಾಽಸುರ ಮಹಾವೃಕ್ಷೋ ಬ್ರಹ್ಮವಿದ್ಯಾ ಮಹೋತ್ಕಟಃ ॥೩೩॥

ಬ್ರಹ್ಮಾದ್ಯಾ ಘೋರಣೈ ರ್ದಿವ್ಯೈ ರ್ಯೋಗ ಪಾಶ ಸಮನ್ವಿತೈಃ ।
ಬದ್ಧೋ ಹೃತ್ಪುಂಡರೀಕಾಽಖ್ಯೇ ಸ್ತಂಭೇ ವೃತ್ತಿಂ ನಿರುಧ್ಯ ಚ ॥೩೪॥

---

ಗಳಿಂದಲೂ, ಇಂದ್ರ, ಚಂದ್ರ, ಸೂರ್ಯ, ಸಿದ್ಧರು, ಯಕ್ಷರು, ಗಂಧರ್ವರು, ಭೂತಗಳು, ಭೂತಗಳನ್ನು ಸೃಷ್ಟಿಮಾಡುವ ವ್ಯಕ್ತಿಗಳು, ಸರ್ಪಗಳು, ಋಷಿಗಳು, ಬ್ರಹ್ಮ, ಇವರೆಲ್ಲರಿಂದಲೂ, ಸ್ತೋತ್ರಮಾಡಲ್ಪಟ್ಟ, ಮೂರು ಲೋಕಗಳಿಗೂ ಒಡೆಯನಾದ, ಧ್ಯಾನಮಾಡುತ್ತಾ ಯಾವಾಗಲೂ ಶಿವನ ಅಂತಃಪುರದಲ್ಲೇ ವಾಸಮಾಡುವ ಎಲ್ಲರಿಂದಲೂ, ಎಲ್ಲಾ ಕಾಲದಲ್ಲಿಯೂ ಪೂಜಿಸಲ್ಪಟ್ಟ, ನಂದೀಶ್ವರನು ನಮ್ಮೆಲ್ಲರ ಪಾಪಗಳನ್ನೂ ಹೋಗಲಾಡಿಸಲಿ.

೩೦–೩೫. ದೊಡ್ಡ ಶರೀರವುಳ್ಳ, ಬಹಳ ತೇಜಸ್ವಿಯಾದ, ಎರಡನೆಯ ಶಿವನೋ ಎಂಬಂತಿರುವ, ಯಾವಾಗಲೂ, ಶಿವಪೂಜೆಯಲ್ಲಿ ಆಸಕ್ತನಾದ, ಮಹಾನುಭಾವನಾದ ನಂದೀಶ್ವರನು ನಮ್ಮ ಪಾಪವನ್ನೆಲ್ಲವನ್ನೂ ಹೋಗಲಾಡಿಸಲಿ. ಮೇರು, ಮಂದರ, ಕೈಲಾಸಗಳ ತಪ್ಪಲು ಪ್ರದೇಶಗಳ ಅಂಚನ್ನು ವಪ್ರಕೇಳಿಯಲ್ಲಿ ಒಡೆಯುವ ಐರಾವತವೇ ಮೊದಲಾದ ದೇವಲೋಕ ಸಂಬಂಧವಾದ, ಅಷ್ಟದಿಗ್ಗಜಗಳೆಂಬ ಆನೆಗಳಿಂದ ಯಾವಾಗಲೂ, ಗೌರವಿಸಲ್ಪಟ್ಟ, ಏಳು ಪಾತಾಳವೇ ಕಾಲುಗಳಾಗುಳ್ಳ, ಏಳು ದ್ವೀಪಗಳೇ ದೊಡ್ಡ ತೋಳುಗಳಾಗಿರುವ, ಎಳು ಸಮುದ್ರಗಳೇ ಅಂಕುಶವಾಗಿ ಹೊಂದಿರುವ, ಎಲ್ಲ ಜಲಗಳೇ ಹೊಟ್ಟೆಯಾಗಿ ಪಡೆದಿರುವ, ಮಂಗಳ

ನಾಗೇಂದ್ರ ವಕ್ತ್ರೋ ಯಃ ಸಾಕ್ಷಾ ದ್ಗಣಕೋಟಿ ಶತೈ ರ್ವೃತಃ ।
ಶಿವಧ್ಯಾನೈಕ ಸಂಪನ್ನಃ ಸ ಮೇ ಪಾಪಂ ವ್ಯಪೋಹತು ॥೩೫॥
ಭೃಂಗೀಶಃ ಪಿಂಗಲಾಽಕ್ಷೋಽಸೌ ಭಸಿತಾಽಶಸ್ತು ದೇಹಯುಕ್ ।
ಶಿವಾಽರ್ಚನ ರತಃ ಶ್ರೀಮಾನ್ ಸ ಮೇ ಪಾಪಂ ವ್ಯಪೋಹತು ॥೩೬॥
ಚತುರ್ಭಿಃ ತನುಭಿಃ ನಿತ್ಯಂ ಸರ್ವಾ ಸುರ ನಿಬರ್ಹಣಃ ।
ಸ್ಕಂದಃ ಶಕ್ತಿಧರಃ ಶಾಂತಃ ಸೇನಾನೀಃ ಶಿಖಿವಾಹನಃ ॥೩೭॥
ದೇವ ಸೇನಾಪತಿಃ ಶ್ರೀಮಾನ್ ಸ ಮೇ ಪಾಪಂ ವ್ಯಪೋಹತು ।
ಭವಃ ಶರ್ವಃ ತಥೇ ಶಾನೋ ರುದ್ರಃ ಪಶುಪತಿಃ ತಥಾ ॥೩೮॥

---

ಕರನಾದ ನಂದೀಶ್ವರನು ನಮ್ಮನ್ನು ಕಾಪಾಡಲಿ. ಆಕಾಶವೇ ದೇಹವಾಗಿರುವ, ದಿಕ್ಕುಗಳೇ ತೋಳುಗಳಾಗಿ ರಾಜಿಸುವ, ಸೂರ್ಯ, ಚಂದ್ರ, ಅಗ್ನಿ ಇವರೇ ಕಣ್ಣುಗಳಾಗಿಉಳ್ಳ, ರಾಕ್ಷಸರೆಂಬ ದೊಡ್ಡ ಮರಗಳನ್ನು ನಾಶಮಾಡುವ, ಬ್ರಹ್ಮವಿದ್ಯೆಯನ್ನು ಚೆನ್ನಾಗಿ ಅರಿತಿರುವ, ಯೋಗವೆಂಬ ಹಗ್ಗಗಳನ್ನು ಹಿಡಿದಿರುವ, ದಿವ್ಯವಾದ ಬ್ರಹ್ಮನೇ ಮೊದಲಾದ ಮಾಪಟಗರಿಂದ ಕೂಡಿರುವ, ಇವರಿಂದ ಮನಸ್ಸೆಂಬ ಕಮಲಕಂಬಕ್ಕೆ ಅದರ ಚಲನೆಯನ್ನು ನಿಲ್ಲಿಸಿ, ಕಟ್ಟಲ್ಪಡುವ, ಕೋಟ್ಯಾಂತರ ಸಂಖ್ಯೆಯ ಪ್ರಮಥಗಣಗಳಿಂದ ಕೂಡಿ, ಶ್ರೇಷ್ಠವಾದ ಆನೆಯ ಮುಖದಿಂದ ಶೋಭಿಸುತ್ತಿರುವ, ಶಿವಧ್ಯಾನಮಾಡುವುದರಲ್ಲೇ ಆಸಕ್ತನಾದ ಗಣೇಶನು ನಮ್ಮ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೩೬—೩೮. ಹೊಂಬಣ್ಣವಾದ ಕಣ್ಣುಗಳುಳ್ಳ, ಬೂದಿಯನ್ನೇ ಭಕ್ಷಣಮಾಡುವ, ಶ್ರೇಷ್ಠವಾದ ದೇಹವನ್ನು ಧರಿಸಿರುವ, ಶಿವನ ಪೂಜೆಯಲ್ಲಿ ಆಸಕ್ತನಾದ, ಮಹಾನುಭಾವನಾದ ನಂದೀಶ್ವರನು ನನ್ನ ಪಾಪವನ್ನು ನಾಶಮಾಡಲಿ. ಎಲ್ಲಾ ರಾಕ್ಷಸರನ್ನೂ ನಾಶಮಾಡಿದ, ಶಕ್ತಿಯೆಂಬ ಆಯುಧವನ್ನು ಹಿಡಿದಿರುವ, ಶಾಂತಸ್ವರೂಪನೂ ಮತ್ತು ಸೇನಾಧಿಪತಿಯೂ, ಆದ, ನವಿಲಿನ ಮೇಲೆ ಕೂತಿರುವ, ದೇವತೆಗಳಿಗೆಲ್ಲರಿಗೂ ಸೇನಾಧಿಪತಿಯಾದ, ನಾಲ್ಕು ದೇಹಗಳನ್ನು ಹೊಂದಿರುವ, ಮಹಾನುಭಾವನಾದ ಷಣ್ಮುಖನು, ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

ಉಗ್ರೋ ಭೀಮೋ ಮಹಾದೇವಃ ಶಿವಾಽರ್ಚನರತಃ ಸದಾ ।
ಏತಾಃ ಪಾಪಂ ವ್ಯಪೋಹಂತು ಮೂರ್ತಯಃ ಪರಮೇಷ್ಠಿನಃ ॥೩೯॥

ಮಹಾದೇವಃ ಶಿವೋ ರುದ್ರಃ ಶಂಕರೋ ನೀಲ ಲೋಹಿತಃ ।
ಈಶಾನೋ ವಿಜಯೋ ಭೀಮೋ ದೇವದೇವೋ ಭವೋದ್ಭವಃ ॥೪೦॥

ಕಪಾಲೀಶಶ್ಚ ವಿಜ್ಞೇಯೋ ರುದ್ರಾ ರುದ್ರಾಂಶ ಸಂಭವಾಃ ।
ಶಿವ ಪ್ರಣಾಮ ಸಂಪನ್ನಾ ವ್ಯಪೋಹಂತು ಮಲಂ ಮಮ ॥೪೧॥

ವಿಕರ್ತನೋ ವಿವಸ್ವಾಂ ಶ್ಚ ಮಾರ್ತಂಡೋ ಭಾಸ್ಕರೋ ರವಿಃ ।
ಲೋಕ ಪ್ರಕಾಶಕ ಶ್ಚೈವ ಲೋಕಸಾಕ್ಷೀ ತ್ರಿವಿಕ್ರಮಃ ॥೪೨॥

ಆದಿತ್ಯಶ್ಚ ತಥಾ ಸೂರ್ಯ ಶ್ಚಾಂಶುಮಾಂಶ್ಚ ದಿವಾಕರಃ ।
ಏತೇ ವೈ ದ್ವಾದಶಾಽದಿತ್ಯಾ ವ್ಯಪೋಹಂತು ಮಲಂ ಮಮ ॥೪೩॥

---

ಭವ, ಶರ್ವ, ಈಶಾನ, ರುದ್ರ, ಪಶುಪತಿ, ಉಗ್ರ, ಭೀಮ, ಶಿವನ ಪೂಜೆಯಲ್ಲಿ ಆಸಕ್ತನಾದ ಮಹಾದೇವ, ಮೊದಲಾದ ಶಿವನ ಬೇರೆ ಬೇರೆ ಮೂರ್ತಿಗಳು ನನ್ನ ಪಾಪವನ್ನೆಲ್ಲವನ್ನೂ ಹೋಗಲಾಡಿಸಲಿ,

೪೦. ಮಹಾದೇವ, ಶಿವ, ರುದ್ರ, ಶಂಕರ, ನೀಲಲೋಹಿತ, ಈಶಾನ, ವಿಜಯ, ಭೀಮ, ದೇವದೇವ, ಭವೋದ್ಭವ, ಕಪಾಲೀಶ, ಇವರು ರುದ್ರನ ಅಂಶದಿಂದ ಹುಟ್ಟಿರುವರೆಂಬುದಾಗಿ ತಿಳಿಯಬೇಕು. ಪರಶಿವನನ್ನು ಪೂಜಿಸುವ ಏಕಾದಶರುದ್ರಸ್ವರೂಪರಾದ ಇವರೆಲ್ಲರೂ ನನ್ನ ಪಾಪಗಳನ್ನು ಹೋಗಲಾಡಿಸಲಿ.

೪೧.–೪೩. ವಿಕರ್ತನ, ವಿವಸ್ವಾನ್, ಮಾರ್ತಂಡ, ಭಾಸ್ಕರ, ರವಿ, ಲೋಕಪ್ರಕಾಶಕ, ಲೋಕಸಾಕ್ಷೀ, ತ್ರಿವಿಕ್ರಮ, ಆದಿತ್ಯ, ಸೂರ್ಯ, ಅಂಶುಮಾನ್, ದಿವಾಕರ, ಎಂಬ ಈ ಹನ್ನೆರಡು ರೂಪವುಳ್ಳ ದ್ವಾದಶಾದಿತ್ಯರೆಂದು ಪ್ರಸಿದ್ಧರಾಗಿರುವ ಸೂರ್ಯರೂ ನನ್ನ ಪಾಪವನ್ನು ಹೋಗಲಾಡಿಸಲಿ.

ಗಗನಂ ಸ್ಪರ್ಶನಂ ತೇಜೋ ರಸಶ್ಚ ಪೃಥಿವೀ ತಥಾ ।
ಚಂದ್ರಃ ಸೂರ್ಯ ಸ್ತಥಾಽತ್ಮಾ ಚ ತನವಃ ಶಿವಭಾಷಿತಾಃ ॥೪೪॥
ಪಾಪಂ ವ್ಯಪೋಹಂತು ಮಮ ಭಯಂ ನಿರ್ನಾಶಯಂತು ಮೇ ।
ವಸವಃ ಪಾವಕ ಶ್ಚೈವ ಯಮೋ ನಿಋೃತಿ ರೇವ ಚ ॥೪೫॥
ವರುಣೋ ವಾಯು ಸೋಮೌ ಚ ಈಶಾನೋ ಭಗವಾನ್ ಹರಿಃ ।
ಪಿತಾಮಹಶ್ಚ ಭಗವಾನ್ ಶಿವಧ್ಯಾನ ಪರಾಯಣಃ ॥೪೬॥
ಏತೇ ಪಾಪಂ ವ್ಯಪೋಹಂತು ಮನಸಾ ಕರ್ಮಣಾ ಕೃತಂ ।
ನಭಸ್ವಾನ್ ಸ್ಪರ್ಶನೋ ವಾಯು ರನಿಲೋ ಮಾರುತ ಸ್ತಥಾ ॥೪೭॥
ಪ್ರಾಣಃ ಪ್ರಾಣೇಶ ಜೀವೇಶೌ ಮಾರುತಃ ಶಿವ ಭಾಷಿತಾಃ ।
ಶಿವಾಽರ್ಚನ ರತಾಃ ಸರ್ವೇ ವ್ಯಪೋಹಂತು ಮಲಂ ಮಮ ॥೪೮॥

---

೪೪–೪೫. ಆಕಾಶ, ವಾಯು, ಅಗ್ನಿ, ನೀರು, ಭೂಮಿ, ಚಂದ್ರ, ಸೂರ್ಯ, ಎಂಬ ಶಿವನಿಂದ ಪುರಸ್ಕರಿಸಲ್ಪಟ್ಟ, ಅಷ್ಟಮೂರ್ತಿಸ್ವರೂಪನಾದ ಆ ದೇವನ ಅಂಶಾವತಾರಗಳು ನನ್ನ ಪಾಪಗಳನ್ನೂ ಮತ್ತು ಭಯವನ್ನೂ ಹೋಗಲಾಡಿಸಲಿ.

೪೬. ಇಂದ್ರ, ಅಗ್ನಿ, ಯಮ, ನಿಋೃತಿ, ವರುಣ, ವಾಯು, ಚಂದ್ರ, ಈಶಾನ, ಪೂಜ್ಯನಾದ ವಿಷ್ಣು, ಮಹಾಮಹಿಮ ಮತ್ತು ಶಿವಧ್ಯಾನದಲ್ಲಿ ಆಸಕ್ತನಾದ ಬ್ರಹ್ಮ, ಎಂಬ ದಶದಿಕ್ಪಾಲಕರಾದ ಇವರೂ, ನಾನು ಮನಸ್ಸಿನಿಂದಲೂ, ಕೆಲಸದಿಂದಲೂ, ಮಾಡಿರುವ ಸಕಲ ಪಾಪಗಳನ್ನೂ ಹೋಗಲಾಡಿಸಲಿ,

೪೭–೪೮. ನಭಸ್ವಾನ್, ಸ್ಪರ್ಶನ, ವಾಯು, ಅನಿಲ, ಮಾರುತ, ಪ್ರಾಣ, ಪ್ರಾಣೇಶ, ಜೀವೇಶ ಎಂಬ, ಶಿವನನ್ನು ಪೂಜಿಸುವ, ಶಿವನಿಂದ ಪುರಸ್ಕರಿಸಲ್ಪಟ್ಟ ವಾಯುಗಳು ನನ್ನ ಪಾಪಗಳೆಲ್ಲವನ್ನೂ ಹೋಗಲಾಡಿಸಲಿ.

ಖೇಚರೀ ವಸುಚಾರೀ ಚ ಬ್ರಹ್ಮೇಶೋ ಬ್ರಹ್ಮಬ್ರಹ್ಮಧೀಃ ।
ಸುಷೇಣಃ ಶಾಶ್ವತಃ ಪುಷ್ಟಃ ಸುಪುಷ್ಟಶ್ಚ ಮಹಾಬಲಃ ॥೪೯॥
ಏತೇ ವೈ ಚಾರಣಾಃ ಶಂಭೋಃ ಪೂಜಯಾಽತೀವ ಭಾವಿತಾಃ ।
ವ್ಯಪೋಹಂತು ಮಲಂ ಸರ್ವಂ ಪಾಪಂ ಚೈವ ಮಯಾ ಕೃತಂ ॥೫೦॥
ಮಂತ್ರಜ್ಞೋ ಮಂತ್ರ ವಿತ್ಪ್ರಾಜ್ಞೋ ಮಂತ್ರರಾ ಟ್ಸಿದ್ಧ ಪೂಜಿತಃ ।
ಸಿದ್ಧವ ತ್ಪರಮಃ ಸಿದ್ಧಃ ಸರ್ವ ಸಿದ್ಧಿ ಪ್ರದಾಯಿನಃ ॥೫೧॥
ವ್ಯಪೋಹಂತು ಮಲಂ ಸರ್ವೇ ಸಿದ್ಧಾಃ ಶಿವ ಪದಾಽರ್ಚಕಾಃ ।
ಯಕ್ಷೋ ಯಕ್ಷೇಶ ಧನದೋ ಜೃಂಭಕೋ ಮಣಿಭದ್ರಕಃ ॥೫೨॥
ಪೂರ್ಣ ಭದ್ರೇಶ್ವರೋ ಮಾಲೀ ಶಿತಿ ಕುಂಡಲಿ ರೇವ ಚ ।
ನರೇಂದ್ರ ಶ್ಚೈವ ಯಕ್ಷೇಶಾ ವ್ಯಪೋಹಂತು ಮಲಂ ಮಮ ॥೫೩॥

---

೪೯. ಖೇಚರೀ, ವಸುಚಾರೀ, ಬ್ರಹ್ಮೇಶ, ಬ್ರಹ್ಮ, ಬ್ರಹ್ಮಧೀ, ಸುಷೇಣ, ಶಾಶ್ವತ, ಪುಷ್ಟ, ಸುಪುಷ್ಟ, ಮಹಾಬಲರೆಂಬ ಚಾರಣರೆಂದು ಪ್ರಸಿದ್ಧರಾಗಿರುವ ದೇವತೆಗಳು ಶಿವಪೂಜೆಯಿಂದ ಉಂಟಾದ ಬಹಳ ಮಹಿಮೆಯಿಂದ ಕೂಡಿದ್ದಾರೆ. ಇವರು ನನ್ನ ಪಾಪಗಳನ್ನು ಹೋಗಲಾಡಿಸಲಿ.

೫೦–೫೧. ನನ್ನ ಅಶುದ್ಧವಾದ ಮನಸ್ಸನ್ನೂ ಶುದ್ಧಿಗೊಳಿಸಲಿ. ಮಂತ್ರಜ್ಞ, ಮಂತ್ರವಿತ್, ಪ್ರಾಜ್ಞ, ಮಂತ್ರರಾಟ್, ಸಿದ್ಧ ಪೂಜಿತ, ಸಿದ್ಧವತ್, ಪರಮ, ಸಿದ್ಧ, ಸರ್ವಸಿದ್ಧಿಪ್ರದಾಯೀ ಈ ದೇವತೆಗಳೂ ನನ್ನ ಪಾಪವನ್ನು ತಪ್ಪದೆ ಹೋಗಲಾಡಿಸಲಿ,

೫೨–೫೩. ಶಿವನ ಪಾದವನ್ನು ಪೂಜಿಸುವ ಎಲ್ಲಾ ಸಿದ್ಧರೂ, ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ. ಯಕ್ಷ, ಯಕ್ಷೇಶ, ಧನದ, ಜೃಂಭಕ, ಮಣಿಭದ್ರಕ, ಪೂರ್ಣಭದ್ರ, ಈಶ್ವರ, ಮಾಲಿ, ಶಿತಿಕುಂಡಲಿ, ನರೇಂದ್ರ, ಇವರೆಲ್ಲರೂ, ನನ್ನ ಪಾಪಗಳನ್ನು ಹೋಗಲಾಡಿಸಲಿ.

ಅನಂತಃ ಕುಲಿಕ ಶ್ಚೈವ ವಾಸುಕಿ ಸ್ತಕ್ಷಕ ಸ್ತಥಾ ।
ಕರ್ಕೋಟಕೋ ಮಹಾಪದ್ಮಃ ಶಂಖ ಪಾಲೋ ಮಹಾಬಲಃ ॥೫೪॥

ಶಿವ ಪ್ರಣಾಮ ಸಂಪನ್ನಾಃ ಶಿವದೇಹ ಪ್ರಭೂಷಣಾಃ ।
ಮಮ ಪಾಪಂ ವ್ಯಪೋಹಂತು ವಿಷಂ ಸ್ಥಾವರ ಜಂಗಮಂ ॥೫೫॥

ವೀಣಾಜ್ಞಃ ಕಿನ್ನರ ಶ್ಚೈವ ಸುರಸೇನಃ ಪ್ರಮರ್ದನಃ ।
ಅತೀಶಯಃ ಸ ಪ್ರಯೋಗೀ ಗೀತಜ್ಞ ಶ್ಚೈವ ಕಿನ್ನರಾಃ ॥೫೬॥

ಶಿವಪ್ರಣಾಮ ಸಂಪನ್ನಾ ವ್ಯಪೋಹಂತು ಮಲಂ ಮಮ ।
ವಿದ್ಯಾಧರಶ್ಚ ವಿಬುಧೋ ವಿದ್ಯಾರಾಶಿ ರ್ವಿದಾಂ ವರಃ ॥೫೭॥

ವಿಬುದ್ಧೋ ವಿಬುಧಃ ಶ್ರೀಮಾನ್ ಕೃತಜ್ಞಶ್ಚ ಮಹಾಯಶಾಃ ।
ಏತೇ ವಿದ್ಯಾಧರಾಃ ಸರ್ವೇ ಶಿವಧ್ಯಾನ ಪರಾಯಣಾಃ ॥೫೮॥

---

೫೪. ಅನಂತ, ಕುಲಿಕ, ವಾಸುಕಿ, ತಕ್ಷಕ, ಕರ್ಕೋಟಕ, ಮಹಾಪದ್ಮ, ಶಂಖಪಾಲಿ, ಮಹಾಬಲ, ಮುಂತಾದ, ಶಿವನನ್ನು ಪೂಜಿಸುವ ಸರ್ಪ ದೇವತೆಗಳೆಲ್ಲರೂ ನನ್ನ ಪಾಪಗಳನ್ನು ಹೋಗಲಾಡಿಸಲಿ.

೫೫. ಮತ್ತು ಶಿವನ ಶರೀರಕ್ಕೆ ಅಲಂಕಾರಗಳಾದ, ಈ ಸರ್ಪಗಳೆಲ್ಲವೂ, ಚರಾಚರ ವಸ್ತುಗಳಿಂದ ಉಂಟಾಗುವ, ವಿಷವನ್ನು ನಾಶ ಮಾಡಲಿ.

೫೬. ವೀಣೆಯನ್ನು ಚೆನ್ನಾಗಿ ಕಲಿತಿರುವ, ಕಿನ್ನರರೂ, ಸುರಸೇನ, ಪ್ರಮರ್ದನ, ಅತೀಶಯ, ಪ್ರಯೋಗೀ, ಸಂಗೀತಜ್ಞರಾದ ಈ ಕಿನ್ನರರೂ, ಶಿವನ ಪೂಜೆಯಲ್ಲಿ ಆಸಕ್ತಿಯುಳ್ಳ ಇವರೆಲ್ಲರೂ ನನ್ನ ಮನಸ್ಸಿನ ಕಲ್ಮಷವನ್ನೆಲ್ಲವನ್ನೂ ಹೋಗಲಾಡಿಸಲಿ.

೫೭. ವಿದ್ಯಾಧರ, ವಿಬುಧ, ವಿದ್ಯಾರಾಶಿ, ವಿದಾಂವರ, ಮುಂತಾದ ಶಿವಪೂಜೆಮಾಡುವ ವಿದ್ಯಾಧರರೂ, ನನ್ನ ಪಾಪಗಳನ್ನೆಲ್ಲವನ್ನೂ ನಾಶಮಾಡಲಿ.

೫೮. ವಿಬುದ್ಧ, ವಿಬುಧ, ಶ್ರೀಮಾನ್, ಕೃತಜ್ಞ, ಮಹಾಯಶ, ಎಂಬ ವಿದ್ಯಾಧರರೆಲ್ಲರೂ ಶಿವನ ಆರಾಧನೆ ಮಾಡುವವರು. ಇವರು ಶಿವಪ್ರಸಾದದಿಂದ ನನ್ನ ಮನಸ್ಸಿನ ಕಲ್ಮಷವನ್ನೆಲ್ಲವನ್ನೂ ನಾಶ ಮಾಡಲಿ.

ವ್ಯಪೋಹಂತು ಮಲಂ ಘೋರಂ ಮಹಾದೇವ ಪ್ರಸಾದತಃ ।
ವಾಮದೇವೀ ಮಹಾಜಂಭಃ ಕಾಲನೇಮಿ ರ್ಮಹಾಬಲಃ ॥೫೯॥

ಸುಗ್ರೀವೋ ಮರ್ದಕ ಶ್ಚೈವ ಪಿಂಗಲೋ ದೇವ ಮರ್ದನಃ ।
ಪ್ರಹ್ಲಾದ ಶ್ಚಾಽಪ್ಯನುಹ್ಲಾದಃ ಸಂಹ್ಲಾದಃ ಕಿಲ ಬಾಷ್ಕಲೌ ॥೬೦॥

ಜಂಭಃ ಕುಂಭಶ್ಚ ಮಾಯಾವೀ ಕಾರ್ತವೀರ್ಯಃ ಕೃತಂ ಜಯಃ ।
ಏತೇಽಸುರಾ ಮಹಾತ್ಮಾನೋ ಮಹಾದೇವ ಪರಾಯಣಾಃ ॥೬೧॥

ವ್ಯಪೋಹಂತು ಭಯಂ ಘೋರ ಮಾಸುರಂ ಭಾವ ಮೇವ ಚ ।
ಗರುತ್ಮಾನ್ ಖಗತಿ ಶ್ಚೈವ ಪಕ್ಷಿರಾ ಟ್ನಾಗ ಮರ್ದನಃ ॥೬೨॥

ನಾಗ ಶತ್ರು ರ್ಹಿರಣ್ಯಾಂಗೋ ವೈನತೇಯಃ ಪ್ರಭಂಜನಃ ।
ನಾಗಾಶೀ ರ್ವಿಷ ನಾಶಶ್ಚ ವಿಷ್ಣುವಾಹನ ಏವ ಚ ॥೬೩॥

ಏತೇ ಹಿರಣ್ಯ ವರ್ಣಾಭಾ ಗರುಡಾ ವಿಷ್ಣುವಾಹನಾಃ ।
ನಾನಾ ಭರಣ ಸಂಪನ್ನಾ ವ್ಯಪೋಹಂತು ಮಲಂ ಮಮ ॥೬೪॥

---

೫೯–೬೦. ವಾಮದೇವೀ, ಮಹಾಜಂಭ, ಕಾಲನೇಮಿ, ಮಹಾಬಲ, ಸುಗ್ರೀವ, ಮರ್ದಕ, ಪಿಂಗಲ, ದೇವಮರ್ದನ, ಪ್ರಹ್ಲಾದ, ಅನುಹ್ಲಾದ, ಸಂಹ್ಲಾದ, ಇಬ್ಬರು ಬಾಷ್ಕಲರು, ಜಂಭ, ಕುಂಭ, ಮಾಯಾವಿ, ಕಾರ್ತವೀರ್ಯ, ಕೃತಂಜಯ, ಎಂಬ ಮಹಾತ್ಮರಾದ, ಶಿವನ ಪೂಜೆಯಲ್ಲಿ ಆಸಕ್ತರಾದ, ರಾಕ್ಷಸರೂ, ಅವರ ಭಯಂಕರವಾದ ಸ್ವರೂಪವನ್ನೂ, ಅವರ ರಾಕ್ಷಸೀ ಚೇಷ್ಟೆಗಳನ್ನೂ ಬಿಟ್ಟು, ಒಳ್ಳೆಯವರಾಗಲಿ.

೬೧–೬೪. ಆಕಾಶದಲ್ಲಿ ಸಂಚರಿಸುವ ಗರುಡ, ಪಕ್ಷಿರಾಜ, ನಾಗಮರ್ದನ, ನಾಗಶತ್ರು, ಹಿರಣ್ಯಾಂಗ, ವೈನತೇಯ, ಪ್ರಭಂಜನ, ನಾಗ, ಆಶೀರ್ವಿಷನಾಶ, ವಿಷ್ಣುವಾಹನ, ಎಂಬ ಚಿನ್ನದ ಬಣ್ಣವುಳ್ಳ ವಿಷ್ಣುವಿಗೆ ವಾಹನಗಳೂ, ಅನೇಕ ಅಲಂಕಾರಗಳನ್ನು ಧರಿಸಿರುವವರೂ, ಶಿವಪೂಜೆಯಲ್ಲಿ ಆಸಕ್ತಿಯುಳ್ಳವರೂ ಆದ ಪಕ್ಷಿದೇವತೆಗಳು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

ಅಗಸ್ತ್ಯಶ್ಚ ವಸಿಷ್ಠಶ್ಚ ಅಂಗಿರಾ ಭೃಗುರೇವ ಚ ।
ಕಾಶ್ಯಪೋ ನಾರದ ಶ್ಚೈವ ದಧೀಚ ಶ್ಚ್ಯಾವನ ಸ್ತಥಾ ॥೬೫॥
ಉಪಮನ್ಯು ಸ್ತಥಾಽನ್ಯೇ ಚ ಋಷಯಃ ಶಿವ ಭಾವಿತಾಃ ।
ಶಿವಾಽರ್ಚನ ರತಾಃ ಸರ್ವೇ ವ್ಯಪೋಹಂತು ಮಲಂ ಮಮ ॥೬೬॥
ಪಿತರಃ ಪಿತಾಮಹಾ ಶ್ಚೈವ ತಥೈವ ಪ್ರಪಿತಾಮಹಾಃ ।
ಅಗ್ನಿಷ್ವಾತ್ತಾ ಬರ್ಹಿಷದ ಸ್ತಥಾ ಮಾತಾಮಹಾದಯಃ ॥೬೭॥
ವ್ಯಪೋಹಂತು ಭಯಂ ಪಾಪಂ ಶಿವಧ್ಯಾನ ಪರಾಯಣಾಃ ।
ಲಕ್ಷ್ಮೀ ಶ್ಚ ಧರಣೀ ಚೈವ ಗಾಯತ್ರೀ ಚ ಸರಸ್ವತೀ ॥೬೮॥
ದುರ್ಗಾ ಉಷಾ ಶಚೀ ಜ್ಯೇಷ್ಠಾ ಮಾತರಃ ಸುರ ಪೂಜಿತಾಃ ।
ದೇವಾನಾಂ ಮಾತರ ಶ್ಚೈವ ಗಣಾನಾಂ ಮಾತರ ಸ್ತಥಾ ॥೬೯॥
ಭೂತಾನಾಂ ಮಾತರಃ ಸರ್ವಾ ಯತ್ರ ವಾ ಗಣಮಾತರಃ ।
ಪ್ರಸಾದಾ ದ್ದೇವ ದೇವಸ್ಯ ವ್ಯಪೋಹಂತು ಮಲಂ ಮಮ ॥೭೦॥

---

೬೫–೬೬. ಅಗಸ್ತ್ಯ, ವಸಿಷ್ಠ, ಅಂಗಿರಸ್ಸು, ಭೃಗು, ಕಾಶ್ಯಪ, ನಾರದ, ದಧೀಚ, ಚ್ಯವನ, ಉಪಮನ್ಯು ಮುಂತಾದ ಶಿವನ ಪೂಜೆಯಲ್ಲಿ ಆಸಕ್ತರಾದ ಋಷಿಗಳು ನನ್ನ ಪಾಪಗಳನ್ನು ಹೋಗಲಾಡಿಸಲಿ.

೬೭. ಪಿತೃಗಳು, ಪಿತಾಮಹರು, ಪ್ರಪಿತಾಮಹರು, ಮುಂತಾದ ಪಿತೃದೇವತೆಗಳೂ, ಅಗ್ನಿಷ್ವಾತ್ತರು, ಬರ್ಹಿಷದರು, ಮಾತಾಮಹ, ಮುಂತಾದ ಶಿವಧ್ಯಾನಮಾಡುವ ಪಿತೃದೇವತೆಗಳೂ, ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೬೮–೭೦. ಲಕ್ಷ್ಮೀ, ಧರಣೀ, ಗಾಯತ್ರೀ, ಸರಸ್ವತೀ, ದುರ್ಗಾ, ಉಷಾ, ಶಚೀ, ಜ್ಯೇಷ್ಠಾ, ದೇವತೆಗಳಿಂದ ಪೂಜಿಸಲ್ಪಟ್ಟ ತಾಯಿಯರೂ, ಗಣಗಳ ತಾಯಿಯರೂ, ಭೂತಗಳ ತಾಯಿಯರೂ, ಶಿವನ ಪೂಜೆಮಾಡುವವರಾಗಿದ್ದಾರೆ. ಇವರು ದೇವದೇವನಾದ ಶಿವನ ಅನುಗ್ರಹದಿಂದ ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

ಊರ್ವಶೀ ಮೇನಕಾ ಚೈವ ರಂಭಾ ರತಿ ತಿಲೋತ್ತಮಾಃ ।
ಸುಮುಖೀ ದುರ್ಮುಖೀ ಚೈವ ಕಾಮುಕೀ ಕಾಮವರ್ಧಿನೀ ॥೨೧॥

ತಥಾಽನ್ಯಾಃ ಸರ್ವಲೋಕೇಷು ದಿವ್ಯಾಶ್ಚಾಽಪ್ಸರಸ ಸ್ತಥಾ ।
ಶಿವಾಯ ತಾಂಡವಂ ನಿತ್ಯಂ ಕುರ್ವಂತ್ಯೋಽತೀವ ಭಾವಿತಾಃ ॥೨೨॥

ದೇವ್ಯಃ ಶಿವಾಽರ್ಚನರತಾ ವ್ಯಪೋಹಂತು ಮಲಂ ಮಮ ।
ಅರ್ಕಃ ಸೋಮೋಽಂಗಾರಕಶ್ಚ ಬುಧಶ್ಚೈವ ಬೃಹಸ್ಪತಿಃ ॥೨೩॥

ಶುಕ್ರಃ ಶನೈಶ್ಚರ ಶ್ಚೈವ ರಾಹುಃ ಕೇತು ಸ್ತಥೈವ ಚ ।
ವ್ಯಪೋಹಂತು ಭಯಂ ಘೋರಂ ಗ್ರಹ ಪೀಡಾಂ ಶಿವಾಽರ್ಚಕಾಃ ॥

ಮೇಷೋ ವೃಷೋಽಥ ಮಿಥುನ ಸ್ತಥಾ ಕರ್ಕಟಕಃ ಶುಭಃ ।
ಸಿಂಹಶ್ಚ ಕನ್ಯಾ ವಿಪುಲಾ ತುಲಾ ವೈ ವೃಶ್ಚಿಕ ಸ್ತಥಾ ॥೨೫॥

ಧನುಶ್ಚ ಮಕರ ಶ್ಚೈವ ಕುಂಭೋ ಮೀನ ಸ್ತಥೈವ ಚ ।
ರಾಶಯೋ ದ್ವಾದಶ ಹ್ಯೇತೇ ಶಿವಪೂಜಾ ಪರಾಯಣಾಃ ॥೨೬॥

---

೨೧–೨೨. ಊರ್ವಶೀ, ಮೇನಕೆ, ರಂಭಾ, ರತಿ, ತಿಲೋತ್ತಮೆ, ಸುಮುಖೀ, ದುರ್ಮುಖೀ, ಕಾಮುಕೀ, ಕಾಮವರ್ಧಿನೀ, ಮುಂತಾದ ಸ್ವರ್ಗಲೋಕದ ಅತ್ಯುತ್ತಮರಾದ ಅಪ್ಸರಸ್ತ್ರೀಯರೂ ಬೇರೆ ದಿವ್ಯರಾದ ಸ್ತ್ರೀಯರೂ, ಶಿವನ ಮುಂದೆ ಯಾವಾಗಲೂ ನಾಟ್ಯಮಾಡುತ್ತಾ, ಅವನ ಮೆಚ್ಚಿಕೆಗೆ ಪಾತ್ರರಾಗಿದ್ದಾರೆ. ಈರೀತಿಯಾಗಿ ಶಿವನಪೂಜೆ ಮಾಡುವ ದೇವಸ್ತ್ರೀಯರು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೨೩–೨೪. ಸೂರ್ಯ, ಚಂದ್ರ, ಮಂಗಳ, ಬುಧ,, ಗುರು, ಶುಕ್ರ, ಶನಿ, ರಾಹು, ಕೇತು, ಮುಂತಾದ ಶಿವನ ಪೂಜೆಮಾಡುವ ನವಗ್ರಹಗಳು ನಮಗೆ ಬರುವ ಗ್ರಹಪೀಡೆಗಳನ್ನೆಲ್ಲವನ್ನೂ ನಿವಾರಣೆ ಮಾಡಲಿ.

೨೫–೨೬. ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ' ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ, ಎಂಬ ಹನ್ನೆರಡು ರಾಶಿಗಳೂ, ಶಿವನಪೂಜೆಯಲ್ಲಿ ತೊಡಗಿರುತ್ತವೆ. ಇವೂ ಶಿವನ ಪ್ರಸಾದದಿಂದ ನನ್ನ ಭಯವನ್ನೆಲ್ಲವನ್ನೂ ಹೋಗಲಾಡಿಸಲಿ.

ವ್ಯಪೋಹಂತು ಭಯಂ ಪಾಪಂ ಪ್ರಸಾದಾ ತ್ಪರಮೇಷ್ಠಿನಃ ।
ಅಶ್ವಿನೀ ಭರಣೀ ಚೈವ ಕೃತ್ತಿಕಾ ರೋಹಿಣೀ ತಥಾ ॥೭೭॥
ಶ್ರೀಮನ್ಮೃಗಶಿರ ಶ್ಚಾರ್ದ್ರಾ ಪುನರ್ವಸು ಪುಷ್ಯ ಸಾರ್ಪಕಾಃ ।
ಮಘಾ ವೈ ಪೂರ್ವ ಫಾಲ್ಗುನ್ಯ ಉತ್ತರಾ ಫಾಲ್ಗುನೀ ತಥಾ ॥೭೮॥
ಹಸ್ತ ಶ್ಚಿತ್ರಾ ತಥಾ ಸ್ವಾತೀ ವಿಶಾಖಾ ಚಾಽನುರಾಧಿಕಾ ।
ಜ್ಯೇಷ್ಠಾ ಮೂಲಂ ಮಹಾಭಾಗಾ ಪೂರ್ವಾಷಾಢಾ ತಥೈವಚ ॥೭೯॥
ಉತ್ತರಾಷಾಢಿಕಾ ಚೈವ ಶ್ರವಣಂ ಚ ಶ್ರವಿಷ್ಠಿಕಾ ।
ಶತಭಿಷ ಕ್ಪೂರ್ವಭದ್ರಾ ಚ ತಥಾ ಪ್ರೋಷ್ಠಪದಾ ತಥಾ ॥೮೦॥
ಪೌಷ್ಣಂ ಚ ದೇವ್ಯಃ ಸತತಂ ವ್ಯಪೋಹಂತು ಮಲಂ ಮಮ ।
ಜ್ವರಃ ಕುಂಭೋದರ ಶ್ಚೈವ ಶಂಕು ಕರ್ಣೋ ಮಹಾಬಲಃ ॥೮೧॥
ಮಹಾ ಕರ್ಣಃ ಪ್ರಭಾತಶ್ಚ ಮಹಾಭೂತ ಪ್ರಮರ್ದನಃ ।
ಶ್ಯೇನಜಿಚ್ಛಿವ ದೂತಶ್ಚ ಪ್ರಮಥಾಃ ಪ್ರೀತಿ ವರ್ಧನಾಃ ॥೮೨॥
ಕೋಟಿ ಕೋಟಿ ಶತ್ಯೆ ಶ್ಚೈವ ಭೂತಾನಾಂ ಮಾತರಃ ಸದಾ ।
ವ್ಯಪೋಹಂತು ಭಯಂ ಪಾಪಂ ಮಹಾದೇವ ಪ್ರಸಾದತಃ ॥೮೩॥

---

೭೭–೮೦. ಅಶ್ವಿನೀ, ಭರಣೀ, ಕೃತ್ತಿಕಾ, ರೋಹಿಣೀ, ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಮಘೇ, ಪೂರ್ವ ಫಲ್ಗುನೀ, ಉತ್ತರ ಫಲ್ಗುನೀ, ಹಸ್ತ, ಚಿತ್ರಾ, ಸ್ವಾತೀ, ವಿಶಾಖಾ, ಅನುರಾಧಾ, ಜ್ಯೇಷ್ಠಾ, ಮೂಲ, ಪೂರ್ವಾಷಾಢಾ, ಉತ್ತರಾಷಾಢಾ, ಶ್ರವಣ, ಧನಿಷ್ಠಾ, ಶತಭಿಷಕ್, ಪೂರ್ವಭಾದ್ರ, ಉತ್ತರಭಾದ್ರ, ರೇವತಿ, ಮುಂತಾದ ನಕ್ಷತ್ರದೇವಿಯರೂ, ಶಿವನ ಪ್ರಸಾದದಿಂದ ನಮ್ಮ ಪಾಪವನ್ನೆಲ್ಲವನ್ನೂ ನಾಶಮಾಡಲಿ.

೮೧–೮೩. ಜ್ವರ, ಕುಂಭೋದರ, ಶಂಕು ಕರ್ಣ, ಮಹಾಬಲ, ಮಹಾಕರ್ಣ, ಪ್ರಭಾತ, ಮಹಾಭೂತ, ಪ್ರಮರ್ದನ, ಶ್ಯೇನಜಿತ್, ಶಿವದೂತ, ಮುಂತಾದ ಪ್ರೀತಿಯನ್ನು ಹೆಚ್ಚಿಸುವ ಪ್ರಮಥ ಗಣಗಳೂ, ಕೋಟ್ಯಾಂತರ ಭೂತಗಳ ತಾಯಿಯರೂ, ಯಾವಾಗಲೂ ಶಿವನ ಪ್ರಸಾದದಿಂದ ನನ್ನ ಭಯವನ್ನೂ ಪಾಪವನ್ನೂ ನಾಶಮಾಡಲಿ.

**ಶಿವಧ್ಯಾನೈಕ ಸಂಪನ್ನೋ ಹಿಮರಾಡಂಬು ಸನ್ನಿಭಃ ।**
**ಕುಂದೇಂದು ಸದೃಶಾಕಾರಃ ಕುಂಭ ಕುಂದೇಂದು ಭೂಷಣಃ ॥೮೪॥**

**ಬಡ ಬಾನಲ ಶತ್ರುರ್ಯೋ ಬಡವಾ ಮುಖ ಭೇದನಃ ।**
**ಚತುಷ್ಪಾದ ಸಮಾ ಯುಕ್ತಃ ಕ್ಷೀರೋದ ಇವ ಪಾಂಡುರಃ ॥೮೫॥**

**ರುದ್ರಲೋಕೇ ಸ್ಥಿತೋ ನಿತ್ಯಂ ರುದ್ರೈಃ ಸಾರ್ಧಂ ಗಣೇಶ್ವರೈಃ ।**
**ವೃಷೇಂದ್ರೋ ವಿಶ್ವ ಧೃಗ್ದೇವೋ ವಿಶ್ವಸ್ಯ ಜಗತಃ ಪಿತಾ ॥೮೬॥**

**ವೃತೋ ನಂದಾದಿಭಿಃ ನಿತ್ಯಂ ಮಾತೃಭಿ ರ್ಮಖ ಮರ್ದನಃ ।**
**ಶಿವಾರ್ಚನ ರತೋ ನಿತ್ಯಂ ಸ ಮೇ ಪಾಪಂ ವ್ಯಪೋಹತು ॥೮೭॥**

**ಗಂಗಾ ಮಾತಾ ಜಗನ್ಮಾತಾ ರುದ್ರಲೋಕೇ ವ್ಯವಸ್ಥಿತಾ ।**
**ಶಿವಭಕ್ತಾ ತು ಯಾ ನಂದಾ ಸಾ ಮೇ ಪಾಪಂ ವ್ಯಪೋಹತು ॥೮೮॥**

---

೮೪-೮೭. ಯಾವಾಗಲೂ ಶಿವಧ್ಯಾನ ಮಾಡುತ್ತಿರುವ, ಗಂಗಾ ಜಲದಂತೆ ಪವಿತ್ರವಾದ, ಕುಂದ ಪುಷ್ಪ ಮತ್ತು ಚಂದ್ರನಂತೆ ಶುಭ್ರವಾಗಿರುವ, ಕುಂಭಪುಷ್ಪ ಮತ್ತು ಚಂದ್ರನೇ ಭೂಷಣವಾಗಿವುಳ್ಳ, ಬಡಬಾಗ್ನಿಗೆ ಶತ್ರುವಾದ, ಬಡಬಾಗ್ನಿಯನ್ನು ನಾಶಮಾಡುವ, ನಾಲ್ಕು ಪಾದಗಳಿಂದ ಕೂಡಿದ, ಕ್ಷೀರಸಮುದ್ರದಂತೆ ಬೆಳ್ಳಗಿರುವ, ವಿಶ್ವವನ್ನು ಧಾರಣಮಾಡಿರುವ, ಅದಕ್ಕೆ ತಂದೆಯೂ ಆದ, ಯಾವಾಗಲೂ ಶಿವನ ಲೋಕದಲ್ಲಿರುವ, ಪ್ರಮಥರೆಂಬ ಗಣಗಳೊಂದಿಗೆ ಇರುವ, ಶ್ರೇಷ್ಠವಾದ ಎತ್ತಾದ, ನಂದನೇ ಮೊದಲಾದ ಗಣಗಳಿಂದಲೂ, ಮಾತೃದೇವತೆಗಳಿಂದ ಕೂಡಿರುವ, ದಕ್ಷಯಜ್ಞವನ್ನು ಹಾಳುಮಾಡಿದ, ಯಾವಾಗಲೂ ಶಿವನ ಪೂಜೆಯನ್ನು ಮಾಡುತ್ತಿರುವ, ನಂದಿಯು ನನ್ನ ಪಾಪವನ್ನೆಲ್ಲವನ್ನೂ ನಾಶಮಾಡಲಿ.

೮೮-೮೯. ರುದ್ರಲೋಕದಲ್ಲಿರುವ, ಜಗತ್ತಿಗೆ ತಾಯಿಯಾದ, ಶಿವನ ಭಕ್ತಳೂ ಆದ, ಎಲ್ಲರಿಗೂ ಆನಂದವನ್ನುಂಟುಮಾಡುವ, ಗಂಗಾದೇವಿಯು ಶಿವನ ಪ್ರಸಾದದಿಂದ ನನ್ನ ಪಾಪಗಳನ್ನೆಲ್ಲವನ್ನೂ ಹೋಗ

ಭದ್ರಾ ಭದ್ರಪದಾ ದೇವೀ ಶಿವಲೋಕೇ ವ್ಯವಸ್ಥಿತಾ ।
ಮಾತಾ ಗವಾಂ ಮಹಾಭಾಗಾ ಸಾ ಮೇ ಪಾಪಂ ವ್ಯಪೋಹತು॥೮೯॥
ಸುರಭಿಃ ಸರ್ವತೋ ಭದ್ರಾ ಸರ್ವಪಾಪ ಪ್ರಣಾಶಿನೀ।
ರುದ್ರ ಪೂಜಾ ರತಾ ನಿತ್ಯಂ ಸಾ ಮೇ ಪಾಪಂ ವ್ಯಪೋಹತು ॥೯೦॥
ಸುಶೀಲಾ ಶೀಲ ಸಂಪನ್ನಾ ಶ್ರೀಪದಾ ಶಿವ ಭಾವಿತಾ ।
ಶಿವಲೋಕೇ ಸ್ಥಿತಾ ನಿತ್ಯಂ ಸಾ ಮೇ ಪಾಪಂ ವ್ಯಪೋಹತು ॥೯೧॥
ವೇದ ಶಾಸ್ತ್ರಾರ್ಥ ತತ್ವಜ್ಞಃ ಸರ್ವಕಾರ್ಯಾಭಿ ಚಿಂತಕಃ ।
ಸಮಸ್ತ ಗುಣ ಸಂಪನ್ನಃ ಸರ್ವ ದೇವೇಶ್ವರಾತ್ಮಜಃ ॥೯೨॥
ಜ್ಯೇಷ್ಠಃ ಸರ್ವೇಶ್ವರಃ ಸೌಮ್ಯೋ ಮಹಾವಿಷ್ಣು ತನುಃ ಸ್ವಯಂ ।
ಆರ್ಯಃ ಸೇನಾಪತಿಃ ಸಾಕ್ಷಾ ದ್ಗಹನೋ ಮಖ ಮರ್ದನಃ ॥೯೩॥

---

ಲಾಡಿಸಲಿ. ಮಂಗಳಕರಳೂ, ಶ್ರೇಷ್ಠವಾದ ಪಾದಗಳುಳ್ಳವಳೂ, ಶಿವ ಲೋಕದಲ್ಲಿರುವವಳೂ, ಮಹಾಪುಣ್ಯಶಾಲಿನಿಯೂ ಆದ ಗೋ ಮಾತೆಯು ಶಿವನ ಪ್ರಸಾದದಿಂದ ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೯೦–೯೧. ಸರ್ವಶ್ರೇಷ್ಠಳಾದ, ಎಲ್ಲಾ ಪಾಪಗಳನ್ನೂ ಹಾಳು ಮಾಡುವ, ಯಾವಾಗಲೂ ಶಿವನ ಪೂಜೆಯನ್ನು ಮಾಡುವ, ಕಾಮ ಧೇನುವು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ. ಒಳ್ಳೆಯ ಗುಣಾ ಢ್ಯಳೂ, ಒಳ್ಳೆಯ ಸ್ವಭಾವದವಳೂ, ಐಶ್ವರ್ಯವನ್ನು ಕೊಡುವವಳೂ, ಶಿವನ ಮೆಚ್ಚಿಕೆಯನ್ನು ಪಡೆದವಳೂ, ಯಾವಾಗಲೂ ಶಿವನ ಲೋಕದಲ್ಲೇ ಇರುವ ವಳೂ, ಆದ ಕಾಮಧೇನುವು ನನ್ನ ಪಾಪಗಳನ್ನೆಲ್ಲವನ್ನೂ ಹೋಗ ಲಾಡಿಸಲಿ.

೯೨–೯೫. ವೇದಶಾಸ್ತ್ರಗಳ ಅರ್ಥವನ್ನೂ ಮತ್ತು ಅದರ ತತ್ವ ವನ್ನೂ ತಿಳಿದಿರುವ, ಎಲ್ಲಾ ಕೆಲಸಗಳನ್ನೂ ವಿಚಾರಿಸಿ ಗೊತ್ತುಪಡಿಸಲು ಸಮರ್ಥನಾದವನೂ, ಎಲ್ಲಾ ಗುಣಗಳಿಂದಲೂ ಕೂಡಿರುವವನೂ, ಎಲ್ಲಾ ದೇವಶ್ರೇಷ್ಠರಿಗೂ ಅಧಿಪತಿಯಾದ ಶಿವನ ಮಗನೂ, ಹಿರಿಯವನೂ, ಎಲ್ಲರಿಗೂ ಅಧಿಪತಿಯೂ, ಸೌಮ್ಯವಾದ ಆಕಾರವುಳ್ಳವನೂ, ತಾನೇ

**ಐರಾವತ ಗಜಾರೂಢಃ ಕೃಷ್ಣಃ ಕುಂಚಿತ ಮೂರ್ಧಜಃ ।**
**ಕೃಷ್ಣಾಂಗೋ ರತ್ನ ನಯನಃ ಶಶಿ ಪನ್ನಗ ಭೂಷಣಃ ॥೯೪॥**
**ಭೂತೈಃ ಪ್ರೇತೈಃ ಪಿಶಾಚೈಶ್ಚ ಕೂಷ್ಮಾಂಡೈಶ್ಚ ಸಮಾವೃತಃ ।**
**ಶಿವಾರ್ಚನ ರತಃ ಸಾಕ್ಷಾ ತ್ಸ ಮೇ ಪಾಪಂ ವ್ಯಪೋಹತು ॥೯೫॥**
**ಬ್ರಹ್ಮಾಣೀ ಚೈವ ಮಾಹೇಶೀ ಕೌಮಾರೀ ವೈಷ್ಣವೀ ತಥಾ ।**
**ವಾರಾಹೀ ಚೈವ ಮಾಹೇಂದ್ರೀ ಚಾಮುಂಡಾಽಽಗ್ನೇಯಿಕಾ ತಥಾ ॥**
**ಏತಾ ವೈ ಮಾತರಃ ಸರ್ವಾಃ ಸರ್ವ ಲೋಕ ಪ್ರಪೂಜಿತಾಃ ।**
**ಯೋಗಿನೀಭಿ ರ್ಮಹಾ ಪಾಪಂ ವ್ಯಪೋಹಂತು ಸಮಾಹಿತಾಃ ॥೯೭॥**

---

ಮಹಾವಿಷ್ಣುವಿನ ಸ್ವರೂಪವನ್ನು ತಾಳಿರುವವನೂ, ಆರ್ಯನೂ, ಸೇನಾಪತಿಯೂ, ಬಹಳ ಸೂಕ್ಷ್ಮನೂ, ದಕ್ಷಯಜ್ಞವನ್ನು ಹಾಳುಮಾಡಿದವನೂ, ಐರಾವತವೆಂಬ ಆನೆಯಮೇಲೆ ಕುಳಿತಿರುವವನೂ, ಕಪ್ಪಗೂ, ಗುಂಗುರಾಗಿಯೂ, ಇರುವ ಕೂದಲುಳ್ಳವನೂ, ಕಪ್ಪಗಿರುವ ಶರೀರವುಳ್ಳವನೂ, ಕೆಂಪಗಿರುವ ಕಣ್ಣುಗಳುಳ್ಳವನೂ, ಹಾವು ಮತ್ತು ಚಂದ್ರನೇ ಅಲಂಕಾರವಾಗುಳ್ಳವನೂ, ಭೂತಗಳು, ಪ್ರೇತಗಳು, ಪಿಶಾಚಿಗಳು ಮತ್ತು ಕೂಷ್ಮಾಂಡವೆಂಬ ಭೂತಗಳಿಂದ ಕೂಡಿರುವವನೂ, ಯಾವಾಗಲೂ ಪರಶಿವನ ಪೂಜೆಯನ್ನು ಮಾಡುವವನೂ ಆದ ಕಾಲಭೈರವನು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೯೬–೯೭. ಬ್ರಹ್ಮಾಣೀ, ಮಾಹೇಶೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರಿ, ಚಾಮುಂಡಾ, ಆಗ್ನೇಯಿಕಾ, ಎಂಬುವರೇ ಲೋಕದಲ್ಲಿ ಜನರಿಂದ ಪೂಜಿಸಲ್ಪಟ್ಟ, ಅಷ್ಟಮಾತೃಗಳೆಂದು ಪ್ರಸಿದ್ಧರಾಗಿರುವ ತಾಯಿಯರಾಗಿದ್ದಾರೆ. ಶಾಂತ ಮನಸ್ಸಿನಿಂದ ಈ ತಾಯಿಯರು, ತಮ್ಮ ಮಹಿಮೆಯಿಂದಲೂ, ಯೋಗಿನಿಯರ ತಪೋಮಹಿಮೆಯಿಂದಲೂ, ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

**ವೀರ ಭದ್ರೋ ಮಹಾತೇಜಾ ಹಿಮ ಕುಂದೇಂದು ಸನ್ನಿಭಃ ।**
**ರುದ್ರಸ್ಯ ತನಯೋ ರೌದ್ರಃ ಶೂಲಾಽಸಕ್ತ ಮಹಾಕರಃ ॥೯೮॥**
**ಸಹಸ್ರ ಬಾಹುಃ ಸರ್ವಜ್ಞಃ ಸರ್ವಾಯುಧ ಧರಃ ಸ್ವಯಂ ।**
**ತ್ರೇತಾಽಗ್ನಿ ನಯನೋ ದೇವ ಸ್ತ್ರೈಲೋಕ್ಯಾಽಭಯದಃ ಪ್ರಭುಃ ॥**
**ಮಾತೃಣಾಂ ರಕ್ಷಕೋ ನಿತ್ಯಂ ಮಹಾ ವೃಷಭ ವಾಹನಃ ।**
**ತ್ರೈಲೋಕ್ಯ ನಮಿತಃ ಶ್ರೀಮಾನ್ ಶಿವ ಪಾದಾಽರ್ಚನೇ ರತಃ ॥೧೦೦॥**
**ಯಜ್ಞಸ್ಯ ಚ ಶಿರಶ್ಛೇತ್ತಾ ಪೂಷ್ಣೋ ದಂತ ವಿನಾಶನಃ ।**
**ವಹ್ನೇ ರ್ಹಸ್ತ ಹರಃ ಸಾಕ್ಷಾ ದ್ಭಗನೇತ್ರ ನಿಪಾತನಃ ॥೧೦೧॥**
**ಪಾದಾಂಗುಷ್ಠೇನ ಸೋಮಾಂಗ ಪೇಷಕಃ ಪ್ರಭು ಸಂಜ್ಞಕಃ ।**
**ಉಪೇಂದ್ರೇಂದ್ರ ಯಮಾದೀನಾಂ ದೇವಾನಾ ಮಂಗ ರಕ್ಷಕಃ ॥**

---

೯೮–೧೦೦. ಬಹಳ ತೇಜಸ್ವಿಯಾದ ವೀರಭದ್ರನೂ, ಹಿಮ, ಕುಂದ ಪುಷ್ಪ, ಚಂದ್ರ, ಇವುಗಳಿಗೆ ಸಮಾನನಾಗಿ, ಶುಭ್ರನಾದ, ರುದ್ರನ ಮಗನೂ, ಭಯಂಕರನೂ, ಶೂಲವನ್ನು ಭದ್ರವಾಗಿ ಹಿಡಿದಿರುವ ದೊಡ್ಡ ಕೈಯುಳ್ಳವನೂ, ಸಾವಿರ ತೋಳುಗಳುಳ್ಳವನೂ, ಸರ್ವಜ್ಞನೂ, ಎಲ್ಲಾ ಆಯುಧಗಳನ್ನೂ ಹಿಡಿದಿರುವವನೂ, ತ್ರೇತಾ ಎಂದರೆ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ, ಎಂಬ ಅಗ್ನಿಗಳೇ ಕಣ್ಣಾಗುಳ್ಳವನೂ, ಎಲ್ಲಕ್ಕೂ ಸ್ವಾಮಿಯೂ, ಮೂರು ಲೋಕಕ್ಕೂ ಅಭಯವನ್ನು ಕೊಡುವವನೂ, ಯಾವಾಗಲೂ ತಾಯಿಯರನ್ನು ಕಾಪಾಡುವವನೂ, ದೊಡ್ಡ ಎತ್ತೇ ವಾಹನವಾಗುಳ್ಳವನೂ, ಮೂರು ಲೋಕದಲ್ಲಿಯೂ ಜನಗಳಿಂದ ನಮಸ್ಕರಿಸಲ್ಪಡುವವನೂ, ಮಹಾಮಹಿಮನೂ ಶಿವನ ಪಾದಗಳನ್ನು ಪೂಜಿಸವವನೂ,

೧೦೧–೧೦೩. ದಕ್ಷಯಜ್ಞಪುರುಷನ ಶಿರಸ್ಸನ್ನು ಕತ್ತರಿಸಿದವನೂ, ಸೂರ್ಯಸ್ವರೂಪನೂ, ಗಣಪತಿಯ ಕೊಂಬನ್ನು ಮುರಿದವನೂ, ಅಗ್ನಿಯ ಕೈಯ್ಯನ್ನು ನಾಶವಾಡಿದವನೂ, ಭಗನೆಂಬುವವನ ಕಣ್ಣನ್ನು ಕಿತ್ತವನೂ, ತನ್ನ ಕಾಲಿನ ಹೆಬ್ಬೆರಳಿನಿಂದ ಚಂದ್ರನ ಶಿರಸ್ಸನ್ನು ತಿಕ್ಕಿದವನೂ, ಪ್ರಭು ಎಂಬ ಹೆಸರುಳ್ಳವನೂ, ಉಪೇಂದ್ರ, ಇಂದ್ರ, ಯಮನೇ ಮೊದ

ಸರಸ್ವತ್ಯಾ ಮಹಾದೇವ್ಯಾ ನಾಸಿಕೋಷ್ಠ್ಯಾವ ಕರ್ತನಃ ।
ಗಣೇಶ್ವರೋ ಯಃ ಸೇನಾನೀಃ ಸ ಮೇ ಪಾಪಂ ವ್ಯಪೋಹತು ॥೧೦೩॥
ಜ್ಯೇಷ್ಠಾ ವರಿಷ್ಠಾ ವರದಾ ವರಾಭರಣ ಭೂಷಿತಾ ।
ಮಹಾಲಕ್ಷ್ಮೀ ರ್ಜಗನ್ಮಾತಾ ಸಾ ಮೇ ಪಾಪಂ ವ್ಯಪೋಹತು॥೧೦೪॥
ಮಹಾ ಮೋಹಾ ಮಹಾಭಾಗಾ ಮಹಾಭೂತ ಗಣೈ ರ್ವೃತಾ ।
ಶಿವಾರ್ಚನ ರತಾ ನಿತ್ಯಂ ಸಾ ಮೇ ಪಾಪಂ ವ್ಯಪೋಹತು ॥೧೦೫॥
ಲಕ್ಷ್ಮೀಃ ಸರ್ವಗುಣೋಪೇತಾ ಸರ್ವಲಕ್ಷಣ ಸಂಯುತಾ ।
ಸರ್ವದಾ ಸರ್ವಗಾ ದೇವೀ ಸಾ ಮೇ ಪಾಪಂ ವ್ಯಪೋಹತು ॥೧೦೬॥

---

ಲಾದ ದೇವತೆಗಳಿಗೆ ಅಂಗರಕ್ಷಕನೂ, ಶ್ರೇಷ್ಠದೇವಿಯಾದ ಸರಸ್ವತಿಯ ಮೂಗು, ತುಟಿಗಳನ್ನು ಕಿತ್ತವನೂ, ಗಣಗಳಿಗೆ ಅಧಿಪತಿಯೂ, ಸೇನಾಪತಿಯೂ ಆದ ಕಾಲಭೈರವನು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೧೦೪. ಹಿರಿಯಳೂ, ಶ್ರೇಷ್ಠಳೂ, ವರವನ್ನು ಕೊಡುವವಳೂ, ಸೊಗಸಾದ ಒಡವೆಗಳನ್ನು ಧರಿಸಿರುವವಳೂ, ಮಹಾಲಕ್ಷ್ಮೀಸ್ವರೂಪಳೂ, ಜಗತ್ತಿಗೆ ತಾಯಿಯೂ ಆದ ಪಾರ್ವತಿಯು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೧೦೫. ಹೆಚ್ಚು ಮೋಹವನ್ನುಂಟುಮಾಡುವವಳೂ, ಬಹಳ ಪುಣ್ಯಶಾಲಿನಿಯೂ, ದೊಡ್ಡ ಭೂತಗಳೆಂಬ ಗಣಗಳಿಂದ ಕೂಡಿರುವವಳೂ, ಯಾವಾಗಲೂ ಶಿವನ ಪೂಜೆಯಲ್ಲಿ ಆಸಕ್ತಳೂ ಆದ ಪಾರ್ವತಿಯು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೧೦೬. ಲಕ್ಷ್ಮೀ ಸ್ವರೂಪಳೂ, ಎಲ್ಲಾ ಗಣಗಳಿಂದಲೂ ಕೂಡಿರುವಳೂ, ಎಲ್ಲಾ ಲಕ್ಷಣಗಳಿಂದಲೂ ಕೂಡಿರುವವಳೂ, ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವವಳೂ, ಎಲ್ಲಾ ಕಡೆಯಲ್ಲಿಯೂ ಇರುವಳೂ, ಶ್ರೇಷ್ಠಳಾದ ದೇವಿಯೂ, ಆದ ಪಾರ್ವತಿಯು ನನ್ನ ಪಾಪವನ್ನೆಲ್ಲವನ್ನೂ ಹೋಗಲಾಡಿಸಲಿ.

ಸಿಂಹಾರೂಢಾ ಮಹಾದೇವೀ ಪಾರ್ವತ್ಯಾ ಸ್ತನಯೋಽವ್ಯಯಾ ।
ವಿಷ್ಣೋರ್ನಿದ್ರಾ ಮಹಾಮಾಯಾ ವೈಷ್ಣವೀ ಸುರಪೂಜಿತಾ ॥
ತ್ರಿನೇತ್ರಾ ವರದಾ ದೇವೀ ಮಹಿಷಾಸುರ ಮರ್ದಿನೀ ।
ಶಿವಾರ್ಚನ ರತಾ ದುರ್ಗಾ ಸಾ ಮೇ ಪಾಪಂ ವ್ಯಪೋಹತು ॥
ಬ್ರಹ್ಮಾಂಡ ಧಾರಕಾ ರುದ್ರಾಃ ಸರ್ವಲೋಕ ಪ್ರಪೂಜಿತಾಃ ।
ಸತ್ಯಾಶ್ಚ ಮಾನಸಾಃ ಸರ್ವೇ ವ್ಯಪೋಹಂತು ಭಯಂ ಮಮ ॥
ಭೂತಾಃ ಪ್ರೇತಾಃ ಪಿಶಾಚಾಶ್ಚ ಕೂಷ್ಮಾಂಡ ಗಣನಾಯಕಾಃ ।
ಕೂಷ್ಮಾಂಡ ಕಾಶ್ಚ ತೇ ಪಾಪಂ ವ್ಯಪೋಹಂತು ಸಮಾಹಿತಾಃ ॥
ಅನೇನ ದೇವಂ ಸ್ತುತ್ವಾ ತು ಚಾಂತೇ ಸರ್ವಂ ಸಮಾಪಯೇತ್ ।
ಪ್ರಣಮ್ಯ ಶಿರಸಾ ಭೂಮೌ ಪ್ರತಿಮಾಸೇ ದ್ವಿಜೋತ್ತಮಾಃ ॥೧೧೧॥

---

೧೦೭–೧೦೮. ಸಿಂಹದಮೇಲೆ ಕೂತಿರುವವಳೂ, ಮಹಾದೇವಿಯೂ, ಪಾರ್ವತಿಯ ಮಗಳೂ, ನಾಶರಹಿತಳೂ, ವಿಷ್ಣುವಿನ ಯೋಗನಿದ್ರೆಯ ಸ್ವರೂಪಳೂ, ದೇವತೆಗಳಿಂದ ಪೂಜಿಸಲ್ಪಟ್ಟವಳೂ, ವಿಷ್ಣುವಿಗೆ ಸಂಬಂಧಪಟ್ಟ ದೊಡ್ಡ ಮಾಯೆಯೂ, ಮೂರು ಕಣ್ಣುಳ್ಳವಳೂ, ವರವನ್ನು ಕೊಡುವವಳೂ, ದೇವಿಯೂ, ಮಹಿಷಾಸುರನನ್ನು ಕೊಂದವಳೂ, ಶಿವನ ಪೂಜೆಯಲ್ಲಿ ಆಸಕ್ತಿಯುಳ್ಳವಳೂ ಆದ ಪವಿತ್ರಳಾದ ದುರ್ಗಾದೇವಿಯು ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೧೦೯. ಎಲ್ಲಾ ಲೋಕದಿಂದಲೂ ಪೂಜಿಸಲ್ಪಟ್ಟ, ಬ್ರಹ್ಮಾಂಡವನ್ನು ಹೊತ್ತಿರುವ, ಸತ್ಯಸ್ವರೂಪರೂ, ಶಿವನ ಮಾನಸ ಪುತ್ರರೂ ಆದ ಎಲ್ಲಾ ರುದ್ರರೂ ನನ್ನ ಪಾಪಗಳನ್ನೆಲ್ಲವನ್ನೂ, ಭಯವನ್ನೂ ಹೋಗಲಾಡಿಸಲಿ.

೧೧೦. ಭೂತಗಳು, ಪ್ರೇತಗಳು, ಪಿಶಾಚಿಗಳೂ, ಕೂಷ್ಮಾಂಡವೆಂಬ ಭೂತಗಣಗಳ ಅಧಿಪತಿಗಳೂ, ಕೂಷ್ಮಾಂಡವೆಂಬ ಭೂತಗಳು ಶಾಂತತೆಯಿಂದ ನನ್ನ ಪಾಪಗಳನ್ನೆಲ್ಲವನ್ನೂ ಹೋಗಲಾಡಿಸಲಿ.

೧೧೧–೧೧೨. ಎಲೈ ಬ್ರಾಹ್ಮಣ ಶ್ರೇಷ್ಠರೇ, ಈ ಸ್ತೋತ್ರದಿಂದ ಶಿವನನ್ನು ಸ್ತೋತ್ರಮಾಡಿ, ಕೊನೆಯಲ್ಲಿ ಶಿವನಿಗೆ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರಮಾಡಿ, ಪೂಜೆಯನ್ನು ಮುಗಿಸಬೇಕು. ಯಾವನು ದಿವ್ಯವಾದ ಈ ವ್ಯಪೋಹನಸ್ತೋತ್ರವನ್ನು ಓದುತ್ತಾನೋ ಅಥವಾ

ವ್ಯಪ್ರೋಹನ ಸ್ತವಂ ದಿವ್ಯಂ ಯಃ ಪಠೇ ಚ್ಛೃಣುಯಾ ದಪಿ ।
ವಿಧೂಯ ಸರ್ವ ಪಾಪಾನಿ ರುದ್ರಲೋಕೇ ಮಹೀಯತೇ ॥೧೧೨॥
ಕನ್ಯಾರ್ಥೀ ಲಭತೇ ಕನ್ಯಾಂ ಜಯಕಾಮೋ ಜಯಂ ಲಭೇತ್ ।
ಅರ್ಥಕಾಮೋ ಲಭೇದರ್ಥಂ ಪುತ್ರಕಾಮೋ ಬಹೂನ್ ಸುತಾನ್ ॥
ವಿದ್ಯಾರ್ಥೀ ಲಭತೇ ವಿದ್ಯಾಂ ಭೋಗಾರ್ಥೀ ಭೋಗ ಮಾಪ್ನುಯಾತ್
ಯಾ ನ್ಯಾ ನ್ಪ್ರಾರ್ಥಯತೇ ಕಾಮಾನ್ ಮಾನವಃ ಶ್ರವಣಾದಿಹ ॥
ತಾನ್ಸರ್ವಾನ್ ಶೀಘ್ರಮಾ ಪ್ನೋತಿ ದೇವಾನಾಂಚ ಪ್ರಿಯೋ ಭವೇತ್
ಪಠ್ಯಮಾನ ಮಿದಂ ಪುಣ್ಯಂ ಯಮುದ್ದಿ ಶ್ಯ ತು ಪಠ್ಯತೇ ॥೧೧೫॥
ತಸ್ಯ ರೋಗಾ ನ ಬಾಧಂತೇ ವಾತ ಪಿತ್ತಾದಿ ಸಂಭವಾಃ ।
ನಾಽಕಾಲೇ ಮರಣಂ ತಸ್ಯ ನ ಸರ್ಪೈರಪಿ ದಶ್ಯತೇ ॥೧೧೬॥

---

ಕೇಳುತ್ತಾನೋ, ಅವನು ಸಕಲ ಪಾಪವಿಮುಕ್ತನಾಗಿ ಶಿವಲೋಕದಲ್ಲಿ ವಿಶೇಷ ಮಹಿಮೆಯಿಂದ ಪ್ರಕಾಶಿಸುತ್ತಾನೆ.

೧೧೩. ಕನ್ಯೆಯನ್ನು ಅಪೇಕ್ಷಿಸುವವನು ಕನ್ಯೆಯನ್ನೂ, ಜಯವನ್ನು ಅಪೇಕ್ಷಿಸುವವನು ಜಯವನ್ನೂ, ಈಸ್ತೋತ್ರಪಾಠದಿಂದ ಹೊಂದ ಬಹುದು. ಐಶ್ವರ್ಯವನ್ನು ಅಪೇಕ್ಷಿಸುವವನು ಐಶ್ವರ್ಯವನ್ನೂ, ಮಕ್ಕಳನ್ನು ಅಪೇಕ್ಷಿಸುವವನು ಬೇಕಾದಷ್ಟು ಮಕ್ಕಳನ್ನೂ, ವಿದ್ಯಾರ್ಥಿಯು ವಿದ್ಯೆ ಯನ್ನೂ,ಸುಖಭೋಗವನ್ನು ಅಪೇಕ್ಷಿಸುವವನು ಸುಖವನ್ನೂ, ಹೊಂದು ವನು.

೧೧೪. ಮನುಷ್ಯನು ಈ ಸ್ತೋತ್ರವನ್ನು ಓದಿ ಅಥವಾ ಕೇಳಿ, ಏನೇನನ್ನು ಅಭಿಲಾಷೆ ಮಾಡುತ್ತಾನೋ ಅವೆಲ್ಲವನ್ನೂ ಜಾಗ್ರತೆ ಯಾಗಿಯೇ ಹೊಂದುವನು.

೧೧೫–೧೧೬. ಅವನು ದೇವತೆಗಳ ಪ್ರೀತಿಗೂ ಪಾತ್ರನಾಗುವನು. ಈ ಪುಣ್ಯಕರವಾದ ಸ್ತೋತ್ರಗಳನ್ನು ಯಾವ ಇಷ್ಟಾರ್ಥವನ್ನು ಉದ್ದೇಶ ಮಾಡಿಕೊಂಡು ಪಾಠಮಾಡಲಾಗುತ್ತದೆಯೋ ಅವರವರಿಗೆ ಆಯಾ ಫಲ ಗಳುದೊರೆಯುತ್ತವೆ. ಅವನನ್ನು ವಾತಪಿತ್ತಾದಿಗಳಿಂದ ಹುಟ್ಟುವ ರೋಗ ಗಳೊಂದೂ ಪೀಡಿಸುವುದಿಲ್ಲ. ಅವನಿಗೆ ಅಕಾಲದಿಂದ ಮರಣವಾಗಲೀ ಸರ್ಪಗಳಿಂದ ಕಚ್ಚಲ್ಪಡುವುದಾಗಲಿ ಸಂಭವಿಸುವುದೇ ಇಲ್ಲವು.

ಯತ್ಪುಣ್ಯಂ ಚೈವ ತೀರ್ಥಾನಾಂ ಯಜ್ಞಾನಾಂ ಚೈವ ಯತ್ಫಲಂ ।
ದಾನಾನಾಂ ಚೈವ ಯತ್ಪುಣ್ಯಂ ವ್ರತಾನಾಂ ಚ ವಿಶೇಷತಃ ॥೧೧೭॥
ತತ್ಪುಣ್ಯಂ ಕೋಟಿ ಗುಣಿತಂ ಜಪ್ತ್ವಾ ಚಾಽಪ್ನೋತಿ ಮಾನವಃ ।
ಗೋಘ್ನಶ್ಚೈವ ಕೃತಘ್ನಶ್ಚ ವೀರಹಾ ಬ್ರಹ್ಮಹಾ ಭವೇತ್ ॥೧೧೮॥
ಶರಣಾಗತ ಘಾತೀ ಚ ಮಿತ್ರ ವಿಶ್ವಾಸ ಘಾತಕಃ ॥
ದುಷ್ಟಃ ಪಾಪ ಸಮಾಚಾರೋ ಮಾತೃಹಾ ಪಿತೃಹಾ ತಥಾ ॥೧೧೯॥
ವ್ಯಪೋಹ್ಯ ಸರ್ವಪಾಪಾನಿ ಶಿವಲೋಕೇ ಮಹೀಯತೇ ॥೧೨೦॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ವ್ಯಪೋಹನಸ್ತೋತ್ರ ನಿರೂಪಣಂ ನಾಮ ದ್ವ್ಯಶೀತಿತಮೋಽಧ್ಯಾಯಃ

---

೧೧೭–೧೧೮ ಎಲ್ಲಾ ತೀರ್ಥಯಾತ್ರೆಗಳ ಫಲವೂ ಯಾಗ ಮುಂತಾದ ಧರ್ಮಗಳ, ಅನುಷ್ಠಾನದಿಂದ ದ್ರವ್ಯ ಮುಂತಾದುದರ ದಾನಗಳ, ವಿಶೇಷವಾದ ವ್ರತಾಚರಣೆಗಳ ಫಲಗಳುಯಾವುವೋ, ಅವುಗಳ ಕೋಟಿಯಷ್ಟು ಫಲವು ಈ ಸ್ತೋತ್ರ ಜಪಮಾಡುವವನಿಗೆ ಸಿಕ್ಕುವುದು.

೧೧೯–೧೨೦. ಹಸುವನ್ನು ಕೊಂದವನಾಗಲಿ, ಕೃತಘ್ನನಾಗಲಿ, ವೀರರನ್ನು ಕೊಂದವನಾಗಲಿ, ಬ್ರಾಹ್ಮಣನನ್ನು ಕೊಂದವನಾಗಲಿ, ಶರಣಾಗತರಾಗಿ ಬಂದವರನ್ನು ಕೊಂದವನಾಗಲಿ, ಮಿತ್ರನನ್ನು ನಂಬಿಸಿ ದ್ರೋಹ ಮಾಡಿದವನಾಗಲಿ, ದುಷ್ಟನಾಗಲಿ ಪಾಪವಾದ ನಡವಳಿಕೆ ಯುಳ್ಳವನಾಗಲಿ, ತಾಯಿಯನ್ನು ಕೊಂದವನಾಗಲಿ, ತಂದೆಯನ್ನು ಕೊಂದವನಾಗಲಿ, ಈ "ವ್ಯಪೋಹನ" ಸ್ತೋತ್ರಪಾಠದಿಂದ ಇಂಥಾ ಘೋರ ಪಾಪಗಳಿಂದಲೂ ಬಿಡುಗಡೆ ಮಾಡಲ್ಪಟ್ಟು ಶಿವಲೋಕದಲ್ಲಿ ಮೆರೆಯುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ವ್ಯಪೋಹನ ಸ್ತೋತ್ರ ನಿರೂಪಣೆ ಎಂಬ ಎಂಬತ್ತೆರಡನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ತ್ರ್ಯಶೀತಿತಮೋಽಧ್ಯಾಯಃ

॥ ಋಷಯ ಊಚುಃ ॥

**ವ್ಯಪೋಹನ ಸ್ತವಂ ಪುಣ್ಯಂ ಶ್ರುತ ಮಸ್ಮಾಭಿ ರಾದರಾತ್ ।**
**ಪ್ರಸಂಗಾಲ್ಲಿಂಗ ದಾನಸ್ಯ ವ್ರತಾನ್ಯಪಿ ವದಸ್ವ ನಃ ॥ ೧ ॥**

॥ ಸೂತ ಉವಾಚ ॥

**ವ್ರತಾನಿ ವಃ ಪ್ರವಕ್ಷ್ಯಾಮಿ ಶುಭಾನಿ ಮುನಿಸತ್ತಮಾಃ ।**
**ನಂದಿನಾ ಕಥಿತಾನೀಹ ಬ್ರಹ್ಮಪುತ್ರಾಯ ಧೀಮತೇ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತಮೂರನೆಯ
ಅಧ್ಯಾಯವು.

೧. ಋಷಿಗಳು ಹೇಳಿದರು :—ಓ ಸೂತಮಹರ್ಷಿಗಳೇ, ನಾವು ತಮ್ಮ ದಯೆಯಿಂದ ಪುಣ್ಯಕರವಾದ "ವ್ಯಪೋಹನ" ಸ್ತೋತ್ರವನ್ನು ಭಕ್ತಿಯಿಂದ ಕೇಳಿದೆವು. ತಾವು ದಯೆಯಿಟ್ಟು ಲಿಂಗದಾನದ ವಿಷಯವಾದ ಪ್ರಸಂಗದಲ್ಲಿ ಈ ಸ್ತೋತ್ರವನ್ನು ಹೇಳಿದ್ದರಿಂದ, ಅದಕ್ಕೆ ಸಂಬಂಧಪಟ್ಟ, ವ್ರತಗಳನ್ನೂ ಹೇಳಬೇಕು.

೨–೪. ಸೂತನು ಹೇಳಿದನು :—ಎಲೈ ಋಷಿಶ್ರೇಷ್ಠರೇ, ಮಂಗಳ ಕರವಾದ ವ್ರತಗಳ ವಿಷಯವನ್ನು ಹೇಳುತ್ತೇನೆ. ಈ ವ್ರತದ ವಿಚಾರವು ನಂದೀಶ್ವರನಿಂದ ಮೇಧಾವಿಯಾದ ಸನತ್ಕುಮಾರನಿಗೆ ಹೇಳಲ್ಪಟ್ಟಿತು. ನಾನು ಇದನ್ನು ವ್ಯಾಸಮಹರ್ಷಿಯಿಂದ ಕೇಳಿದೆನು. ಅದನ್ನೇ ನಿಮಗೆ ಹೇಳುತ್ತೇನೆ. ಪ್ರತಿಮಾಸದಲ್ಲೂ ಶುಕ್ಲಪಕ್ಷ, ಕೃಷ್ಣಪಕ್ಷ, ಇವೆರಡರಲ್ಲಿಯೂ, ರಾತ್ರಿಯ ಹೊತ್ತು ಮಾತ್ರ ಊಟಮಾಡುತ್ತಾ, ಯಾವನು ಒಂದು ವರ್ಷಕಾಲ ಶಿವನ ಪೂಜೆಯನ್ನು ಮಾಡುತ್ತಾನೋ ಅವನು ಎಲ್ಲಾ ಯಾಗ

ತಾನಿ ವ್ಯಾಸಾದುಪ ಶ್ರುತ್ಯ ಯುಷ್ಮಾಕಂ ಪ್ರವದಾಮ್ಯಹಂ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಪಕ್ಷಯೋ ರುಭಯೋ ರಪಿ ॥ ೩ ॥
ವರ್ಷಮೇಕಂ ತು ಭುಂಜಾನೋ ನಕ್ತಂ ಯಃ ಪೂಜಯೇಚ್ಛಿವಂ ।
ಸರ್ವಯಜ್ಞಫಲಂ ಪ್ರಾಪ್ಯ ಸ ಯಾತಿ ಪರಮಾಂ ಗತಿಂ ॥ ೪ ॥
ಪೃಥಿವೀಂ ಭಾಜನಂ ಕೃತ್ವಾ ಭುಕ್ತ್ವಾ ಪರ್ವಸು ಮಾನವಃ ।
ಅಹೋ ರಾತ್ರೇಣ ಚೈಕೇನ ತ್ರಿರಾತ್ರ ಫಲ ಮಶ್ನುತೇ ॥ ೫ ॥
ದ್ವಯೋ ರ್ಮಾಸಸ್ಯ ಪಂಚಮ್ಯೋ ರ್ದ್ವಯೋಃ ಪ್ರತಿಪದೋರ್ನರಃ ।
ಕ್ಷೀರ ಧಾರಾ ವ್ರತಂ ಕುರ್ಯಾತ್ ಸೋಽಶ್ವಮೇಧ ಫಲಂ ಲಭೇತ್ ॥
ಕೃಷ್ಣಾಷ್ಟಮ್ಯಾಂ ತು ನಕ್ತೇನ ಯಾವ ತ್ಕೃಷ್ಣ ಚತುರ್ದಶೀ ।
ಭುಂಜ ನ್ಭೋಗಾ ನವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ॥ ೭ ॥

---

ಗಳಿಂದಲೂ ಲಭಿಸುವ ಫಲವನ್ನು ಹೊಂದಿ, ಅತ್ಯುತ್ಕೃಷ್ಟವಾದ ಸದ್ಗತಿಯನ್ನು ಹೊಂದುತ್ತಾನೆ.

೫. ಮನುಷ್ಯನು ಭೂಮಿಯನ್ನೇ ಊಟಕ್ಕೆ ಸ್ಥಳವನ್ನಾಗಿ ಮಾಡಿಕೊಂಡು ಅಮಾವಾಸ್ಯಾ ಪೂರ್ಣಿಮೆಗಳೆಂಬ ಪಕ್ಷಗಳ ಸಂಧಿಕಾಲದ ದಿನದಲ್ಲಿ ಮಾತ್ರ ಭೋಜನಮಾಡುತ್ತಾ ಶಿವನ ಪೂಜೆಯನ್ನು ಮಾಡಿದರೆ, ಒಂದೇ ದಿನದಲ್ಲಿ ಮೂರರಷ್ಟು ಫಲವನ್ನು ಅನುಭವಿಸುತ್ತಾನೆ.

೬. ಮನುಷ್ಯನು ಎರಡು ತಿಂಗಳಲ್ಲಿ ಎರಡು ಪಂಚಮಿಗಳಲ್ಲಿಯೂ, ಎರಡು ಪಾಡ್ಯಮಿಗಳಲ್ಲಿಯೂ, ಹಾಲನ್ನು ಮಾತ್ರ ಸೇವಿಸಿ ಶಿವಪೂಜೆಯನ್ನು ಮಾಡಿದರೆ, ಅವನಿಗೆ ಅಶ್ವಮೇಧ ಯಾಗಮಾಡಿದರೆ ಯಾವ ಫಲವೋ ಅದೇ ಫಲವು ಲಭಿಸುವುದು.

೭. ಮನುಷ್ಯನು ಕೃಷ್ಣಪಕ್ಷದ ಅಷ್ಟಮಿಯಿಂದ ಚತುರ್ದಶೀ ಪರ್ಯಂತವೂ ರಾತ್ರಿಹೊತ್ತು ಮಾತ್ರ ಊಟಮಾಡುತ್ತಾ ಶಿವ ಪೂಜೆಯನ್ನು ಮಾಡಿದರೆ ಅವನು ಎಲ್ಲಾ ಭೋಗಗಳನ್ನೂ ಅನುಭವಿಸಿ ಬ್ರಹ್ಮಲೋಕವನ್ನು ಹೊಂದುವನು.

ಯೋಽಬ್ದ ಮೇಕಂ ಪ್ರಕುರ್ವೀತ ನಕ್ತಂ ಪರ್ವಸು ಪರ್ವಸು ।
ಬ್ರಹ್ಮಚಾರೀ ಜಿತ ಕ್ರೋಧಃ ಶಿವಧ್ಯಾನ ಪರಾಯಣಃ ॥ ೮ ॥
ಸಂವತ್ಸರಾಂತೇ ವಿಪ್ರೇಂದ್ರಾನ್ ಭೋಜಯೇ ದ್ವಿಧಿ ಪೂರ್ವಕಂ ।
ಸ ಯಾತಿ ಶಾಂಕರಂ ಲೋಕಂ ನಾಽತ್ರ ಕಾರ್ಯಾ ವಿಚಾರಣಾ ॥ ೯ ॥
ಉಪವಾಸಾ ತ್ಪರಂ ಭೈಕ್ಷ್ಯಂ ಭೈಕ್ಷ್ಯಾತ್ಪರ ಮಯಾಚಿತಂ ।
ಅಯಾಚಿತಾ ತ್ಪರಂ ನಕ್ತಂ ತಸ್ಮಾನ್ನಕ್ತೇನ ವರ್ತಯೇತ್ ॥೧೦॥
ದೇವೈ ರ್ಭುಕ್ತಂ ತು ಪೂರ್ವಾಹ್ಣೇ ಮಧ್ಯಾಹ್ನೇ ಋಷಿಭಿ ಸ್ತಥಾ ।
ಅಪರಾಹ್ಣೇ ಚ ಪಿತೃಭಿಃ ಸಂಧ್ಯಾಯಾಂ ಗುಹ್ಯಕಾಽದಿಭಿಃ ॥೧೧॥

---

೮-೯. ಯಾವನು ರಾತ್ರಿವೇಳೆ ಭೋಜನಮಾಡುತ್ತಾ, ಬ್ರಹ್ಮಚಾರಿಯಾಗಿಯೂ, ಕೋಪವನ್ನು ಜಯಿಸಿದವನಾಗಿಯೂ, ಶಿವಧ್ಯಾನದಲ್ಲಿ ಆಸಕ್ತನಾಗಿಯೂ, ಒಂದು ವರ್ಷಕಾಲ ಅಮಾವಾಸ್ಯಾ ಪೂರ್ಣಿಮೆಗಳ ಸಂಧಿಕಾಲಗಳಲ್ಲಿ ಶಿವ ಪೂಜೆಯನ್ನು ಮಾಡುತ್ತಾನೋ ಮತ್ತು ವರ್ಷದಕೊನೆಯಲ್ಲಿ ಬ್ರಾಹ್ಮಣ ಶ್ರೇಷ್ಠರಿಗೆ ಶಾಸ್ತ್ರೋಕ್ತರೀತಿಯಲ್ಲಿ ಸಂತರ್ಪಣೆಯನ್ನೂ ಮಾಡಿಸುವನೋ ಅವನು ಶಿವಲೋಕವನ್ನೇ ಹೊಂದುವನೆಂಬುದರಲ್ಲಿ ಸಂದೇಹವೇ ಇಲ್ಲ.

೧೦. ಮನುಷ್ಯನು ಉಪವಾಸ ಮಾಡುವುದಕ್ಕಿಂತಲೂ ಭಿಕ್ಷೆಯನ್ನು ಮಾಡುವುದೂ, ಭಿಕ್ಷೆಮಾಡುವುದಕ್ಕಿಂತಲೂ ಯಾಚಿಸದೆ ದೊರೆಯುವ ಅಹಾರದಿಂದ ಮಾತ್ರ ಭೋಜನ ವ್ರತವನ್ನು ಕೈಗೊಂಡು ಇರುವುದೂ, ಅಯಾಚಿತ ವ್ರತಕ್ಕಿಂತಲೂ ರಾತ್ರಿವೇಳೆ ಮಾತ್ರ ಊಟಮಾಡುವುದೂ, ಉತ್ತರೋತ್ತರವಾಗಿ ಮಿಗಿಲಾದ ವ್ರತಗಳಾಗಿವೆ. ಆದುದರಿಂದ ನಕ್ತ ವ್ರತವನ್ನು ಮಾನವನು ಆಚರಿಸುತ್ತಿರಬೇಕು.

೧೧. ದೇವತೆಗಳು ಮಧ್ಯಾಹ್ನಕ್ಕಿಂತ ಮುಂಚೆ ಊಟಮಾಡುತ್ತಾರೆ. ಋಷಿಗಳು ಮಧ್ಯಾಹ್ನ ಕಾಲದಲ್ಲಿ ಊಟಮಾಡುತ್ತಾರೆ. ಪಿತೃದೇವತೆಗಳು ಮಧ್ಯಾಹ್ನಕಾಲವು ಕಳೆದಮೇಲೆ ಭೋಜನ ಮಾಡುತ್ತಾರೆ. ಗುಹ್ಯಕರೆಂಬ ದೇವತೆಗಳು ಸಾಯಂಕಾಲದಲ್ಲಿ ಭೋಜನ ಮಾಡುತ್ತಾರೆ. ಆದ್ದರಿಂದ

**ಸರ್ವ ವೇಲಾ ಮತಿಕ್ರಮ್ಯ ನಕ್ತಭೋಜನ ಮುತ್ತಮಂ ।**
**ಹವಿಷ್ಯ ಭೋಜನಂ ಸ್ನಾನಂ ಸತ್ಯ ಮಾಹಾರ ಲಾಘವಂ ॥೧೨॥**
**ಅಗ್ನಿಕಾರ್ಯ ಮಧಃ ಶಯ್ಯಾಂ ನಕ್ತಭೋಜೀ ಸಮಾಚರೇತ್ ।**
**ಪ್ರತಿಮಾಸಂ ಪ್ರವಕ್ಷ್ಯಾಮಿ ಶಿವವ್ರತ ಮನುತ್ತಮಂ ॥೧೩॥**
**ಧರ್ಮಕಾಮಾರ್ಥ ಮೋಕ್ಷಾರ್ಥಂ ಸರ್ವ ಪಾಪ ವಿಶುದ್ಧಯೇ ।**
**ಪುಷ್ಯಮಾಸೇ ಚ ಸಂಪೂಜ್ಯ ಯಃ ಕುರ್ಯಾನ್ನಕ್ತಭೋಜನಂ ॥೧೪॥**
**ಸತ್ಯವಾದೀ ಜಿತಕ್ರೋಧಃ ಶಾಲಿ ಗೋಧೂಮಗೋ ರಸೈಃ ।**
**ಪಕ್ಷಯೋ ರಷ್ಟಮೀಂ ಯತ್ನಾ ದುಪವಾಸೇನ ವರ್ತಯೇತ್॥೧೫॥**

---

ಈ ವೇಳೆಗಳನ್ನೆಲ್ಲವನ್ನೂ ಬಿಟ್ಟು ಕಳೆದು ಶಿವಪೂಜಕನು ರಾತ್ರಿವೇಳೆಯಲ್ಲಿ, ಊಟಮಾಡುವುದು ಶ್ರೇಯಸ್ಕರವು.

೧೨. ರಾತ್ರಿವೇಳೆ ಭೋಜನ ಮಾಡುವ ಶಿವಾರಾಧಕನು ಚರುವೆಂಬ ದ್ರವ್ಯವನ್ನು ಭುಜಿಸಬೇಕು ಮತ್ತು ಇವನು ಸ್ನಾನದಿಂದ ಪರಿಶುದ್ಧನಾಗಿ ಊಟವನ್ನು ಕಡಿಮೆಯ ಪ್ರಮಾಣದಲ್ಲಿ ತೆಗೆದು ಕೊಳ್ಳಬೇಕು. ಅಲ್ಲದೇ ಈ ನಕ್ತಭೋಜಿಯು ಅಗ್ನಿಕಾರ್ಯವನ್ನು ಮಾಡುತ್ತಿರುವವನಾಗಿ ನೆಲದ ಮೇಲೆ ಮಲಗಬೇಕು.

೧೩. ಪ್ರತಿ ತಿಂಗಳೂ ಶ್ರೇಷ್ಠವಾದ ಶಿವನ ವ್ರತವನ್ನು ಮಾಡುವ ವಿಧಾನವನ್ನು ಹೇಳುವೆನು.

೧೪-೧೫. ಪುಷ್ಯ ಮಾಸದಲ್ಲಿ ಮನುಷ್ಯನು ಎಲ್ಲಾ ಪಾಪಗಳನ್ನು ಕಳೆದು ಕೊಳ್ಳುವದಕ್ಕೂ, ಧರ್ಮ, ಕಾಮ, ಐಶ್ವರ್ಯ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಂಪಾದಿಸುವುದಕ್ಕೂ, ಶಿವನನ್ನು ಪೂಜಿಸಿ ರಾತ್ರಿಯಲ್ಲಿ ಮಾತ್ರ ಭೋಜನ ಮಾಡಬೇಕು. ಸತ್ಯವನ್ನು ನುಡಿಯುವವನಾಗಿಯೂ, ಕೋಪವನ್ನು ಜಯಿಸಿದವನಾಗಿಯೂ, ಮನುಷ್ಯನು, ಬತ್ತ, ಗೋಧಿ, ಹಾಲು, ಮೊಸರು, ಬೆಣ್ಣೆ, ತುಪ್ಪ ಮುಂತಾದ ಗೋವಿನ ರಸವನ್ನು ಸೇವಿಸುತ್ತಾ ಶುಕ್ಲ, ಕೃಷ್ಣ ಪಕ್ಷಗಳ ಅಷ್ಟಮಿಗಳೆರಡರಲ್ಲಿಯೂ, ಪ್ರಯತ್ನ ಪೂರ್ವಕವಾಗಿ ಉಪವಾಸವನ್ನು ನಡೆಸಬೇಕು.

**ಭೂಮಿ ಶಯ್ಯಾಂ ಚ ಮಾಸಾಂತೇ ಪೌರ್ಣ ಮಾಸ್ಯಾಂ ಘೃತಾದಿಭಿಃ**
**ಸ್ನಾಪ್ಯ ರುದ್ರಂ ಮಹಾದೇವಂ ಸಂಪೂಜ್ಯ ವಿಧಿ ಪೂರ್ವಕಂ ॥೧೬॥**
**ಯಾವಕಂ ಚೌದನಂ ದತ್ವಾ ಸಕ್ಷೀರಂ ಸಘೃತಂ ದ್ವಿಜಾಃ ।**
**ಭೋಜಯೇ ದ್ಬ್ರಾಹ್ಮಣಾನ್ ಶಿಷ್ಟಾನ್ ಜಪೇಚ್ಛಾಂತಿಂ ವಿಶೇಷತಃ॥**
**ತಥಾ ಗೋ ಮಿಥುನಂ ಚೈವ ಕಪಿಲಂ ವಿನಿವೇದಯೇತ್ ।**
**ಭವಾಯ ದೇವದೇವಾಯ ಶಿವಾಯ ಪರಮೇಷ್ಠಿನೇ ॥೧೮॥**
**ಸ ಯಾತಿ ಮುನಿ ಶಾರ್ದೂಲ ವಾಹ್ನೇಯಂ ಲೋಕ ಮುತ್ತಮಂ ।**
**ಭುಕ್ತ್ವಾ ಸ ವಿಪುಲಾನ್ ಲೋಕಾನ್ ತತ್ರೈವ ಸ ವಿಮುಚ್ಯತೇ ॥೧೯॥**
**ಮಾಘಮಾಸೇ ತು ಸಂಪೂಜ್ಯ ಯಃ ಕುರಾನ್ನಕ್ತಭೋಜನಂ ।**
**ಕೃಶರಂ ಘೃತ ಸಂಯುಕ್ತಂ ಭುಂಜಾನಃ ಸಂಯತೇಂದ್ರಿಯಃ ॥**

---

೧೬. ಭೂಮಿಯಲ್ಲಿ ಮಲಗುವವನಾಗಿರುತ್ತಾ ತಿಂಗಳ ಕೊನೆಯ ಭಾಗದಲ್ಲಿ ಪೌರ್ಣಿಮಿಯಲ್ಲಿ ತುಪ್ಪವೇ ಮೊದಲಾದ ಪದಾರ್ಥಗಳಿಂದ ಶಾಸ್ತ್ರೋಕ್ತವಾದ ರೀತಿಯಲ್ಲಿ ಮಹಾದೇವನಾದ ಶಿವನನ್ನು ಸ್ನಾನಮಾಡಿಸಿ ಪೂಜಿಸಬೇಕು.

೧೭. ಎಲೈ ಬ್ರಾಹ್ಮಣರೇ, ಗೋಧಿಯಲ್ಲಿ ಮಾಡಿದ ಅನ್ನಕ್ಕೆ ತುಪ್ಪ, ಹಾಲನ್ನುಹಾಕಿ, ಶಿಷ್ಟರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅಲ್ಲದೇ ಶಿವನ ಜಪವನ್ನು ವಿಶೇಷ ರೀತಿಯಲ್ಲಿ ಮಾಡಬೇಕು.

೧೮. ಹೀಗೆ ದೇವದೇವನಾದ, ಸರ್ವಕಾರಣನಾದ, ಮಂಗಳ ಸ್ವರೂಪನಾದ ಉತ್ತಮ ಸ್ಥಾನದಲ್ಲಿರುವ, ಶಿವನಿಗೆ ಸಂತೋಷವಾಗುವಂತೆ ಪೂಜೆಯನ್ನೂ ನಡೆಸಬೇಕು.

೧೯. ಹೀಗೆ ನಡೆಸಿದವನು ಅಗ್ನಿಲೋಕವನ್ನು ಹೊಂದುವನು. ಅಲ್ಲಿ ಅನೇಕ ಭೋಗಗಳನ್ನುಹೊಂದಿ ಕೊನೆಗೆ ಮೋಕ್ಷವನ್ನೂ ಹೊಂದುವನು.

೨೦–೨೧. ಮಾಘ ಮಾಸದಲ್ಲಿ ಯಾವನು ಶಿವ ಪೂಜೆಯನ್ನುಮಾಡಿ ರಾತ್ರಿಯಲ್ಲಿ ಹೆಸರುಬೇಳೆ, ತುಪ್ಪದಿಂದ ಮಿಶ್ರವಾದ ಹುಗ್ಗಿಯನ್ನು

**ಸೋಪವಾಸಂ ಚತುರ್ದಶ್ಯಾಂ ಭವೇದುಭಯ ಪಕ್ಷಯೋಃ ।**
**ರುದ್ರಾಯ ಪೌರ್ಣಮಾಸ್ಯಾಂ ತು ದದ್ಯಾದ್ವೈ ಘೃತ ಕಂಬಲಂ ॥೨೧**
**ಕೃಷ್ಣಂ ಗೋ ಮಿಥುನಂ ದದ್ಯಾ ತ್ಪೂಜಯೇ ಚ್ಚೈವ ಶಂಕರಂ ।**
**ಭೋಜಯೇ ದ್ಬ್ರಾಹ್ಮಣಾಂ ಶ್ಚೈವ ಯಥಾ ವಿಭವ ವಿಸ್ತರಂ ॥೨೨**
**ಯಾಮ್ಯ ಮಾಸಾದ್ಯ ವೈ ಲೋಕಂ ಯಮೇನ ಸಹ ಮೋದತೇ ।**
**ಫಾಲ್ಗುನೇ ಚೈವ ಸಂಪ್ರಾಪ್ತೇ ಕುರ್ಯಾದ್ವೈ ನಕ್ತ ಭೋಜನಂ ॥೨೩॥**
**ಶ್ಯಾಮಾ ಕಾನ್ನ ಘೃತ ಕ್ಷೀರೈ ರ್ಜಿತಕ್ರೋಧೋ ಜಿತೇಂದ್ರಿಯಃ ।**
**ಚತುರ್ದಶ್ಯಾ ಮಥಾಽಷ್ಟಮ್ಯಾ ಮುಪವಾಸಂ ಚ ಕಾರಯೇತ್ ॥**
**ಪೌರ್ಣಮಾಸ್ಯಾಂ ಮಹಾದೇವಂ ಸ್ನಾಪ್ಯ ಸಂಪೂಜ್ಯ ಶಂಕರಂ ।**
**ದದ್ಯಾದ್ಗೋ ಮಿಥುನಂ ವಾಽಪಿ ತಾಮ್ರಾಭಂ ಶೂಲಪಾಣಯೇ ॥**

---

ಭೋಜನ ಮಾಡುವನೋ ಊಟಮಾಡಿ ಅವನು ಜಿತೇಂದ್ರಿಯನಾಗಿರುತ್ತಾ ಕೃಷ್ಣಪಕ್ಷ ಶುಕ್ಲಪಕ್ಷ, ಇವೆರಡರ, ಚತುರ್ದಶಿಯ ದಿನಗಳಲ್ಲಿ ಉಪವಾಸವನ್ನು ಮಾಡಬೇಕು. ಅನಂತರ ಪೌರ್ಣಮಿಯಲ್ಲಿ ಶಿವನ ತೃಪ್ತಿಗಾಗಿ ತುಪ್ಪವನ್ನೂ ಕಂಬಳಿಗಳನ್ನೂ ಬ್ರಾಹ್ಮಣರಿಗೆ ದಾನಕೊಡಬೇಕು.

೨೨. ಹೀಗೆ ಶಿವನನ್ನು ಪೂಜಿಸಬೇಕು. ಆ ಮೇಲೆ ಕಪ್ಪಾದ ಎರಡು ಹಸುಗಳನ್ನು ಶಿವನ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ಕೊಡಬೇಕು. ಅವರವರ ಯೋಗ್ಯತಾನುಸಾರವಾಗಿ ಬ್ರಾಹ್ಮಣರಿಗೆ ಭೋಜನವನ್ನೂ ಮಾಡಿಸಬೇಕು. ಹೀಗೆ ಮಾಡಿದ ಮನುಷ್ಯನು ಯಮನ ಸ್ವರೂಪವನ್ನು ಹೊಂದಿ ಯಮನೊಂದಿಗೆ ಸಂತೋಷವಾಗಿರುತ್ತಾನೆ.

೨೩–೨೫. ಫಾಲ್ಗುಣಮಾಸದಲ್ಲಿ ಮನುಷ್ಯನು ರಾತ್ರಿಭೋಜನ ಮಾಡಿ ಶ್ಯಾಮಾಕ (ಸಾವೆ) ಎಂಬ ಅಕ್ಕಿಯ ಅನ್ನ, ತುಪ್ಪ, ಹಾಲುಗಳಿಂದ ಜೀವಿಸುತ್ತಾ ಕೋಪವನ್ನು ಜಯಿಸಿದವನಾಗಿಯೂ, ಜಿತೇಂದ್ರಿಯನಾಗಿಯೂ, ಇರುತ್ತಾ ಚತುರ್ದಶಿಯಲ್ಲಿಯೂ, ಅಷ್ಟಮಿಯಲ್ಲಿಯೂ, ಉಪವಾಸವನ್ನು ಮಾಡಬೇಕು. ಪೌರ್ಣಮಿಯಲ್ಲಿ ಶಿವನಿಗೆ ಸ್ನಾನಮಾಡಿಸಿ ಆತನ ಪೂಜೆಯನ್ನು ನಡೆಯಿಸಿ ಅವನ ಪ್ರೀತ್ಯರ್ಥವಾಗಿ ಎರಡು ಕೆಂಪಗಿರುವ, ಹಸುಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು. ಅನಂತರದಲ್ಲಿ ಬ್ರಾಹ್ಮಣ

ಬ್ರಾಹ್ಮಣಾ ನ್ಭೋಜಯಿತ್ವಾ ತು ಪ್ರಾರ್ಥಯೇ ತ್ಪರಮೇಶ್ವರಂ ।
ಸ ಯಾತಿ ಚಂದ್ರಸಾಯುಜ್ಯಂ ನಾಽತ್ರಕಾರ್ಯಾ ವಿಚಾರಣಾ ॥೨೬॥
ಚೈತ್ರೇಽಪಿ ರುದ್ರ ಮಭ್ಯರ್ಚ್ಯ ಕುರ್ಯಾದ್ವೈ ನಕ್ತ ಭೋಜನಂ ।
ಶಾಲ್ಯನ್ನಂ ಪಯಸಾ ಯುಕ್ತಂ ಘೃತೇನ ಚ ಯಥಾ ಸುಖಂ ॥೨೭॥
ಗೋಷ್ಠಶಾಯೀ ಮುನಿಶ್ರೇಷ್ಠಾಃ ಕ್ಷಿತೌ ನಿಶಿ ಭವಂ ಸ್ಮರೇತ್ ।
ಪೌರ್ಣ ಮಾಸ್ಯಾಂ ಶಿವಂ ಸ್ಥಾಪ್ಯ ದದ್ಯಾದ್ಗೋ ಮಿಥುನಂ ಸಿತಂ ॥
ಬ್ರಾಹ್ಮಣಾನ್ ಭೋಜಯೇ ಚ್ಚೈವ ನಿಋತೇಃ ಸ್ಥಾನ ಮಾಪ್ನುಯಾತ್ ।
ವೈಶಾಖೇ ಚ ತಥಾ ಮಾಸೇ ಕೃತ್ವಾ ವೈ ನಕ್ತಭೋಜನಂ ॥೨೯॥
ಪೌರ್ಣಮಾಸ್ಯಾಂ ಭವಂ ಸ್ನಾಪ್ಯ ಪಂಚಗವ್ಯ ಘೃತಾದಿಭಿಃ ।
ಶ್ವೇತಂ ಗೋ ಮಿಥುನಂ ದತ್ವಾ ಸೋಽಶ್ವಮೇಧಫಲಂ ಲಭೇತ್ ॥

---

ರಿಗೆ ಸಂತರ್ಪಣೆ ನಡೆಯಿಸಿ, ಶಿವನನ್ನು ಪೂಜಿಸಬೇಕು. ಹೀಗೆ ಮಾಡಿದವನು ಚಂದ್ರನೊಂದಿಗೆ ಐಕ್ಯವಾಗುವನೆಂಬುದರಲ್ಲಿ ಸಂದೇಹವಿಲ್ಲ.

೨೭. ಚೈತ್ರಮಾಸದಲ್ಲಿಯೂ ಶಿವನನ್ನು ಆರಾಧಿಸಿ, ರಾತ್ರಿಭೋಜನವನ್ನು ಮಾಡಬೇಕು. ಆಗ ಹಾಲಿನಿಂದ ಮತ್ತು ತುಪ್ಪದಿಂದ ಮಿಶ್ರವಾದ ಶಾಲ್ಯನ್ನವನ್ನು ಹಿತವಾಗಿರುವಂತೆ ಸೇವಿಸಬೇಕು. ಎಲೈ ಋಷಿಶ್ರೇಷ್ಠರೇ, ಅನಂತರ ದನದ ಕೊಟ್ಟಿಗೆಯಲ್ಲಿ ಭೂಮಿಯಮೇಲೆ ಮಲಗಿ ರಾತ್ರಿವೇಳೆ ಶಿವನನ್ನು ಧ್ಯಾನ ಮಾಡಬೇಕು. ಪೌರ್ಣಮಿಯಲ್ಲಿ ಶಿವನಿಗೆ ಸ್ನಾನ ಮಾಡಿಸಿ, ಎರಡು ಬೆಳ್ಳಗಿರುವ ಹಸುಗಳನ್ನು ಬ್ರಾಹ್ಮಣರಿಗೆ ಕೊಡಬೇಕು.

೨೮–೩೦ ಅನಂತರ ಬ್ರಾಹ್ಮಣರಿಗೆ ಭೋಜನವನ್ನೂ ಮಾಡಿಸಬೇಕು. ಹೀಗೆ ಮಾಡಿದರೆ ಅವನಿಗೆ ವರುಣನ ಲೋಕವು ದೊರೆಯುವುದು. ವೈಶಾಖ ಮಾಸದಲ್ಲಿಯೂ ಹಾಗೆಯೇ ಪೌರ್ಣಮಿಯಲ್ಲಿ ಶಿವನಿಗೆ ತುಪ್ಪ ಮುಂತಾದ ಪಂಚಗವ್ಯ ದ್ರವ್ಯಗಳಿಂದ ಸ್ನಾನಮಾಡಿಸಿ, ಪೂಜಿಸಿದ ಮೇಲೆ ಬೆಳ್ಳಗಿರುವ ಎರಡು ಹಸುಗಳನ್ನು ಶಿವನ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ದಾನ ಮಾಡಿಸಿದರೆ ಅವನಿಗೆ ಅಶ್ವಮೇಧ ಯಾಗ ಮಾಡಿಸಿದ ಫಲವೇ ಲಭಿಸುವುದು.

ಜ್ಯೇಷ್ಠೇ ಮಾಸೇ ಚ ದೇವೇಶಂ ಭವಂ ಶರ್ವ ಮುಮಾಪತಿಂ ।
ಸಂಪೂಜ್ಯ ಶ್ರದ್ಧಯಾ ಭಕ್ತ್ಯಾ ಕೃತ್ವಾ ನ್ವೈ ನಕ್ತಭೋಜನಂ ॥೩೧॥
ರಕ್ತಶಾಲ್ಯನ್ನ ಮಧ್ವಾ ಚ ಅದ್ಭಿಃ ಪೂತಂ ಘೃತಾದಿಭಿಃ ।
ವೀರಾಸನೀ ನಿಶಾರ್ಧಂ ಚ ಗವಾಂ ಶುಶ್ರೂಷಣೇ ರತಃ ॥೩೨॥
ಪೌರ್ಣಮಾಸ್ಯಾಂ ತು ಸಂಪೂಜ್ಯ ದೇವದೇವ ಮುಮಾಪತಿಂ ।
ಸ್ನಾಪ್ಯ ಶಕ್ತ್ಯಾ ಯಥಾನ್ಯಾಯಂ ಚರುಂ ದದ್ಯಾಚ್ಚ ಶೂಲಿನೇ ॥೩೩॥
ಬ್ರಾಹ್ಮಣಾ ನ್ಭೋಜಯಿತ್ವಾ ಚ ಯಥಾ ವಿಭವ ವಿಸ್ತರಂ ।
ಧೂಮ್ರಂ ಗೋ ಮಿಥುನಂ ದತ್ವಾ ವಾಯುಲೋಕೇ ಮಹೀಯತೇ ॥
ಆಷಾಢೇ ಮಾಸಿ ಚಾಪ್ಯೇವಂ ನಕ್ತ ಭೋಜನ ತತ್ಪರಃ ।
ಭೂರಿ ಖಂಡಾಜ್ಯ ಸಂಮಿಶ್ರಂ ಸಕ್ತುಭಿ ಶ್ಚೈವ ಗೋರಸಂ ॥೩೫॥

---

೩೧–೩೨ ಜೇಷ್ಠ ಮಾಸದಲ್ಲಿ ರಾತ್ರಿ ಭೋಜನ ಮಾಡುವನಾಗಿ, ದೇವತೆಗಳಿಗೆ ಒಡೆಯನಾದ, ಭವನೂ, ಶರ್ವನೂ, ಪಾರ್ವತೀಪತಿಯೂ, ಆದ ಶಿವನನ್ನು, ಶ್ರದ್ಧಾಭಕ್ತಿಗಳಿಂದ ಪೂಜೆಮಾಡಿ, ನೀರಿನ ಪ್ರೋಕ್ಷಣೆ ಯಿಂದ ಪರಿಶುದ್ಧವಾದ, ಕೆಂಪಗಿರುವ ಶಾಲ್ಯನ್ನ, ಜೇನುತುಪ್ಪಗಳನ್ನು ಸೇವಿಸಿ, ಅರ್ಧರಾತ್ರಿಯವರೆಗೂ ವೀರಾಸನವನ್ನು ಹಾಕಿಕೊಂಡು ಕುಳಿತು ಶಿವನ ಧ್ಯಾನವನ್ನೂ, ಹಸುಗಳ ಶುಶ್ರೂಷೆಯನ್ನೂ, ಪ್ರೀತಿಯಿಂದ ಮಾಡಬೇಕು.

೩೩. ಉಮಾಪತಿಯಾದ ಶಿವನನ್ನು ಪೂಜಿಸಿ, ತನ್ನ ಯೋಗ್ಯತೆಗನು ಸರಿಸಿ, ಶಾಸ್ತ್ರೋಕ್ತವಾದ ರೀತಿಯಲ್ಲಿ ಶಿವನಿಗೆ ಸ್ನಾನಮಾಡಿಸಿ, ಶಿವನಿಗೆ ಚರುವನ್ನು ಹುಣ್ಣಿಮೆಯಲ್ಲಿ ಸಮರ್ಪಿಸಬೇಕು.

೩೪. ತಂತಮ್ಮ ದ್ರವ್ಯದ ಅನುಕೂಲತೆಗೆ ಅನುಸರಿಸಿ, ಬ್ರಾಹ್ಮಣ ರಿಗೆ ಭೋಜನ ಮಾಡಿಸಿ, ಹೊಗೆಯ ಬಣ್ಣದ ಎರಡು ಹಸುಗಳನ್ನು ಬ್ರಾಹ್ಮಣ ರಿಗೆ ದಾನಮಾಡಿ, ಶಿವನನ್ನು ಪೂಜಿಸಿದರೆ ವಾಯುಲೋಕದಲ್ಲಿ ಸುಖವಾಗಿ ಮೆರೆಯುತ್ತಾನೆ.

೩೫–೩೬. ಆಷಾಢ ಮಾಸದಲ್ಲಿಯೂ ರಾತ್ರಿಭೋಜನ ಮಾಡು ವವನಾಗಿ, ತುಪ್ಪದಿಂದ ಮಿಶ್ರವಾದ ಹಿಟ್ಟಿನ ಪದಾರ್ಥವನ್ನೂ

ಪೌರ್ಣಮಾಸ್ಯಾಂ ಘೃತಾದ್ಯೈಸ್ತು ಸ್ನಾಪ್ಯ ಪೂಜ್ಯ ಯಥಾ ವಿಧಿ ।
ಬ್ರಾಹ್ಮಣಾನ್ಭೋಜಯಿತ್ವಾ ಚ ಶ್ರೋತ್ರಿಯಾನ್ವೇದ ಪಾರಗಾನ್ ॥
ದದ್ಯಾದ್ಗೋಮಿಥುನಂ ಗೌರಂ ವಾರುಣಂ ಲೋಕಮಾಪ್ನುಯಾತ್।
ಶ್ರಾವಣೇ ಚ ದ್ವಿಜಾ ಮಾಸೇ ಕೃತ್ವಾ ವೈ ನಕ್ತ ಭೋಜನಂ ॥೩೭॥
ಕ್ಷೀರಷಷ್ಟಿಕ ಭಕ್ತೇನ ಸಂಪೂಜ್ಯ ವೃಷಭ ಧ್ವಜಂ ।
ಪೌರ್ಣಮಾಸ್ಯಾಂ ಘೃತಾದ್ಯೈಸ್ತು ಸ್ನಾಪ್ಯ ಪೂಜ್ಯ ಯಥಾವಿಧಿ ॥೩೮
ಬ್ರಾಹ್ಮಣಾನ್ಭೋಜಯಿತ್ವಾ ಚ ಶ್ರೋತ್ರಿಯಾನ್ವೇದ ಪಾರಗಾನ್ ।
ಶ್ವೇತಾಗ್ರ ಪಾದಂ ಪೌಂಡ್ರಂಚ ದದ್ಯಾದ್ಗೋಮಿಥುನಂ ಪುನಃ ॥
ಸ ಯಾತಿ ವಾಯು ಸಾಯುಜ್ಯಂ ವಾಯುವತ್ಸರ್ವಗೋ ಭವೇತ್।
ಪ್ರಾಪ್ತೇ ಭಾದ್ರಪದೇ ಮಾಸೇ ಕೃತ್ವೈವಂ ನಕ್ತಭೋಜನಂ ॥೪೦॥

---

ಹಸುವಿನಹಾಲು ಮುಂತಾದ ಗೋರಸವನ್ನೂ ಸೇವಿಸಿ, ಪೌರ್ಣಿಮೆಯಲ್ಲಿ ಶಾಸ್ತ್ರೋಕ್ತ ಕ್ರಮದಿಂದ, ತುಪ್ಪವೇ ಮೊದಲಾದ ದ್ರವ್ಯಗಳಿಂದ, ಶಿವನಿಗೆ ಸ್ನಾನಮಾಡಿಸಿ, ವೈದಿಕರಾದ, ಯೋಗ್ಯರಾದ, ಬ್ರಾಹ್ಮಣರಿಗೆ ಭೋಜನವನ್ನೂ ಮಾಡಿಸಿ, ಬೆಳ್ಳಗಿರುವ ಎರಡು ಹಸುಗಳನ್ನು ಬ್ರಾಹ್ಮಣರಿಗೆ ಕೊಟ್ಟರೆ ವರುಣಲೋಕವನ್ನು ಹೊಂದುವನು.

೩೭. ಎಲೈ ಬ್ರಾಹ್ಮಣರೇ, ಶ್ರಾವಣಮಾಸದಲ್ಲಿಯೂ ರಾತ್ರಿ ಭೋಜನವನ್ನು ಮಾಡುವವನಾಗಿ,

೩೮–೪೫. ಅರುವತ್ತುದಿನಗಳಲ್ಲಿ ಬೆಳೆಯುವ ಭತ್ತದ ಅಕ್ಕಿಯಿಂದಾದ 'ಹಾಲು ಮಿಶ್ರವಾದ ಶಾಲ್ಯನ್ನದಿಂದ ಶಿವನನ್ನು ಪೂಜಿಸಿ, ಪೌರ್ಣಿಮೆಯಲ್ಲಿ ಶಾಸ್ತ್ರೋಕ್ತವಾಗಿ ತುಪ್ಪವೇ ಮೊದಲಾದ ದ್ರವ್ಯಗಳಿಂದ ಶಿವನಿಗೆ ಸ್ನಾನಮಾಡಿಸಿ, ಯೋಗ್ಯರೂ, ಸಂಪನ್ನರೂ ಆದ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಶುಭ್ರವಾದ ಬೂದಿಯನ್ನೂ, ಬೆಳ್ಳಗಿರುವ ಕಾಲುಗಳುಳ್ಳ ಚಿತ್ರ ವರ್ಣದ ಎರಡು ಹಸುಗಳನ್ನೂ ಬ್ರಾಹ್ಮಣರಿಗೆ ದಾನಮಾಡಬೇಕು.

**ಹುತ ಶೇಷಂ ಚ ವಿಪ್ರೇಂದ್ರಾನ್ ವೃಕ್ಷ ಮೂಲಾ ಶ್ರಿತೋ ದಿವಾ ।**
**ಪೌರ್ಣಮಾಸ್ಯಾಂ ತು ದೇವೇಶಂ ಸ್ನಾಪ್ಯ ಸಂಪೂಜ್ಯ ಶಂಕರಂ ॥೪೧**
**ನೀಲಸ್ಕಂಧಂ ವೃಷಂ ಗಾಂ ಚ ದತ್ವಾ ಭಕ್ತ್ಯಾ ಯಥಾ ವಿಧಿ ।**
**ಬ್ರಾಹ್ಮಣಾ ನ್ಭೋಜ ಯಿತ್ವಾ ಚ ವೇದ ವೇದಾಂಗ ಪಾರಗಾನ್ ॥**
**ಯಕ್ಷಲೋಕ ಮನು ಪ್ರಾಪ್ಯ ಯಕ್ಷ ರಾಜೋ ಭವೇನ್ನರಃ ।**
**ತತ ಶ್ಚಾಽಶ್ವಯುಜೇ ಮಾಸಿ ಕೃತ್ವೈವಂ ನಕ್ತಭೋಜನಂ ॥೪೩॥**
**ಸ ಘೃತಂ ಶಂಕರಂ ಪೂಜ್ಯ ಪೌರ್ಣಮಾಸ್ಯಾಂ ಚ ಪೂರ್ವವತ್ ।**
**ಬ್ರಾಹ್ಮಣಾ ನ್ಭೋಜ ಯಿತ್ವಾ ಚ ಶಿವಭಕ್ತಾನ್ ಸದಾ ಶುಚೀನ್ ॥**
**ವೃಷಭಂ ನೀಲವರ್ಣಾಭ ಮುರೋದೇಶ ಸಮುನ್ನತಂ ।**
**ಗಾಂ ಚ ದತ್ವಾ ಯಥಾ ನ್ಯಾಯ ನ್ಮೈಶಾನಂ ಲೋಕ ಮಾಪ್ನುಯಾತ್**

---

ಹೀಗೆ ಮಾಡಿದರೆ ಮನುಷ್ಯನು ವಾಯುವಿನೊಂದಿಗೆ ಐಕ್ಯನಾಗಿ, ವಾಯು ವಿನಂತೆ ಎಲ್ಲಾ ಕಡೆಯಲ್ಲೂ ಸಂಚರಿಸುವನು. ॥೪೦॥ ಭಾದ್ರಪದ ಮಾಸದಲ್ಲಿಯೂ ಇದೇರೀತಿ ರಾತ್ರಿಭೋಜನವನ್ನು ಮಾಡಿ, ಹವನಮಾಡಿ ಮಿಕ್ಕಿರುವ ಅನ್ನವನ್ನೂ ಬ್ರಾಹ್ಮಣರಿಗೆ ದಾನಮಾಡಿ, ಹಗಲಿನಲ್ಲಿ ಮರದ ಬುಡದಲ್ಲಿದ್ದುಕೊಂಡು ಪೌರ್ಣಮಿಯಲ್ಲಿ ಶಿವನನ್ನು ಪೂಜಿಸಿ, ಕಪ್ಪಾದ ಕತ್ತುಳ್ಳ ಎತ್ತನ್ನೂ ಮತ್ತು ಹಸುವನ್ನೂ, ಭಕ್ತಿಯಿಂದ ಶಾಸ್ತ್ರೋಕ್ತರೀತಿ ಯಲ್ಲಿ ಬ್ರಾಹ್ಮಣರಿಗೆ ದಾನಮಾಡಿ, ವೇದ, ವೇದಾಂಗಗಳಲ್ಲಿ ನಿಪುಣರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ ಮನುಷ್ಯನು ಯಕ್ಷನಲೋಕವನ್ನು ಹೊಂದಿ ಕುಬೇರನಾಗುವನು. ॥೪೩॥ ಅನಂತರ ಆಶ್ವೀಜಮಾಸದಲ್ಲಿ ರಾತ್ರಿ ಭೋಜನಮಾಡಿ ಪೌರ್ಣಮಿಯ ದಿನ ಶಿವನನ್ನು ತುಪ್ಪದಿಂದ ಸ್ನಾನಮಾಡಿಸಿ, ಹಿಂದಿನಂತೆಯೇ ಪೂಜೆಮಾಡಿ, ಶಿವನ ಭಕ್ತರೂ, ಶುದ್ಧರೂ ಆದ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಕಪ್ಪಗಿರುವ, ಹೊಕ್ಕುಳಿನ ಹತ್ತಿರ ಎತ್ತರವಾಗಿರುವ, ಎತ್ತನ್ನು ಬ್ರಾಹ್ಮಣರಿಗೆ ದಾನ ಮಾಡಿ, ಶಾಸ್ತ್ರೋಕ್ತರೀತಿಯಲ್ಲಿ ಹಸುವನ್ನೂ ಬ್ರಾಹ್ಮಣರಿಗೆ ದಾನಮಾಡಿ ದರೆ ಶಿವಲೋಕವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

ಕಾರ್ತಿಕೇ ಚ ತಥಾ ಮಾಸೇ ಕೃತ್ವಾ ವೈ ನಕ್ತಭೋಜನಂ।
ಕ್ಷೀರೋ (ರೌ) ದನೇನ ಸಾಽಜ್ಯೇನ ಸಂಪೂಜ್ಯ ಚ ಭವಂ ಪ್ರಭುಂ ॥
ಪೌರ್ಣಮಾಸ್ಯಾಂ ಚ ವಿಧಿವ ತ್ಸ್ನಾಪ್ಯ ದತ್ವಾ ಚರುಂ ಪುನಃ ।
ಬ್ರಾಹ್ಮಣಾ ನ್ಭೋಜಯಿತ್ವಾ ಚ ಯಥಾ ವಿಭವ ವಿಸ್ತರಂ ॥೪೭॥
ದತ್ವಾ ಗೋ ಮಿಥುನಂ ಚೈವ ಕಾಪಿಲಂ ಪೂರ್ವ ವದ್ದ್ವಿಜಾಃ ।
ಸೂರ್ಯ ಸಾಯುಜ್ಯ ಮಾಪ್ನೋತಿ ನಾಽತ್ರ ಕಾರ್ಯಾ ವಿಚಾರಣಾ ॥೪೮॥
ಮಾರ್ಗಶೀರ್ಷೇ ಚ ಮಾಸೇಽಪಿ ಕೃತ್ವೈವಂ ನಕ್ತಭೋಜನಂ ।
ಯವಾನ್ನೇನ ಯಥಾ ನ್ಯಾಯ ಮಾಜ್ಯಕ್ಷೀರಾದಿಭಿಃ ಸಮಂ ॥೪೯॥
ಪೌರ್ಣಮಾಸ್ಯಾಂ ಚ ಪೂರ್ವೋಕ್ತಂ ಕೃತ್ವಾ ಶರ್ವಾಯ ಶಂಭವೇ ।
ಬ್ರಾಹ್ಮಣಾನ್ ಭೋಜಯಿತ್ವಾ ಚ ದರಿದ್ರಾನ್ ವೇದಪಾರಗಾನ್ ॥
ದತ್ವಾ ಗೋ ಮಿಥುನಂ ಚೈವ ಪಾಂಡುರಂ ವಿಧಿ ಪೂರ್ವಕಂ ।
ಸೋಮ ಲೋಕ ಮನುಪ್ರಾಪ್ಯ ಸೋಮೇನ ಸಹ ಮೋದತೇ ॥೫೦॥

---

೪೭–೪೮. ಕಾರ್ತಿಕಮಾಸದಲ್ಲಿಯೂ ರಾತ್ರಿ ಭೋಜನವನ್ನು ಮಾಡಿ, ತುಪ್ಪದಿಂದ ಕೂಡಿರುವ ಹಾಲನ್ನದಿಂದ ಸ್ವಾಮಿಯಾದ ಶಿವನನ್ನು ಪೂಜಿಸಿ, ಪೌರ್ಣಮಿಯ ದಿನ ಶಾಸ್ತ್ರೋಕ್ತರೀತಿಯಲ್ಲಿ ಶಿವನಿಗೆ ಸ್ನಾನ ಮಾಡಿಸಿ, ಚರುಸಮರ್ಪಣೆಯನ್ನು ಮಾಡಿ, ತಂತಮ್ಮ ಯೋಗ್ಯತಾನುಸಾರ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಹಿಂದಿನಂತೆಯೇ ಹೊಂಬಣ್ಣದ ಎರಡು ಹಸುಗಳನ್ನು ಬ್ರಾಹ್ಮಣರಿಗೆ ದಾನಮಾಡಿದರೆ ಮನುಷ್ಯನು ಸೂರ್ಯನೊಂದಿಗೆ ಐಕ್ಯನಾಗುತ್ತಾನೆಂಬುವುದರಲ್ಲಿ ಸಂದೇಹವಿಲ್ಲ.

೪೯–೫೦. ಮಾರ್ಗಶಿರಮಾಸದಲ್ಲಿಯೂ ಹೀಗೆಯೇ ರಾತ್ರಿ ಭೋಜನವನ್ನು ಮಾಡಿ, ತುಪ್ಪ, ಹಾಲುಗಳಿಂದ ಸಮನಾಗಿ ಬೆರೆತಿರುವ ಗೋಧಿಯ ಅನ್ನದಿಂದ ಪೌರ್ಣಮಿಯ ದಿನ ಶಿವನಿಗೆ ಪೂಜೆಯನ್ನು ಮಾಡಿ, ನಿವೇದಿಸಿ ಆರಾಧನೆಮಾಡಿ, ವೇದಪಾರಂಗತರಾದ ಬಡವರಾದ ಬ್ರಾಹ್ಮಣರಿಗೆ ಭೋಜನವನ್ನೂ ಮಾಡಿಸಿ, ಶಾಸ್ತ್ರೋಕ್ತವಾದ ರೀತಿಯಲ್ಲಿ ಬೆಳ್ಳಗಿರುವ ಎರಡು ಹಸುಗಳನ್ನೂ, ದಾನಮಾಡಿದರೆ ಮನುಷ್ಯನು ಚಂದ್ರಶೇಖರನಾದ ಶಿವನ ಕೈಲಾಸ ಲೋಕವನ್ನು ಹೊಂದಿ, ಚಂದ್ರಚೂಡನಾದ ಶಿವನೊಡನೆ ಸಂತೋಷದಿಂದಿರುತ್ತಾನೆ.

ಅಹಿಂಸಾ ಸತ್ಯ ಮಸ್ತೇಯಂ ಬ್ರಹ್ಮಚರ್ಯಂ ಕ್ಷಮಾ ದಯಾ ।
ತ್ರಿಃ ಸ್ನಾನಂ ಚಾಽಗ್ನಿ ಹೋತ್ರಂ ಚ ಭೂಶಯ್ಯಾ ನಕ್ತಭೋಜನಂ ॥
ಪಕ್ಷಯೋ ರುಪವಾಸಂ ಚ ಚತುರ್ದ ಶ್ಯಷ್ಟಮೀ ಷು ಚ ।
ಇತ್ಯೇತ ದಖಿಲಂ ಪ್ರೋಕ್ತಂ ಪ್ರತಿಮಾಸಂ ಶಿವವ್ರತಂ ॥೫೩॥
ಕುರ್ಯಾ ದ್ವರ್ಷಂ ಕ್ರಮೇಣೈವ ವ್ಯುತ್ಕ್ರಮೇಣಾಽಪಿ ವಾ ದ್ವಿಜಾಃ ।
ಸ ಯಾತಿ ಶಿವ ಸಾಯುಜ್ಯಂ ಜ್ಞಾನಯೋಗ ಮವಾಪ್ನುಯಾತ್ ॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಶಿವವ್ರತ ವಿಚಾರ
ವರ್ಣನಂ ನಾಮ ತ್ರ್ಯಶೀತಿತಮೋಽಧ್ಯಾಯಃ

---

೫೨-೫೩. ಮೂರು ಬಗೆಯ ಎಂದರೆ ಕಾಯಿಕ, ವಾಚಿಕ, ಮಾನಸಿಕಗಳಾದ ಅಹಿಂಸೆ, ಸತ್ಯ, ಕಳ್ಳತನವನ್ನು ಮಾಡದಿರುವುದು, ಬ್ರಹ್ಮಚರ್ಯ, ಕ್ಷಮಾಗುಣ, ದಯೆ, ಮೂರುಹೊತ್ತು ಸ್ನಾನ, ಅಗ್ನಿಹೋತ್ರ, ನೆಲದಮೇಲೆ ಮಲಗುವುದು, ರಾತ್ರಿವೇಳೆ ಮಾತ್ರ ಊಟಮಾಡುವುದು, ಶುಕ್ಲ, ಕೃಷ್ಣಪಕ್ಷಗಳೆರಡರಲ್ಲೂ, ಚತುರ್ದಶೀ ಮತ್ತು ಅಷ್ಟಮೀದಿನಗಳಲ್ಲಿ ಉಪವಾಸ ಮಾಡುವುದು, ಈ ಎಲ್ಲವೂ, ಪ್ರತಿ ತಿಂಗಳೂ ಶಿವವ್ರತ ಮಾಡುವವನಿಗೆ ಅತ್ಯಾವಶ್ಯಕಗಳಾದ ಸಾಮಾನ್ಯ ಧರ್ಮಗಳಾಗಿರುತ್ತವೆ.

೫೪. ವರ್ಷದಲ್ಲಿ ಕ್ರಮವಾಗಿ ಪ್ರತಿ ತಿಂಗಳಲ್ಲಿಯೂ ಅಥವಾ ಈ ಕ್ರಮವನ್ನು ಬಿಟ್ಟು ಬೇರೆಯ ಕ್ರಮದಿಂದಲಾದರೂ, ಈ ರೀತಿಯಾಗಿ ಶಿವನ ಪೂಜೆಮಾಡುವವರು ಶಿವನೊಂದಿಗೆ ಐಕ್ಯರಾಗುವರಲ್ಲದೆ ಮೋಕ್ಷಕ್ಕೆ ಬೇಕಾದ ಜ್ಞಾನವನ್ನು ಪಡೆಯುವರೆಂಬುವುದರಲ್ಲಿ ಸಂದೇಹವಿಲ್ಲವು. ಇದಕ್ಕೆ ವರ್ಷನಕ್ತವ್ರತವೆಂದು ವ್ಯವಹಾರವಿದೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಶಿವನ ವರ್ಷನಕ್ತವ್ರತದ
ವಿವರಣೆಯನ್ನು ಹೇಳಿರುವ ಎಂಬತ್ತುಮೂರನೆಯ ಅಧ್ಯಾಯವು
ಮುಗಿದುದು.

*

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಚತುರಶೀತಿ ತಮೋಽಧ್ಯಾಯಃ

**॥ ಸೂತ ಉವಾಚ ॥**

**ಉಮಾಮಹೇಶ್ವರಂ ವಕ್ಷ್ಯೇ ವ್ರತ ಮೀಶ್ವರ ಭಾಷಿತಂ ।**
**ನರ ನಾರ್ಯಾದಿ ಜಂತೂನಾಂ ಹಿತಾಯ ಮುನಿ ಸತ್ತಮಾಃ ॥ ೧ ॥**

**ಪೌರ್ಣಮಾಸ್ಯಾಂ ಅಮಾವಾಸ್ಯಾಂ ಚತುರ್ದಶ್ಯಷ್ಟಮೀಷು ಚ ।**
**ನಕ್ತ ಮಬ್ದಂ ಪ್ರಕುರ್ವೀತ ಹವಿಷ್ಯಂ ಪೂಜಯೇದ್ಭವಂ ॥ ೨ ॥**

**ಉಮಾ ಮಹೇಶ ಪ್ರತಿಮಾಂ ಹೇಮ್ನಾ ಕೃತ್ವಾ ಸುಶೋಭನಾಂ ।**
**ರಾಜತೀಂ ವಾಽಥ ವರ್ಷಾಂತೇ ಪ್ರತಿಷ್ಠಾಪ್ಯ ಯಥಾವಿಧಿ ॥ ೩ ॥**

**ಬ್ರಾಹ್ಮಣಾನ್ ಭೋಜಯಿತ್ವಾ ಚ ದತ್ವಾ ಶಕ್ತ್ಯಾ ಚ ದಕ್ಷಿಣಾಂ ।**
**ರಥಾಽದ್ಯೈ ರ್ವಾಽಪಿ ದೇವೇಶಂ ನೀತ್ವಾ ರುದ್ರಾಲಯಂ ಪ್ರತಿ ॥ ೪ ॥**

---

ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತುನಾಲ್ಕನೆಯ ಅಧ್ಯಾಯವು.

೧. ಸೂತನು ಹೇಳಿದನು:—ಎಲೈ ಋಷಿಶ್ರೇಷ್ಠರೇ, ಪುರುಷರು ಮತ್ತು ಸ್ತ್ರೀಯರೇ ಮೊದಲಾದ ಪ್ರಾಣಿಗಳ ಕ್ಷೇಮಕ್ಕಾಗಿ, ಉಮಾ ಮಹೇಶ್ವರವ್ರತದ ವಿಚಾರವನ್ನು ಹೇಳುವೆನು.

೨-೩. ಪೌರ್ಣಿಮೆ, ಅಮಾವಾಸ್ಯೆ, ಚತುರ್ದಶೀ, ಅಷ್ಟಮೀ, ಈ ದಿನಗಳಲ್ಲಿ ರಾತ್ರಿಯ ಹೊತ್ತು ಒಂದು ವರ್ಷಕಾಲ ಶಿವನನ್ನು ಪೂಜಿಸಬೇಕು. ಸುಂದರವಾದ ಪಾರ್ವತಿಪರಮೇಶ್ವರರ ಪ್ರತಿಮೆಯನ್ನು ಚಿನ್ನದಿಂದಲಾಗಲಿ, ಬೆಳ್ಳಿಯಿಂದಲಾಗಲಿ, ಮಾಡಿಸಿ, ಶಾಸ್ತ್ರೋಕ್ತವಾದ ರೀತಿಯಲ್ಲಿ ಪ್ರಾಣ ಪ್ರತಿಷ್ಠೆಯನ್ನೂ ಹವಿಷ್ಯನೈವೇದ್ಯವನ್ನೂ ಮಾಡಬೇಕು.

೪-೫. ವರ್ಷದ ಕೊನೆಯಲ್ಲಿ ಬ್ರಾಹ್ಮಣರಿಗೆ ಭೋಜನಮಾಡಿಸಿ, ದಕ್ಷಿಣೆಯನ್ನೂ ಕೊಟ್ಟು ರಥವೇ ಮೊದಲಾದುದರಿಂದ ಶಿವನನ್ನು ಎಲ್ಲ

ಸರ್ವಾತಿಶಯ ಸಂಯುಕ್ತೈಶ್ಛತ್ರ ಚಾಮರ ಭೂಷಣೈಃ ।
ನಿವೇದಯೇದ್ವ್ರತಂ ಚೈವ ಶಿವಾಯ ಪರಮೇಷ್ಠಿನೇ ॥ ೫ ॥
ಸ ಯಾತಿ ಶಿವಸಾಯುಜ್ಯಂ ನಾರೀ ದೇವ್ಯಾ ಯದಿ ಪ್ರಭೋ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ನಿಯತಾ ಬ್ರಹ್ಮಚಾರಿಣೀ ॥ ೬ ॥
ವರ್ಷಮೇಕಂ ನ ಭುಂಜೀತ ಕನ್ಯಾ ವಾ ವಿಧವಾಽಪಿ ವಾ ।
ವರ್ಷಾಂತೇ ಪ್ರತಿಮಾಂ ಕೃತ್ವಾ ಪೂರ್ವೋಕ್ತ ವಿಧಿನಾ ತತಃ ॥ ೭ ॥
ಪ್ರತಿಷ್ಠಾಪ್ಯ ಯಥಾನ್ಯಾಯಂ ದತ್ವಾ ರುದ್ರಾಲಯೇ ಪುನಃ ।
ಬ್ರಾಹ್ಮಣಾನ್ಭೋಜಯಿತ್ವಾ ಚ ಭವಾನ್ಯಾ ಸಹ ಮೋದತೇ ॥ ೮ ॥
ಯಾ ನಾರ್ಯೇವಂ ಚರೇದಬ್ದಂ ಕೃಷ್ಣಾಮೇಕಾಂ ಚತುರ್ದಶೀಂ ।

---

ವೈಭವಗಳಿಂದಲೂ ಎಂದರೆ ಛತ್ರಿಚಾಮರಾದಿ ಅಲಂಕಾರಗಳಿಂದ ಪೂಜಿಸಿ, ಶಿವನ ದೇವಸ್ಥಾನಕ್ಕೆ ತೆಗೆದುಕೊಂಡು ಹೋಗಿ, ಪರಬ್ರಹ್ಮನಾದ ಶಿವನಿಗೆ ವ್ರತವನ್ನು ಸಮರ್ಪಣೆಮಾಡಬೇಕು.

೬. ಹೀಗೆ ಮಾಡಿದರೆ ಪುರುಷನಾದರೆ ಶಿವನೊಂದಿಗೆ ಐಕ್ಯವನ್ನೂ, ಹೆಂಗುಸಾದರೆ ಪಾರ್ವತಿಯೊಂದಿಗೆ ಐಕ್ಯವನ್ನೂ ಹೊಂದುವರು.

೭-೮. ಅಷ್ಟಮಿಯಲ್ಲಿಯೂ ಚತುರ್ದಶಿಯಲ್ಲಿಯೂ, ನಿಯಮ ಪೂರ್ವಕವಾಗಿ, ಬ್ರಹ್ಮಚಾರಿಣಿಯಾಗಿ, ಹಿಂದೆ ಹೇಳಿದ ಎರಡು ದಿವಸ ಗಳಲ್ಲಿ ವರ್ಷಪರ್ಯಂತವಾಗಿ, ಕನ್ಯೆಯಾಗಲಿ ಅಥವಾ ವಿಧವೆಯಾಗಲಿ, ಭೋಜನ ಮಾಡಬಾರದು. ಒಂದು ವರ್ಷದ ಕೊನೆಯಲ್ಲಿ ಹಿಂದೆ ಹೇಳಿದ ನಿಯಮ ಪ್ರಕಾರ ಪ್ರತಿಮೆಯನ್ನು ಶಾಸ್ತ್ರೋಕ್ತರೀತಿಯಲ್ಲಿ ಪ್ರತಿಷ್ಠೆ ಮಾಡಿಸಿ, ಶಿವನ ಮಂದಿರದಲ್ಲಿ ಅದನ್ನು ಸಮರ್ಪಣೆಮಾಡಿ, ಬ್ರಾಹ್ಮಣ ರಿಗೆ ಭೋಜನ ಮಾಡಿಸಿದರೆ ಅಂಥವಳು ಪಾರ್ವತಿಯೊಂದಿಗೆ ಆನಂದವಾದ ಸ್ಥಾನವನ್ನು ಹೊಂದುವಳು.

೯-೧೦. ಯಾವ ಹೆಂಗುಸು ಒಂದು ವರ್ಷಕಾಲ ಕೃಷ್ಣಪಕ್ಷ

ವರ್ಷಾಂತೇ ಪ್ರತಿಮಾಂ ಕೃತ್ವಾ ಯೇನ ಕೇನಾಽಪಿ ವಾ ದ್ವಿಜಾಃ ॥ ೯
ಪೂರ್ವೋಕ್ತ ಮಖಿಲಂ ಕೃತ್ವಾ ಭವಾನ್ಯಾ ಸಹ ಮೋದತೇ ।
ಅಮಾವಾಸ್ಯಾಂ ನಿರಾಹಾರಾ ಭವೇದಬ್ದಂ ಸುಯಂತ್ರಿತಾ ॥೧೦॥
ಶೂಲಂ ಚ ವಿಧಿನಾ ಕೃತ್ವಾ ವರ್ಷಾಂತೇ ವಿನಿವೇದಯೇತ್ ।
ಸ್ನಾಪ್ಯೇಶಾನಂ ಯಜೇದ್ಭಕ್ತ್ಯಾ ಸಹಸ್ರೈಃ ಕಮಲೈಃ ಸ್ಥಿತೈಃ ॥೧೧॥
ರಾಜತಂ ಕಮಲಂ ಚೈವ ಜಾಂಬೂನದ ಸು ಕರ್ಣಿಕಾಂ ।
ದತ್ವಾ ಭವಾಯ ವಿಪ್ರೇಭ್ಯಃ ಪ್ರದದ್ಯಾದ್ದಕ್ಷಿಣಾ ಮಪಿ ॥೧೨॥
ಕಾಮತೋಽಪಿ ಕೃತಂ ಪಾಪಂ ಭ್ರೂಣಹತ್ಯಾದಿಕಂ ಚ ಯತ್ ।
ತತ್ಸರ್ವಂ ಶೂಲ ದಾನೇನ ಭಿಂಧ್ಯಾನ್ನಾರೀ ನ ಸಂಶಯಃ ॥೧೩॥

---

ಚತುರ್ದಶಿಯಲ್ಲಿ ಈ ವ್ರತವನ್ನು ಆಚರಿಸುವಳೋ ವರ್ಷದ ಕೊನೆಯಲ್ಲಿ ಪ್ರತಿಮೆಯನ್ನೂ ಪ್ರತಿಷ್ಠೆಮಾಡಿ, ಹಿಂದೆ ಹೇಳಿದ ರೀತಿಯಲ್ಲಿ ನಡೆಸುವಳೋ ಅವಳಿಗೆ ಪಾರ್ವತಿಯಲ್ಲಿ ಐಕ್ಯವಾಗಿರುವ ಪುಣ್ಯವು ಲಭಿಸುವುದು. ಇವಳು ಜಿತೇಂದ್ರಿಯಳಾಗಿ ವರ್ಷಕಾಲ ಅಮಾವಾಸ್ಯೆಯ ದಿನ ಊಟ ಮಾಡದೇ ಇರಬೇಕು.

೧೧-೧೨. ಶಾಸ್ತ್ರೋಕ್ತವಾದ ರೀತಿಯಲ್ಲಿ ಶೂಲವನ್ನೂ ಮಾಡಿಸಿ, ಬ್ರಾಹ್ಮಣರಿಗೆ ದಾನಮಾಡಬೇಕು. ಶಿವನಿಗೆ ಸ್ನಾನಮಾಡಿಸಿ, ಬೆಳ್ಳಗಿರುವ ಸಾವಿರ ಕಮಲದ ಹೂಗಳಿಂದ ಭಕ್ತಿಯಿಂದ ಪೂಜಿಸಬೇಕು. ಬೆಳ್ಳಿಯ ಕಮಲವನ್ನು ಚಿನ್ನದಿಂದ ಮಾಡಿದ ಮಧ್ಯದ ದಿಂಡಿನೊಂದಿಗೆ ಮಾಡಿಸಿ ಶಿವನ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ದಾನಮಾಡಿ, ದಕ್ಷಿಣೆಯನ್ನು ಕೊಡಬೇಕು.

೧೩. ಸ್ವೇಚ್ಛೆಯಿಂದಲೇ ಮಾಡಿದ ಎಳೆಯ ಶಿಶುವಿನ ಕೊಲೆ ಮುಂತಾದ ಪಾಪಗಳೂ, ಸ್ತ್ರೀಯು ಹೀಗೆ ಶೂಲ ದಾನ ಮಾಡುವುದರಿಂದ ತೊಲಗಿ ಹೋಗುವುವು.

ಸಾಯುಜ್ಯಂ ಚೈವ ಮಾಪ್ನೋತಿ ಭವಾನ್ಯಾ ದ್ವಿಜ ಸತ್ತಮಾಃ।
ಕುರ್ಯಾ ದ್ಯದ್ವಾ ನರಃ ಸೋಽಪಿ ರುದ್ರಸಾಯುಜ್ಯ ಮಾಪ್ನುಯಾತ್॥
ಪೌರ್ಣಮಾಸ್ಯಾ ಮಮಾವಾಸ್ಯಾಂ ವರ್ಷಮೇಕ ಮತಂದ್ರಿತಾ।
ಉಪವಾಸ ರತಾ ನಾರೀ ನರೋಽಪಿ ದ್ವಿಜ ಸತ್ತಮಾಃ ॥೧೫॥
ನಿಯೋಗಾದೇವ ತತ್ಕಾರ್ಯಂ ಭರ್ತೄಣಾಂ ದ್ವಿಜ ಸತ್ತಮಾಃ।
ಜಪಂ ದಾನಂ ತಪಃ ಸರ್ವ ಮಸ್ವತಂತ್ರಾ ಯತಃ ಸ್ತ್ರಿಯಃ ॥೧೬॥
ವರ್ಷಾಂತೇ ಸರ್ವ ಗಂಧಾಢ್ಯಾಂ ಪ್ರತಿಮಾಂ ಸಂನಿವೇದಯೇತ್।
ಸಾ ಭವಾನ್ಯಾಶ್ಚ ಸಾಯುಜ್ಯಂ ಸಾರೂಪ್ಯಂ ಚಾಪಿ ಸು ವ್ರತಾ॥೧೭॥

---

೧೪. ಎಲೈ ಬ್ರಾಹ್ಮಣರೇ, ಇವಳು ಕೊನೆಯಲ್ಲಿ ಪಾರ್ವತಿಯೊಂದಿಗೆ ಐಕ್ಯಳಾಗುವಳು. ಅಲ್ಲದೆ ಪುರುಷನು ಈ ವ್ರತವನ್ನು ಆಚರಿಸಿದರೂ, ಅವನು ಶಿವನೊಂದಿಗೆ ಐಕ್ಯನಾಗುವನು.

೧೫. ಒಂದು ವರ್ಷಕಾಲ ಪೌರ್ಣೋಮಿ ಅಮಾವ್ಯಾಸ್ಯೆದಿನಗಳಲ್ಲಿ ಆಲಸ್ಯವಿಲ್ಲದೇ ಉಪವಾಸ ಮಾಡುತ್ತಾ ಈ ವ್ರತವನ್ನು ಆಚರಿಸುವ ಸ್ತ್ರೀಯಾಗಲೀ, ಪುರುಷನಾಗಲಿ, ಶಿವೈಕ್ಯರಾಗುವರು.

೧೬. ಎಲೈ ಬ್ರಾಹ್ಮಣರೇ, ಸ್ತ್ರೀಯರು ಈ ವ್ರತವನ್ನು ತಮ್ಮ ಗಂಡಂದಿರ ಅಪ್ಪಣೆಯನ್ನು ಪಡೆದೇ ಮಾಡಬೇಕು. ಸ್ತ್ರೀಯು ಜಪ, ದಾನ, ತಪಸ್ಸು, ಮುಂತಾದ ಯಾವ ಕೆಲಸವನ್ನು ಮಾಡಬೇಕಾದರೂ, ಗಂಡನ ಅಪ್ಪಣೆಯನ್ನು ಪಡೆಯಲೇ ಬೇಕು. ಏಕೆಂದರೆ ಸ್ತ್ರೀಯರು ಯಾವಾಗಲೂ ಸ್ವತಂತ್ರರಲ್ಲವು.

೧೭. ವರ್ಷದ ಕೊನೆಯಲ್ಲಿ ಒಳ್ಳೆಯ ಈ ವ್ರತವನ್ನು ನಡೆಸುವ ಸ್ತ್ರೀಯು ಶ್ರೇಷ್ಠವಾದ ಗಂಧದಿಂದ ಅರ್ಚಿತವಾಗಿ ಸುವಾಸನೆಯಾಗಿರುವ ಈ ಪ್ರತಿಮೆಯನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು. ಹೀಗೆ ಮಾಡಿದರೆ ಇವಳು ಪಾರ್ವತಿಯೊಂದಿಗೆ ಐಕ್ಯವನ್ನು ಪಡೆದವಳಾಗಿಯೂ, ಅವಳಿಗೆ ಸಮಾನವಾದ ರೂಪವನ್ನು ಹೊಂದಿದವಳೂ, ಆಗುವಳು.

**ಲಭತೇ ನಾತ್ರ ಸಂದೇಹಃ ಸತ್ಯಂ ಸತ್ಯಂ ವದಾಮ್ಯಹಂ ।**
**ಕಾರ್ತಿಕ್ಯಾಂ ವಾ ತು ಯಾ ನಾರೀ ಏಕ ಭುಕ್ತೇನ ವರ್ತತೇ ॥೧೮॥**
**ಕ್ಷಮಾಽಹಿಂಸಾದಿ ನಿಯಮೈಃ ಸಂಯುಕ್ತಾ ಬ್ರಹ್ಮಚಾರಿಣೀ ।**
**ದದ್ಯಾತ್ಕೃಷ್ಣ ತಿಲಾನಾಂ ಚ ಭಾರಮೇಕ ಮತಂದ್ರಿತಾ ॥೧೯॥**
**ಸ ಘೃತಂ ಸ ಗುಡಂ ಚೈವ ಓದನಂ ಪರಮೇಷ್ಠಿನೇ ।**
**ದತ್ವಾ ಚ ಬ್ರಾಹ್ಮಣೇಭ್ಯಶ್ಚ ಯಥಾ ವಿಭವ ವಿಸ್ತರಂ ॥೨೦॥**
**ಅಷ್ಟಮ್ಯಾಂ ಚ ಚತುರ್ದಶ್ಯಾ ಮುಪವಾಸ ರತಾ ಚ ಸಾ ।**
**ಭವಾನ್ಯಾ ಮೋದತೇ ಸಾರ್ಧಂ ಸಾರೂಪ್ಯಂ ಪ್ರಾಪ್ಯ ಸು ವ್ರತಾ ॥**
**ಕ್ಷಮಾ ಸತ್ಯಂ ದಯಾ ದಾನಂ ಶೌಚ ಮಿಂದ್ರಿಯ ನಿಗ್ರಹಃ ।**
**ಸರ್ವವ್ರತೇಷ್ವಯಂ ಧರ್ಮಃ ಸಾಮಾನ್ಯೋ ರುದ್ರ ಪೂಜನಂ॥೨೨॥**

---

೧೮–೨೦. ಈ ರೀತಿಯಾಗಿ ಪೂಜಿಸಿದ ಹೆಂಗುಸು ಶಿವೈಕ್ಯವಾಗುವಳು ಎಂಬವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಕಾರ್ತಿಕಮಾಸದಲ್ಲಿ ಹೆಂಗುಸು ಪಾರ್ವತಿಯಲ್ಲಿ ಅಚಲವಾದ ಭಕ್ತಿಯನ್ನು ವಹಿಸಿ, ಶಾಂತಿ, ಅಹಿಂಸೆ, ಮುಂತಾದ ಗುಣಗಳಿಂದ ಕೂಡಿದವಳಾಗಿ, ಬ್ರಹ್ಮಚಾರಿಣಿಯಾಗಿ ಆಲಸ್ಯ ವಿಲ್ಲದೆ ಕಪ್ಪು ಎಳ್ಳನ್ನು ಹೆಚ್ಚಿನ ಪ್ರಮಾಣದಲ್ಲಿ ಬ್ರಾಹ್ಮಣರಿಗೆ ದಾನ ಮಾಡಬೇಕು. ಪರಬ್ರಹ್ಮಸ್ವರೂಪನಾದ ಶಿವನಿಗೆ ತುಪ್ಪದಿಂದ ಮತ್ತು ಬೆಲ್ಲದಿಂದ ಮಿಶ್ರವಾದ ಅನ್ನವನ್ನು ನಿವೇದನಮಾಡಿ, ಅನಂತರ ತನ್ನ ಯೋಗ್ಯತೆಗೆ ಅನುಸಾರವಾಗಿ ಬ್ರಾಹ್ಮಣರಿಗೆ ಗೋದಾನವನ್ನು ಮಾಡ ಬೇಕು.

೨೧–೨೩. ಹೀಗೆ ವ್ರತವನ್ನು ಮಾಡುವ ಸ್ತ್ರೀಯು ಅಷ್ಟಮೀ ಮತ್ತು ಚತುರ್ದಶೀ ದಿನಗಳಲ್ಲಿ ಉಪವಾಸ ಮಾಡುವವಳಾಗಿ, ಪಾರ್ವ ತಿಯ ಪೂಜೆಯನ್ನು ಮಾಡಿದರೆ, ಪಾರ್ವತಿಯಂತೆಯೇ ರೂಪವನ್ನುಹೊಂದಿ ಪಾರ್ವತಿಯೊಂದಿಗೆ ಸಂತೋಷದಿಂದ ವಾಸಮಾಡುವಳು. ಶಾಂತಿ, ಸತ್ಯ ದಯಾ, ದಾನ, ಪರಿಶುದ್ಧತೆ, ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿ ರುವುದು, ಇವು ಎಲ್ಲಾ ವ್ರತಾಚರಣೆಗಳಲ್ಲಿಯೂ, ಆವಶ್ಯಕವಾದ ಸಮಾನ

**ಸಮಾಸಾದ್ವಃ ಪ್ರವಕ್ಷ್ಯಾಮಿ ಪ್ರತಿಮಾಸ ಮನು ಕ್ರಮಾತ್ ।**
**ಮಾರ್ಗಶೀರ್ಷಕ ಮಾಸಾದಿ ಕಾರ್ತಿಕ್ಯಾಂತಂ ಯಥಾ ಕ್ರಮಂ ॥೨೩॥**
**ವ್ರತಂ ಸು ವಿಪುಲಂ ಪುಣ್ಯಂ ನಂದಿನಾ ಪರಿಭಾಷಿತಂ ।**
**ಮಾರ್ಗಶೀರ್ಷಕ ಮಾಸೇಽಥ ವೃಷಂ ಸ್ಪೂರ್ಣಾಂಗ ಮುತ್ತಮಂ ॥**
**ಅಲಂಕೃತ್ಯ ಯಥಾನ್ಯಾಯಂ ಶಿವಾಯ ವಿನಿವೇದಯೇತ್ ।**
**ಸಾ ಚ ಸಾರ್ಧಂ ಭವಾನ್ಯಾ ವೈ ಮೋದತೇ ನಾಽತ್ರ ಸಂಶಯಃ ॥**
**ಪುಷ್ಯಮಾಸೇ ತು ವೈ ಶೂಲಂ ಪ್ರತಿಷ್ಠಾಪ್ಯ ನಿವೇದಯೇತ್ ।**
**ಪೂರ್ವೋಕ್ತ ಮಖಿಲಂ ಕೃತ್ವಾ ಭವಾನ್ಯಾ ಸಹ ಮೋದತೇ ॥೨೬॥**
**ಮಾಘಮಾಸೇ ರಥಂ ಕೃತ್ವಾ ಸರ್ವ ಲಕ್ಷಣ ಲಕ್ಷಿತಂ ।**
**ದದ್ಯಾ ತ್ಸಂಪೂಜ್ಯ ದೇವೇಶಂ ಬ್ರಾಹ್ಮಣಾಂ ಶ್ಚೈವ ಭೋಜಯೇತ್ ॥**

---

ವಾದ ಧರ್ಮಗಳು. ಹಾಗೆಯೇ ಶಿವನನ್ನು ಪೂಜಿಸುವುದೂ ಸಹ ಎಲ್ಲಾ ವ್ರತಗಳಲ್ಲಿಯ ಸಾಮಾನ್ಯ ಧರ್ಮವು. ಮಾರ್ಗಶಿರ ಮಾಸದಿಂದ ಹಿಡಿದು ಕಾರ್ತಿಕ ಮಾಸದವರೆಗೂ ಪ್ರತಿ ತಿಂಗಳಲ್ಲೂ ನಡೆಸಬೇಕಾದ ವ್ರತದ ನಿಯಮವನ್ನು ಕ್ರಮವಾಗಿ ಹೇಳುವೆನು.

೨೪. ಮಾರ್ಗಶೀರ್ಷ ಮಾಸದಲ್ಲಿ ತುಂಬಿದ ಅವಯವಗಳುಳ್ಳ, ಶ್ರೇಷ್ಠವಾದ ಎತ್ತನ್ನು ಚೆನ್ನಾಗಿ ಅಲಂಕಾರಮಾಡಿ, ಶಿವನಿಗೆ ಸಮರ್ಪಣೆ ಮಾಡಬೇಕು.

೨೫–೨೬. ಹೀಗೆ ಮಾಡಿದ ಹೆಂಗುಸು ಪಾರ್ವತಿಯೊಡನೆ ಆನಂದ ದಿಂದ ವಾಸಮಾಡುವಳು ಎಂಬುದರಲ್ಲಿ ಸಂದೇಹವಿಲ್ಲ. ಪುಷ್ಯ ಮಾಸ ದಲ್ಲಿ ಶೂಲವನ್ನು ಪ್ರತಿಷ್ಠೆಮಾಡಿ, ಶಿವನಿಗೆ ಸಮರ್ಪಣೆ ಮಾಡಬೇಕು. ಹಿಂದೆ ಹೇಳಿದ ಸಮಸ್ತವಾದ ವಿಚಾರಗಳನ್ನೂ ತಪ್ಪದೇ ನಡೆಸಿದ ಹೆಂಗುಸು ಪಾರ್ವತಿಯೊಂದಿಗೆ ಆನಂದದಿಂದ ವಾಸಮಾಡುವಳು:

೨೭–೨೮. ಮಾಘ ಮಾಸದಲ್ಲಿ ಎಲ್ಲಾ ಲಕ್ಷಣಗಳಿಂದ ಕೂಡಿರುವ ರಥವನ್ನು ಮಾಡಿಸಿ ಶಿವನನ್ನು ಪೂಜಿಸಿ ಬ್ರಾಹ್ಮಣರಿಗೆ ದಾನಮಾಡಬೇಕು.

ಸಾ ಚ ದೇವ್ಯಾ ಮಹಾಭಾಗಾ ಮೋದತೇ ನಾಽತ್ರ ಸಂಶಯಃ ।
ಫಾಲ್ಗುನೇ ಪ್ರತಿಮಾಂ ಕೃತ್ವಾ ಹಿರಣ್ಯೇನ ಯಥಾ ವಿಧಿ ॥೨೮॥
ರಾಜತೇನಾಽಪಿ ತಾಮ್ರೇಣ ಯಥಾ ವಿಭವ ವಿಸ್ತರಂ ।
ಪ್ರತಿಷ್ಠಾಪ್ಯ ಸಮಭ್ಯರ್ಚ್ಯ ಸ್ಥಾಪಯೇಚ್ಛಂಕರಾಲಯೇ ॥೨೯॥
ಸಾ ಚ ಸಾರ್ಧಂ ಮಹಾದೇವ್ಯಾ ಮೋದತೇ ನಾಽತ್ರ ಸಂಶಯಃ ।
ಚೈತ್ರೇ ಭವಂ ಕುಮಾರಂ ಚ ಭವಾನೀಂ ಚ ಯಥಾ ವಿಧಿ ॥೩೦॥
ತಾಮ್ರಾದ್ಯೈರ್ವಿಧಿವತ್ಕೃತ್ವಾ ಪ್ರತಿಷ್ಠಾಪ್ಯ ಯಥಾ ವಿಧಿ ।
ಭವಾನ್ಯಾ ಮೋದತೇ ಸಾರ್ಧಂ ದತ್ವಾ ರುದ್ರಾಯ ಶಂಭವೇ ॥೩೧॥

---

ಮತ್ತು ಬ್ರಾಹ್ಮಣರಿಗೂ ಭೋಜನವನ್ನು ಮಾಡಿಸಬೇಕು. ಈ ರೀತಿಯಾಗಿ ಶಿವನ ಪೂಜೆಯನ್ನುಮಾಡಿ ಮಹಾಪುಣ್ಯ ಶಾಲಿಯಾದ ಹೆಂಗುಸು ಪಾರ್ವತಿಯೊಂದಿಗೆಆನಂದದಿಂದ ವಾಸ ಮಾಡುವಳೆಂಬುದರಲ್ಲಿ ಸಂದೇಹವಿಲ್ಲ.

೨೯. ಫಾಲ್ಗುಣ ಮಾಸದಲ್ಲಿ ಶಾಸ್ತ್ರೋಕ್ತವಾಗಿ ಚಿನ್ನದಿಂದ ಶಿವನ ಪ್ರತಿಮೆಯನ್ನುಮಾಡಿಸಿ ಅಥವಾ ಭಕ್ತರು ಅವರವರ ಯೋಗ್ಯತಾನುಸಾರವಾಗಿ ಬೆಳ್ಳಿಯ ಅಥವಾ ತಾಮ್ರದ ಪ್ರತಿಮೆಯನ್ನು ಮಾಡಿಸಿ, ಪ್ರಾಣಪ್ರತಿಷ್ಠೆಮಾಡಿ, ಅದನ್ನು ಪೂಜಿಸಿ, ಶಿವನ ದೇವಸ್ಥಾನದಲ್ಲಿ ಅದನ್ನು ಸ್ಥಾಪಿಸಬೇಕು.

೩೦–೩೧. ಹಾಗೆ ವ್ರತಮಾಡಿದ ಹೆಂಗುಸು ಮಹಾದೇವಿಯಾದ ಪಾರ್ವತಿಯೊಡನೆ ಆನಂದದಿಂದಿರುವಳು, ಎಂಬುವುದರಲ್ಲಿ ಸಂಶಯವಿಲ್ಲ. ಚೈತ್ರಮಾಸದಲ್ಲಿ ಶಿವ, ಪಾರ್ವತಿ ಮತ್ತು ಷಣ್ಮುಖಸ್ವಾಮಿ ಇವರ ಪ್ರತಿಮೆಯನ್ನು ಶಾಸ್ತ್ರೋಕ್ತವಾದ ರೀತಿಯಲ್ಲಿ ತಾಮ್ರವೇ ಮೊದಲಾದ ಲೋಹಗಳಿಂದ ಮಾಡಿಸಿ, ಪೂಜೆಮಾಡಿದ ಹೆಂಗುಸು ಪಾರ್ವತಿಯೊಂದಿಗೆ ಸುಖವಾಗಿರುವಳೆಂಬುದರಲ್ಲಿ ಸಂದೇಹವಿಲ್ಲ.

ಕೃತ್ವಾಽಽಲಯಂ ಹಿ ಕೌಬೇರಂ ರಾಜತಂ ರಜತೇನ ವೈ ।
ಈಶ್ವರೋಮಾ ಸಮಾಯುಕ್ತಂ ಗಣೇಶೈಶ್ಚ ಸಮಂ ತತಃ ॥೩೨॥
ಸರ್ವರತ್ನ ಸಮಾಯುಕ್ತಂ ಪ್ರತಿಷ್ಠಾಪ್ಯ ಯಥಾ ವಿಧಿ ।
ಸ್ಥಾಪಯೇತ್ಪರಮೇಶಸ್ಯ ಭವಸ್ಯಾಯ ತನೇ ಶುಭೇ ॥೩೩॥
ವೈಶಾಖೇ ವೈ ಚರೇ ದೇವಂ ಕೈಲಾಸಾಖ್ಯಂ ವ್ರತೋತ್ತಮಂ ।
ಕೈಲಾಸ ಪರ್ವತಂ ಪ್ರಾಪ್ಯ ಭವಾನ್ಯಾ ಸಹ ಮೋದತೇ ॥೩೪॥
ಜ್ಯೇಷ್ಠೇ ಮಾಸಿ ಮಹಾದೇವಂ ಲಿಂಗಮೂರ್ತಿ ಮುಮಾಪತಿಂ ।
ಕೃತಾಂಜಲಿ ಪುಟೇನೈವ ಬ್ರಹ್ಮಣಾ ವಿಷ್ಣುನಾ ತಥಾ ॥೩೫॥
ಮಧ್ಯೇ ಭವೇನ ಸಂಯುಕ್ತಂ ಲಿಂಗಮೂರ್ತಿಂ ದ್ವಿಜೋತ್ತಮಾಃ ।
ಹಂಸೇನ ಚ ವರಾಹೇಣ ಕೃತ್ವಾ ತಾಮ್ರಾದಿಭಿಃ ಶುಭಾಂ ॥೩೬॥

---

೩೨. ಈ ಪ್ರತಿಮೆಗಳನ್ನು ಶಿವನಿಗೆ ಸಮರ್ಪಣೆ ಮಾಡಿ, ಬೆಳ್ಳಿಯ ಕೈಲಾಸ ಪರ್ವತವನ್ನೂ ಮಾಡಿಸಿ, ಅದರಲ್ಲಿ ಈಶ್ವರ, ಪಾರ್ವತಿಯರನ್ನೂ, ಗಣಾಧಿಪತಿಗಳು ಸುತ್ತಲೂ ಇರುವಹಾಗೆಯೂ, ಪ್ರತಿಮೆಗಳನ್ನು ಮಾಡಿಸಬೇಕು.

೩೩–೩೫. ಎಲ್ಲಾ ವಿಧವಾದ ರತ್ನಗಳಿಂದಲೂ ಕೂಡಿರುವ ಪ್ರತಿಮೆಯನ್ನು ಶಾಸ್ತ್ರೋಕ್ತವಾದ ಶಿವನ ಮಂದಿರದಲ್ಲಿ ಸ್ಥಾಪನೆ ಮಾಡಿಸಬೇಕು. ವೈಶಾಖ ಮಾಸದಲ್ಲಿ ಈ ರೀತಿ ಕೈಲಾಸವ್ರತವೆಂಬ ಹೆಸರುಳ್ಳ ಶ್ರೇಷ್ಠವಾದ ವ್ರತವನ್ನು ಮಾಡಬೇಕು. ಹೀಗೆ ಮಾಡಿದ ಹೆಂಗುಸು ಕೈಲಾಸವನ್ನು ಹೊಂದಿ ಪಾರ್ವತಿಯೊಂದಿಗೆ ಮೆರೆಯುತ್ತಾಳೆ. ಜ್ಯೇಷ್ಠಮಾಸದಲ್ಲಿ ಬ್ರಹ್ಮನಿಂದಲೂ, ಮತ್ತು ವಿಷ್ಣುವಿನಿಂದಲೂ, ಕೈಮುಗಿಯಲ್ಪಟ್ಟಿರುವ ಲಿಂಗದ ಸ್ವರೂಪವುಳ್ಳ, ಮಹಾದೇವನಾದ, ಪಾರ್ವತೀಪತಿಯಾದ ಶಿವನ ಪ್ರತಿಮೆಯನ್ನು ಮಾಡಿಸಬೇಕು.

೩೬–೩೮. ಎಲೈ ಬ್ರಾಹ್ಮಣ ಶ್ರೇಷ್ಠರೇ, ಲಿಂಗಸ್ವರೂಪಿಯಾದ ಈಶ್ವರನನ್ನು ಮಧ್ಯದಲ್ಲಿಯೂ, ಅಕ್ಕಪಕ್ಕಗಳಲ್ಲಿ ಹಂಸಪಕ್ಷಿ, ಮತ್ತು ವರಾಹಮೂರ್ತಿ, ಇರುವ ಹಾಗೆ ಪ್ರತಿಮೆಯನ್ನು ತಾಮ್ರವೇ ಮುಂತಾದ

**ಪ್ರತಿಷ್ಠಾಪ್ಯ ಯಥಾನ್ಯಾಯಂ ಬ್ರಾಹ್ಮಣಾ ನ್ಭೋಜಯೇತ್ತತಃ ।**
**ಶಿವಾಯ ಶಿವಮಾಸಾದ್ಯ ಶಿವಸ್ಥಾನೇ ಯಥಾ ವಿಧಿ ॥೩೭॥**

**ಬ್ರಾಹ್ಮಣೈಃ ಸಹಿತಾಂ ಸ್ಥಾಪ್ಯ ದೇವ್ಯಾಃ ಸಾಯುಜ್ಯ ಮಾಪ್ನುಯಾತ್ ।**
**ಆಷಾಢೇ ಚ ಶುಭೇ ಮಾಸೇ ಗೃಹಂ ಕೃತ್ವಾ ಸು ಶೋಭನಂ ॥೩೮॥**

**ಪಕ್ವೇಷ್ಟಕಾಭಿ ರ್ವಿಧಿವದ್ಯಥಾ ವಿಭವ ವಿಸ್ತರಂ ।**
**ಸರ್ವ ಬೀಜ ರಸೈಶ್ಚಾಽಪಿ ಸಂಪೂರ್ಣಂ ಸರ್ವ ಶೋಭನೈಃ ॥೩೯॥**

**ಗೃಹೋಪ ಕರಣೈ ಶ್ಚೈವ ಮುಸಲೋ ಲೂಖಲಾದಿಭಿಃ ।**
**ದಾಸೀ ದಾಸಾದಿಭಿ ಶ್ಚೈವ ಶಯನೈ ರಶನಾದಿಭಿಃ ॥೪೦॥**

**ಸಂಪೂರ್ಣೈಶ್ಚ ಗೃಹಂ ವಸ್ತ್ರೈ ರಾಚ್ಛಾದ್ಯ ಚ ಸಮಂ ತತಃ ।**
**ದೇವಂ ಘೃತಾದಿಭಿಃ ಸ್ನಾಪ್ಯ ಮಹಾದೇವ ಮುಮಾ ಪತಿಂ ॥೪೧॥**

---

ಲೋಹಗಳಿಂದ ಸುಂದರವಾಗಿ ಮಾಡಿಸಿ, ಶಾಸ್ತ್ರೋಕ್ತವಾದ ರೀತಿಯಲ್ಲಿ ಪ್ರತಿಷ್ಠೆಮಾಡಿದನಂತರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಈ ಪ್ರತಿಮೆಯನ್ನು, ಶಿವನದೇವಸ್ಥಾನಕ್ಕೆ ಬಂದು, ಶಾಸ್ತ್ರೋಕ್ತವಾದ ರೀತಿಯಲ್ಲಿ, ಶಿವನಿಗೆ ಸಮರ್ಪಿಸಿ, ಬ್ರಾಹ್ಮಣರು ವೇದ ಮಂತ್ರಗಳನ್ನು ಉಚ್ಚರಿಸುತ್ತಿರಲು, ಸ್ಥಾಪನೆ ಮಾಡಬೇಕು, ಹೀಗೆ ಮಾಡಿದ ಹೆಂಗುಸು ಪಾರ್ವತಿಯೊಂದಿಗೆ ಐಕ್ಯವಾಗುವಳು. ಶುಭವಾದ ಆಷಾಢ ಮಾಸದಲ್ಲಿ ಮಂಗಳಕರವಾದ ಮನೆಯನ್ನು ಶಿವನಿಗಾಗಿ ಸಿದ್ಧಗೊಳಿಸಬೇಕು.

೩೯—೪೧. ಚೆನ್ನಾಗಿ ಸುಟ್ಟಿರುವ ಇಟ್ಟಿಗೆಗಳಿಂದಲೂ, ಶಾಸ್ತ್ರೋಕ್ತವಾದ ರೀತಿಯಲ್ಲಿ ಅವರವರ ಯೋಗ್ಯತಾನುಸಾರವಾಗಿ ರಚಿತವಾಗಿರುವ ಬಹಳ ಮಂಗಳಕರವಾದ ನಾನಾ ಬಗೆಯ ಧಾನ್ಯಬೀಜಗಳ ರಸದಿಂದಲೂ ಪೂರ್ಣವಾಗಿರುವ, ಒನಕೆ, ಒರಳು, ಮೊದಲಾದ ಮನೆಗೆ ಬೇಕಾಗುವ ಸಾಮಾನುಗಳಿಂದಲೂ, ತುಂಬಿರುವ, ದಾಸಿಯರು ಮತ್ತು ಸೇವಕರುಗಳಿಂದಲೂ, ಹಾಸಿಗೆಗಳಿಂದಲೂ; ನಾನಾ ಬಗೆಯ ಧೋತ್ರಗಳಿಂದ ಎಲ್ಲಾ ಕಡೆಯಲ್ಲಿಯೂ ಮುಚ್ಚಲ್ಪಟ್ಟಿರುವ ಭಕ್ಷ್ಯ ಭೋಜ್ಯಗಳಿಂದಲೂ ಮನೆಯಲ್ಲಿ ಶಿವನಿಗೆ ತುಪ್ಪವೇ ಮೊದಲಾದ ಪದಾರ್ಥಗಳಿಂದ ಸ್ನಾನಮಾಡಿಸಿ ಪೂಜಿಸಬೇಕು.

**ಬ್ರಾಹ್ಮಣಾನಾಂ ಸಹಸ್ರಂ ಚ ಭೋಜಯಿತ್ವಾ ಯಥಾ ವಿಧಿ ।**
**ವಿದ್ಯಾ ವಿನಯ ಸಂಪನ್ನಂ ಬ್ರಾಹ್ಮಣಂ ವೇದಪಾರಗಂ ॥೪೨॥**
**ಪ್ರಥಮಾಶ್ರಮಿಣಂ ಭಕ್ತ್ಯಾ ಸಂಪೂಜ್ಯ ಚ ಯಥಾ ವಿಧಿ ।**
**ಕನ್ಯಾಂ ಸುಮಧ್ಯಮಾಂ ಯಾವತ್ಕಾಲ ಜೀವನ ಸಂಯುತಾಂ ॥೪೩॥**
**ಕ್ಷೇತ್ರಂ ಗೋ ಮಿಥುನಂ ಚೈವ ತದ್ಗೃಹೇ ಚ ನಿವೇದಯೇತ್ ।**
**ಸಾಯನ್ತೈ ರ್ವಿವಿಧೈಃ ದಿವ್ಯೈ ರ್ಮೇರು ಪರ್ವತ ಸನ್ನಿಭೈಃ ॥೪೪॥**
**ಗೋ ಲೋಕಂ ಸಮನು ಪ್ರಾಪ್ಯ ಭವಾನ್ಯಾ ಸಹ ಮೋದತೇ ।**
**ಭವಾನ್ಯಾ ಸದೃಶೀ ಭೂತ್ವಾ ಸರ್ವಕಲ್ಪೇಷು ಸಾವ್ಯಯಾ ॥೪೫॥**
**ಭವಾನ್ಯಾ ಶ್ಚೈವ ಸಾಯುಜ್ಯಂ ಲಭತೇ ನಾತ್ರ ಸಂಶಯಃ ।**
**ಸರ್ವಧಾತು ಸಮಾಕೀರ್ಣಂ ವಿಚಿತ್ರ ಧ್ವಜ ಶೋಭಿತಂ ॥೪೬॥**

---

೪೨–೪೪. ಸಾವಿರಾರು ಜನ ಬ್ರಾಹ್ಮಣರಿಗೆ ಶಾಸ್ತ್ರೋಕ್ತ ಕ್ರಮದಲ್ಲಿ ಭೋಜನ ಮಾಡಿಸಿ, ವಿದ್ಯಾವಿನಯಗಳಿಂದ ಕೂಡಿರುವ, ವೇದಾಧ್ಯಯನ ಸಂಪನ್ನನಾದ ಬ್ರಹ್ಮಚಾರಿಯಾದ ಬ್ರಾಹ್ಮಣನನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪೂಜಿಸಿ, ಶ್ರೇಷ್ಠಳಾದ ಮಧ್ಯಮ ವಯಸ್ಕಳಾದ ಕನ್ಯೆಯನ್ನೂ ಪೂಜಿಸಿ, ಆ ಸ್ಥಲವನ್ನೂ, ಎರಡು ಹಸುಗಳನ್ನೂ ಮತ್ತು ಅಂದವಾಗಿ ಕಟ್ಟಿಸಿದ ಮನೆಯನ್ನೂ ದಾನ ಕೊಡಬೇಕು. ಹೀಗೆ ಮಾಡಿದ ಹೆಂಗುಸು ಮೇರು ಪರ್ವತಕ್ಕೆ ಸಮಾನವಾದ, ಅನೇಕ ದಿವ್ಯವಾದ ವಿಮಾನಗಳ ಮೂಲಕ ಉತ್ತಮ ಲೋಕವನ್ನು ಹೊಂದುವಳು.

೪೫–೪೬. ಅವಳು ಗೋಲೋಕವನ್ನು ಹೊಂದಿ ಪಾರ್ವತಿಯೊಂದಿಗೆ ಸಂತೋಷದಿಂದಿರುತ್ತಾಳೆ. ಪಾರ್ವತಿಗೆ ಸಮಾನಳಾಗಿ ಎಲ್ಲಾ ಮನ್ವಂತರಗಳಲ್ಲಿಯೂ, ನಾಶರಹಿತಳಾಗಿ ಕೊನೆಗೆ ಪಾರ್ವತೀ ದೇವಿಯೊಡನೆ ಸಾಯುಜ್ಯ ಮುಕ್ತಿಯನ್ನೂ ಪಡೆಯುವಳು. ಈ ವಿಷಯದಲ್ಲಿ ಸಂದೇಹವಿಲ್ಲವು. ಹಾಗೆಯೇ ಶ್ರಾವಣಮಾಸದಲ್ಲಿ ಪರ್ವತಗಳಲ್ಲಿ ಸಿಕ್ಕುವ ಧಾತುಗಳಿಂದ ಕೂಡಿರುವ, ವಿಚಿತ್ರವಾದ ಬಾವುಟಗಳಿಂದ ಶೋಭಿಸುತ್ತಿರುವ ಎಳ್ಳಿನ ಪರ್ವತಾಕಾರವಾದ ಮಂಟಪವನ್ನು ಶಿವನಿಗೆ ಸಮರ್ಪಿಸಬೇಕು.

ನಿವೇದಯೀತ ಶರ್ವಾಯ ಶ್ರಾವಣೇ ತಿಲ ಪರ್ವತಂ ।
ವಿತಾನ ಧ್ವಜ ವಸ್ತ್ರಾದ್ಯೈ ರ್ಧಾತು ಭಿಶ್ಚ ನಿವೇದಯೇತ್ ॥೪೭॥
ಬ್ರಾಹ್ಮಣಾ ನ್ಭೋಜಯಿತ್ವಾ ಚ ಪೂರ್ವೋಕ್ತಮಖಿಲಂ ಭವೇತ್ ।
ಕೃತ್ವಾ ಭಾದ್ರಪದೇ ಮಾಸಿ ಶೋಭನಂ ಶಾಲಿ ಪರ್ವತಂ ॥೪೮॥
ವಿತಾನ ಧ್ವಜ ವಸ್ತ್ರಾದ್ಯೈ ರ್ಧಾತುಭಿಶ್ಚ ನಿವೇದಯೇತ್ ।
ಬ್ರಾಹ್ಮಣಾ ನ್ಭೋಜಯಿತ್ವಾ ಚ ದಾಪಯೇಚ್ಚ ಯಥಾ ವಿಧಿ॥೪೯॥
ಸಾ ಚ ಸೂರ್ಯಾಂ ಶು ಸಂಕಾಶಾ ಭವಾನ್ಯಾ ಸಹ ಮೋದತೇ ।
ಕೃತ್ವಾ ಚಾಶ್ವಯುಜೇ ಮಾಸಿ ವಿಪುಲಂ ಧಾನ್ಯಮರ್ಪಯೇತ್ ॥
ಸುವರ್ಣ ವಸ್ತ್ರ ಸಂಯುಕ್ತಂ ದತ್ವಾ ಸಂಪೂಜ್ಯ ಶಂಕರಂ ।
ಬ್ರಾಹ್ಮಣಾ ನ್ಭೋಜ ಯಿತ್ವಾ ಚ ಪೂರ್ವೋಕ್ತಮಖಿಲಂ ಭವೇತ್ ॥

---

ಮತ್ತು ಮಂಟಪಕ್ಕೆ ಬೇಕಾದ ಮೇಲು ಛಾವಣಿ, ಬಟ್ಟೆ, ಮೊದಲಾದು ವನ್ನೂ, ಧಾತುಗಳನ್ನೂ ಭಗವಂತನಿಗೆ ಸಮರ್ಪಣೆ ಮಾಡಬೇಕು.

೪೮–೫೦. ಅನಂತರದಲ್ಲಿ ಬ್ರಾಹ್ಮಣರನ್ನು ಭೋಜನ ಮಾಡಿಸಿದರೆ ಹಿಂದೇ ಹೇಳಿದ ಫಲವೆಲ್ಲವೂ ದೊರೆಯುವುದು. ಭಾದ್ರಪದ ಮಾಸದಲ್ಲಿ ಮಂಗಳಕರವಾದ ಭತ್ತದ ಪರ್ವತಾಕಾರವಾದ ಮಂಟಪವನ್ನು ಮಾಡಿಸಿ, ಅದಕ್ಕೆ ಬೇಕಾದ ಮೇಲು ಛಾವಣಿ, ಬಾವುಟ ಮತ್ತು ಬಟ್ಟೆಯೇ ಮೊದ ಲಾದುವುಗಳನ್ನೂ, ಧಾತುಗಳನ್ನೂ, ಭಗವಂತನಿಗೆ ಸಮರ್ಪಣೆ ಮಾಡ ಬೇಕು. ಅನಂತರದಲ್ಲಿ ಬ್ರಾಹ್ಮಣರಿಗೆ ಶಾಸ್ತ್ರೋಕ್ತ ರೀತಿಯಲ್ಲಿ ಭೋಜನ ಮಾಡಿಸಿ, ದಕ್ಷಿಣೆಯನ್ನು ಕೊಡಬೇಕು. ಹೀಗೆ ಮಾಡುವವಳು ಸೂರ್ಯನ ಕಿರಣಗಳಿಗೆ ಸಮಾನವಾದ ಪ್ರಕಾಶ ಸ್ವಭಾವವುಳ್ಳವಳಾಗಿ ಪಾರ್ವತಿಯೊಂದಿಗೆ ಆನಂದದಿಂದಿರುವಳು. ಆಶ್ವೀಜ ಮಾಸದಲ್ಲಿ ವಿಸ್ತಾರ ವಾದ ಧಾನ್ಯದ ಪರ್ವತಾಕಾರವಾದ ಮಂಟಪವನ್ನು ಮಾಡಿಸಿ, ಶಿವನ ಪೂಜೆಯನ್ನು ಮಾಡಬೇಕು.

೫೧–೫೨. ಚಿನ್ನದ ಸರಿಗೆಯುಳ್ಳ ಬಟ್ಟೆಯಿಂದ ಕೂಡಿದ ಶಿವನ ಪ್ರತಿ ಮೆಯನ್ನು ಪೂಜಿಸಿ, ದಾನಮಾಡಿ, ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ

ಸರ್ವ ಧಾನ್ಯ ಸಮಾಯುಕ್ತಂ ಸರ್ವಬೀಜ ರಸಾದಿಭಿಃ ।
ಸರ್ವಧಾತು ಸಮಾಯುಕ್ತಂ ಸರ್ವ ರತ್ನೋಪ ಶೋಭಿತಂ ॥೫೨॥
ಶೃಂಗೈ ಶ್ಚತುರ್ಭಿಃ ಸಂಯುಕ್ತಂ ವಿತಾನ ಚ್ಛತ್ರ ಶೋಭಿತಂ ।
ಗಂಧ ಮಾಲ್ಯೈ ಸ್ತಥಾ ಧೂಪೈ ಶ್ಚಿತ್ರೈ ಶ್ಚಾಽಪಿ ಸು ಶೋಭಿತಂ ॥
ವಿಚಿತ್ರೈಃ ನೃತ್ಯ ಗೇಯೈಶ್ಚ ಶಂಖ ವೀಣಾದಿಭಿ ಸ್ತಥಾ ।
ಬ್ರಹ್ಮ ಘೋಷೈ ರ್ಮಹಾ ಪುಣ್ಯಂ ಮಂಗಲೈಶ್ಚ ವಿಶೇಷತಃ ॥೫೪॥
ಮಹಾಧ್ವಜಾಽಷ್ಟ ಸಂಯುಕ್ತಂ ವಿಚಿತ್ರ ಕುಸುಮೋಜ್ವಲಂ ।
ನಗೇಂದ್ರಂ ಮೇರು ನಾಮಾನಂ ತ್ರೈಲೋಕ್ಯಾಧಾರ ಮುತ್ತಮಂ ॥
ತಸ್ಯ ಮೂರ್ಧ್ನಿ ಶಿವಂ ಕುರ್ಯಾ ನ್ಮಧ್ಯತೋ ಧಾತುನೈವ ತು ।
ದಕ್ಷಿಣೇ ಚ ಯಥಾನ್ಯಾಯಂ ಬ್ರಹ್ಮಾಣಂ ಚ ಚತುರ್ಮುಖಂ॥೫೬॥
ಉತ್ತರೇ ದೇವದೇವೇಶಂ ನಾರಾಯಣ ಮನಾಮಯಂ ।
ಇಂದ್ರಾದಿ ಲೋಕಪಾಲಾಂ ಶ್ಚ ಕೃತ್ವಾ ಭಕ್ತ್ಯಾ ಯಥಾ ವಿಧಿ ॥೫೭॥

---

ಹಿಂದೇ ಹೇಳಿದ ಫಲಗಳೆಲ್ಲವೂ ಪ್ರಾಪ್ತವಾಗುವುದು. ಎಲ್ಲಾ ಧಾನ್ಯಗಳೂ, ಬೀಜಗಳೂ, ರಸಗಳೂ ಇವುಗಳಿಂದ ಕೂಡಿರುವ, ಎಲ್ಲಾ ಗೈರಿಕಾದಿ ಧಾತುಗಳಿಂದ ತುಂಬಿರುವ, ಸೊಗಸಾದ ಮೇಲು ಛಾವಣಿ, ಛತ್ರಗಳಿಂದ ಶೋಭಿಸುತ್ತಿರುವ, ಸುವಾಸನೆಯಾದ ಗಂಧ, ಹುವ್ವಿನ ಹಾರಗಳಿಂದಲೂ, ಅನೇಕ ಬಗೆಯ ಧೂಪಗಳಿಂದಲೂ ಕೂಡಿರುವ ಮೇರುಪರ್ವತದಂತಹ ಒಂದು ಪರ್ವತವನ್ನು ರಚಿಸಬೇಕು.

೫೪–೫೬. ನಾನಾ ಬಗೆಯ ನಾಟ್ಯಗಳು ಮತ್ತು ಸಂಗೀತಗಳನ್ನು ನಡೆಸುತ್ತಾ, ಶಂಖ, ವೀಣೆ, ಮುಂತಾದ ವಾದ್ಯಗಳನ್ನು ವಾದ್ಯಗಾರರು ನಡೆಸುತ್ತಿರುವಾಗ, ಮಂಗಳಕರವಾದ ಮತ್ತು ಪುಣ್ಯಕರವಾದ, ವೇದ ಘೋಷಗಳನ್ನು ಬ್ರಾಹ್ಮಣರು ಮಾಡುತ್ತಿರಲು, ಎಂಟು ದೊಡ್ಡ ಬಾವುಟಗಳಿಂದ ಕೂಡಿರುವ, ನಾನಾ ಬಗೆಯ ಹುವ್ವಿನಿಂದ ಪ್ರಕಾಶಮಾನವಾದ, ಮೂರು ಲೋಕಕ್ಕೂ ಆಧಾರವಾದ, ಆ ಮೇರು ಪರ್ವತದ ಮೇಲ್ಭಾಗದಲ್ಲಿ ಮಧ್ಯಕ್ಕೆ ಸರಿಯಾಗಿ, ಲೋಹದಿಂದ ಮಾಡಲ್ಪಟ್ಟ ಶಿವನ ಮೂರ್ತಿಯನ್ನು ಸ್ಥಾಪಿಸಿ,ಅವನ ಬಲಭಾಗದಲ್ಲಿ ಶಾಸ್ತ್ರೋಕ್ತ ಕ್ರಮದಲ್ಲಿ ನಾಲ್ಕು ಮುಖವುಳ್ಳ ಬ್ರಹ್ಮನನ್ನೂ ಸ್ಥಾಪಿಸಬೇಕು.

೫೭–೫೯. ಉತ್ತರ ಭಾಗದಲ್ಲಿ ದೇವದೇವನೂ, ರೋಗರಹಿತನೂ,

ಪ್ರತಿಷ್ಠಾಪ್ಯ ತತಃ ಸ್ನಾಪ್ಯ ಸಮಭ್ಯರ್ಚ್ಯ ಮಹೇಶ್ವರಂ ।
ದೇವಸ್ಯ ದಕ್ಷಿಣೇ ಹಸ್ತೇ ಶೂಲಂ ತ್ರಿದಶ ಪೂಜಿತಂ ॥೫೮॥

ವಾಮೇ ಪಾಶಂ ಭವಾನ್ಯಾಶ್ಚ ಕಮಲಂ ಹೇಮ ಭೂಷಿತಂ ।
ವಿಷ್ಣೋಶ್ಚ ಶಂಖಂ ಚಕ್ರಂ ಚ ಗದಾ ಮಬ್ಜಂ ಪ್ರಯತ್ನತಃ ॥೫೯॥

ಬ್ರಹ್ಮಣ ಶ್ಚಾಕ್ಷ ಸೂತ್ರಂ ಚ ಕಮಂಡಲು ಮನುತ್ತಮಂ ।
ಇಂದ್ರಸ್ಯ ವಜ್ರ ಮಗ್ನೇಶ್ಚ ಶಕ್ತ್ಯಾಖ್ಯಂ ಪರಮಾಯುಧಂ ॥೬೦॥

ಯಮಸ್ಯ ದಂಡಂ ನಿರ್ಋತೇಃ ಖಡ್ಗಂ ನಿಶಿ ಚರಸ್ಯ ತು ।
ವರುಣಸ್ಯ ಮಹಾಪಾಶಂ ನಾಗಾಽಖ್ಯಂ ರುದ್ರ ಮದ್ಭುತಂ ॥೬೧॥
ವಾಯೋರ್ಯಷ್ಟಿಂ ಕುಬೇರಸ್ಯ ಗದಾಂ ಲೋಕ ಪ್ರಪೂಜಿತಾಂ ।
ಟಂಕಂ ಚೇಶಾನ ದೇವಸ್ಯ ನಿವೇದ್ಯೈವಂ ಕ್ರಮೇಣ ಚ ॥೬೨॥

ಶಿವಸ್ಯ ಮಹತೀಂ ಪೂಜಾಂ ಕೃತ್ವಾ ಚರು ಸಮನ್ವಿತಾಂ ।
ಪೂಜಯೇ ತ್ಸರ್ವದೇವಾಂ ಶ್ಚ ಯಥಾ ವಿಭವ ವಿಸ್ತರಂ ॥೬೩॥

---

ಆದ ನಾರಾಯಣನನ್ನೂ, ಇಂದ್ರನೇ ಮೊದಲಾದ ಲೋಕಪಾಲಕರನ್ನೂ ಶಾಸ್ತ್ರೋಕ್ತ ಕ್ರಮದಲ್ಲಿ ಭಕ್ತಿಯಿಂದ ಮಾಡಿ, ಅನಂತರದಲ್ಲಿ ಈ ವಿಗ್ರಹಗಳಿಗೆ ಸ್ನಾನವನ್ನು ಮಾಡಿಸಿ, ಸ್ಥಾಪಿಸಿ, ಶಿವನನ್ನು ಪೂಜಿಸಿ, ಶಿವನ ಬಲಭಾಗದ ಕೈಯಲ್ಲಿ ದೇವತೆಗಳಿಂದ ಪೂಜಿಸಲ್ಪಟ್ಟ ಶೂಲವನ್ನೂ, ಎಡಗೈಯಲ್ಲಿ ಪಾಶಾಯುಧವನ್ನೂ, ಚಿನ್ನದಿಂದ ಶೋಭಿತವಾದ ಕಮಲವನ್ನೂ ವಿಷ್ಣುವಿನ, ಶಂಖ, ಚಕ್ರ, ಗದೆ, ಪದ್ಮ, ಇವೆಲ್ಲವನ್ನೂ, ಪ್ರಯತ್ನ ಪೂರ್ವಕವಾಗಿ ಸ್ಥಾಪಿಸಬೇಕು.

೬೦–೬೨. ಬ್ರಹ್ಮನ ಯಜ್ಞೋಪವೀತವನ್ನೂ, ಶ್ರೇಷ್ಠವಾದ ಕಮಂಡಲುವನ್ನೂ, ಇಂದ್ರನ ವಜ್ರಾಯುಧವನ್ನೂ ಶಕ್ತಿಯೆಂಬ ಅಗ್ನಿಯ ಶ್ರೇಷ್ಠವಾದ ಆಯುಧವನ್ನೂ, ಯಮನ ದಂಡವನ್ನೂ, ನಿರ್ಋತಿಯ ಕತ್ತಿಯನ್ನೂ, ರಾತ್ರಿಯಲ್ಲಿ ಸಂಚರಿಸುವ ವರುಣನ ಸರ್ಪವೆಂಬ ದೊಡ್ಡ ಪಾಶವನ್ನೂ, ವಾಯುವಿನ ಭಯಂಕರವೂ, ಆಶ್ಚರ್ಯಕರವೂ ಆದ ದೊಣ್ಣೆಯನ್ನೂ, ಲೋಕದಲ್ಲಿ ಪೂಜಿಸಲ್ಪಟ್ಟ ಕುಬೇರನ ಗದೆಯನ್ನೂ, ಈಶಾನ ದೇವರ ಉಳಿಯನ್ನೂ, ಕ್ರಮವಾಗಿ ಶಿವನಿಗೆ ಸಮರ್ಪಣೆ ಮಾಡಬೇಕು.

೬೩–೬೫. ಶಿವನಿಗೆ ಚರುವನ್ನು ಸಮರ್ಪಿಸಿ, ದೊಡ್ಡ ಈ ಪೂಜೆ

ಬ್ರಾಹ್ಮಣಾನ್ ಭೋಜಯಿತ್ವಾ ಚ ಪೂಜಾಂ ಕೃತ್ವಾ ಪ್ರಯತ್ನತಃ ।
ಮಹಾ ಮೇರು ವ್ರತಂ ಕೃತ್ವಾ ಮಹಾದೇವಾಯ ದಾಪಯೇತ್ ॥

ಮಹಾ ಮೇರು ಮನುಪ್ರಾಪ್ಯ ಮಹಾದೇವ್ಯಾ ಪ್ರಮೋದತೇ ।
ಚಿರಂ ಸಾಯುಜ್ಯ ಮಾಪ್ನೋತಿ ಮಹಾದೇವ್ಯಾ ನ ಸಂಶಯಃ ॥೬೫॥

ಕಾರ್ತಿಕ್ಯಾ ಮಪಿ ಯಾ ನಾರೀ ಕೃತ್ವಾ ದೇವೀ ಮುಮಾಂ ಶುಭಾಂ ।
ಸರ್ವಾಭರಣ ಸಂಪೂರ್ಣಾಂ ಸರ್ವಲಕ್ಷಣ ಲಕ್ಷಿತಾಂ ॥೬೬॥

ಹೇಮ ತಾಮ್ರಾದಿಭಿ ಶ್ಚೈವ ಪ್ರತಿಷ್ಠಾಪ್ಯ ವಿಧಾನತಃ ।
ದೇವಂ ಚ ಕೃತ್ವಾ ದೇವೇಶಂ ಸರ್ವ ಲಕ್ಷಣ ಸಂಯುತಂ ॥೬೭॥

ತಯೋರಗ್ರೇ ಹುತಾಶಂ ಚ ಸ್ರುವಹಸ್ತಂ ಪಿತಾಮಹಂ ।
ನಾರಾಯಣಂ ಚ ದಾತಾರಂ ಸರ್ವಾ ಭರಣ ಭೂಷಿತಂ ॥೬೮॥

---

ಯನ್ನುಮಾಡಿ, ಅವರವರ ಯೋಗ್ಯತಾನುಸಾರ, ಎಲ್ಲಾ ದೇವತೆಗಳನ್ನೂ ಪೂಜಿಸಬೇಕು. ಬ್ರಾಹ್ಮಣರಿಗೆ ಪ್ರಯತ್ನ ಪೂರ್ವಕವಾಗಿ ಪೂಜೆಯನ್ನು ಮಾಡಿ, ಅವರಿಗೆ ಭೋಜನ ಮಾಡಿಸಿ, ಮಹಾಮೇರು ವ್ರತವನ್ನು ಆಚರಿಸಿ, ಮಹಾದೇವನಿಗೆ ಎಲ್ಲವನ್ನೂ ಸಮರ್ಪಿಸಬೇಕು. ಹೀಗೆಮಾಡಿದವಳು ಮಹಾ ಮೇರು ಪರ್ವತವನ್ನು ಹೊಂದಿ ಪಾರ್ವತಿಯೊಂದಿಗೆ ಆನಂದದಿಂದ ಇರುತ್ತಾಳೆ. ಇವಳು ಪಾರ್ವತಿಯೊಂದಿಗೆ ಅನಂತವಾದ ಐಕ್ಯವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

೬೬–೬೭. ಭಕ್ತಳಾದ ಯಾವ ಹೆಂಗುಸು ಕಾರ್ತಿಕ ಮಾಸದಲ್ಲಿಯೂ, ಮಂಗಳಕರವಾದ, ಎಲ್ಲಾ ಒಡವೆಗಳಿಂದಲೂ, ಸಕಲ ಲಕ್ಷಣಗಳಿಂದಲೂ ಕೂಡಿರುವ, ಪಾರ್ವತೀ ದೇವಿಯ ವಿಗ್ರಹವನ್ನು, ಚಿನ್ನ, ತಾಮ್ರ, ಮೊದಲಾದ ವಸ್ತುಗಳಿಂದ ಮಾಡಿಸಿ, ಶಾಸ್ತ್ರೋಕ್ತವಾದ ರೀತಿಯಲ್ಲಿ ಪ್ರತಿಷ್ಠೆ ಮಾಡಿಸಿ, ಎಲ್ಲಾ ಲಕ್ಷಣಗಳಿಂದಲೂ ಕೂಡಿರುವ, ದೇವತೆಗಳಿಗೆಲ್ಲರಿಗೂ ಒಡೆಯನಾದ ಶಿವನ ವಿಗ್ರಹವನ್ನೂ ಸ್ಥಾಪಿಸಿ, ಪೂಜಿಸವಳೋ, ಮತ್ತು

೬೮–೭೦. ಶಿವ ಪಾರ್ವತಿಯರ ಮುಂದುಗಡೆ, ಚರುವನ್ನು ಹಿಡಿದಿರುವ ಅಗ್ನಿಯನ್ನೂ, ಬ್ರಹ್ಮನನ್ನೂ, ಇಷ್ಟಾರ್ಥಗಳನ್ನು ಕೂಡುವ, ಎಲ್ಲಾ ಒಡವೆಗಳಿಂದಲೂ ಅಲಂಕರಿಸಲ್ಪಟ್ಟು, ಲೋಕಪಾಲಕರಾದ ದೇವತೆಗಳು ಮತ್ತು ಸಿದ್ಧರೊಡನೆ ಸುತ್ತುವರಿಯಲ್ಪಟ್ಟವನಾಗಿರುವ, ನಾರಾಯಣ

ಲೋಕ ಪಾಲೈ ಸ್ತಥಾ ಸಿದ್ಧೈಃ ಸಂವೃತಂ ಸ್ಥಾಪ್ಯ ಯತ್ನತಃ ।
ರುದ್ರಾಲಯೇ ವ್ರತಂ ತಸ್ಮೈ ದಾಪಯೇದ್ಭಕ್ತಿ ಪೂರ್ವಕಂ ॥೭೯॥
ಸಾ ಭವಾನ್ಯಾಸ್ತನುಂ ಗತ್ವಾ ಭವೇನ ಸಹ ಮೋದತೇ ।
ಏಕ ಭಕ್ತ ವ್ರತಂ ಪುಣ್ಯಂ ಪ್ರತಿಮಾಸ ಮನುಕ್ರಮಾತ್ ॥೮೦॥
ಮಾರ್ಗಶೀರ್ಷಕ ಮಾಸಾದಿ ಕಾರ್ತಿಕಾಂತಂ ಪ್ರವರ್ತಿತಂ ।
ನರ ನಾರ್ಯಾದಿ ಜಂತೂನಾಂ ಹಿತಾಯ ಮುನಿಸತ್ತಮಾಃ ॥೮೧॥
ನರಃ ಕೃತ್ವಾ ವ್ರತಂ ಚೈವ ಶಿವ ಸಾಯುಜ್ಯ ಮಾಪ್ನುಯಾತ್ ।
ನಾರೀ ದೇವ್ಯಾ ನ ಸಂದೇಹಃ ಶಿವೇನ ಪರಿ ಭಾಷಿತಂ ॥೮೨॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಉಮಾಮಹೇಶ್ವರವ್ರತ ವಿಚಾರ ವರ್ಣನಂ ನಾಮ ಚತುರಶೀತಿತಮೋಽಧ್ಯಾಯಃ

---

ನನ್ನೂ ಪ್ರಯತ್ನ ಪೂರ್ವಕವಾಗಿ ಸ್ಥಾಪನೆಮಾಡಿ, ಭಕ್ತಿಪೂರ್ವಕವಾಗಿ, ಶಿವದೇವಸ್ಥಾನದಲ್ಲಿ ಈ ವ್ರತವನ್ನು ಭಗವಂತನಿಗೆ ಸಮರ್ಪಣೆ ಮಾಡುವುದು. ಹೀಗೆ ವ್ರತವನ್ನು ಮಾಡಿದ ಆ ಭಕ್ತಳು ಪಾರ್ವತಿಯ ಸ್ವರೂಪವನ್ನುಹೊಂದಿ, ಶಿವನೊಂದಿಗೆ ಆನಂದ ಪಡುವಳು. ಪ್ರತಿ ತಿಂಗಳಲ್ಲೂ ಕ್ರಮವಾಗಿ ಏಕ ಭಕ್ತ ವ್ರತವನ್ನು ಹೀಗೆ ನಡೆಸಿದರೆ ಬಹಳ ಪುಣ್ಯವು ಬರುವುದೆಂಬುದರಲ್ಲಿ ಸಂದೇಹವಿಲ್ಲವು.

೮೧–೮೨. ಎಲೈ ಋಷಿಶ್ರೇಷ್ಠರೇ, ಮಾರ್ಗಶೀರ್ಷವೇ ಮೊದಲುಗೊಂಡು ಕಾರ್ತಿಕ ಮಾಸದವರೆಗೂ ಈ ರೀತಿಯಾಗಿ ವ್ರತವನ್ನು ನಡೆಸುವ ವಿಧಾನವು, ಗಂಡಸು, ಹೆಂಗಸು, ಇವರೆಲ್ಲರ ಸೌಖ್ಯಕ್ಕಾಗಿ ಹೇಳಲ್ಪಟ್ಟಿದೆ. ಈ ವ್ರತವನ್ನಾಚರಿಸಿದ ಗಂಡಸು ಶಿವನೊಂದಿಗೆ ಐಕ್ಯವಾಗುವನು, ಹೆಂಗಸು ಪಾರ್ವತಿಯೊಂದಿಗೆ ಐಕ್ಯಳಾಗುವಳು ಎಂಬುದರಲ್ಲಿ ಸಂದೇಹವಿಲ್ಲ. ಎಂದು ಈಶ್ವರನಿಂದಲೇ ಈ ವಿಷಯವು ನಿಶ್ಚಯಿಸಿ ಹೇಳಲ್ಪಟ್ಟಿದೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಉಮಾಮಹೇಶ್ವರ ವ್ರತದ ವಿಷಯವೆಂಬ ಎಂಬತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಪಂಚಾಶೀತಿತಮೋಽಧ್ಯಾಯಃ

॥ ಸೂತ ಉವಾಚ ॥

**ಸರ್ವ ವ್ರತೇಷು ಸಂಪೂಜ್ಯ ದೇವದೇವ ಮುಮಾ ಪತಿಂ ।**
**ಜಪೇ ತ್ಪಂಚಾಕ್ಷರೀಂ ವಿದ್ಯಾಂ ವಿಧಿನ್ನೈವ ದ್ವಿಜೋತ್ತಮಾಃ ॥ ೧ ॥**
**ಜಪಾದೇವ ನ ಸಂದೇಹೋ ವ್ರತಾನಾಂ ವೈ ವಿಶೇಷತಃ ।**
**ಸಮಾಪ್ತಿ ರ್ನಾಽನ್ಯಥಾ ತಸ್ಮಾಜ್ಜಪೇತ್ಪಂಚಾಕ್ಷರೀಂ ಶುಭಾಂ ॥ ೨ ॥**

॥ ಋಷಯ ಊಚುಃ ॥

**ಕಥಂ ಪಂಚಾಕ್ಷರೀ ವಿದ್ಯಾ ಪ್ರಭಾವೋ ವಾ ಕಥಂ ವದ ।**
**ಕ್ರಮೋಽಪಾಯಂ ಮಹಾ ಭಾಗ ಶ್ರೋತುಂ ಕೌತೂಹಲಂ ಹಿ ನಃ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತೈದನೆಯ ಅಧ್ಯಾಯವು.

೧-೩. ಸೂತನು ಹೇಳಿದನು :—ಎಲೈ ಬ್ರಾಹ್ಮಣ ಶ್ರೇಷ್ಠರೇ, ದೇವತೆಗಳಿಗೆಲ್ಲರಿಗೂ ಅಧಿಪತಿಯಾದ ಶಿವನನ್ನು ಎಲ್ಲಾ ವ್ರತಗಳಲ್ಲಿಯೂ ಪೂಜಿಸಿ, ಶಾಸ್ತ್ರೋಕ್ತ ಕ್ರಮದಲ್ಲಿ ಪಂಚಾಕ್ಷರೀ ವಿದ್ಯೆಯನ್ನು ತಿಳಿದು ಜಪಿಸಬೇಕು. ಎಲ್ಲ ಬಗೆಯ ವಿಶೇಷವಾದ ವ್ರತಗಳಿಗೂ ಜಪದಿಂದಲೇ ಸಮಾಪ್ತಿಯಾಗಬೇಕು. ಆದ್ದರಿಂದ ಮಂಗಳಕರವಾದ ಈ ಪಂಚಾಕ್ಷರಿಯನ್ನು ಜಪಿಸಬೇಕು. ಋಷಿಗಳು ಹೇಳಿದರು :—ಪಂಚಾಕ್ಷರೀ ವಿದ್ಯೆಯ ಸ್ವರೂಪವೇನು ? ಅದರ ಮಹಿಮೆಯಾದರೂ ಎಂಥಾದ್ದು ? ಎಂಬುದನ್ನು ದಯೆಯಿಟ್ಟು ಹೇಳಿ. ಎಲೈ ಪುಣ್ಯಾತ್ಮರಾದ ಸೂತಮಹರ್ಷಿಗಳೇ, ಅದರ ರೀತಿಯನ್ನು ದಯೆಯಿಟ್ಟು ವಿವರಿಸಬೇಕು. ನಮಗೆ ಕೇಳಬೇಕೆಂಬ ಕುತೂಹಲವು ಬೇಕಾದಷ್ಟು ಹೆಚ್ಚಾಗಿ ಇದೆ.

॥ ಸೂತ ಉವಾಚ ॥

ಪುರಾದೇವೇನ ರುದ್ರೇಣ ದೇವದೇವೇನ ಶಂಭುನಾ ।
ಪಾರ್ವತ್ಯಾಃ ಕಥಿತಂ ಪುಣ್ಯಂ ಪ್ರವದಾಮಿ ಸಮಾಸತಃ ॥ ೧ ॥

॥ ಶ್ರೀ ದೇವ್ಯುವಾಚ ॥

ಭಗವನ್ದೇವ ದೇವೇಶ ಸರ್ವ ಲೋಕ ಮಹೇಶ್ವರ ।
ಪಂಚಾಕ್ಷರಸ್ಯ ಮಾಹಾತ್ಮ್ಯಂ ಶ್ರೋತು ಮಿಚ್ಛಾಮಿ ತತ್ವತಃ ॥ ೨ ॥

॥ ಶ್ರೀ ಭಗವಾನುವಾಚ ॥

ಪಂಚಾಕ್ಷರಸ್ಯ ಮಾಹಾತ್ಮ್ಯಂ ವರ್ಷ ಕೋಟಿ ಶತೈರಪಿ ।
ನ ಶಕ್ಯಂ ಕಥಿತುಂ ದೇವಿ ತಸ್ಮಾತ್ಸಂಕ್ಷೇಪತಃ ಶೃಣು ॥ ೩ ॥

ಪ್ರಲಯೇ ಸಮನು ಪ್ರಾಪ್ತೇ ನಷ್ಟೇ ಸ್ಥಾವರ ಜಂಗಮೇ ।
ನಷ್ಟೇ ದೇವಾಸುರೇ ಚೈವ ನಷ್ಟೇ ಚೋರಗ ರಾಕ್ಷಸೇ ॥ ೪ ॥

ಸರ್ವಂ ಪ್ರಕೃತಿ ಮಾಪನ್ನಂ ತ್ವಯಾ ಪ್ರಲಯಮೇಷ್ಯತಿ ।
ಏಕೋಽಹಂ ಸಂಸ್ಥಿತೋ ದೇವಿ ನ ದ್ವಿತೀಯೋಽಸ್ತಿ ಕುತ್ರಚಿತ್ ॥

---

೧. ಸೂತನು ಹೇಳಿದನು :—ಹಿಂದೆ ದೇವತೆಗಳಿಗೂ ಪೂಜ್ಯ ದೇವತೆಯಾದ ಶಿವನಿಂದ ಪಾರ್ವತಿಗೆ ಈ ಪುಣ್ಯಕರವಾದ ಪಂಚಾಕ್ಷರೀ ವಿದ್ಯೆಯು ಹೇಳಲ್ಪಟ್ಟಿತು. ಅದನ್ನೇ ನಾನು ಸಂಕ್ಷೇಪವಾಗಿ ನಿಮಗೆ ತಿಳಿಸುತ್ತೇನೆ.

೨. ಶ್ರೀ ಪಾರ್ವತೀದೇವಿಯು ಹೇಳಿದಳು :—ಎಲ್ಲಾ ಲೋಕಕ್ಕೂ ಒಡೆಯನು, ದೇವಾಧಿ ದೇವತೆಗಳೆಲ್ಲರಿಗೂ ಒಡೆಯನೂ ಪೂಜ್ಯನೂ ಆದ ಓ ಪರಮೇಶ್ವರನೇ, ನಾನು ವಾಸ್ತವವಾಗಿಯೂ, ಪಂಚಾಕ್ಷರೀ ವಿದ್ಯೆಯ ಮಹತ್ವವೇನು ? ಎಂಬುದನ್ನು ಕೇಳಬಯಸುತ್ತೇನೆ.

೩. ಶ್ರೀ ಶಿವನು ಹೇಳಿದನು :—ಒಂದು ನೂರು ಕೋಟಿ ವರ್ಷಗಳ ತನಕ ಹೇಳಿದರೂ ಪಂಚಾಕ್ಷರೀ ವಿದ್ಯೆಯ ಮಹತ್ವವನ್ನು ಪೂರ್ಣವಾಗಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಓ ದೇವಿಯೇ, ಸಂಕ್ಷೇಪವಾಗಿ ಹೇಳುವೆನು. ಕೇಳು.

೪-೫. ಪ್ರಳಯ ಕಾಲವು ಬರಲು ಸ್ಥಾವರ ಜಂಗಮಾತ್ಮಕವಾದ ಸಮಸ್ತ ಜಗತ್ತೂ ನಾಶವಾಗಿರಲು, ದೇವತೆಗಳೂ ಮತ್ತು ರಾಕ್ಷಸರೂ

ತಸ್ಮಿನ್ ವೇದಾಶ್ಚ ಶಾಸ್ತ್ರಾಣಿ ಮಂತ್ರೇ ಪಂಚಾಕ್ಷರೇ ಸ್ಥಿತಾಃ ।
ತೇ ನಾಶಂ ನೈವ ಸಂಪ್ರಾಪ್ತಾ ಮಚ್ಛಕ್ತ್ಯಾ ಹ್ಯನು ಪಾಲಿತಾಃ ॥ ೯॥
ಅಹಮೇಕೋ ದ್ವಿಧಾಪ್ಯಾಸಂ ಪ್ರಕೃತ್ಯಾತ್ಮ ಪ್ರಭೇದತಃ ।
ಸ ತು ನಾರಾಯಣಃ ಶೇತೇ ದೇವೋ ಮಾಯಾ ಮಯೀಂ ತನುಂ॥
ಆಸ್ಥಾಯ ಯೋಗ ಪರ್ಯಂಕ ಶಯನೇ ತೋಯ ಮಧ್ಯಗಃ ।
ತನ್ನಾಭಿ ಪಂಕಜಾ ಜ್ಜಾತಃ ಪಂಚ ವಕ್ತ್ರಃ ಪಿತಾಮಹಃ ॥೧೧॥
ಸಿಸೃಕ್ಷ ಮಾಣೋ ಲೋಕಾನ್ವೈ ತ್ರೀನ ಶಕ್ತೋಽಸಹಾಯವಾನ್।
ದಶ ಬ್ರಹ್ಮಾ ಸಸರ್ಜಾದೌ ಮಾನಸಾ ನಮಿತೌ ಜಸಃ ॥೧೨॥

---

ನಾಶವಾಗಿರಲು, ಸರ್ಪಗಳು, ದಾನವರು, ಎಲ್ಲರೂ ನಷ್ಟರಾಗಿರಲು, ಎಲವೂ ತಂತಮ್ಮ ಪ್ರಕೃತಿಯ ಮೂಲ ಕಾರಣ ಸ್ವರೂಪವನ್ನು ಹೊಂದಿ, ನಿನ್ನೊಂದಿಗೆ ಪ್ರಳಯ ವಾಗುವುದು. ಓ ಪಾರ್ವತೀ ದೇವಿಯೇ, ಆಗ ನಾನೊಬ್ಬನೇ ಇದ್ದು, ಬೇರೆಯಾದುದು ಒಂದೂ,ಎಲ್ಲಿಯೂ ಇರುವುದಿಲ್ಲ. ಆಗ ಸಕಲ ವೇದ ಶಾಸ್ತ್ರಗಳೂ ಪಂಚಾಕ್ಷರಿಯ ಮಂತ್ರದಲ್ಲಿ ಅಡಕವಾಗಿರುತ್ತವೆ. ಅವುಗಳಿಗೆ ನಾಶವೇ ಇಲ್ಲ. ಏಕೆಂದರೆ ಅವು ನಮ್ಮ ಶಕ್ತಿಯಿಂದ ಕಾಪಾಡಲ್ಪಟ್ಟಿರುತ್ತವೆ.

೧೦-೧೨. ನಾನು ಬ್ರಹ್ಮಚೈತನ್ಯ ರೂಪದಿಂದ ಒಬ್ಬನಾಗಿಯೂ ಶಿವ, ಶಕ್ತಿ ಅಥವಾ ಪುರುಷ, ಪ್ರಕೃತಿ, ರೂಪದಿಂದ ಇಬ್ಬರಾಗಿಯೂ, ಸ್ವರೂಪದಿಂದಲೂ, ಜೀವಾತ್ಮ ಪರಮಾತ್ಮರೆಂಬ ಮಾಯೆಯಿಂದ ಕಲ್ಪಿತವಾದ ಅನೇಕ ರೂಪದಿಂದ ಕಾಣಿಸಿಕೊಳ್ಳುವೆನು. ನಾರಾಯಣನಾದರೋ ಮಾಯಾಸ್ವರೂಪವಾದ ಶರೀರವನ್ನು ಹೊಂದಿ ಯೋಗಮಾಯೆಯಿಂದ ಮಲಗಿರುತ್ತಾನೆ. ಅವನು ಅಪಾರವಾದ ನೀರಿನ ಮಧ್ಯದಲ್ಲಿ ಯೋಗವೆಂಬ ಮಂಚದ ಮೇಲಿನ ಹಾಸಿಗೆಯಲ್ಲಿ ಮೇಲುಗಡೆ ಯೋಗ ನಿದ್ರೆಗೆ ವಶನಾಗಿ ಮಲಗಿರುತ್ತಾನೆ. ಐದು ಮುಖವುಳ್ಳ ಬ್ರಹ್ಮನು, ಅವನ ನಾಭಿಕಮಲದಿಂದ ಹುಟ್ಟಿದನು. ಬ್ರಹ್ಮನು ಸೃಜ್ಯಮಾನವಾಗಿರುವ ಪ್ರಾಣಿಗಳ ಕರ್ಮವಶದಿಂದ ಇಚ್ಛೆಯುಳ್ಳವನಾಗಿ,ಸಹಾಯಕರು ಇಲ್ಲದಿದ್ದುದರಿಂದ,ಬಹಳ ತೇಜಸ್ವಿಗಳಾದ ಹತ್ತುಜನ ಮಾನಸ ಪುತ್ರರನ್ನು ಮೊದಲು ಸೃಷ್ಟಿಸಿದನು. ಆ ಸೃಷ್ಟಿಕ್ರಮವನ್ನು ನಿಮಗೆ ಸಂಕ್ಷೇಪವಾಗಿ ತಿಳಿಸುತ್ತೇನೆ.

ತೇಷಾಂ ಸೃಷ್ಟಿ ಪ್ರಸಿದ್ಧ್ಯರ್ಥಂ ಮಾಂ ಪ್ರೋವಾಚ ಪಿತಾಮಹಃ ।
ಮತ್ಪುತ್ರಾಣಾಂ ಮಹಾದೇವ ಶಕ್ತಿಂ ದೇಹಿ ಮಹೇಶ್ವರ ॥೧೩॥
ಇತಿ ತೇನ ಸಮಾದಿಷ್ಟಃ ಪಂಚ ವಕ್ತ್ರಧರೋ ಹ್ಯಹಂ ।
ಪಂಚಾಕ್ಷರಾ ನ್ಪಂಚ ಮುಖೈಃ ಪ್ರೋಕ್ತವಾ ನ್ಪದ್ಮಯೋನಯೇ ॥
ತಾನ್ಪಂಚ ವದನೈರ್ಗೃಹ್ಣನ್ ಬ್ರಹ್ಮಾ ಲೋಕ ಪಿತಾಮಹಃ ।
ವಾಚ್ಯ ವಾಚಕ ಭಾವೇನ ಜ್ಞಾತವಾ ನ್ಪರಮೇಶ್ವರಂ ॥೧೫॥
ವಾಚ್ಯಃ ಪಂಚಾಕ್ಷರೈ ರ್ದೇವಿ ಶಿವಃ ತ್ರೈಲೋಕ್ಯ ಪೂಜಿತಃ ।
ವಾಚಕಃ ಪರಮೋ ಮಂತ್ರಸ್ತಸ್ಯ ಪಂಚಾಕ್ಷರಃ ಸ್ಥಿತಃ ॥೧೬॥
ಜ್ಞಾತ್ವಾ ಪ್ರಯೋಗಂ ವಿಧಿನಾ ಚ ಸಿದ್ಧಿಂ ।
ಲಬ್ಧ್ವಾ ತತೋ ಪಂಚಮುಖೋ ಮಹಾತ್ಮಾ ॥
ಪ್ರೋವಾಚ ಪುತ್ರೇಷು ಜಗದ್ಧಿತಾಯ ।
ಮಂತ್ರಂ ಮಹಾರ್ಥಂ ಕಿಲ ಪಂಚವರ್ಣಂ ॥೧೭॥

---

೧೩–೧೫. ಬ್ರಹ್ಮನ ಮಾನಸ ಪುತ್ರರಾದ ಇವರಿಗೆ ಸೃಷ್ಟಿಯನ್ನು ಹೆಚ್ಚಿಸುವ ಶಕ್ತಿಯು ಬರುವುದಕ್ಕಾಗಿ ಬ್ರಹ್ಮನು ನನ್ನನ್ನು ಕುರಿತು, ಓ ಪರಮೇಶ್ವರನೇ, ನನ್ನ ಈ ಮಕ್ಕಳಿಗೆ ಈ ಸೃಷ್ಟಿಯನ್ನು ಬೆಳೆಸುವ ಶಕ್ತಿಯನ್ನು ದಯವಿಟ್ಟು ಅನುಗ್ರಹಿಸು, ಎಂದು ಬೇಡಿದನು. ಈ ರೀತಿಯಾಗಿ ಅವನಿಂದ ಬೇಡಲ್ಪಟ್ಟವನಾಗಿ ನಾನು ಐದು ಮುಖಗಳನ್ನು ಹೊಂದಿ ಈ ಐದು ಮುಖಗಳಿಂದಲೂ ಕಮಲದಲ್ಲಿ ಹುಟ್ಟಿದ ಬ್ರಹ್ಮನಿಗೆ ಐದಕ್ಷರಗಳನ್ನು ಹೇಳಿದೆನು. ಲೋಕಕ್ಕೆ ತಾತನಾದ ಬ್ರಹ್ಮನು, ಐದು ಬಾಯಿಂಗಳಿಂದ ಈ ಅಕ್ಷರಗಳನ್ನು ಉಚ್ಚರಿಸಿ ತೆಗೆದುಕೊಳ್ಳುವವನಾಗಿ ಅದರ ಜಪದಿಂದ ಪರಮೇಶ್ವರನಾದ ನನ್ನ ಸ್ವರೂಪವನ್ನು ತಿಳಿದು ಕೊಂಡನು. ಪಂಚಾಕ್ಷರಿಯ ಮಂತ್ರವು ವಾಚಕವು. ನಾನು ಅದಕ್ಕೆ ವಾಚ್ಯವಾದ ಅರ್ಥವಾಗಿರುತ್ತೇನೆ. ಈ ಅಂಶವನ್ನು ಬ್ರಹ್ಮನು ಮನಗಂಡನು.

೧೬–೧೭. ಎಲೌ ಪಾರ್ವತೀದೇವಿಯೇ, ಮೂರು ಲೋಕದಲ್ಲಿಯೂ ಪೂಜಿಸಲ್ಪಟ್ಟ ಶಿವನೇ ಈ ಐದು ಅಕ್ಷರಗಳಿಂದ ಹೇಳಲ್ಪಡತಕ್ಕವಸ್ತುವು. ಇದನ್ನು ತಿಳಿಸುವುದೇ ಸರ್ವಶ್ರೇಷ್ಠವಾದ ಪಂಚಾಕ್ಷರ ಮಂತ್ರವು. ಇದಕ್ಕೆ ಐದು ಅಕ್ಷರಗಳಿವೆ. ಮಹಾತ್ಮನಾದ ಐದು ಮುಖವುಳ್ಳ ಬ್ರಹ್ಮನು

ತೇ ಲಬ್ಧ್ವಾ ಮಂತ್ರ ರತ್ನಂ ತು ಸಾಕ್ಷಾಲ್ಲೋಕ ಪಿತಾಮಹಾತ್ ।
ತಮಾರಾಧಯಿತುಂ ದೇವಂ ಪರಾತ್ಪರತರಂ ಶಿವಂ ॥೧೮॥
ತತ ಸ್ತುತೋಷ ಭಗವಾನ್ ತ್ರಿಮೂರ್ತೀನಾಂ ಪರಃ ಶಿವಃ ।
ದತ್ತವಾ ನಖಿಲಂ ಜ್ಞಾನ ಮಣಿಮಾದಿ ಗುಣಾಷ್ಟಕಂ ॥೧೯॥
ತೇಽಪಿ ಲಬ್ಧ್ವಾ ವರಾನ್ವಿಪ್ರಾ ಸ್ತದಾಽರಾಧನ ಕಾಂಕ್ಷಿಣಃ ।
ಮೇರೋಸ್ತು ಶಿಖರೇ ರಮ್ಯೇ ಮುಂಜವಾ ನ್ನಾಮ ಪರ್ವತಃ ॥೨೦॥
ಮತ್ಪ್ರಿಯಃ ಸತತಂ ಶ್ರೀಮಾನ್ ಮದ್ಭೂತೈಃ ಪರಿರಕ್ಷಿತಃ ।
ತಸ್ಯಾಽಭ್ಯಾಶೇ ತಪಸ್ತೀವ್ರಂ ಲೋಕಸೃಷ್ಟಿ ಸಮುತ್ಸುಕಾಃ ॥೨೧॥

---

ಶಾಸ್ತ್ರೋಕ್ತ ಕ್ರಮದಲ್ಲಿ ಈ ಮಂತ್ರದ ಪುರಶ್ಚರಣ ಮುಂತಾದುದರ ಕ್ರಮವನ್ನರಿತು, ಸಿದ್ಧಿಯನ್ನೂ ಪಡೆದು, ಜಗತ್ತಿಗೆ ಕ್ಷೇಮಕ್ಕಾಗಿ ಮೇಲ್ಮೆಯಿಂದ ದೊಡ್ಡದಾದ ಮತ್ತು ಶ್ರೇಷ್ಠವಾದ ಅರ್ಥವುಳ್ಳ. ಐದಕ್ಷರಗಳುಳ್ಳ ಈ ಮಂತ್ರವನ್ನು ತನ್ನ ಮಾನಸ ಪುತ್ರರಿಗೆ ಹೇಳಿದನು. ಲೋಕಕ್ಕೆ ತಾತನಾದ ಬ್ರಹ್ಮನಿಂದಲೇ ಸಾಕ್ಷಾತ್ತಾಗಿ, ಈ ಶ್ರೇಷ್ಠ ಮಂತ್ರವನ್ನು ಇವರು, ಹೊಂದಿ ಪರಾತ್ಪರ ವಸ್ತುವಾದ ಶಿವನನ್ನು ಪೂಜಿಸಿದರು.

೧೯–೨೦. ಆಗ ಪೂಜ್ಯರಾದ, ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ, ಅತ್ಯಂತ ಶ್ರೇಷ್ಠನಾದ ಶಿವನು ಅವರ ಪೂಜೆಗೆ ಮೆಚ್ಚಿದನು. ಆಗ ಶಿವನು ಅಣಿಮಾ ಮುಂತಾದ, ಎಂಟು ಮಹಾ ಮಹಿಮೆಯನ್ನುಂಟುಮಾಡುವ ಶ್ರೇಷ್ಠವಾದ ಸಿದ್ಧಿಗಳ ಜ್ಞಾನವನ್ನೂ ಅವರಿಗೆ ಹಂಚಿದನು. ಎಲೈ ಬ್ರಾಹ್ಮಣರೇ, ಅವರೂ ಕೂಡ, ಈ ಶ್ರೇಷ್ಠವಾದ ವರಗಳನ್ನು ಹೊಂದಿ, ಅವನನ್ನು ಇನ್ನೂ ಪೂಜಿಸಲು ಇಷ್ಟಪಟ್ಟು, ಮೇರುಪರ್ವತದ ಮೇಲ್ಭಾಗದಲ್ಲಿ ಸುಂದರವಾಗಿರುವ "ಮುಂಜವಾನ್" ಎಂಬ ಪರ್ವತಕ್ಕೆ ಹೋದರು.

೨೧–೨೩. ನನಗೆ ಇಷ್ಟವಾದ ಈ ಪರ್ವತವು ಬಹಳ ಶ್ರೇಷ್ಠವಾಗಿಯೂ, ನನ್ನ ಪರಿವಾರದ ಭೂತಗಣಗಳಿಂದ ಸಂರಕ್ಷಿಸಲ್ಪಟ್ಟೂ ಇದೆ.

ದಿವ್ಯ ವರ್ಷ ಸಹಸ್ರಂ ತು ವಾಯು ಭಕ್ಷಾಃ ಸಮಾಚರನ್।
ತಿಷ್ಠಂತೋಽನುಗ್ರಹಾರ್ಥಾಯ ದೇವಿ ತೇ ಋಷಯಃ ಪುರಾ ॥೨೨॥
ತೇಷಾಂ ಭಕ್ತಿ ಮಹಂ ದೃಷ್ಟ್ವಾ ಸದ್ಯಃ ಪ್ರತ್ಯಕ್ಷತಾ ಮಿಯಾಂ ।
ಪಂಚಾಕ್ಷರ ಮೃಷಿ ಶ್ಛಂದೋ ದೈವತಂ ಶಕ್ತಿ ಬೀಜವತ್ ॥೨೩॥
ನ್ಯಾಸಂ ಷಡಂಗಂ ದಿಗ್ಬಂಧಂ ವಿನಿಯೋಗ ಮಶೇಷತಃ ।
ಪ್ರೋಕ್ತವಾ ನಹ ಮಾರ್ಯಾಣಾಂ ಲೋಕಾನಾಂ ಹಿತ ಕಾಮ್ಯಯಾ ॥
ತಚ್ಛ್ರುತ್ವಾ ಮಂತ್ರ ಮಾಹಾತ್ಮ್ಯ ಮೃಷಯಸ್ತೇ ತಪೋಧನಾಃ ।
ಮಂತ್ರಸ್ಯ ವಿನಿಯೋಗಂ ಚ ಕೃತ್ವಾ ಸರ್ವ ಮನುಷ್ಠಿತಾಃ ॥೨೫॥

---

ಪ್ರಪಂಚವನ್ನು ಸೃಷ್ಟಿಮಾಡಬೇಕೆಂಬ ಆಶೆಯುಳ್ಳವರಾಗಿ, ಈ ಬ್ರಹ್ಮನ ಮಾನಸ ಪುತ್ರರು ಅದರ ಸಮೀಪದಲ್ಲಿ, ಸ್ವರ್ಗದ ಒಂದು ಸಾವಿರ ವರ್ಷ ಗಳವರೆಗೂ, ವಾಯುಭಕ್ಷಣವನ್ನು ಮಾಡುತ್ತಾ ನನ್ನ ಅನುಗ್ರಹವನ್ನು ಪಡೆಯಬೇಕೆಂಬ ಆಶೆಯಿಂದ ನಿಯಮ ಪಾಲನೆಯಲ್ಲಿ ಋಷಿಸ್ವರೂಪರಾಗಿ ರುತ್ತಾ, ಉಗ್ರವಾದ ತಪಸ್ಸನ್ನು ಮಾಡಿದರು. ಅವರ ಭಕ್ತಿಯನ್ನು ತಿಳಿದು ಅವರಿಗೆ ಪ್ರತ್ಯಕ್ಷನಾದೆನು. ಅವರಿಗೆ ಪಂಚಾಕ್ಷರ ಮಂತ್ರ, ಇದರ ಋಷಿ, ಛಂದಸ್ಸು, ದೇವತೆಗಳನ್ನೂ, ಶಕ್ತಿಬೀಜ ಕೀಲಕಗಳನ್ನೂ, ಆರು ಅಂಗಗಳುಳ್ಳ ನ್ಯಾಸವನ್ನೂ ಉಪದೇಶಮಾಡಿ ಹೇಳಿದೆನು.

೨೪–೨೬. ಈ ರೀತಿಯಾಗಿ, ಆರು ಅಂಗಗಳುಳ್ಳ ನ್ಯಾಸವನ್ನೂ, ಅದರಲ್ಲಿನ ದಿಗ್ಬಂಧನೆಯ ಕ್ರಮವನ್ನೂ, ಸಂಪೂರ್ಣವಾಗಿ ಅದನ್ನು ವಿನಿ ಯೋಗಿಸುವ ರೀತಿಯನ್ನೂ, ಲೋಕದ ಕ್ಷೇಮಕ್ಕಾಗಿಯೂ, ಆರ್ಯರಾದ ಈ ಋಷಿಗಳಿಗೆ ತಿಳಿಯ ಹೇಳಿದೆನು. ತಪಸ್ಸೇ ಐಶ್ವರ್ಯವಾಗುಳ್ಳ ಈ ಋಷಿ ಗಳು, ಈ ಮಂತ್ರದ ಮಹಿಮೆಯನ್ನು ಕೇಳಿ, ಮಂತ್ರದ ವಿನಿಯೋಗ ಮುಂತಾದುವನ್ನೂ ಮಾಡಿ, ಈಶ್ವರಾಜ್ಞೆಯಂತೆ ಎಲ್ಲ ವಿವರಗಳ ಅನು ಷ್ಠಾನ ಮಾಡಿದರು. ಇದರ ಮಹಿಮೆಯಿಂದ ಆಗ ಈ ಆರ್ಯಋಷಿಗಳು, ದೇವತೆಗಳು, ರಾಕ್ಷಸರು ಮತ್ತು ಮನುಷ್ಯರಿಂದ ಕೂಡಿದ ಮೂರು

ತಸ್ಮಾತ್ತಾಭ್ಯಃ ಸ್ಮೃತಾಃ ಲೋಕಾನ್ ಸದೇವಾಸುರ ಮಾನುಷಾನ್
ವರ್ಣಾನ್ ವರ್ಣವಿಭಾಗಾಂಶ್ಚ ಸರ್ವಧರ್ಮಾಂಶ್ಚ ಶೋಭನಾನ್ ॥
ಪೂರ್ವ ಕಲ್ಪ ಸಮುದ್ಭೂತಾನ್ ಶ್ರುತವಂತೋ ಯಥಾ ಪುರಾ ।
ಪಂಚಾಕ್ಷರ ಪ್ರಭಾವಾಚ್ಚ ಲೋಕಾ ವೇದಾ ಮಹರ್ಷಯಃ ॥೨೭॥
ತಿಷ್ಠಂತಿ ಶಾಶ್ವತಾ ಧರ್ಮಾ ದೇವಾಃ ಸರ್ವ ಮಿದಂ ಜಗತ್ ।
ತದಿದಾನೀಂ ಪ್ರವಕ್ಷ್ಯಾಮಿ ಶೃಣು ಚಾವಹಿತಾಖಿಲಂ ॥೨೮॥
ಅಲ್ಪಾಕ್ಷರಂ ಮಹಾರ್ಥಂ ಚ ವೇದಸಾರಂ ವಿಮುಕ್ತಿದಂ ।
ಆಜ್ಞಾ ಸಿದ್ಧ ಮಸಂದಿಗ್ಧಂ ವಾಕ್ಯಮೇತ ಚ್ಛಿವಾತ್ಮಕಂ ॥೨೯॥
ನಾನಾ ಸಿದ್ಧಿ ಯುತಂ ದಿವ್ಯಂ ಲೋಕಚಿತ್ತಾನು ರಂಜಕಂ ।
ಸುನಿಶ್ಚಿತಾರ್ಥಂ ಗಂಭೀರಂ ವಾಕ್ಯಂ ಮೇ ಪಾರಮೇಶ್ವರಂ ॥೩೦॥

---

ಲೋಕಗಳನ್ನೂ, ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನೂ, ವರ್ಣಾಶ್ರಮ ಧರ್ಮ ವಿಭಾಗಗಳನ್ನೂ ಮಂಗಳಕರವಾದ ಸಕಲ ಧರ್ಮಗಳನ್ನೂ ಉಪದೇಶದಿಂದ ಪ್ರಚಾರಮಾಡಿದರು.

೨೭–೨೯. ಹಿಂದಿನ ಮನ್ವಂತರದಲ್ಲಿ ಹೇಗೆ ಸೃಷ್ಟಿಯಾಗಿತ್ತೆಂದು ತಿಳಿದವರಾಗಿ ಹಾಗೆಯೇ ಈ ಮಾನಸ ಪುತ್ರರು ಜಗತ್ತನ್ನು ಸೃಷ್ಟಿಮಾಡಿದರು. ಪಂಚಾಕ್ಷರ ಮಂತ್ರದ ಮಹಿಮೆಯಿಂದಲೇ ಲೋಕಗಳೂ, ವೇದಗಳೂ, ಮಹರ್ಷಿಗಳೂ, ಧರ್ಮಗಳೂ, ಹೆಚ್ಚೇನು ? ಈ ಜಗತ್ತೆಲ್ಲವೂ, ಸ್ಥಿರವಾಗಿ ನಿಂತಿದೆ, ಯೆಂದು ತಿಳಿ. ಆದ್ದರಿಂದ ಈ ಮಂತ್ರದ ವಿಷಯವನ್ನು ವಿವರಿಸುವೆನು. ಎಲ್ಲವನ್ನೂ ಸಮಾಧಾನದಿಂದ ಕೇಳು. ಈ ಮಂತ್ರವು ಸ್ವಲ್ಪ ಅಕ್ಷರಗಳುಳ್ಳದ್ದೂ, ಹೆಚ್ಚು ಅರ್ಥವುಳ್ಳದ್ದೂ, ವೇದಗಳಿಗೆ ಸಾರಭೂತವಾದ ಅರ್ಥಸ್ವರೂಪವೂ, ಮೋಕ್ಷವನ್ನು ಕೊಡತಕ್ಕದ್ದೂ, ಶಿವನ ಆಜ್ಞೆಯಿಂದಲೇ ಉಂಟಾದದ್ದೂ, ಸಂದೇಹವಿಲ್ಲದ್ದೂ, ಶಿವಸ್ವರೂಪವೂ ಆಗಿದೆ ಎಂದು ತಿಳಿ.

೩೦–೩೨. ಅನೇಕ ಬಗೆಯ ಸಿದ್ಧಿಗಳನ್ನು ಕೊಡುವಂಥಾದ್ದೂ, ಸ್ವರ್ಗೀಯವೂ, ಜನಗಳ ಮನಸ್ಸಿಗೆ ಸಂತೋಷವನ್ನುಂಟುಮಾಡು

**ಮಂತ್ರಂ ಮುಖ ಸುಖೋ ಚ್ಚಾರ್ಯ ಮಶೇಷಾರ್ಥ ಪ್ರಸಾಧಕಂ ।**
**ತದ್ಬೀಜಂ ಸರ್ವ ವಿದ್ಯಾನಾಂ ಮಂತ್ರ ಮಾದ್ಯಂ ಸುಶೋಭನಂ ॥೩೧॥**
**ಅತಿಸೂಕ್ಷ್ಮಂ ಮಹಾರ್ಥಂ ಚ ಜ್ಞೇಯಂ ತದ್ವಟಬೀಜವತ್ ।**
**ವೇದಃ ಸ ತ್ರಿಗುಣಾ ತೀತಃ ಸರ್ವಜ್ಞಃ ಸರ್ವ ಕೃತ್ಪ್ರಭುಃ ॥೩೨॥**
**ಓ ಮಿತ್ಯೇಕಾಕ್ಷರಂ ಮಂತ್ರಂ ಸ್ಥಿತಃ ಸರ್ವಗತಃ ಶಿವಃ ।**
**ಮಂತ್ರೇ ಷಡಕ್ಷರೇ ಸೂಕ್ಷ್ಮೇ ಪಂಚಾಕ್ಷರ ವಪುಃ ಶಿವಃ ॥೩೩॥**
**ವಾಚ್ಯ ವಾಚಕ ಭಾವೇನ ಸ್ಥಿತಃ ಸಾಕ್ಷಾತ್ಸ್ವಭಾವತಃ ।**
**ವಾಚ್ಯಃ ಶಿವಃ ಪ್ರಮೇಯತ್ವಾ ನ್ಮಂತ್ರ ಸ್ತದ್ವಾಚಕಃ ಸ್ಮೃತಃ ॥೩೪॥**

---

ವಂಥಾದ್ದೂ, ಬಹಳ ನಿಶ್ಚಯವಾದ ವಿಷಯಗಳನ್ನೊಳಗೊಂಡದ್ದೂ, ಪರಮೇಶ್ವರನಾದ ನನಗೆ ಸಂಬಂಧಪಟ್ಟ, ಅತಿಗಂಭೀರವಾದ ಮಂತ್ರವು ಈ ಪಂಚಾಕ್ಷರವೆಂದು ತಿಳಿ. ಬಾಯಿಯಲ್ಲಿ ಸುಮುಖವಾಗಿ ಉಚ್ಚಾರಣೆ ಮಾಡಲು ಯೋಗ್ಯವಾದದ್ದೂ, ಎಲ್ಲಾ ವಿಷಯಗಳನ್ನೂ ಸಾಧಿಸಿಕೊಡುವುದೂ, ಎಲ್ಲಾ ವಿದ್ಯೆಗಳಿಗೂ ಬೀಜಭೂತವಾದದ್ದೂ, ಮೊತ್ತ ಮೊದಲಿನದಾದ, ಮಂಗಳಕರವಾದ ಮಂತ್ರವು ಇದೆಂದು ತಿಳಿ. ಅತಿ ಸೂಕ್ಷ್ಮವಾದದ್ದೂ, ಅತಿ ದೊಡ್ಡ ವಿಷಯಗಳನ್ನೊಳಗೊಂಡದ್ದೂ, ಆದ್ದರಿಂದಲೇ ಆಲದಮರದ ಬೀಜವನ್ನು ಹೋಲುವಂಥಾದ್ದೂ, ಆದ ಮಂತ್ರವು ಇದೇ ಎಂದು ತಿಳಿ. ವೇದಸ್ವರೂಪನಾದ, ಸತ್ವ, ರಜಸ್ಸು, ತಮಸ್ಸು, ಎಂಬ ಮೂರು ಗುಣಗಳಿಗೂ ಮೀರಿದ, ಸರ್ವಜ್ಞನೂ, ಎಲ್ಲಕ್ಕೂ ಕರ್ತೃವೂ ಆದ ಸ್ವಾಮಿಯೇ ಇದರಿಂದ ತಿಳಿಯಲ್ಪಡತಕ್ಕ ವಸ್ತುವು.

೩೩-೩೪. ಓಂ, ಎಂಬ ಒಂದಕ್ಷರದ ಮಂತ್ರದಲ್ಲಿ ಎಲ್ಲಾ ಕಡೆಯಲ್ಲಿ ವ್ಯಾಪಿಸಿರುವ ಶಿವನೇ ಬೋಧ್ಯನಾಗಿ ಇರುವನು. ಇದರಿಂದ ಕೂಡಿ ಆರು ಅಕ್ಷರವುಳ್ಳ ಸೂಕ್ಷ್ಮವಾದ ಮಂತ್ರದಲ್ಲಿ ಐದು ಅಕ್ಷರ ಸ್ವರೂಪನಾದ ಶಿವನೇ ವಾಚ್ಯವಾಚಕಭಾವವೆಂಬ ಸಂಬಂಧದಿಂದ ವಾಸವಾಗಿರುವನು. ಶಿವನ ಅರ್ಥ ಸ್ವರೂಪವಾದ ಮಂತ್ರವೇ ಈ ಅರ್ಥವನ್ನು

ವಾಚ್ಯ ವಾಚಕ ಭಾವೋಽಯ ಮನಾದಿಃ ಸಂಸ್ಥಿತ ಸ್ತಯೋಃ ।
ವೇದೇ ಶಿವಾಗಮೇ ವಾಽಪಿ ಯತ್ರ ಯತ್ರ ಷಡಕ್ಷರಃ ॥೩೫॥
ಮಂತ್ರಃ ಸ್ಥಿತಃ ಸದಾ ಮುಖ್ಯೋ ಲೋಕೇ ಪಂಚಾಕ್ಷರೋ ಮತಃ
ಕಿಂ ತಸ್ಯ ಬಹುಭಿ ರ್ಮಂತ್ರೈಃ ಶಾಸ್ತ್ರೈರ್ವಾ ಬಹು ವಿಸ್ತೃತೈಃ ॥೩೬॥
ಯಸ್ಯೈವಂ ಹೃದಿ ಸಂಸ್ಥೋಽಯಂ ಮಂತ್ರಃಸ್ಯಾ ತ್ಪಾರಮೇಶ್ವರಃ ।
ತೇನಾಧಿಕಂ ಶ್ರುತಂ ತೇನ ತೇನ ಸರ್ವ ಮನುಷ್ಠಿತಂ ॥೩೭॥
ಯೋ ವಿದ್ವಾ ನ್ವೈ ಜಪೇ ತ್ಸಮ್ಯಗಧೀತ್ಯೈವ ವಿಜಾನತಃ ।
ಏತಾ ವೃದ್ಧಿ ಶಿವಜ್ಞಾನ ಮೇತಾವ ತ್ಪರಮಂ ಪದಂ ॥೩೮॥

---

ತಿಳಿಸುವ ಈ ಶಬ್ದವೂ, ಆಗಿದೆಯೆಂದು ತಿಳಿಯಬೇಕು. ಶಿವನೇ ಈ ಮಂತ್ರರೂಪಶಬ್ದದಿಂದ ತಿಳಿಯಲ್ಪಡುವವನಾದುದರಿಂದ ಈ ಮಂತ್ರಕ್ಕೆ ಇವನೇ ಅರ್ಥವೆಂದು ತಿಳಿಯಬೇಕು. ಈ ಶಬ್ದಕ್ಕೂ, ಅರ್ಥಕ್ಕೂ, ಸಂಬಂಧವು ಉತ್ಪತ್ತಿಯಾಗದೇ ಸ್ವಾಭಾವಿಕವಾಗಿ ಯಾವಾಗಲೂ ಹೀಗೆಯೇ ಇರುವುದೆಂದು ತಿಳಿಯಬೇಕು. ವೇದದಲ್ಲಾಗಲೀ ಶಿವನಿಗೆ ಸಂಬಂಧಪಟ್ಟ, ಆಗಮಗಳಲ್ಲಾಗಲಿ, ಆರು ಅಕ್ಷರ ರೂಪವಾದ ಈ ಮಂತ್ರದಿಂದ ತಿಳಿಯಲ್ಪಡತಕ್ಕ ವಸ್ತುವು ಶಿವನೇ ಎಂದು ತಿಳಿಯಬೇಕು.

೩೬–೩೮. ಶಿವನು ಪಂಚಾಕ್ಷರ ಮಂತ್ರದಿಂದಲೇ ವಾಚ್ಯವಾಚಕ ಭಾವವೆಂಬ ಸಂಬಂಧದಿಂದ ಬೋಧ್ಯನಾಗಿ ಇರುವುದರಿಂದ ಅದೇ ಮುಖ್ಯವಾದ ಮಂತ್ರವು. ಇದನ್ನು ತಿಳಿದರೆ ಶಿವನನ್ನು ತಿಳಿಸಲು ಬೇರೆ ಅನೇಕ ಮಂತ್ರಗಳೂ ಬಹಳ ವಿಸ್ತಾರವಾದ ಶಾಸ್ತ್ರಗಳೂ ಏಕೆ ಬೇಕು? ಇಂಥಾ ಪರಮ ಪವಿತ್ರವಾದ, ಪರಮೇಶ್ವರನನ್ನು ಬೋಧಿಸುವ, ಮಂತ್ರವು ಯಾವನ ಮನಸ್ಸಿನಲ್ಲಿದೆಯೋ ಅವನೇ ಚೆನ್ನಾಗಿ ವೇದಗಳನ್ನು ಪಠಿಸಿರುವವನೂ, ಶಾಸ್ತ್ರಜ್ಞಾನ ಸಂಪನ್ನನೂ, ಮನುಷ್ಯನು ಮಾಡಬೇಕಾದುದನ್ನೆಲ್ಲವನ್ನೂ ಮಾಡಿರುವವನೂ, ಆಗಿರುತ್ತಾನೆಂದು ತಿಳಿಯಬೇಕು. ಯಾವ ವಿದ್ವಾಂಸನು ಶಾಸ್ತ್ರೋಕ್ತ ಕ್ರಮದಲ್ಲಿ ಈ ಮಂತ್ರವನ್ನು ತಿಳಿದು ಚೆನ್ನಾಗಿ ಜಪಿಸುವನೋ, ಅವನೇ ಸರ್ವ ಶ್ಲಾಘ್ಯನು. ಶಿವಜ್ಞಾನವು ಎಲ್ಲವೂ ಇದರಲ್ಲಿ ಪರ್ಯಾಪ್ತವಾಗಿದೆ. ಶ್ರೇಷ್ಠವಾದ ಮೋಕ್ಷದ ಲಾಭಕ್ಕೆ ಮಾರ್ಗವೂ ಇದೇ ಆಗಿದೆಯೆಂದು ತಿಳಿಯಬೇಕು.

ಏತಾವದ್ಬ್ರಹ್ಮ ವಿದ್ಯಾ ಚ ತಸ್ಮಾನ್ನಿತ್ಯಂ ಜಪೇ ದ್ಬುಧಃ ।
ಪಂಚಾಕ್ಷರೈಃ ಸ ಪ್ರಣವೋ ಮಂತ್ರೋಽಯಂ ಹೃದಯಂ ಮಮ ॥

ಗುಹ್ಯಾ ದ್ಗುಹ್ಯತರಂ ಸಾಕ್ಷಾ ನ್ಮೋಕ್ಷ ಜ್ಞಾನ ಮನುತ್ತಮಂ ।
ಅಸ್ಯ ಮಂತ್ರಸ್ಯ ವಕ್ಷ್ಯಾಮಿ ಋಷಿಂ ಛಂದೋಽಧಿ ದೈವತಂ ॥೪೦॥

ಬೀಜಂ ಶಕ್ತಿಂ ಸ್ವರಂ ವರ್ಣಂ ಸ್ಥಾನಂ ಚೈವಾಽಕ್ಷರಂ ಪ್ರತಿ ।
ವಾಮದೇವೋ ನಾಮ ಋಷಿಃ ಪಂಕ್ತಿ ಶ್ಛಂದ ಉದಾಹೃತಃ ॥೪೧॥

ದೇವತಾ ಶಿವ ಏವಾಽಹಂ ಮಂತ್ರಸ್ಯಾಽಸ್ಯ ವರಾನನೇ ।
ನಕಾರಾದೀನಿ ಬೀಜಾನಿ ಪಂಚ ಭೂತಾಽತ್ಮಕಾನಿ ಚ ॥೪೨॥

ಆತ್ಮಾನಂ ಪ್ರಣವಂ ವಿದ್ಧಿ ಸರ್ವವ್ಯಾಪಿನ ಮವ್ಯಯಂ ।
ಶಕ್ತಿ ಸ್ತ್ವಮೇವ ದೇವೇಶಿ ಸರ್ವದೇವ ನಮಸ್ಕೃತೇ ॥೪೩॥

---

೩೯–೪೧. ಈ ಮಂತ್ರವೇ ಸಮಸ್ತವಾದ ಬ್ರಹ್ಮವಿದ್ಯೆಯೂ ಆಗಿದೆ. ಆದ್ದರಿಂದ ವಿದ್ವಾಂಸನು ಇದನ್ನು ನಿತ್ಯದಲ್ಲಿಯೂ ಜಪಿಸಬೇಕು. ಐದು ಅಕ್ಷರಗಳಿಂದಲೂ ಮತ್ತು ಓಂ ಕಾರದಿಂದಲೂ ಕೂಡಿರುವ ಈ ಮಂತ್ರವು ಎಲ್ಲಾ ರಹಸ್ಯಕ್ಕಿಂತಲೂ ಅತ್ಯಂತ ಹೆಚ್ಚಾದ ರಹಸ್ಯವಾದದ್ದು. ಮತ್ತು ಅತ್ಯಂತ ಶ್ರೇಷ್ಠವಾದ ಮೋಕ್ಷವನ್ನೂ ಪಡೆಯಲು ಇದರಿಂದಾಗುವ ಸಾಕ್ಷಾತ್ಕಾರವೇ ಮುಖ್ಯತಮವೂ, ಖಚಿತವೂ ಆಗಿರುವ ಸಾಧನವು. ಎಂದು ತಿಳಿಯಬೇಕು. ಈ ಮಂತ್ರದ ಋಷಿಯನ್ನೂ, ಛಂದಸ್ಸನ್ನೂ, ಅಧಿದೇವತೆಯನ್ನೂ, ಹೇಳುವೆನು. ಅಲ್ಲದೆ ಇದರ ಬೀಜ, ಶಕ್ತಿ, ಸ್ವರ, ವರ್ಣ, ಸ್ಥಾನ, ಇವೆಲ್ಲವನ್ನೂ ಹೇಳುವೆನು. ಇದಕ್ಕೆ ವಾಸುದೇವನು ಋಷಿಯು, ಪಂಕ್ತಿಯು ಛಂದಸ್ಸು,

೪೨–೪೪. ಎಲೌ ಸುಂದರವಾದ ಮುಖವುಳ್ಳ ಪಾರ್ವತಿಯೇ, ಈ ಮಂತ್ರಕ್ಕೆ ಅಧಿದೇವತೆಯು ಶಿವನಾದ ನಾನೇ ಎಂದು ತಿಳಿ. ಪಂಚ ಭೂತಸ್ವರೂಪಗಳಾದನಕಾರಾದಿಲಕ್ಷಣಗಳೇ ಬೀಜಗಳು,ಎಲ್ಲಾ ಕಡೆಯಲ್ಲಿ ವ್ಯಾಪಿಸಿರುವ,ನಾಶರಹಿತನಾದ ನನ್ನನ್ನೇ ಓಂ, ಕಾರವೆಂದು ತಿಳಿ. ಎಲ್ಲಾ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ, ದೇವತೆಗಳಿಗೆಲ್ಲರಿಗೂ ಒಡೆಯ

ತ್ವದೀಯಂ ಪ್ರಣವಂ ಕಿಂಚಿನ್ಮದೀಯಂ ಪ್ರಣವಂ ತಥಾ ।
ತ್ವದೀಯಂ ದೇವಿ ಮಂತ್ರಾಣಾಂ ಶಕ್ತಿಭೂತಂ ನ ಸಂಶಯಃ ॥೪೪॥

ಅಕಾರೋಕಾರ ಮಕಾರಾ ಮದೀಯೇ ಪ್ರಣವೇ ಸ್ಥಿತಾಃ ।
ಉಕಾರಂ ಚ ಮಕಾರಂ ಚ ಅಕಾರಂ ಚ ಕ್ರಮೇಣ ವೈ ॥೪೫॥

ದ್ವಿತೀಯಂ ಪ್ರಣವಂ ವಿದ್ಧಿ ತ್ರಿಮಾತ್ರಂ ಪ್ಲುತ ಮುತ್ತಮಂ ।
ಓಂ ಕಾರಸ್ಯ ಸ್ವರೋದಾತ್ತ ಋಷಿ ರ್ಬ್ರಹ್ಮಾ ಸಿತಂ ವಪುಃ ॥೪೬॥

ಛಂದೋ ದೇವೀ ಚ ಗಾಯತ್ರೀ ಪರಮಾತ್ಮಾಽಧಿ ದೇವತಾ ।
ಉದಾತ್ತಃ ಪ್ರಥಮ ಸ್ತದ್ವ ಚ್ಚತುರ್ಥಶ್ಚ ದ್ವಿತೀಯಕಃ ॥೪೭॥

ಪಂಚಮಃ ಸ್ವರಿತ ಶ್ಚೈವ ಮಧ್ಯಮೋನಿಷಧಃ ಸ್ಮೃತಃ ।
ನಕಾರಃ ಪೀತ ವರ್ಣಶ್ಚ ಸ್ಥಾನಂ ಪೂರ್ವ ಮುಖಂ ಸ್ಮೃತಂ ॥೪೮॥

---

೪೪. ಎಲೌ ಪಾರ್ವತಿಯೇ, ಓಂಕಾರಕ್ಕೆ ಸ್ವಲ್ಪ ಭಾಗ ನಿನಗೆ ಸಂಬಂಧಪಟ್ಟದ್ದಾದ, ನೀನೇ ಶಕ್ತಿಯು. ನಿನಗೆ ಸಂಬಂಧಪಟ್ಟ ಓಂಕಾರವೂ ಸ್ವಲ್ಪ ನನಗೆ ಸಂಬಂಧಪಟ್ಟ ಓಂಕಾರವೂ, ಹೀಗೆ ಒಟ್ಟಿಗೇ ಸೇರಿವೆ. ಎಲೌ ಪಾರ್ವತೀದೇವಿಯೇ, ಮಂತ್ರಗಳಿಗೆ ಶಕ್ತಿ ಭೂತವಾದ ಭಾಗವು ನಿನಗೆ ಸಂಬಂದಪಟ್ಟದ್ದೆಂಬುದರಲ್ಲಿ ಸಂದೇಹವಿಲ್ಲ.

೪೫–೪೭. ನನಗೆ ಸಂಬಂಧಪಟ್ಟ ಓಂಕಾರದಲ್ಲಿ ಅಕಾರ, ಉಕಾರ ಮಕಾರಗಳಿವೆ. ಕ್ರಮವಾಗಿ, ಉಕಾರ, ಮಕಾರ, ಅಕಾರಗಳೂ, ನಿನಗೆ ಸಂಬಂಧಪಟ್ಟ, ಓಂಕಾರದಲ್ಲಿವೆ. ಮತ್ತು ನಿನ್ನ ಓಂಕಾರವು ಮೂರು ಮಾತ್ರೆಗಳುಳ್ಳದ್ದಾಗಿಯೂ, ದೀರ್ಘಕ್ಕಿಂತ ಒಂದು ಮಾತ್ರಾ ಕಾಲ ಹೆಚ್ಚಾಗಿರುವ "ಪ್ಲುತ" ಕಾಲದಲ್ಲಿ ಉಚ್ಚರಿಸಲ್ಪಡುವುದಾಗಿಯೂ,ಶ್ರೇಷ್ಠವಾಗಿದೆ. ಓಂಕಾರಕ್ಕೆ ಉದಾತ್ತಸ್ವರವೆಂದೂ,ಬ್ರಹ್ಮನೇ ಋಷಿಯೆಂದೂ ತಿಳಿಯಬೇಕು. ಮತ್ತು ಇದರ ಶರೀರವು ಬೆಳ್ಳಗಿದೆ. "ಓಂಕಾರವು" ಗಾಯತ್ರೀದೇವಿಯ ಛಂದಸ್ಸುಳ್ಳದ್ದಾಗಿಯೂ, ಪರಮಾತ್ಮನೇ ಅಧಿದೇವತೆಯಾಗಿಯೂ, ಇದರ ಮೊದಲನೆಯ ಮತ್ತು ನಾಲ್ಕನೆಯ ಅಕ್ಷರಗಳು, ಉದಾತ್ತಸ್ವರಗಳುಳ್ಳದ್ದಾಗಿಯೂ, ಎರಡನೆಯದು "ಸ್ವರಿತ" ಸ್ವರವುಳ್ಳದ್ದಾಗಿಯೂ ಇದೆಯೆಂದು ತಿಳಯಬೇಕು.

೪೮–೫೦. ಐದನೆಯ ಅಕ್ಷರವು "ಸ್ವರಿತ" ಸ್ವರವುಳ್ಳದ್ದಾಗಿಯೂ, ಮಧ್ಯದ ಅಕ್ಷರವು "ನಿಷಾದ" ಸ್ವರವುಳ್ಳದ್ದಾಗಿಯೂ, ಇವೆ

ಇಂದ್ರೋಽಧಿ ದೈವತಂ ಛಂದೋ ಗಾಯತ್ರೀ ಗೌತಮೋ ಋಷಿಃ ।
ಮಕಾರಃ ಕೃಷ್ಣವರ್ಣೋಽಸ್ಯ ಸ್ಥಾನಂ ವೈ ದಕ್ಷಿಣಾ ಮುಖಂ ॥೪೯॥
ಛಂದೋಽನುಷ್ಟುಪ್ ಋಷಿಶ್ಚಾತ್ರೀ ರುದ್ರೋ ದೈವತ ಮುಚ್ಯತೇ।
ಶಿಕಾರೋ ಧೂಮ್ರವರ್ಣೋಽಸ್ಯ ಸ್ಥಾನಂ ವೈ ಪಶ್ಚಿಮಂ ಮುಖಂ ॥
ವಿಶ್ವಾಮಿತ್ರ ಋಷಿ ಸ್ತ್ರಿಷ್ಟುಪ್ ಛಂದೋ ವಿಷ್ಣುಸ್ತು ದೈವತಂ ।
ವಾಕಾರೋ ಹೇಮವರ್ಣೋಽಸ್ಯ ಸ್ಥಾನಂ ಚೈ ವೋತ್ತರಂ ಮುಖಂ
ಬ್ರಹ್ಮಾದಿ ದೈವತಂ ಛಂದೋ ಬೃಹತೀ ಚಾಂಗಿರಾ ಋಷಿಃ ।
ಯಕಾರೋ ರಕ್ತವರ್ಣಶ್ಚ ಸ್ಥಾನ ಮೂರ್ಧ್ವಂ ಮುಖಂ ವಿರಾಟ್ ॥
ಛಂದೋ ಋಷಿ ರ್ಭರಧ್ವಾಜಃ ಸ್ಕಂದೋ ದೈವತ ಮುಚ್ಯತೇ ।
ನ್ಯಾಸಮಸ್ಯ ಪ್ರವಕ್ಷ್ಯಾಮಿ ಸರ್ವ ಸಿದ್ಧಿ ಕರಂ ಶುಭಂ ॥೫೩॥

---

ಯೆಂದು ತಿಳಿಯಬೇಕು. ನಕಾರವು ಬಿಳಿಯ ಬಣ್ಣ ಉಳ್ಳದ್ದಾಗಿಯೂ, ಇದೆ. ಇದರ ಸ್ಥಾನ ಪೂರ್ವದಿಕ್ಕೆಂದು ತಿಳಿಯಬೇಕು. ಇದಕ್ಕೆ ಇಂದ್ರನೇ ಅಧಿದೇವತೆಯು, ಗಾಯತ್ರಿಯೇ ಛಂದಸ್ಸು, ಆಗಿದೆ. ಇದಕ್ಕೆ ಗೌತಮನೇ ಋಷಿಯು, ಇದರ ಮಕಾರವು ಕಪ್ಪು ಬಣ್ಣವುಳ್ಳದ್ದು. ಇದರ ಸ್ಥಾನ ದಕ್ಷಿಣದಿಕ್ಕು, ಇದರ ಛಂದಸ್ಸು ಅನುಷ್ಟುಪ್, ಋಷಿಯು ಅತ್ರಿ, ರುದ್ರನೇ ದೇವತೆಯೆಂದು ಹೇಳಲ್ಪಟ್ಟದೆ. ಇದರ "ಶಿ" ಕಾರವು ಹೊಂಬಣ್ಣದ್ದಾಗಿಯೂ, ಸ್ಥಾನವು ಪಶ್ಚಿಮದಿಕ್ಕಾಗಿಯೂ, ಇದೆಯೆಂದು ತಿಳಿಯಬೇಕು.

೫೧-೫೩. ವಿಶ್ವಾಮಿತ್ರನೇ ಇದಕ್ಕೆ ಋಷಿಯು, ಇದರ ಛಂದಸ್ಸು ತ್ರಿಷ್ಟುಪ್, ವಿಷ್ಣುವೇ ದೇವತೆಯು. ಇದರ ವಾಕಾರವು ಚಿನ್ನದ ಬಣ್ಣವುಳ್ಳದ್ದು. ಇದರ ಸ್ಥಾನವು ಉತ್ತರದಿಕ್ಕು, ಇದಕ್ಕೆ ಬ್ರಹ್ಮನೇ ಅಧಿದೇವತೆ. ಛಂದಸ್ಸು ಬೃಹತೀ, ಋಷಿಯು ಅಂಗಿರಸ್ಸು. ಇದರ ಯಕಾರವು ಕೆಂಪುಬಣ್ಣವುಳ್ಳದ್ದಾಗಿದೆ. ಇದರ ಸ್ಥಾನವು ಮೇಲ್ಭಾಗ, ಇದರ ಛಂದಸ್ಸು ವಿರಾಟ್, ಇದರ ಋಷಿಯು ಭರದ್ವಾಜ, ಇದರ ದೇವತೆಯು ಷಣ್ಮುಖ, ಇದರ ಮಂಗಳಕರಗಳಾದ ಮತ್ತು ಎಲ್ಲಾ ಸಿದ್ಧಿಗಳನ್ನೂ ಉಂಟುಮಾಡುವ ನ್ಯಾಸಗಳನ್ನು ಮುಂದೆ ಹೇಳುತ್ತೇನೆ.

ಸರ್ವಪಾಪ ಹರಂ ಚೈವ ತ್ರಿವಿಧೋ ನ್ಯಾಸ ಉಚ್ಯತೇ ।
ಉತ್ಪತ್ತಿ ಸ್ಥಿತಿ ಸಂಹಾರ ಭೇದತ ಸ್ತ್ರಿವಿಧಃ ಸ್ಮೃತಃ ॥೫೪॥
ಬ್ರಹ್ಮಚಾರಿ ಗೃಹಸ್ಥಾನಾಂ ಯತೀನಾಂ ಕ್ರಮಶೋ ಭವೇತ್ ।
ಉತ್ಪತ್ತಿಃ ಬ್ರಹ್ಮಚಾರೀಣಾಂ ಗೃಹಸ್ಥಾನಾಂ ಸ್ಥಿತಿಃ ಸದಾ ॥೫೫॥
ಯತೀನಾಂ ಸಂಹೃತಿ ರ್ನ್ಯಾಸಃ ಸಿದ್ಧಿ ರ್ಭವತಿನಾಽನ್ಯಥಾ ।
ಅಂಗನ್ಯಾಸಃ ಕರನ್ಯಾಸೋ ದೇಹನ್ಯಾಸ ಇತಿ ತ್ರಿಧಾ ॥೫೬॥
ಉತ್ಪತ್ತ್ಯಾದಿ ತ್ರಿಭೇದೇನ ವಕ್ಷ್ಯತೇ ತೇ ವರಾನನೇ ।
ನ್ಯಸೇ ತ್ಪೂರ್ವಂ ಕರನ್ಯಾಸಂ ದೇಹನ್ಯಾಸ ಮನಂತರಂ ॥೫೭॥
ಅಂಗನ್ಯಾಸಂ ತತಃ ಪಶ್ಚಾ ದಕ್ಷರಾಣಾಂ ವಿಧಿ ಕ್ರಮಾತ್ ।
ಮೂರ್ಧಾದಿ ಪಾದ ಪರ್ಯಂತ ಮುತ್ಪತ್ತಿರ್ನ್ಯಾಸ ಉಚ್ಯತೇ ॥೫೮॥

---

೫೪–೫೬. ಎಲ್ಲಾ ಪಾಪಗಳನ್ನೂ ಹೋಗಲಾಡಿಸುವ ಮೂರು ವಿಧವಾದ ನ್ಯಾಸಗಳು ಹೇಳಲ್ಪಟ್ಟಿವೆ. ಉತ್ಪತ್ತಿ, ಸ್ಥಿತಿ, ಪ್ರಳಯಗಳೆಂಬ ಭೇದಗಳಿಂದ, ನ್ಯಾಸಗಳೂ ಮೂರು ವಿಧಗಳಾಗಿವೆ. ಬ್ರಹ್ಮಚಾರೀ, ಗೃಹಸ್ಥ, ಸನ್ಯಾಸಿಗಳಿಗೆ ಕ್ರಮವಾಗಿ, ಈ ಮೂರು ನ್ಯಾಸಗಳು ಹೇಳಲ್ಪಟ್ಟಿವೆ. ಬ್ರಹ್ಮಚಾರಿಗಳಿಗೆ ಉತ್ಪತ್ತಿನ್ಯಾಸವೂ, ಗೃಹಸ್ಥರುಗಳಿಗೆ, ಸ್ಥಿತಿ ನ್ಯಾಸವೂ, ಸಂನ್ಯಾಸಿಗಳಿಗೆ ಸಂಹಾರನ್ಯಾಸವೂ, ಸಿದ್ಧಿಗಳನ್ನು ಕೊಡುತ್ತವೆ. ಇವುಗಳು ವಿನಾ ಸಿದ್ಧಿಗೆ ಬೇರೆ ಮಾರ್ಗವಿಲ್ಲ. ಅಂಗ ನ್ಯಾಸ, ಕೈಯಿನ ನ್ಯಾಸ, ದೇಹನ್ಯಾಸ, ಎಂದು ನ್ಯಾಸಗಳು ಮೂರು ವಿಧಗಳಾಗಿರುತ್ತವೆ.

೫೭–೫೮. ಎಲೌ ಸುಂದರಾಂಗಿಯೇ, ಈ ನ್ಯಾಸಗಳು ಉತ್ಪತ್ತಿಯೇ ಮುಂತಾದ ಮೂರು ಭೇದಗಳುಳ್ಳವು, ಎಂದು ಹೇಳಲ್ಪಟ್ಟಿವೆ. ಮುಂಚೆ ಕೈಯಿನ ನ್ಯಾಸವನ್ನೂ, ಆಮೇಲೆ ದೇಹನ್ಯಾಸವನ್ನೂ, ಅನಂತರ ಅಂಗ ನ್ಯಾಸವನ್ನೂ, ಶಾಸ್ತ್ರೋಕ್ತ ಕ್ರಮದಲ್ಲಿ ಅಕ್ಷರಗಳಿಗೆ ಅನುಸರಿಸಿ, ಮಾಡಬೇಕು. ತಲೆಯಲ್ಲಿ ಮೊದಲು ಮಾಡಿಕೊಂಡು ಕಾಲಿನವರೆಗಿನ ನ್ಯಾಸವು ಉತ್ಪತ್ತಿನ್ಯಾಸವೆನ್ನಿಸಿಕೊಳ್ಳುತ್ತದೆ. ಕಾಲಿನಲ್ಲಿ ಮೊದಲು ಮಾಡಿ

**ಪಾದಾದಿ ಮೂರ್ಧ ಪರ್ಯಂತಂ ಸಂಹಾರೋ ಭವತಿ ಪ್ರಿಯೇ ।**
**ಹೃದಯಾಽಸ್ಯ ಗಲನ್ಯಾಸಃ ಸ್ಥಿತಿ ನ್ಯಾಸ ಉದಾಹೃತಃ ॥೫೯॥**

**ಬ್ರಹ್ಮಚಾರಿ ಗೃಹಸ್ಥಾನಾಂ ಯತೀನಾಂ ಚೈವ ಶೋಭನೇ ।**
**ಸ ಶಿರಸ್ಕಂ ತತೋ ದೇಹಂ ಸರ್ವಮಂತ್ರೇಣ ಸಂಸ್ಪೃಶೇತ್ ॥೬೦॥**
**ಸ ದೇಹನ್ಯಾಸ ಇತ್ಯುಕ್ತಃ ಸರ್ವೇಷಾಂ ಸಮ ಏವ ಸಃ ।**
**ದಕ್ಷಿಣಾಂಗುಷ್ಠ ಮಾರಭ್ಯ ವಾಮಾಂಗುಷ್ಠಾಂತ ಏವ ಹಿ ॥೬೧॥**

**ನ್ಯಸ್ಯತೇ ಯಸ್ತು ದುತ್ಪತ್ತಿ ರ್ವಿಪರೀತಂ ತು ಸಂಹೃತಿಃ ।**
**ಅಂಗುಷ್ಠಾದಿ ಕನಿಷ್ಠಾಂತಂ ನ್ಯಸ್ಯತೇ ಹಸ್ತಯೋ ರ್ದ್ವಯೋಃ ॥೬೨॥**

**ಅತೀವ ಭೋಗದೋ ದೇವಿ ಸ್ಥಿತಿನ್ಯಾಸಃ ಕುಟುಂಬಿನಾಂ ।**
**ಕರನ್ಯಾಸಂ ಪುರಾ ಕೃತ್ವಾ ದೇಹನ್ಯಾಸ ಮನಂತರಂ ॥೬೩॥**

---

ಕೊಂಡು ತಲೆಯವರೆಗಿನ ನ್ಯಾಸವು, ಸಂಹಾರನ್ಯಾಸವೆನ್ನಿಸಿಕೊಳ್ಳುತ್ತದೆ. ಹೃದಯ, ಮುಖ, ಕತ್ತುಗಳಲ್ಲಿ ನ್ಯಾಸವು 'ಸ್ಥಿತಿನ್ಯಾಸ' ವೆನ್ನಿಸಿಕೊಳ್ಳುವುದು.

೬೦–೬೨. ಎಲೌ ಮಂಗಳಕರಳೇ, ಬ್ರಹ್ಮಚಾರಿಗಳೂ, ಗೃಹಸ್ಥರೂ ಸಂನ್ಯಾಸಿಗಳೂ, ತಲೆಯೊಡನೆ ಸಮಸ್ತ ಶರೀರವನ್ನೂ, ಎಲ್ಲಾ ಮಂತ್ರಗಳಿಂದಲೂ ಮುಟ್ಟಿಕೊಳ್ಳಬೇಕು. ಇದನ್ನೇ ದೇಹನ್ಯಾಸವೆಂದು ಕರೆಯುವುದು. ಇದು ಎಲ್ಲರಿಗೂ ಸಮಾನವಾಗಿಯೇ ಇದೆ. ಬಲ ಹೆಬ್ಬೆರಳಿನಿಂದ ಹಿಡಿದು, ಎಡ ಹೆಬ್ಬೆರಳಿನವರೆಗೆ ನ್ಯಾಸಮಾಡಿದರೆ ಅದು ಉತ್ಪತ್ತಿ ನ್ಯಾಸವೆನಿಸಿ ಕೊಳ್ಳುವುದು. ಇದಕ್ಕೆ ವಿರುದ್ಧವಾದದ್ದು ಸಂಹಾರ ನ್ಯಾಸವೆನಿಸಿಕೊಳ್ಳುವುದು. ಎರಡು ಕೈಗಳಲ್ಲಿಯೂ ಹೆಬ್ಬೆರಳು ಮೊದಲು ಮಾಡಿಕೊಂಡು ಕಿರಿಬೆರಳಿನವರೆಗೆ ನ್ಯಾಸಮಾಡಿದರೆ ಇದು ಸ್ಥಿತಿ ನ್ಯಾಸವೆನಿಸಿಕೊಳ್ಳುವುದು.

೬೩–೬೪. ಎಲೈ ದೇವಿಯೇ, ಸಂಸಾರಿಗಳಿಗೆ ಸ್ಥಿತಿನ್ಯಾಸವು ಬಹಳ ಭೋಗಗಳನ್ನು ಕೊಡುತ್ತದೆಂದು ತಿಳಿ. ಮೊದಲು ಕೈಯಿನಲ್ಲಿ ನ್ಯಾಸವನ್ನು ಮಾಡಿ, ಅನಂತರ ದೇಹನ್ಯಾಸವನ್ನು ಮಾಡಬೇಕು. ಅನಂತರ ಅಂಗನ್ಯಾಸವನ್ನು ಮಾಡಬೇಕು. ಇದು ಎಲ್ಲರಿಗೂ ಸಮಾನವಾದ ನಿಯಮವು.

**ಅಂಗನ್ಯಾಸಂ ನ್ಯಸೇತ್ಪಶ್ಚಾದೇಷ ಸಾಧಾರಣೋ ವಿಧಿಃ ।**
**ಓಂಕಾರಂ ಸಂಪುಟೀ ಕೃತ್ಯ ಸರ್ವಾಂಗೇಷು ಚ ವಿನ್ಯಸೇತ್ ॥೬೪॥**
**ಕರಯೋ ರುಭಯೋ ಶ್ಚೈವ ದಶಾಗ್ರಾಂಗುಲಿಷು ಕ್ರಮಾತ್ ।**
**ಪ್ರಕ್ಷಾಲ್ಯ ಪಾದಾ ವಾಚಮ್ಯ ಶುಚಿರ್ಭೂತ್ವಾ ಸಮಾಹಿತಃ ॥೬೫॥**
**ಪ್ರಾಙ್ಮುಖೋ ದಂಙ್ಮುಖೋ ವಾಽಪಿ ನ್ಯಾಸ ಕರ್ಮ ಸಮಾಚರೇತ್**
**ಸ್ಮರೇ ತ್ಪೂರ್ವಂ ಋಷಿಂ ಛಂದೋ ದೈವತಂ ಬೀಜ ಮೇವಚ ॥೬೬॥**
**ಶಕ್ತಿಂ ಚ ಪರಮಾತ್ಮಾನಂ ಗುರುಂ ಚೈವ ವರಾನನೇ ।**
**ಮಂತ್ರೇಣ ಪಾಣೀ ಸಂಸ್ಪೃಜ್ಯ ತಲಯೋಃ ಪ್ರಣವಂ ನ್ಯಸೇತ್ ॥೬೭॥**
**ಅಂಗುಲೀನಾಂ ಚ ಸರ್ವೇಷಾಂ ತಥಾ ಚಾಽದ್ಯಂತ ಪರ್ವಸು ।**
**ಸ ಬಿಂದು ಕಾನಿ ಬೀಜಾನಿ ಪಂಚ ಮಧ್ಯಮ ಪರ್ವಸು ॥೬೮॥**

---

ಓಂಕಾರ ಸಂಪುಟೀ ಕರಣದಿಂದ ಎಲ್ಲಾ ಶರೀರ ಭಾಗದಲ್ಲಿಯೂ ನ್ಯಾಸ ಮಾಡ ಬೇಕು. ಎರಡು ಕೈಗಳ ಹತ್ತುಬೆರಳುಗಳಲ್ಲಿಯೂ ಮುಂಭಾಗದಲ್ಲಿಯೂ ಕ್ರಮವಾಗಿ ಓಂಕಾರದಿಂದ ಮುಚ್ಚಳಿಕೆಯನ್ನುಮಾಡಬೇಕು. ಮೊದಲು ಕಾಲುಗಳನ್ನು ತೊಳೆದುಕೊಂಡು, ಆಚಮನ ಮಾಡಿ, ಶುದ್ಧನಾಗಿ, ಸಮಾಧಾನ ಚಿತ್ತದಿಂದ ಈ ನ್ಯಾಸಗಳನ್ನು ಪ್ರಾರಂಭಿಸಬೇಕು.

೬೬–೬೮. ಉಪಾಸಕನು ಪೂರ್ವ ಮುಖನಾಗಿ ಅಥವಾ ಉತ್ತರ ಮುಖನಾಗಿ ನ್ಯಾಸಕರ್ಮವನ್ನು ಮಾಡಬೇಕು. ಮೊದಲು, ಋಷಿ, ಛಂದಸ್ಸು, ದೇವತೆ, ಬೀಜಗಳನ್ನು ಸ್ಮರಿಸಬೇಕು. ಎಲೈ ಸುಂದರಾಂಗಿಯೇ, ಮೊದಲು ಶಕ್ತಿಯನ್ನೂ, ಪರಮಾತ್ಮನನ್ನೂ, ಗುರುವನ್ನೂ ಸ್ಮರಿಸಬೇಕು ಮಂತ್ರದಿಂದ ಕೈಗಳನ್ನು ಕೂಡಿಸಿ, ತಲಗಳಲ್ಲಿ ಓಂಕಾರವನ್ನು ನ್ಯಾಸಮಾಡಬೇಕು. ಹಾಗೆಯೇ ಬೆರಳುಗಳ ಮೇಲೆ ಬುಡದ ಮತ್ತು ತುದಿಯ ಗೆರೆಗಳಲ್ಲಿಯೂ, ಬಿಂದುವಿನಿಂದ ಕೂಡಿದ ಬೀಜಾಕ್ಷರಗಳನ್ನು ಐದನೆಯ ಮತ್ತು ಮಧ್ಯದ ಬೆರಳುಗಳ ಮೇಲಿನ ಗೆರೆಗಳಲ್ಲಿ ನ್ಯಾಸಮಾಡಬೇಕು.

ಉತ್ಪತ್ತ್ಯಾದಿ ತ್ರಿ ಭೇದೇನ ನ್ಯಸೇ ದಾಶ್ರಮತಃ ಕ್ರಮಾತ್ ।
ಉಭಾಭ್ಯಾ ಮೇವ ಪಾಣಿಭ್ಯಾ ಮಾಪಾತ ತಲ ಮಸ್ತಕಂ ॥೬೯॥

ಮಂತ್ರೇಣ ಸಂಸ್ಪೃಶೇದ್ದೇಹಂ ಪ್ರಣವೇ ನೈವ ಸಂಪುಟಂ ।
ಮೂರ್ಧ್ನಿ ವಕ್ತ್ರೇ ಚ ಕಂಠೇ ಚ ಹೃದಯೇ ಗುಹ್ಯಕೇ ತಥಾ ॥೭೦॥

ಪಾದಯೋ ರುಭಯೋ ಶ್ಚೈವ ಗುಹ್ಯೇ ಚ ಹೃದಯೇ ತಥಾ ।
ಕಂಠೇ ಚ ಮುಖಮಧ್ಯೇ ಚ ಮೂರ್ಧ್ನಿ ಚ ಪ್ರಣವಾದಿಕಂ ॥೭೧॥

ಹೃದಯೇ ಗುಹ್ಯಕೇ ಚೈವ ಪಾದಯೋಃ ಮೂರ್ಧ್ನಿ ವಾಚಿ ವಾ ।
ಕಂಠೇ ಚೈವ ನ್ಯಸೇದೇವಂ ಪ್ರಣವಾದಿ ತ್ರಿಭೇದತಃ ॥೭೨॥

ಕೃತ್ವಾಽಂಗನ್ಯಾಸಮೇವಂ ಹಿ ಮುಖಾನಿ ಪರಿಕಲ್ಪಯೇತ್ ।
ಪೂರ್ವಾದಿ ಚೋರ್ಧ್ವ ಪರ್ಯಂತಂ ನಕಾರಾದಿ ಯಥಾ ಕ್ರಮಂ॥೭೩॥

---

೬೯–೭೦. ಬ್ರಹ್ಮಚರ್ಯ ಮೊದಲಾದ ಆಶ್ರಮಗಳಿಗೆ ಅನುಸಾರವಾಗಿ, ಉತ್ಪತ್ತಿಯೇ ಮುಂತಾದ ನ್ಯಾಸಕ್ರಮದಂತೆ ಅನುಸರಿಸಿ, ಎರಡು ಕೈಗಳಿಂದಲೂ ಕಾಲಿನ ಕೆಳಭಾಗವೇ ಮೊದಲಾಗಿ ತಲೆಯವರೆಗೂ ಓಂಕಾರದ ಮಂತ್ರ ಸಹಿತವಾದ ಮುಚ್ಚಳಿಕೆಯನ್ನು, ತಲೆಯಲ್ಲಿ, ಮುಖದಲ್ಲಿ ಮತ್ತು ಕತ್ತಿನಲ್ಲಿ, ಹೃದಯದಲ್ಲಿ ರಹಸ್ಯ ಪ್ರದೇಶದಲ್ಲಿ, ಈ ರೀತಿಯಾಗಿ ದೇಹದ ಎಲ್ಲಾ ಭಾಗಗಳನ್ನೂ ಮುಟ್ಟಿ ನ್ಯಾಸಮಾಡಿಕೊಳ್ಳಬೇಕು.

೭೧–೭೩. ಎರಡು ಕಾಲುಗಳಲ್ಲಿಯೂ, ರಹಸ್ಯ ಪ್ರದೇಶದಲ್ಲಿಯೂ, ಹೃದಯದಲ್ಲಿಯೂ, ಕತ್ತಿನಲ್ಲಿಯೂ, ಮುಖದ ಮಧ್ಯಪ್ರದೇಶದಲ್ಲಿಯೂ, ತಲೆಯಲ್ಲಿಯೂ ಓಂಕಾರವೇ ಮೊದಲಾದುವನ್ನೂ, ಹೃದಯದಲ್ಲಿ, ರಹಸ್ಯ ಪ್ರದೇಶದಲ್ಲಿ, ಕಾಲುಗಳಲ್ಲಿ, ತಲೆಯಲ್ಲಿ, ಮುಖದಲ್ಲಿ, ಕತ್ತಿನಲ್ಲಿ, ಓಂಕಾರವೇ ಮೊದಲಾದ ಮೂರು ಭೇದಗಳಿಂದ ನ್ಯಾಸವನ್ನೂ ಮಾಡಬೇಕು. ಈ ರೀತಿಯಾಗಿ ಅಂಗನ್ಯಾಸವನ್ನು ಮಾಡಿ, ದಿಕ್ಕುಗಳಿಗೆ ತಿರುಗಿಕೊಳ್ಳಬೇಕು. ಕ್ರಮಕ್ಕೆ ಅನುಸಾರವಾಗಿ, ಪೂರ್ವದಿಕ್ಕೇ ಮೊದಲುಮಾಡಿಕೊಂಡು ಮೇಲಿನದಿಕ್ಕಿನವರೆಗೆ ನಕಾರವೇ ಮುಂತಾದ ಅಕ್ಷರಕ್ಕೆ ಅನುಸಾರವಾಗಿ ತಿರುಗಿ ಕೊಳ್ಳಬೇಕು.

ಷಡಂಗಾನಿ ನ್ಯಸೇತ್ಸ್ಪೃಶ್ಟ್ವಾ ದ್ಯಥಾ ಸ್ಥಾನಂ ಚ ಶೋಭನಂ ।
ನಮಃ ಸ್ವಾಹಾವಷಡ್ಹುಂ ಚ ವೌಷಟ್ಫಟ್ಕಾರಕೈಃ ಸಹ ॥೭೪॥
ಪ್ರಣವಂ ಹೃದಯಂ ವಿದ್ಯಾನ್ನಕಾರಃ ಶಿರ ಉಚ್ಯತೇ ।
ಶಿಖಾ ಮಕಾರ ಆಖ್ಯಾತಃ ಶಿಕಾರಃ ಕವಚಂ ತಥಾ ॥೭೫॥
ವಾಕಾರೋ ನೇತ್ರ ಮಸ್ತ್ರಂ ತು ಯಕಾರಃ ಪರಿಕೀರ್ತಿತಃ ।
ಇತ್ಥಮಂಗಾನಿ ವಿನ್ಯಸ್ಯ ತತೋ ವೈ ಬಂಧಯೇದ್ದಿಶಃ ॥೭೬॥
ವಿಘ್ನೇಶೋ ಮಾತರೋ ದುರ್ಗಾಕ್ಷೇತ್ರಜ್ಞೋ ದೇವತಾ ದಿಶಃ ।
ಆಗ್ನೇಯಾದಿಷು ಕೋಣೇಷು ಚತುರ್ಷ್ವಪಿ ಯಥಾ ಕ್ರಮಂ ॥೭೭॥
ಅಂಗುಷ್ಠ ತರ್ಜನ್ಯಗ್ರಾಭ್ಯಾಂ ಸಂಸ್ಥಾಪ್ಯ ಸು ಮುಖಂ ಶುಭಂ ।
ರಕ್ಷಧ್ವಮಿತಿ ಚೋಕ್ತ್ವಾ ತು ಸಮಸ್ಕುರ್ಯಾತ್ಪೃಥ ಕ್ಪೃಥಕ್ ॥೭೮॥
ಗಲೇ ಮಧ್ಯೇ ತಥಾಽಂಗುಷ್ಠೇ ತರ್ಜನ್ಯಾದ್ಯಂಗುಲೀಷು ಚ ।
ಅಂಗುಷ್ಠೇನ ಕರನ್ಯಾಸಂ ಕುರ್ಯಾದೇವ ವಿಚಕ್ಷಣಃ ॥೭೯॥

---

೭೪–೭೬. ಅನಂತರದಲ್ಲಿ ಆರು ಅಂಗಗಳನ್ನೂ, ಅವುಗಳ ಸ್ಥಾನಕ್ಕೆ ತಕ್ಕಂತೆ, ನಮಃ, ಸ್ವಾಹಾ, ವಷಟ್, ಹುಂವೌಷಟ್, ಫಟ್, ಎಂಬ ಶಬ್ದಗಳನ್ನು ಉಚ್ಚರಿಸುತ್ತಾ, ಮಂಗಳಕರವಾದ ರೀತಿಯಲ್ಲಿ ಮಾಡಬೇಕು. ಓಂಕಾರವನ್ನು ಹೃದಯವೆಂದೂ,ನಕಾರವು ತಲೆಯೆಂದೂ, ತಿಳಿಯಬೇಕು. ಮಕಾರವು ತಲೆಯ ಮೇಲ್ಭಾಗವೆಂದೂ,ಶಿಕಾರವು ಕವಚವೆಂದೂ ತಿಳಿಯಬೇಕು. ವಾಕಾರವು ಕಣ್ಣೆಂದೂ,ಯಕಾರವು ಅಸ್ತ್ರವೆಂದೂ ಹೇಳಲ್ಪಟ್ಟಿದೆ. ಹೀಗೆ ಅಂಗಗಳನ್ನು ನ್ಯಾಸ ಮಾಡಿ ಆಮೇಲೆ ದಿಕ್ಕುಗಳನ್ನು ಬಂಧಿಸಬೇಕು.

೭೭–೭೯. ವಿಘ್ನೇಶ್ವರ, ಕೃತ್ತಿಕಾದಿ ತಾಯಿಯರು, ದುರ್ಗಿ, ಕ್ಷೇತ್ರಜ್ಞನಾದ ದೇವತೆ, ದಿಕ್ಕುಗಳು ಇವುಗಳನ್ನು ನಾಲ್ಕು ಮೂಲೆಗಳಲ್ಲಿಯೂ ಕ್ರಮಕ್ಕೆ ಅನುಸಾರವಾಗಿ, ಹೆಬ್ಬೆರಳು, ಮಧ್ಯದ ಬೆರಳು, ಇವುಗಳಿಂದ ಸರಿಯಾದ ದಿಕ್ಕಿಗೆ ತಿರುಗುವಂತೆ ಮಂಗಳಕರವಾಗಿ ಸ್ಥಾಪನೆ ಮಾಡಿ, ಎಲೈ ದೇವತೆಗಳೇ,ನಮ್ಮನ್ನು ಕಾಪಾಡಿ, ಎಂದು ಹೇಳುತ್ತಾ ಬೇರೆಬೇರೆಯಾಗಿ ನಮಸ್ಕಾರಮಾಡಬೇಕು. ಜ್ಞಾನಿಯಾದವನು ಕತ್ತಿನಲ್ಲಿಯೂ, ಮಧ್ಯಪ್ರದೇಶದಲ್ಲಿಯೂ, ಹಾಗೆಯೇ ಹೆಬ್ಬೆರಳು ಮತ್ತು ತೋರು ಬೆರಳುಗಳಲ್ಲಿಯೂ,ಹೆಬ್ಬೆರಳಿಂದ ಈ ರೀತಿಯಾಗಿ ಕೈಯಿನ ನ್ಯಾಸವನ್ನುಮಾಡಬೇಕು.

ಏವಂ ನ್ಯಾಸ ಮಿವಮಂ ಪ್ರೋಕ್ತಂ ಸರ್ವಪಾಪಹರಂ ಶುಭಂ ।
ಸರ್ವ ಸಿದ್ಧಿಕರಂ ಪುಣ್ಯಂ ಸರ್ವ ರಕ್ಷಾಕರಂ ಶಿವಂ ॥೮೦॥
ನ್ಯಸ್ತೇ ಮಂತ್ರೇಽಥ ಸುಭಗೇ ಶಂಕರ ಪ್ರತಿಮೋ ಭವೇತ್ ।
ಜನ್ಮಾಂತರ ಕೃತಂ ಪಾಪ ಮಪಿ ನಶ್ಯತಿ ತತ್ಕ್ಷಣಾತ್ ॥೮೧॥
ಏವಂ ವಿನ್ಯಸ್ಯ ಮೇಧಾವೀ ಶುದ್ಧಕಾಯೋ ದೃಢವ್ರತಃ ।
ಜಪೇತ್ಪಂಚಾಕ್ಷರಂ ಮಂತ್ರಂ ಲಬ್ಧ್ವಾಽಽಚಾರ್ಯ ಪ್ರಸಾದತಃ ॥೮೨॥
ಅತಃ ಪರಂ ಪ್ರವಕ್ಷ್ಯಾಮಿ ಮಂತ್ರ ಸಂಗ್ರಹಣಂ ಶುಭೇ ।
ಯಂ ವಿನಾ ನಿಷ್ಫಲಂ ನಿತ್ಯಂ ಯೇನ ನ್ಯಾ ಸಫಲಂ ಭವೇತ್ ॥೮೩॥
ಆಜ್ಞಾಹೀನಂ ಕ್ರಿಯಾಹೀನಂ ಶ್ರದ್ಧಾಹೀನ ಮ ಮಾನಸಂ ।
ಆಜ್ಞಾಪ್ತಂ ದಕ್ಷಿಣಾಹೀನಂ ಸದಾ ಜಪ್ತಂ ಚ ನಿಷ್ಫಲಂ ॥೮೪॥

---

೮೦–೮೨. ಹೀಗೆ ಸಮಸ್ತ ಪಾಪಗಳನ್ನೂ ಹೋಗಲಾಡಿಸುವ, ಮಂಗಳಕರವಾದ ನ್ಯಾಸದ ವಿಧಾನವು ಹೇಳಲ್ಪಟ್ಟಿದೆ. ಇದು ಎಲ್ಲಾ ಸಿದ್ಧಿಯನ್ನೂ ಉಂಟುಮಾಡುವುದೂ, ಪುಣ್ಯಕರವಾದದ್ದೂ, ಎಲ್ಲಾ ರಕ್ಷಣೆಯನ್ನು ಮಾಡುವಂಥಾದ್ದೂ, ಮಂಗಳಕರವಾದದ್ದೂ ಆಗಿದೆ. ಹೀಗೆ ಇಂಥಾ ಮಂಗಳಕರವಾದ ಮಂತ್ರವನ್ನು ನ್ಯಾಸಮಾಡುವುದರಿಂದ ಮನುಷ್ಯನು ಶಿವನಿಗೆ ಸಮಾನನಾಗುವನು. ತತ್‌ಕ್ಷಣ ಹಿಂದಿನ ಜನ್ಮದಲ್ಲಿ ಮಾಡಿದ ಎಲ್ಲಾ ಪಾಪಗಳೂ ನಾಶವಾಗುವುವು. ವ್ರತವನ್ನು ಮಾಡುವುದರಲ್ಲಿ ದೃಢನಿಶ್ಚಯವುಳ್ಳವನೂ, ಶುದ್ಧವಾದ ಶರೀರವುಳ್ಳವನೂ, ವಿದ್ವಾಂಸನೂ ಆದ ಮನುಷ್ಯನು ಈ ರೀತಿಯಾಗಿ. ವಿನ್ಯಾಸಮಾಡಿ, ಗುರುಗಳ ಅನುಗ್ರಹದಿಂದ ಸಂಪಾದಿಸಿದ ಪಂಚಾಕ್ಷರ ಮಂತ್ರವನ್ನು ಜಪಿಸಬೇಕು.

೮೩–೮೪. ಇದಾದ ಮೇಲೆ ಮಂತ್ರದ ಸಂಗ್ರಹವನ್ನು ಮಾಡಬೇಕೆಂದು ಹೇಳುವೆನು. ಯಾವಾಗಲೂ ಇದಿಲ್ಲದೇ ಹಿಂದೆ ಹೇಳಿದ ಕೆಲಸಗಳೆಲ್ಲವೂ ವ್ಯರ್ಥ, ಇದಿದ್ದರೆ ಸಾರ್ಥಕವಾಗುವುದು. ಆಜ್ಞೆಯಿಲ್ಲದಿರುವ, ಕ್ರಿಯೆ ಮತ್ತು ಸಿದ್ಧಿಗಳಿಲ್ಲದಿರುವ, ಮಾನಸಿಕವಲ್ಲದ, ದಕ್ಷಿಣೆ

ಆಜ್ಞಾಸಿದ್ಧಂ ಕ್ರಿಯಾಸಿದ್ಧಂ ಶ್ರದ್ಧಾಸಿದ್ಧಂ ಸು ಮಾನಸಂ ।
ಏವಂ ಚ ದಕ್ಷಿಣಾ ಸಿದ್ಧಂ ಮಂತ್ರಂ ಸಿದ್ಧಂ ಯತಸ್ತತಃ ॥೮೫॥
ಉಪಗಮ್ಯ ಗುರುಂ ವಿಪ್ರಂ ಮಂತ್ರತತ್ತ್ವಾರ್ಥವೇದಿನಂ ।
ಜ್ಞಾನಿನಂ ಸದ್ಗುಣೋ ಪೇತಂ ಧ್ಯಾನಯೋಗ ಪರಾಯಣಂ ॥೮೬॥
ತೋಷಯೇತ್ತಂ ಪ್ರಯತ್ನೇನ ಭಾವಶುದ್ಧಿ ಸಮನ್ವಿತಃ ।
ವಾಚಾ ಚ ಮನಸಾ ಚೈವ ಕಾಯೇನ ದ್ರವಿಣೇನ ಚ ॥೮೭॥
ಆಚಾರ್ಯಂ ಪೂಜಯೇಚ್ಛಿಷ್ಯಃ ಸರ್ವದಾಽತಿ ಪ್ರಯತ್ನತಃ ।
ಹಸ್ತ್ಯಶ್ವರಥರತ್ನಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥೮೮॥
ಭೂಷಣಾನಿ ಚ ವಾಸಾಂಸಿ ಧಾನ್ಯಾನಿ ವಿವಿಧಾನಿ ಚ ।
ಏತಾನಿ ಗುರವೇ ದದ್ಯಾದ್ಭಕ್ತ್ಯಾ ಚ ವಿಭವೇ ಸತಿ ॥೮೯॥

---

ಯೂ ಇಲ್ಲದ ಜಪವು, ಯಾವಾಗಲೂ ವ್ಯರ್ಥವೆಂದು ಹೇಳಲ್ಪಟ್ಟಿದೆ. ಆಜ್ಞೆಯಿಂದ ಸಿದ್ಧವಾದ ಕ್ರಿಯಾಸಿದ್ಧಿಯನ್ನೂ ಮತ್ತು ಶ್ರದ್ಧೆಯನ್ನೂ ಪಡೆದಿರುವ, ಮಾನಸಿಕವಾದ, ದಕ್ಷಿಣೆಯಿಂದ ಕೂಡಿರುವ ಮಂತ್ರವು ತಪ್ಪದೇ ಸಿದ್ಧಿಸುವುದು.

೮೬–೮೭. ಮನುಷ್ಯನು ಮಂತ್ರದ ತತ್ತ್ವವನ್ನೂ, ಅರ್ಥವನ್ನೂ, ಚೆನ್ನಾಗಿ ಅರಿತಿರುವ ಜ್ಞಾನಿಯಾದ, ಒಳ್ಳೇ ಗುಣಗಳಿಂದ ಕೂಡಿರುವ, ಧ್ಯಾನಯೋಗದಲ್ಲಿ ಆಸಕ್ತನಾದ, ಬ್ರಾಹ್ಮಣನಾದ, ಗುರುವನ್ನು ಸಮೀಪಿಸಿ, ಬಹಳ ಪ್ರಯತ್ನ ಪೂರ್ವಕವಾಗಿ, ಚಿತ್ತಶುದ್ಧಿಯಿಂದ ಕೂಡಿದವನಾಗಿ ಅವನನ್ನು ಸಂತೋಷಗೊಳಿಸಬೇಕು. ಆ ಗುರುವನ್ನು ಮಾತಿನಿಂದಲೂ, ಮನಸ್ಸಿನಿಂದಲೂ,ದುಡ್ಡಿನಿಂದಲೂ,ಸೇವೆಯಿಂದಲೂ, ಸಂತೋಷಗೊಳಿಸಬೇಕು. ಶಿಷ್ಯನಾದವನು ಯಾವಾಗಲೂ ಬಹಳ ಪ್ರಯತ್ನಪೂರ್ವಕವಾಗಿ ಗುರುವನ್ನು ಪೂಜಿಸಬೇಕು, ಅವನಿಗೆ ಆನೆ, ಕುದುರೆ, ರಥ, ರತ್ನಗಳು, ಹೊಲಗದ್ದೆಗಳು, ಮನೆಗಳು, ಇವನ್ನು ಸಾಧ್ಯವಾಗಿದ್ದರೆ ಸಮರ್ಪಣೆ ಮಾಡಬೇಕು.

೮೮–೮೯. ಶಿಷ್ಯನು ಅಲಂಕಾರಗಳು, ಬಟ್ಟೆಗಳು, ನಾನಾ ಬಗೆಯ ಧಾನ್ಯಗಳೂ, ಇವೆಲ್ಲವನ್ನೂ ಗುರುವಿಗೆ ಕೊಡಬೇಕು. ತನ್ನ ಕರ್ಮದ

ವಿತ್ತಶಾಠ್ಯಂ ನ ಕುರ್ವೀತ ಯದೀಚ್ಛೇತ್ಸಿದ್ಧಿ ಮಾತ್ಮನಃ ।
ಪಶ್ಚಾ ನ್ನಿವೇದಯೇದ್ದೇವಿ ಆತ್ಮಾನಂ ಸಪರಿಚ್ಛದಂ ॥೯೦॥

ಏವಂ ಸಂಪೂಜ್ಯ ವಿಧಿವದ್ಯಥಾ ಶಕ್ತ್ಯಾ ತ್ವವಂಚಯನ್ ।
ಆದದೀತ ಗುರೋ ರ್ಮಂತ್ರಂ ಜ್ಞಾನಂ ಚೈವ ಕ್ರಮೇಣ ತು ॥೯೧॥

ಏವಂ ತುಷ್ಟೋ ಗುರುಃ ಶಿಷ್ಯಂ ಪೂಜಿತಂ ವತ್ಸರೋಷಿತಂ ।
ಶುಶ್ರೂಷು ಮನಹಂಕಾರ ಮುಪವಾಸ ಕೃಶಂ ಶುಚಿಂ ॥೯೨॥

ಸ್ನಾಪಯಿತ್ವಾ ತು ಶಿಷ್ಯಾಯ ಬ್ರಾಹ್ಮಣಾನಪಿ ಪೂಜ್ಯ ಚ ।
ಸಮುದ್ರ ತೀರೇ ನದ್ಯಾಂ ಚ ಗೋಷ್ಠೇ ದೇವಾಲಯೇಽಪಿ ವಾ॥೯೩॥

ಶುಚೌ ದೇಶೇ ಗೃಹೇ ವಾಽಪಿ ಕಾಲೇ ಸಿದ್ಧಿ ಕರೇ ತಿಥೌ ।
ನಕ್ಷತ್ರೇ ಶುಭ ಯೋಗೇ ಚ ಸರ್ವದಾ ದೋಷ ವರ್ಜಿತೇ ॥೯೪॥

---

ಸಿದ್ಧಿಯನ್ನು ಪಡೆಯಲು ಇಷ್ಟಪಡುವ ಮನುಷ್ಯನು ದುಡ್ಡನ್ನು ಗುರುವಿಗೆ ಕೊಡುವ ವಿಷಯದಲ್ಲಿ ಲೋಭ ಮಾಡಬಾರದು. ಎಲೌ ಪಾರ್ವತೀ ದೇವಿಯೇ, ಶಿಷ್ಯನು ಇಷ್ಟೆಲ್ಲವನ್ನೂ ಕೊಟ್ಟ ನಂತರ ಶಿಷ್ಯನು ಶುದ್ಧಬಟ್ಟೆಯನ್ನು ಧರಿಸಿದಮೇಲೆ ತನ್ನ ಶರೀರದಿಂದ ಗುರುವಿನ ಸೇವೆಯನ್ನು ಮಾಡಬೇಕು. ಹೀಗೆ ಅವನು ಸ್ವಲ್ಪವೂ ಮೋಸವಿಲ್ಲದೆ ಶಾಸ್ತ್ರೋಕ್ತ ಕ್ರಮದಲ್ಲಿ ತನ್ನ ಶಕ್ತಿಗೆ ಅನುಸಾರವಾಗಿ ಗುರುವನ್ನು ಪೂಜಿಸಿ, ಕ್ರಮವಾಗಿ ಈ ಮಂತ್ರವನ್ನೂ, ಅದಕ್ಕೆ ಸಂಬಂಧಪಟ್ಟ ಎಲ್ಲಾ ವಿಚಾರವನ್ನೂ ಗುರುವಿನ ಮುಖಾಂತರ ಕ್ರಮವಾಗಿ ಉಪದೇಶದಿಂದ ಪಡೆಯಬೇಕು.

೯೨-೯೪. ಹೀಗೆ ಶಿಷ್ಯಸಿಂದ ಪೂಜಿಸಲ್ಪಟ್ಟ ಗುರುವು, ತನ್ನ ಸೇವೆ ಮಾಡುತ್ತಿರುವ ಅಹಂಕಾರವಿಲ್ಲದ, ಉಪವಾಸದಿಂದ ಸಣ್ಣಗಿರುವ, ಪರಿಶುದ್ಧನಾದ, ಒಂದು ವರ್ಷಕಾಲದಿಂದ ತನ್ನ ಹತ್ತಿರದಲ್ಲೇ ವಾಸಮಾಡುತ್ತಿರುವ, ಶಿಷ್ಯನಿಗೆ ಸ್ನಾನಮಾಡಲು ಹೇಳಿ, ಬ್ರಾಹ್ಮಣರನ್ನು ಪೂಜಿಸಿ, ಸಮುದ್ರ ತೀರ, ನದಿ, ಕೊಟ್ಟಿಗೆ, ದೇವಸ್ಥಾನ, ಮನೆಯಲ್ಲಿಯೇ ಆದರೆ ಶುದ್ಧವಾದ ಪ್ರದೇಶ, ಇವುಗಳಲ್ಲೆಲ್ಲಾದರೂ, ದೋಷವಿಲ್ಲದ, ಮಂಗಳಕರವಾದ ಯೋಗವುಳ್ಳ, ನಕ್ಷತ್ರವಿರುವ, ಸಿದ್ಧಿಯನ್ನುಂಟುಮಾಡುವ, ದಿವಸದಲ್ಲಿ ಶಿವಜ್ಞಾನವನ್ನು ಕೊಡುವ ಮಂತ್ರವನ್ನು ಸಂತೋಷದಿಂದ ಹೇಳಬೇಕು.

ಅನುಗೃಹ್ಯ ತತೋ ದದ್ಯಾಚ್ಛಿವಜ್ಞಾನ ಮನುತ್ತಮಂ ।
ಸ್ವರೇ ಣೋ ಚ್ಚಾರಯೇ ತ್ಸಮ್ಯಗೇಕಾಂತೇಽಪಿ ಪ್ರಪನ್ನ ಧೀಃ ॥೯೫॥

ಉಚ್ಚಾರ್ಯೋಚ್ಚಾರ ಯಿತ್ವಾ ತು ಆಚಾರ್ಯಃ ಸಿದ್ಧಿದಃ ಸ್ವಯಂ ।
ಶಿವಂ ಚಾಽಸ್ತು ಶುಭಂ ಚಾಽಸ್ತು ಶೋಭನೋಽಸ್ತು ಪ್ರಿಯೋಽಸ್ತ್ವಿತಿ

ಏವಂ ಲಬ್ಧ್ವಾ ಪರಂ ಮಂತ್ರಂ ಜ್ಞಾನಂ ಚೈವ ಗುರೋಸ್ತತಃ ।
ಜಪೇನ್ನಿತ್ಯಂ ಸ ಸಂಕಲ್ಪಂ ಪುರಶ್ಚರಣ ಮೇವ ಚ ॥೯೭॥

ಯಾವಜ್ಜೀವಂ ಜಪೇನ್ನಿತ್ಯ ಮಷ್ಟೋತ್ತರ ಸಹಸ್ರಕಂ ।
ಅನಶ್ನಂ ಸ್ತತ್ಪರೋ ಭೂತ್ವಾ ಸ ಯಾತಿ ಪರಮಾಂ ಗತಿಂ ॥೯೮॥

---

೯೫. ಹೀಗೆ ಗುರುವು ಶಿಷ್ಯನನ್ನು ಅನುಗ್ರಹಿಸಿ, ಅತ್ಯಂತ ಶ್ರೇಷ್ಠವಾದ ಶಿವ ಜ್ಞಾನವನ್ನು ರಹಸ್ಯದಲ್ಲಿ ನಿರ್ಮಲವಾದ ಮನಸ್ಸಿನಿಂದ ಶಿಷ್ಯನಿಗೆ ಹೇಳಿಕೊಡಬೇಕು. ಮತ್ತು ಇದಕ್ಕೆ ಬೇಕಾದ ಸ್ವರವನ್ನೂ, ರಹಸ್ಯವಾಗಿ ಶಿಷ್ಯನ ಮುಂದೆ ಚೆನ್ನಾಗಿ ಉಚ್ಚರಿಸಬೇಕು ಮತ್ತು ಹೇಳಿಸಬೇಕು.

೯೬–೯೮. ಈ ರೀತಿಯಾಗಿ ಗುರುವು ತಾನು ಈ ಮಂತ್ರವನ್ನು ಶಿಷ್ಯನ ಎದುರಿಗೆ ರಹಸ್ಯವಾಗಿ ಉಚ್ಚಾರಣೆ ಮಾಡಿ, ಅವನ ಬಾಯಲ್ಲೂ ಹೇಳಿಸಿ, ಶಿಷ್ಯನು ಸಿದ್ಧಿಯನ್ನು ಪಡೆಯುವ ಹಾಗೆ ಮಾಡುತ್ತಾನೆ. ಅನಂತರ ಗುರುವು ಶಿಷ್ಯನನ್ನು ನಿನಗೆ ಮಂಗಳವಾಗಲಿ, ಎಲ್ಲಾ ಸುಖಗಳೂ ದೊರಕಲಿ, ಎಂದು ಹರಸುತ್ತಾನೆ. ಹೀಗೆ ಗುರುವಿನ ಮೂಲಕ ಶ್ರೇಷ್ಠವಾದ ಮಂತ್ರವನ್ನೂ, ಶಿವಜ್ಞಾನವನ್ನೂ ಶಿಷ್ಯನು ಪಡೆದು, ಇದನ್ನು ಸಂಕಲ್ಪಮಾಡಿ, ನಿತ್ಯವೂ ಜಪಿಸುತ್ತಲೂ, ಪುನಃ ಪುನಃ ಚಿಂತಿಸುತ್ತಲೂ ಇರಬೇಕು. ಸಾವಿರದ ಎಂಟು ಶಿವನಾಮಗಳನ್ನು ಬದುಕಿರುವ ಪರ್ಯಂತ ದಿನಾಗಲೂ ಶಿಷ್ಯನು ಜಪಿಸಬೇಕು. ಜಪಿಸುವುದಕ್ಕಿಂತ ಮುಂಚೆ ಊಟಮಾಡದೇ ಶಿವನ ಮೇಲಿನ ಭಕ್ತಿಯಿಂದ ಹೀಗೆ ಜಪಿಸುವುದಾದರೆ ಅತ್ಯುತ್ತಮವಾದ ಲೋಕವು ಅವನಿಗೆ ಸಿಕ್ಕುವುದರಲ್ಲಿ ಸಂದೇಹವಿಲ್ಲ.

**ಜಪೇದಕ್ಷರ ಲಕ್ಷಂ ವೈ ಚತು ರ್ಗುಣಿತ ಮಾದರಾತ್ ।**
**ನಕ್ತಾಶೀ ಸಂಯಮೀ ಯಶ್ಚ ಪೌರಶ್ಚರಣಿಕಃ ಸ್ಮೃತಃ ॥೯೯॥**
**ಪುರಶ್ಚರಣ ಜಾಪೀ ವಾ ಅಪಿ ವಾ ನಿತ್ಯ ಜಾಪಕಃ ।**
**ಅಚಿರಾ ತ್ಸಿದ್ಧಿ ಕಾಂಕ್ಷೀ ತು ತಯೋ ರನ್ಯತರೋ ಭವೇತ್ ॥೧೦೦॥**
**ಯಃ ಪುರಶ್ಚರಣಂ ಕೃತ್ವಾ ನಿತ್ಯಜಾಪೀ ಭವೇನ್ನರಃ ।**
**ತಸ್ಯ ನಾಸ್ತಿ ಸಮೋ ಲೋಕೇ ಸ ಸಿದ್ಧಃ ಸಿದ್ಧಿದೋ ವಶೀ ॥೧೦೧॥**
**ಆಸನಂ ರುಚಿರಂ ಬದ್ಧ್ವಾ ಮೌನೀ ಚೈಕಾಗ್ರಮಾನಸಃ ।**
**ಪ್ರಾಙ್ಮುಖೋ ದಙ್ಮುಖೋ ವಾಽಪಿ ಜಪೇನ್ಮಂತ್ರ ಮನುತ್ತಮಂ ॥**
**ಆದ್ಯಂತಯೋ ರ್ಜಪಸ್ಯಾಽಪಿ ಕುರ್ಯಾದ್ವೈ ಪ್ರಾಣ ಸಂಯಮಾನ್ ।**
**ತಥಾ ಚಾಂತೇ ಜಪೇದ್ಬೀಜಂ ಶತ ಮಷ್ಟೋತ್ತರಂ ಶುಭಂ ॥೧೦೩॥**

---

೯೯–೧೦೧. ಬಹಳ ಭಕ್ತಿಯಿಂದ ಶಿವನಿಗೆ ಸಂಬಂಧಪಟ್ಟ ಅಕ್ಷರಗಳ ಲಕ್ಷದಷ್ಟುಸಲವಾಗಲಿ ನಾಲ್ಕರಷ್ಟುಸಲವಾಗಲಿ ಜಪಿಸಬೇಕು. ರಾತ್ರಿ ಹೊತ್ತು ಭೋಜನ ಮಾಡುವವನೂ, ಜಿತೇಂದ್ರಿಯನೂ, ಆಗಿರುತ್ತಾ ಜಪಿಸುವ ಮನುಷ್ಯನು "ಪೌರಶ್ಚರಣಿಕ" ಎಂದು ಕರೆಯಲ್ಪಡುತ್ತಾನೆ. ಪುನಃ ಪುನಃ ಜಪಿಸುವವನಾಗಲಿ, ಪ್ರತಿನಿತ್ಯವೂ ಜಪಿಸುವವನಾಗಲಿ, ಜಾಗ್ರತೆ ಸಿದ್ಧಿಯನ್ನು ಪಡೆಯಲು ಅಪೇಕ್ಷಿಪಡುವ ಮನುಷ್ಯನು ಇವೆರಡರಲ್ಲಿ ಒದೊಂದು ಕ್ರಮವನ್ನು ಅನುಸರಿಸಬೇಕು.

ಯಾವ ಮನುಷ್ಯನು ಜಪವನ್ನು ಪುನಃ ಪುನಃ ಮಾಡುತ್ತಾ ನಿತ್ಯದಲ್ಲಿಯೂ ಜಪಿಸುವನೋ ಅವನಿಗೆ ಸಮನಾದವರು ಪ್ರಪಂಚದಲ್ಲಿ ಯಾರೊಬ್ಬರೂ ಇಲ್ಲ. ಅವನು ಸಿದ್ಧನೂ, ಸಿದ್ಧಿಯನ್ನು ಕೊಡುವವನೂ, ಸಿದ್ಧಿಗಳನ್ನು ಅಧೀನವಾಗಿ ಮಾಡಿಕೊಂಡವನೂ, ಎಂದು ತಿಳಿಯಬೇಕು.

೧೦೨–೧೦೪. ಸುಂದರವಾದ ರೀತಿಯಲ್ಲಿ ಆಸನವನ್ನು ಹಾಕಿಕೊಂಡು ಮೌನವಾಗಿ ಶಿವನೊಬ್ಬನಲ್ಲಿಯೇ ಮನಸ್ಸನ್ನಿಟ್ಟು, ಪೂರ್ವಮುಖವಾಗಿಯೋ ಅಥವಾ ಉತ್ತರ ಮುಖವಾಗಿಯೋ ಕೂತುಕೊಂಡು, ಅತ್ಯಂತ ಶ್ರೇಷ್ಠವಾದ ಪಂಚಾಕ್ಷರ ಮಂತ್ರವನ್ನು ಜಪಿಸಬೇಕು. ಜಪ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಪ್ರಾಣಾಯಾಮವನ್ನು ಮಾಡಬೇಕು. ಹಾಗೆಯೇ

**ಚತ್ವಾರಿಂಶ ತ್ಸಮಾವೃತ್ತಿ ಪ್ರಾಣಾ ನಾಯಮ್ಯ ಸಂಸ್ಮರೇತ್ ।**
**ಪಂಚಾಕ್ಷರಸ್ಯ ಮಂತ್ರಸ್ಯ ಪ್ರಾಣಾಯಾಮ ಉದಾಹೃತಃ ॥೧೦೪॥**
**ಪ್ರಾಣಾಯಾಮಾ ದ್ಭವೇ ತ್ಕ್ಷಿಪ್ರಂ ಸರ್ವಪಾಪ ಪರಿಕ್ಷಯಃ ।**
**ಇಂದ್ರಿಯಾಣಾಂ ವಶಿತ್ವಂ ಚ ತಸ್ಮಾ ತ್ಪ್ರಾಣಾಂ ಶ್ಚ ಸಂಯಮೇತ್ ॥**
**ಗೃಹೇ ಜಪಃ ಸಮಂ ವಿದ್ಯಾ ದ್ಗೋಷ್ಠೇ ಶತಗುಣಂ ಭವೇತ್ ।**
**ನದ್ಯಾಂ ಶತ ಸಹಸ್ರಂ ತು ಅನಂತಃ ಶಿವ ಸನ್ನಿಧೌ ॥೧೦೬॥**
**ಸಮುದ್ರ ತೀರೇ ದೇವಹ್ರದೇ ಗಿತಾ ದೇವಾಲಯೇಷು ಚ ।**
**ಪುಣ್ಯಾಶ್ರಮೇಷು ಸರ್ವೇಷು ಜಪಃ ಕೋಟಿ ಗುಣೋ ಭವೇತ್ ॥**
**ಶಿವಸ್ಯ ಸನ್ನಿಧಾನೇ ಚ ಸೂರ್ಯಸ್ಯಾಽಗ್ರೇ ಗುರೋ ರಪಿ ।**
**ದೀಪಸ್ಯ ಗೋರ್ಜಲಸ್ಯಾಽಪಿ ಜಪಕರ್ಮ ಪ್ರಶಸ್ಯತೇ ॥೧೦೮॥**

---

ಕೊನೆಯಲ್ಲಿ ಮಂಗಳಕರವಾದ ಶಿವ ಬೀಜಾಕ್ಷರಗಳನ್ನು ನೂರೆಂಟು ಸಲ ಜಪ ಮಾಡಬೇಕು. ಅನಂತರ ನಲವತ್ತು ಸಲ ಪ್ರಾಣಾಯಾಮ ಮಾಡಿ, ಶಿವನನ್ನು ಧ್ಯಾನಿಸಬೇಕು. ಪಂಚಾಕ್ಷರ ಮಂತ್ರಕ್ಕೆ ಈ ರೀತಿಯಾಗಿ ಪ್ರಾಣಾಯಾಮದ ಆವಶ್ಯಕತೆಯನ್ನು ಹೇಳಿದೆ.

೧೦೫–೧೦೭. ಪ್ರಾಣಾಯಾಮ ಮಾಡೋಣದರಿಂದ ಎಲ್ಲಾ ಪಾಪ ಗಳೂ ನಾಶವಾಗುವುವು. ಮತ್ತು ಇಂದ್ರಿಯಗಳು ಹತೋಟಿಯಲ್ಲಿರು ವುವು. ಆದ್ದರಿಂದ ಪ್ರಾಣಾಯಾಮವನ್ನು ಮಾಡಬೇಕು. ಮನೆಯಲ್ಲಿ ಮಾಡಿದ ಜಪವು ಜಪದ ಸಂಖ್ಯೆಗೆ ಸಮಾನ ವಾದಷ್ಟು ಫಲವನ್ನು ಕೊಡು ವುದು. ಕೊಟ್ಟಿಗೆಯಲ್ಲಿ ಮಾಡಿದರೆ ಜಪದ ಸಂಖ್ಯೆಯ ನೂರರಷ್ಟು ಫಲ ಬರುವುದು. ನದಿಯಲ್ಲಿ ಮಾಡಿದ ಜಪದ ಫಲವು ಜಪದ ಲಕ್ಷದಷ್ಟಿರು ವುದು. ಶಿವನ ಸನ್ನಿಧಿಯಲ್ಲಿ ಮಾಡಿದ ಜಪವು ಲೆಕ್ಕವಿಲ್ಲದಷ್ಟು ಫಲ ಕೊಡುವುದು. ಸಮುದ್ರತೀರ, ದೇವಾಲಯದ ಕೊಳ, ಪರ್ವತ, ದೇವಾ ಲಯಗಳು, ಪುಣ್ಯಾಶ್ರಮಗಳು, ಇವುಗಳಲ್ಲಿ ಮಾಡಿದ ಜಪವು ಕೋಟಿ ಯಷ್ಟು ಫಲ ಕೊಡುವುದು.

೧೦೮–೧೧೦. ಶಿವನ ಸನ್ನಿಧಾನದಲ್ಲಿಯೂ, ಸೂರ್ಯನ ಮುಂಭಾಗದಲ್ಲಿ ಅಥವಾ ಗುರುವಿನ ಮುಂಭಾಗದಲ್ಲಿ ದೀಪ, ಅಥವಾ, ಹಸು, ಅಥವಾ

ಅಂಗುಲೀ ಜಪ ಸಂಖ್ಯಾನಂ ಏಕ ಮೇಕಂ ಶುಭಾನನೇ।
ರೇಖ್ಯೈ ರಷ್ಟಗುಣಂ ಪ್ರೋಕ್ತಂ ಪುತ್ರ ಜೀವ ಫಲ್ಯೈ ರ್ದಶ ॥೧೦೯॥
ಶತಂ ಸ್ಯೈ ಶಂಖ ಮಣಿಭಿಃ ಪ್ರವಾಲೈಶ್ಚ ಸಹಸ್ರಕಂ।
ಸ್ಫಾಟಿಕ್ಯೈ ರ್ದಶ ಸಾಹಸ್ರಂ ಮೌಕ್ತಿ ಕೈ ರ್ಲಕ್ಷ ಮುಚ್ಯತೇ ॥೧೧೦॥
ಪದ್ಮಾಕ್ಷೈ ರ್ದಶಲಕ್ಷಂ ತು ಸೌವರ್ಣ್ಯೈಃ ಕೋಟಿರುಚ್ಯತೇ।
ಕುಶಗ್ರಂಥ್ಯಾ ಚ ರುದ್ರಾಕ್ಷೈ ರನಂತ ಗುಣ ಮುಚ್ಯತೇ ॥೧೧೧॥
ಪಂಚ ವಿಂಶತಿ ಮೋಕ್ಷಾರ್ಥಂ ಸಪ್ತ ವಿಂಶತಿ ಪೌಷ್ಟಿಕಂ।
ತ್ರಿಂಶ ಚ್ಚ ಧನ ಸಂಪತ್ತ್ಯೈ ಪಂಚಾ ಶಚ್ಚಾಽಭಿ ಚಾರಿಕಂ ॥೧೧೨॥

---

ನೀರು, ಇವುಗಳ ಮುಂಭಾಗದಲ್ಲಾಗಲಿ, ಜಪ ಮಾಡುವುದು ಪ್ರಶಸ್ತ ವಾದುದು. ಎಲೈ ಸುಂದರವಾದ ಮುಖವುಳ್ಳ ಪಾರ್ವತಿಯೇ, ಬೆರಳು, ಗಳಿಂದ ಜಪವನ್ನು ಎಣಿಸುವುದು ಪ್ರತಿಯೊಂದೂ ಒಂದೊಂದು ಫಲ ವನ್ನು ಕೊಡತಕ್ಕುದಾಗಿದೆ. ಬೆರಳಿನ ಪ್ರತಿಯೊಂದು ಗೆರೆಯಿಂದಲೂ ಎಣಿ ಸುವುದು, ಎಂಟರಷ್ಟು ಫಲವನ್ನು ಕೊಡತಕ್ಕದ್ದಾಗಿದೆ. ಅಕ್ಷಮಾಲಿಕೆ ಯಿಂದ ಎಣಿಸಿದರೆ ಹತ್ತರಷ್ಟು ಫಲಗಳು ಸಿಕ್ಕುತ್ತವೆ. ಶಂಖದ ಮಣಿ ಗಳಿಂದ ನೂರರಷ್ಟು,ಹವಳಗಳಿಂದ ಸಾವಿರ,ಸ್ಫಟಿಕದ ಮಣಿಗಳಿಂದ ಹತ್ತು ಸಾವಿರ, ಮುತ್ತುಗಳಿಂದ ಲಕ್ಷ, ಈ ರೀತಿಯಾಗಿ ಕ್ರಮವಾಗಿ ಫಲಗಳು ಹೆಚ್ಚಾಗಿ ದೊರೆಯುವುವೆಂದು ಹೇಳಲ್ಪಟ್ಟಿವೆ.

೧೧೧–೧೧೩. ಕಮಲದ ಮಣಿಗಳಿಂದ ಹತ್ತು ಲಕ್ಷವೂ, ಚಿನ್ನದ ಮಣಿಗಳಿಂದ ಕೋಟಿಯೂ, ದರ್ಭೆಯ ಗಂಟುಗಳಿಂದಲೂ, ಮತ್ತು ರುದ್ರಾಕ್ಷಿಯಿಂದಲೂ,ಲೆಕ್ಕವಿಲ್ಲದಷ್ಟು ಫಲಗಳೂ ಬರುವುವೆಂದು ಹೇಳಲ್ಪ ಟ್ಟಿವೆ. ಇಪ್ಪತ್ತೈದು ಮಣಿಗಳಿಂದ ಮೋಕ್ಷವೂ, ಇಪ್ಪತ್ತೇಳು ಮಣಿಗಳಿಂದ ಶರೀರ ಪುಷ್ಟಿಯೂ, ಮುವ್ವತ್ತು ಮಣಿಗಳಿಂದ ಬೇಕಾದಷ್ಟು ಐಶ್ವರ್ಯವೂ ಐವತ್ತರಿಂದ ಬೇಕಾದ ಫಲಗಳೂ ಬರುತ್ತವೆ. ಪೂರ್ವದಿಕ್ಕಿನಲ್ಲಿ ಎಣಿಸಿ ದರೆ ಪದಾರ್ಥಗಳು ಸ್ವಾಧೀನವಾಗುವುದೂ, ದಕ್ಷಿಣ ದಿಕ್ಕಿನಲ್ಲಿ ಮಾಟ

ತತ್ಪೂರ್ವಾಭಿ ಮುಖಂ ವಶ್ಯಂ ದಕ್ಷಿಣಂ ಚಾಽಭಿಚಾರಿಕಂ ।
ಪಶ್ಚಿಮಂ ಧನದಂ ವಿದ್ಯಾ ದುತ್ತರಂ ಶಾಂತಿಕಂ ಭವೇತ್ ॥೧೧೩॥
ಅಂಗುಷ್ಠಂ ಮೋಕ್ಷದಂ ವಿದ್ಯಾತ್ತರ್ಜನೀ ಶತ್ರು ನಾಶಿನೀ ।
ಮಧ್ಯಮಾ ಧನದಾ ಶಾಂತಿಂ ಕರೋ ತ್ಯೇಷಾ ಹ್ಯನಾಮಿಕಾ ॥೧೧೪॥
ಕನಿಷ್ಠಾ ರಕ್ಷಣೀಯಾ ಸಾ ಜಪ ಕರ್ಮಣಿ ಶೋಭನೇ ।
ಅಂಗುಷ್ಠೇನ ಜಪೇಜ್ಜಪ್ಯ ಮನ್ಯೈ ರಂಗುಲಿಭಿಃ ಸಹ ॥೧೧೫॥
ಅಂಗುಷ್ಠೇನ ವಿನಾ ಕರ್ಮ ಕೃತಂ ತದ ಫಲಂ ಯತಃ ।
ಶೃಣುಷ್ವ ಸರ್ವ ಯಜ್ಞೇಭ್ಯೋ ಜಪಯಜ್ಞೋ ವಿಶಿಷ್ಯತೇ ॥೧೧೬॥
ಹಿಂಸಯಾ ತೇ ಪ್ರವರ್ತಂತೇ ಜಪಯಜ್ಞೋ ನ ಹಿಂಸಯಾ ।
ಯಾವಂತಃ ಕರ್ಮ ಯಜ್ಞಾಃ ಸ್ಯುಃ ಪ್ರಧಾನಾನಿ ತಪಾಂಸಿ ಚ ॥

---

ದಿಂದ ಇಷ್ಟಾರ್ಥ ಪ್ರಾಪ್ತಿಯೂ, ಪಶ್ಚಿಮದಲ್ಲಿ ಬೇಕಾದಷ್ಟು ಐಶ್ವರ್ಯವೂ, ಉತ್ತರದಲ್ಲಿ ಚಿತ್ತ ಶಾಂತಿಯೂ ಫಲವಾಗಿ ಹೇಳಲ್ಪಟ್ಟಿದೆ. ಎಂದು ತಿಳಿ.

೧೧೪–೧೧೬. ಹೆಬ್ಬೆರಳು ಮೋಕ್ಷವನ್ನು ಕೊಡುವುದಾಗಿಯೂ, ಮೊದಲಿನ ಬೆರಳು ಶತ್ರುಗಳನ್ನು ನಾಶಮಾಡುವುದಾಗಿಯೂ, ಮಧ್ಯದ ಬೆರಳು ದುಡ್ಡನ್ನು ಕೊಡುವುದಾಗಿಯೂ, ಕಿರಿಬೆರಳಿನ ಪಕ್ಕದ ಅನಾಮಿಕೆ, ಎಂಬ ಬೆರಳು ಶಾಂತಿಯನ್ನು ಕೊಡುವುದಾಗಿಯೂ ನಿಶ್ಚಯಿಸಲ್ಪಟ್ಟಿದೆ. ಮಂಗಳಕರವಾದ ಜಪದ ಕೆಲಸದಲ್ಲಿ ಕಿರಿಬೆರಳನ್ನು ರಕ್ಷಿಸಬೇಕು. ಬೇರೇ ಬೆರಳುಗಳೊಂದಿಗೆ ಹೆಬ್ಬೆರಳಿನಿಂದ ಜಪ ಮಾಡಬೇಕು. ಏಕೆಂದರೆ ಹೆಬ್ಬೆರಳನ್ನು ಬಿಟ್ಟು ಮಾಡಿದ ಜಪವು ವ್ಯರ್ಥವೆಂದು ಹೇಳಲ್ಪಟ್ಟಿದೆ. ಎಲ್ಲಾ ಯಾಗಗಳಿಗಿಂತಲೂ ಜಪ ರೂಪವಾದ ಯಾಗವು ಸರ್ವ ಶ್ರೇಷ್ಠ ವೆಂದು ತಿಳಿ.

೧೧೭–೧೧೯. ಯಾಗಗಳೆಲ್ಲವೂ ಹಿಂಸೆಯಿಂದ ನಡೆಸಲ್ಪಡತಕ್ಕವು. ಜಪ ರೂಪವಾದ ಯಾಗವಾದರೋ ಹಿಂಸೆಯಿಲ್ಲದ್ದಾಗಿದೆ. ಕರ್ಮದಿಂದ ನಡೆಸಲ್ಪಡುವ ಯಾಗಗಳು, ದಾನಗಳು, ಮತ್ತು ತಪಸ್ಸುಗಳು, ಎಷ್ಟು

**ಸರ್ವೇ ತೇ ಜಪಯಜ್ಞಸ್ಯ ಕಲಾಂ ನಾರ್ಹಂತಿ ಷೋಡಶೀಂ ।**
**ಮಾಹಾತ್ಮ್ಯಂ ವಾಚಿಕ ಸ್ಯೈವ ಜಪ ಯಜ್ಞಸ್ಯ ಕೀರ್ತಿತಂ ॥೧೧೮॥**
**ತಸ್ಮಾಚ್ಛತ ಗುಣೋ ಪಾಂಶುಃ ಸಹಸ್ರೋ ಮಾನಸಃ ಸ್ಮೃತಃ ।**
**ಯದುಚ್ಚ ನೀಚ ಸ್ವರಿತೈಃ ಶಬ್ದೈಃ ಸ್ಪಷ್ಟ ಪದಾಕ್ಷರೈಃ ॥೧೧೯॥**
**ಮಂತ್ರ ಮುಚ್ಚಾರಯೇ ದ್ವಾಚಾ ಜಪಯಜ್ಞಃ ಸ ವಾಚಿಕಃ ।**
**ಶನೈಃ ರುಚ್ಚಾರಯೇನ್ಮಂತ್ರ ಮೀಷ ದೋಷ್ಠೌ ತು ಚಾಲಯೇತ್ ॥**
**ಕಿಂಚಿ ತ್ಕರ್ಣಾಂತರಂ ವಿದ್ಯಾ ದುಪಾಂಶುಃ ಸ ಜಪಃ ಸ್ಮೃತಃ ।**
**ಧಿಯಾ ಯ ದಕ್ಷರ ಶ್ರೇಣ್ಯಾ ವರ್ಣಾದ್ವರ್ಣಂ ಪದಾತ್ಪದಂ ॥೧೨೧॥**
**ಶಬ್ದಾರ್ಥಂ ಚಿಂತಯೇ ದ್ಭೂಯಃ ಸ ತೂಕ್ತೋ ಮಾನಸೋ ಜಪಃ ।**
**ತ್ರಯಾಣಾಂ ಜಪಯಜ್ಞಾನಾಂ ಶ್ರೇಯಾನ್ ಸ್ಯಾ ದುತ್ತರೋತ್ತರಃ**

---

ಬಗೆಯಾಗಿದೆಯೋ ಅಂದೊಂದೂ ಜಪ ರೂಪವಾದ ಯಾಗದ ಹದಿನಾರನೆಯ ಒಂದು ಭಾಗದಷ್ಟು ಯೋಗ್ಯತೆಯನ್ನು ಪಡೆದಿಲ್ಲವು! ವಾಚಿಕ ರೂಪವಾದ ಜಪದ ಯಾಗಕ್ಕೆ ವಿಶೇಷ ಮಹಿಮೆಯನ್ನು ಹೇಳಿದ್ದಾರೆ. ಅದಕ್ಕಿಂತಲೂ ಉಪಾಂಶುವೆಂಬ ಜಪವು ನೂರರಷ್ಟು, ಅದಕ್ಕಿಂತಲೂ ಸಾವಿರಕ್ಕಿಂತ ಹೆಚ್ಚಾದ ಮಹಿಮೆಯುಳ್ಳದ್ದು ಮನಸ್ಸಿನಲ್ಲಿ ಮಾಡುವ ಜಪವು.ಎಂದು ತಿಳಿಯಬೇಕು. ಉಚ್ಚ,ನೀಚ,ಸ್ವರಿತಗಳೆಂಬ ಸ್ವರಗಳಿಂದ ಕೂಡಿದ, ಸ್ಪಷ್ಟವಾದ ಪದ, ಅಕ್ಷರ, ಶಬ್ದಗಳನ್ನು ಒಳಗೊಂಡ ಶಬ್ದ ಜಪವು ವಾಚಿಕ ರೂಪವಾದ ಯಾಗವೆಂದು ತಿಳಿಯಬೇಕು.

೧೨೦. ಬಾಯಿನಿಂದ ಮಂತ್ರವನ್ನು ಉಚ್ಚಾರಣೆ ಮಾಡಿದರೆ, ಆ ಜಪರೂಪವಾದ ಯಾಗವು, "ವಾಚಿಕ" ಎಂದು ಕರೆಯಲ್ಪಡುತ್ತದೆ. ಸ್ವಲ್ಪ ಮಾತ್ರ ತುಟಿಗಳನ್ನು ಅಲ್ಲಾಡಿಸುತ್ತಾ ಮಂತ್ರವನ್ನು ಮೆಲ್ಲಗೆ ಹೇಳುತ್ತಿರಬೇಕು.

೧೨೧-೧೨೩. ಸ್ವಲ್ಪ ಕಿವಿಯವರೆಗೆ ಕೇಳಿಸುವಂತೆ ಮಂತ್ರವನ್ನು ಉಚ್ಚರಿಸಿದರೆ ಅದು "ಉಪಾಂಶು" ಎಂಬ ಜಪವೆನ್ನಿಸಿಕೊಳ್ಳುವುದು. ಬುದ್ಧಿಯಿಂದ ಅಕ್ಷರಗಳ ಸಾಲಿಗೆ ಅನುಸರಿಸಿ ಪ್ರತಿಯೊಂದು ಅಕ್ಷರ,

ಭವೇದ್ಯಜ್ಞ ವಿಶೇಷೇಣ ವೈಶಿಷ್ಟ್ಯಂ ತತ್ಫಲ ಸ್ಯ ಚ ।
ಜಪೇನ ದೇವತಾ ನಿತ್ಯಂ ಸ್ತೂಯಮಾನಾ ಪ್ರಸೀದತಿ ॥೧೨೩॥

ಪ್ರಸನ್ನಾ ವಿಪುಲಾನ್ ಭೋಗಾನ್ ದದ್ಯಾನ್ಮುಕ್ತಿಂ ಚ ಶಾಶ್ವತೀಂ ।
ಯಕ್ಷ ರಕ್ಷಃ ಪಿಶಾಚಾಶ್ಚ ಗ್ರಹಾಃ ಸರ್ವೇ ಚ ಭೀಷಣಾಃ ।
ಜಾಪಿನಂ ನೋಪ ಸರ್ಪಂತಿ ಭಯ ಭೀತಾಃ ಸಮಂತತಃ ॥೧೨೪॥

ಜಪೇನ ಪಾಪಂ ಶಮಯೇ ದಶೇಷಂ ।
ಯತ್ತತ್ಕೃತಂ ಜನ್ಮ ಪರಂಪರಾಸು ॥
ಜಪೇನ ಭೋಗಾನ್ ಜಯತೇ ಚ ಮೃತ್ಯುಂ ।
ಜಪೇನ ಸಿದ್ಧಿಂ ಲಭತೇ ಚ ಮುಕ್ತಿಂ ॥೧೨೫॥

---

ಪದ, ಶಬ್ದ, ಇವುಗಳ ಅರ್ಥಗಳನ್ನು ಪುನಃಪುನಃ ಚಿಂತಿಸಿ ಜಪಿಸಿದರೆ ಅದನ್ನು "ಮಾನಸಿಕ" ಜಪವೆಂದು ತಿಳಿಯಬೇಕು. ಈ ಮೂರು ಬಗೆಯ ಜಪಗಳಲ್ಲಿ ಮುಂದೆ ಮುಂದೆ ಹೇಳಲ್ಪಟ್ಟ ಜಪಗಳು ಹೆಚ್ಚು ಶ್ರೇಷ್ಠಗಳೆಂದು ತಿಳಿಯಬೇಕು. ಯಜ್ಞವು ಎಷ್ಟು ಶ್ರೇಷ್ಠವಾಗಿರುವುದೋ ಅಷ್ಟು ಫಲಗಳು ಹೆಚ್ಚು ಹೆಚ್ಚಾಗಿ ಬರುವುದೆಂದರಿಯಬೇಕು. ಪ್ರತಿದಿನ ಜಪದಿಂದ ಸ್ತೋತ್ರ ಮಾಡಲ್ಪಟ್ಟವಾಗಿ, ಇಷ್ಟ ದೇವತೆಯು ಪ್ರಸನ್ನಳಾಗುವಳು.

೧೨೪-೧೨೬. ಹೀಗೆ ದೇವತೆಯು ಪ್ರಸನ್ನಳಾಗಿ ಜಪ ಮಾಡಿದವನಿಗೆ ಬೇಕಾದಷ್ಟು ಭೋಗಗಳನ್ನೂ, ನಿತ್ಯವಾದ ಮೋಕ್ಷವನ್ನೂ ಕೊಡುವಳು. ಯಕ್ಷರೆಂಬ ದೇವತೆಗಳಾಗಲಿ, ರಾಕ್ಷಸರಾಗಲಿ, ಪಿಶಾಚಿಗಳಾಗಲಿ, ಎಲ್ಲಾ ಭಯಂಕರಗಳಾದ ಗ್ರಹಗಳಾಗಲಿ, ಜಪ ಮಾಡುವವನ ಹತ್ತಿರಕ್ಕೆ ಬರದೆ ಹೆದರಿಕೊಂಡು ಎಲ್ಲ ಕಡೆಗಳಲ್ಲೂ ಓಡಿ ಹೋಗುವುವು. ॥೧೨೪॥ ಜಪದಿಂದ ಅನೇಕ ಜನ್ಮಗಳಲ್ಲಿ ಮಾಡಿರಬಹುದಾದ ಸಮಸ್ತವಾದ ಪಾಪಗಳೂ, ನಷ್ಟವಾಗುವುವು. ಜಪದಿಂದ ಭೋಗಗಳು ಸಿಕ್ಕುತ್ತವೆ. ಇದರಿಂದ ಸಾವನ್ನು ಜಯಿಸುತ್ತಾನೆ. ಜಪದಿಂದ ಕಾರ್ಯಸಿದ್ಧಿಯೂ, ಕೊನೆಯಲ್ಲಿ ಮೋಕ್ಷವೂ ಉಂಟಾಗುತ್ತದೆ. ಹೀಗೆ ಜಪ ಮಾಡುವ ಕ್ರಮವನ್ನೂ,

ಏವಂ ಲಬ್ಧ್ವಾ ಶಿವಂ ಜ್ಞಾನಂ ಜ್ಞಾತ್ವಾ ಜಪ ವಿಧಿ ಕ್ರಮಂ ॥೧೨೬॥
ಸದಾ ಚಾರೀ ಜಪ ನ್ನಿತ್ಯಂ ಧ್ಯಾಯನ್ ಭದ್ರಂ ಸಮ ಶ್ನುತೇ ।
ಸದಾ ಚಾರಂ ಪ್ರವಕ್ಷ್ಯಾಮಿ ಸಮ್ಯಗ್ಧರ್ಮಸ್ಯ ಸಾಧನಂ ॥೧೨೭॥
ಯಸ್ಮಾ ದಾಚಾರ ಹೀನಸ್ಯ ಸಾಧನಂ ನಿಷ್ಫಲಂ ಭವೇತ್ ।
ಆಚಾರಃ ಪರಮೋ ಧರ್ಮ ಆಚಾರಃ ಪರಮಂ ತಪಃ ॥೧೨೮॥
ಆಚಾರಃ ಪರಮಾ ವಿದ್ಯಾ ಆಚಾರಃ ಪರಮಾ ಗತಿಃ ।
ಸದಾ ಚಾರ ವತಾಂ ಪುಂಸಾಂ ಸರ್ವತ್ರಾಽಸ್ಯ ಭಯಂ ಭವೇತ್ ॥
ತದ್ವ ದಾಚಾರ ಹೀನಾನಾಂ ಸರ್ವತ್ರೈವ ಭಯಂ ಭವೇತ್ ।
ಸದಾ ಚಾರೇಣ ದೇವತ್ವ ಮೃಷಿತ್ವಂ ಚ ವರಾನನೇ ॥೧೩೦॥

---

ಅರ್ಥವನ್ನೂ, ತಿಳಿದು ಜಪವನ್ನು ಮಾಡುವವನು ಶಿವಜ್ಞಾನವನ್ನೂ ಹೊಂದಿ, ಬೇಕಾದ ಇಷ್ಟಾರ್ಥಗಳನ್ನು ಪಡೆಯುವನು, ಇದರಲ್ಲಿ ಸಂದೇಹವಿಲ್ಲ.

೧೨೭–೧೩೦. ಮನುಷ್ಯನು ಒಳ್ಳೆಯ ಆಚಾರದಿಂದ ಕೂಡಿದವನಾಗಿ ಜಪಮಾಡುತ್ತಾ ಶಿವಧ್ಯಾನಮಾಡಿದರೆ ಮಂಗಳವನ್ನು ಹೊಂದುತ್ತಾನೆ. ಒಳ್ಳೆಯ ಧರ್ಮಕ್ಕೆ ಕಾರಣವಾದ ಒಳ್ಳೆಯ ಆಚಾರದ ಸ್ವರೂಪವನ್ನು ಹೇಳುವೆನು. ಏಕೆಂದರೆ ಒಳ್ಳೆಯ ನಡೆವಳಿಕೆಯಿಲ್ಲದ ಮನುಷ್ಯನ ಕರ್ಮಗಳೆಲ್ಲವೂ ವ್ಯರ್ಥವಾಗುವುವು. ಆಚಾರವೇ ಶ್ರೇಷ್ಠವಾದ ಧರ್ಮವೆಂದೂ,ಆಚಾರವೇ ಶ್ರೇಷ್ಠವಾದ ತಪಸ್ಸೆಂದೂ, ಆಚಾರವೇ ಶ್ರೇಷ್ಠವಾದ ವಿದ್ಯೆಯೆಂದೂ ಆಚಾರವೇ ಶ್ರೇಷ್ಠವಾದ ಹೊಂದಬೇಕಾದ ವಸ್ತುವೆಂದೂ ತಿಳಿಯಬೇಕು. ಒಳ್ಳೆಯ ಆಚಾರವಿರುವ ಮನುಷ್ಯರಿಗೆ ಎಲ್ಲಾ ಕಡೆಯಲ್ಲಿಯೂ ಭಯವೇ ಇರಲಾರದು. ಹಾಗೆಯೇ ಆಚಾರವಿಲ್ಲದವರಿಗೆ ಎಲ್ಲಾ ಕಡೆಯಲ್ಲಿ ಭಯವು ತಪ್ಪದು. ಎಲೈ ಸುಂದರ ಮುಖವುಳ್ಳ ಪಾರ್ವತಿಯೇ, ಒಳ್ಳೆಯ ಆಚಾರದಿಂದಲೇ ಮನುಷ್ಯನು ದೇವತ್ವವನ್ನೂ ಋಷಿಯ ಯೋಗ್ಯತೆಯನ್ನೂ ಹೊಂದುವನು.

ಉಪಯಾಂತಿ ಕುಯೋ ನಿತ್ಯಂ ತದ್ವದಾಚಾರ ಲಂಘನಾತ್ ।
ಆಚಾರ ಹೀನಃ ಪುರುಷೋ ಲೋಕೇ ಭವತಿ ನಿಂದಿತಃ ॥೧೩೧॥

ತಸ್ಮಾತ್ಸಂ ಸಿದ್ಧಿ ಮನ್ವಿಚ್ಛನ್ ಸಮ್ಯಗಾಚಾರ ವಾನ್ ಭವೇತ್ ।
ದುರ್ವೃತ್ತೋಽಶುದ್ಧಿ ಭೂಯಿಷ್ಠೋ ಪಾಪೀಯಾನ್ಜ್ಞಾನದೂಷಕಃ
ವರ್ಣಾಶ್ರಮ ವಿಧಾನೋಕ್ತಂ ಧರ್ಮಂ ಕುರ್ವೀತ ಯತ್ನತಃ॥೧೩೩॥

ಯಸ್ಯ ಯದ್ವಿಹಿತಂ ಕರ್ಮ ತತ್ಕುರ್ವನ್ ಮತ್ಪ್ರಿಯಃ ಸದಾ ।
ಸಂಧ್ಯೋಪಾಸನ ಶೀಲಃ ಸ್ಯಾತ್ ಸಾಯಂ ಪ್ರಾತಃ ಪ್ರಸನ್ನಧೀಃ ॥

ಉದಯಾಽಸ್ತ ಮಯಾತ್ಪೂರ್ವ ಮಾರಭ್ಯ ವಿಧಿನಾ ಶುಚಿಃ ।
ಕಾಮಾನ್ಮೋಹಾ ದ್ಭಯಾ ಲ್ಲೋಭಾತ್ ಸಂಧ್ಯಾಂ ನಾತ್ರಿಕ
ಮೇದ್ದ್ವಿಜಃ ॥೧೩೫॥

---

೧೩೧–೧೩೩. ಹಾಗೆಯೇ ಮಾನವನು ಆಚಾರವನ್ನು ಮೀರುವುದರಿಂದ ಕ್ಷುದ್ರ ಜನ್ಮವನ್ನು ಪಡೆಯುವನು. ಆಚಾರವಿಲ್ಲದ ಮನುಷ್ಯನು ಲೋಕದಲ್ಲಿ ನಿಂದನೆಗೆ ಒಳಗಾಗುವನು. ಆದ್ದರಿಂದ ಕಾರ್ಯ ಸಿದ್ಧಿಯನ್ನು ಪಡೆಯಲು ಇಚ್ಛಿಸುವ ಮನುಷ್ಯನು ಒಳ್ಳೆಯ ಆಚಾರವಂತನಾಗಿರಬೇಕು. ಕೆಟ್ಟ ನಡೆತೆಯುಳ್ಳವನೂ,ಅಪವಿತ್ರನಾಗಿ ನಡೆದುಕೊಳ್ಳುವವನೂ, ಜ್ಞಾನವನ್ನು ದೂಷಿಸುವವನೂ, ಪಾಪಿಷ್ಠನು. ಆದ್ದರಿಂದ ಪ್ರಯತ್ನ ಪೂರ್ವಕವಾಗಿ, ವರ್ಣಾಶ್ರಮ ವ್ಯವಸ್ಥೆಯ ಪ್ರಕಾರ ಸ್ವಧರ್ಮಗಳ ಅನುಷ್ಠಾನವನ್ನು ಉಪಾಸಕನು ಮಾಡುತ್ತಿರಬೇಕು.

೧೩೪–೧೩೫. ಯಾವನಿಗೆ ಯಾವ ಕರ್ಮವು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆಯೋ ಅದನ್ನು ಮಾಡುವವನೇ ನನಗೆ ಯಾವಾಗಲೂ ಪ್ರೀತಿಪಾತ್ರನಾಗುವನು. ಬ್ರಾಹ್ಮಣನು ನಿರ್ಮಲವಾದ ಮನಸ್ಸಿನಿಂದ ಸಾಯಂಕಾಲ ಮತ್ತು ಪ್ರಾತಃಕಾಲ ಸಂಧ್ಯಾವಂದನೆಯನ್ನು ತಪ್ಪದೇ ಮಾಡಬೇಕು. ಬ್ರಾಹ್ಮಣನು ಸೂರ್ಯೋದಯಕ್ಕೆ ಮುಂಚೆಯೂ ಮತ್ತು ಸೂರ್ಯಾಸ್ತಮಯಕ್ಕೆ ಮುಂಚೆಯೂ ಶಾಸ್ತ್ರೋಕ್ತ ಕ್ರಮದಲ್ಲಿ ಶುದ್ಧನಾಗಿ, ಕಾಮ,ಅಥವಾ ಅಜ್ಞಾನದಿಂದಲಾಗಲೀ,ಭಯ ಅಥವಾ ಲೋಭದಿಂದಲಾಗಲೀ,ಸಂಧ್ಯಾವಂದನೆ ಮಾಡುವುದನ್ನು ಬಿಡಬಾರದು. ಏಕೆಂದರೆ ಬ್ರಾಹ್ಮ

**ಸಂಧ್ಯಾಽತಿಕ್ರಮಣಾದ್ವಿಪ್ರೋ ಬ್ರಾಹ್ಮಣ್ಯಾತ್ಪತತೇ ಯತಃ ।**
**ಅಸತ್ಯಂ ನ ವದೇತ್ಕಿಂಚಿತ್ ನ ಸತ್ಯಂ ಚ ಪರಿತ್ಯಜೇತ್ ॥೧೩೬॥**
**ಯತ್ಸತ್ಯಂ ಬ್ರಹ್ಮ ಇತ್ಯಾಹು ರಸತ್ಯಂ ಬ್ರಹ್ಮದೂಷಣಂ ।**
**ಅನೃತಂ ಪರುಷಂ ಶಾಠ್ಯಂ ಪೈಶುನ್ಯಂ ಪಾಪ ಹೇತುಕಂ ॥೧೩೭॥**
**ಪರದಾರಾ್ ಪರದ್ರವ್ಯಂ ಪರಹಿಂಸಾಂ ಚ ಸರ್ವದಾ ।**
**ಕ್ವಚಿಚ್ಚಾಪಿ ನ ಕುರ್ವೀತ ವಾಚಾ ಚ ಮನಸಾ ತಥಾ ॥೧೩೮॥**
**ಶೂದ್ರಾನ್ನಂ ಯಾತಯಾಮಾನ್ನಂ ನೈವೇದ್ಯಂ ಶ್ರಾದ್ಧಮೇವ ಚ ।**
**ಗಣಾನ್ನಂ ಸಮುದಾಯಾನ್ನಂ ರಾಜಾನ್ನಂ ಚ ವಿವರ್ಜಯೇತ್ ॥**
**ಅನ್ನ ಶುದ್ಧೌ ಸತ್ವಶುದ್ಧಿ ರ್ನ ಮೃದಾ ನ ಜಲೇನ ವೈ ।**
**ಸತ್ವಶುದ್ಧೌ ಭವೇತ್ಸಿದ್ಧಿ ಸ್ತತೋಽನ್ನಂ ಪರಿಶೋಧಯೇತ್ ॥೧೪೦॥**

---

ಈನು ಸಂಧ್ಯಾವಂದನೆಯನ್ನು ಮಾಡದೇ ಇರುವುದರಿಂದ ಬ್ರಾಹ್ಮಣ್ಯವನ್ನೇ ಕಳೆದುಕೊಳ್ಳುವನು. ಇವನು ಸುಳ್ಳನ್ನು ಹೇಳಲೇ ಬಾರದು. ಮತ್ತು ಸತ್ಯವನ್ನು ಬಿಡಲೇ ಬಾರದು.

೧೩೭–೧೩೯. ಏಕೆಂದರೆ ಸತ್ಯವನ್ನು ಬ್ರಹ್ಮನೆಂದೂ, ಅಸತ್ಯವನ್ನು ಹೇಳುವುದರಿಂದ ಬ್ರಹ್ಮನನ್ನೇ ದೂಷಣೆ ಮಾಡಿದ ಹಾಗೆಂದೂ ಹೇಳುತ್ತಾರೆ. ಸುಳ್ಳು ಹೇಳುವುದೂ, ಕಠಿಣವಾದ ಮಾತನ್ನಾಡುವುದೂ, ಮೋಸವೂ, ಚಾಡಿಕೋರತನವೂ, ಪಾಪವನ್ನುಂಟುಮಾಡುವುದಾಗಿರುತ್ತದೆ. ಇತರರ ಹೆಂಗುಸರನ್ನೂ, ಕಂಡವರ ಹಣವನ್ನೂ, ಆಶಿಸಬಾರದು. ಇತರರಿಗೆ ಹಿಂಸೆಯನ್ನು, ಯಾವಾಗಲೂ, ಕಾರ್ಯದಿಂದಾಗಲಿ, ಮಾತಿನಿಂದಾಗಲೀ, ಮನಸ್ಸಿನಿಂದಲಾಗಲೀ ಮಾಡಬಾರದು. ಶೂದ್ರನಿಂದ ಕೊಡಲ್ಪಟ್ಟ ಅನ್ನವನ್ನೂ, ತಂಗಳನ್ನವನ್ನೂ, ದೇವರಿಗೆ ಮೀಸಲಾಗಿಟ್ಟ ಅನ್ನವನ್ನೂ, ಶ್ರಾದ್ಧದ ಅನ್ನವನ್ನೂ, ಗುಂಪಿನಲ್ಲಿ ಉಪಯೋಗಿಸಲ್ಪಟ್ಟು ಮಿಕ್ಕ ಅನ್ನವನ್ನೂ, ರಾಜನಿಗೋಸ್ಕರ ಪಾಕ ಮಾಡಿದ ಅನ್ನವನ್ನೂ ಬಿಟ್ಟು ಬಿಡಬೇಕು.

೧೪೦–೧೪೨. ಅನ್ನವು ಶುದ್ಧಿಯಾಗಿದ್ದರೆ ಮನಸ್ಸಿನ ಶುದ್ಧಿಯುಂಟಾಗುವುದು. ಮನಸ್ಸು, ಮಣ್ಣಿನಿಂದಾಗಲಿ, ನೀರಿನಿಂದಾಗಲಿ ಶುದ್ಧವು ಆಗಲಾರದು. ಮನಸ್ಸು ಶುದ್ಧವಾದರೆ ಕಾರ್ಯಫಲ ಸಿದ್ಧಿಯಾಗುವುದು.

**ರಾಜಪ್ರತಿಗ್ರಹೈರ್ದಗ್ಧಾನ್ ಬ್ರಾಹ್ಮಣಾನ್ ಬ್ರಹ್ಮವಾದಿನಃ ।**
**ಸ್ವಿನ್ನಾನಾಮಪಿ ಬೀಜಾನಾಂ ಪುನರ್ಜನ್ಮ ನ ವಿದ್ಯತೇ ॥೧೪೧॥**

**ರಾಜ ಪ್ರತಿಗ್ರಹೋ ಘೋರೋ ಬುದ್ಧ್ವಾ ಚಾಽದೌ ವಿಷೋಪಮಃ**
**ಬುಧೇನ ಪರಿಹರ್ತವ್ಯಃ ಶ್ವಮಾಂಸಂ ಚಾಽಪಿ ವರ್ಜಯೇತ್ ॥೧೪೨॥**

**ಅಸ್ನಾತ್ವಾ ನ ಚ ಭುಂಜೀಯಾತ್ ಅಜಪೋಽಗ್ನಿಮಪೂಜ್ಯ ಚ ।**
**ಪರ್ಣ ಪೃಷ್ಠೇ ನ ಭುಂಜೀಯಾತ್ ರಾತ್ರೌ ದೀಪಂ ವಿನಾ ತಥಾ ॥**

**ಭಿನ್ನ ಭಾಂಡೇ ಚ ರಥ್ಯಾಯಾಂ ಪತಿತಾನಾಂ ಚ ಸನ್ನಿಧೌ ।**
**ಶೂದ್ರಶೇಷಂ ನ ಭುಂಜೀಯಾತ್ಸಹಾನ್ನಂ ಶಿಶುಕೈರಪಿ ॥೧೪೪॥**

---

ಆದುದರಿಂದ ಅನ್ನವನ್ನು ಶುದ್ಧವಾದದ್ದೆಂದು ಚೆನ್ನಾಗಿ ಅರಿತು ಉಪಯೋಗಿಸಬೇಕು. ರಾಜರಿಂದ ಬೇಕಾದ ದಾನಗಳನ್ನು ತೆಗೆದುಕೊಂಡು ಜೀವಿಸುವ ಬ್ರಾಹ್ಮಣರು ಬ್ರಹ್ಮಜ್ಞಾನಿಗಳಾಗಿದ್ದರೂ, ಸುಟ್ಟುಹೋದ ದವಸ, ಧಾನ್ಯಗಳ ಬೀಜಗಳು, ಹೇಗೆ ಫಲ ಕೊಡಲಾರವೋ ಹಾಗೇ, ಅವರು ಶಕ್ತಿನಾಶವನ್ನೇ ಹೊಂದುವರು. ಎಂದರೆ ಪರಲೋಕಗಳಲ್ಲಿ ಸದ್ಗತಿಯನ್ನೂ, ಕಡೆಗೆ ಮೋಕ್ಷವನ್ನೂ ಪಡೆಯಲು ಆವಶ್ಯಕವಾದ ಸಾಮರ್ಥ್ಯವನ್ನೇ ಕಳೆದು ಕೊಳ್ಳುವರೆಂದು ತಾತ್ಪರ್ಯವು. ರಾಜರಿಂದ ದಾನ ತೆಗೆದುಕೊಳ್ಳುವುದು ಬಹಳ ಭಯಂಕರವೆಂದೂ, ವಿಷಕ್ಕೆ ಸಮಾನವೆಂದೂ, ಮೊದಲೇ ತಿಳಿದು ವಿದ್ವಾಂಸನು ಅದನ್ನು ಬಿಟ್ಟುಬಿಡಬೇಕು. ಹಾಗೆಯೇ ಇವನು ನಾಯಿಯ ಮಾಂಸವನ್ನೂ ತಿನ್ನಬಾರದು.

೧೪೩–೧೪೪. ಸ್ನಾನ ಮಾಡದೇ, ಜಪ ಮಾಡದೇ, ಅಗ್ನಿಯ ಪೂಜೆಯನ್ನೂ ಮಾಡದೇ ಭೋಜನ ಮಾಡಬಾರದು. ಎಲೆಯ ಹಿಂಬಾಗದಲ್ಲಿಯಾಗಲಿ, ರಾತ್ರಿಯಲ್ಲಿ ದೀಪವಿಲ್ಲದೇ ಇರುವಾಗಲಾಗಲಿ, ಒಡೆದು ಹೋದ ಪಾತ್ರೆಯಲ್ಲಾಗಲಿ, ಬೀದಿಯಲ್ಲಾಗಲಿ, ಕೀಳು ಜಾತಿಯವರ ಸಮೀಪದಲ್ಲಿಯಾಗಲಿ, ಶೂದ್ರರು ತಿಂದು ಮಿಕ್ಕುದನ್ನಾಗಲಿ, ಸಣ್ಣ ಮಕ್ಕಳ ಜೊತೆಯಲ್ಲಿ ಒಂದೇ ಪಾತ್ರೆ ಅಥವಾ ಎಲೆಯಲ್ಲಾಗಲಿ, ಊಟ ಮಾಡಬಾರದು. ಶುದ್ಧವಾದ ಮತ್ತು ಜಿಡ್ಡಿನಿಂದ ಕೂಡಿರುವ, ಸರಿಯಾಗಿ ಪಾಕಮಾಡಿರುವ ಮತ್ತು ಪ್ರೋಕ್ಷಣೆಯಿಂದ ಶುದ್ಧವಾಗಿರುವ,

**ಶುದ್ಧಾನ್ನಂ ಸ್ನಿಗ್ಧ ಮಶ್ನೀಯಾತ್ ಸಂಸ್ಕೃತಂ ಚಾಽಭಿ ಮಂತ್ರಿತಂ ।**
**ಭೋಕ್ತಾ ಶಿವ ಇತಿ ಸ್ಮೃತ್ವಾ ಮೌನೀ ಚೈಕಾಗ್ರಮಾನಸಃ ॥೧೪೫॥**

**ಆಸ್ಯೇನ ನ ಪಿಬೇತ್ತೋಯಂ ತಿಷ್ಠನ್ನಂಜಲಿನಾಽಪಿ ವಾ ।**
**ವಾಮ ಹಸ್ತೇನ ಶಯ್ಯಾಯಾಂ ತಥೈವಾಽನ್ಯಕರೇಣ ವಾ ॥೧೪೬॥**

**ವಿಭೀತ ಕಾಽರ್ಕ ಕಾರಂಜ ಸ್ನುಹಿ ಚ್ಛಾಯಾಂ ನ ಚಾಽಶ್ರಯೇತ್ ।**
**ಸ್ತಂಭ ದೀಪ ಮನುಷ್ಯಾಣಾ ಮನ್ಯೇಷಾಂ ಪ್ರಾಣಿನಾಂ ತಥಾ ॥೧೪೭**

**ಏಕೋ ನ ಗಚ್ಛೇ ದಧ್ವಾನಂ ಬಾಹುಭ್ಯಾಂ ನೋತ್ತರೇ ನ್ನದೀಂ ।**
**ನಾವರೋಹೇತ ಕೂಪಾದಿಂ ನಾಽರೋಹೇ ದುಚ್ಚ ಪಾದಪಾನ್ ॥**

**ಸೂರ್ಯಾಽಗ್ನಿ ಜಲ ದೇವಾನಾಂ ಗುರೂಣಾಂ ವಿಮುಖಃ ಶುಭೇ ।**
**ನ ಕುರ್ಯಾ ದಿಹ ಕಾರ್ಯಾಣಿ ಜಪಕರ್ಮ ಶುಭಾನಿ ವಾ ॥೧೪೯॥**

---

ಅನ್ನವನ್ನು ಊಟಮಾಡಬೇಕು. ಹೀಗೆ ಮಾಡುವಾಗ ಶಿವನೇ ತಿನ್ನುತ್ತಿರುವನೆಂದು ಭಾವಿಸಿ, ಅವನ ಸ್ಮರಣೆಯನ್ನು ಮಾಡುತ್ತಾ, ಒಂದೇ ಕಡೆಯಲ್ಲಿರುವ ಮನಸ್ಸಿನಿಂದ ಮೌನವಾಗಿ ಊಟಮಾಡಬೇಕು.

೧೪೬-೧೪೮. ಪಾತ್ರೆ ಮುಂತಾದ ವಸ್ತುಗಳಿಂದಲ್ಲದೇ ನೀರನ್ನು ನೇರವಾಗಿ ಬಾಯಿನಿಂದಲೇ ಕುಡಿಯಬಾರದು. ನಿಂತುಕೊಂಡಾಗಲೀ, ಬೊಗಸೆಯಿಂದಾಗಲೀ, ಎಡಗೈನಿಂದಾಗಲೀ, ಹಾಸಿಗೆಯಲ್ಲಾಗಲೀ, ಅಥವಾ ಇನ್ನೊಬ್ಬರ ಕೈನಿಂದಾಗಲಿ, ನೀರನ್ನು ಕುಡಿಯಬಾರದು. 'ವಿಭೀತಕಾ' ಎಂದರೆ ತಾರೆ ಗಿಡದ, ಅಥವಾ ಎಕ್ಕದ ಗಿಡ, ಅಥವಾ ಕಾರಂಜ, 'ಸ್ನುಹಿ' ಹಾಲೇ ಮರ ಅಥವಾ ರಸ ಸುರಿಯುವ ಇತರ ಮರಗಳ ನೆರಳಿನಲ್ಲಿ ನಿಲ್ಲಬಾರದು. ಕಂಬ, ದೀಪ, ಮನುಷ್ಯ, ಅಥವಾ ಇತರ ಪ್ರಾಣಿಗಳ ನೆರಳಿನಲ್ಲಿ ನಿಲ್ಲಬಾರದು. ಒಬ್ಬನೇ ಬಹಳ ದೂರವಾದ ದಾರಿಯಲ್ಲಿ ನಡೆಯಬಾರದು. ತೋಳುಗಳಿಂದ ನದಿಯನ್ನು ದಾಟಬಾರದು. ಬಾವಿಯೇ ಮೊದಲಾದುವನ್ನು ಇಳಿಯಬಾರದು. ಎತ್ತರವಾದ ದೊಡ್ಡ ಮರಗಳನ್ನು ಹತ್ತಬಾರದು.

೧೪೯-೧೫೧. ಎಲೈ ಮಂಗಳಕರಳೇ, ಸೂರ್ಯ, ಬೆಂಕಿ, ನೀರು, ದೇವತೆಗಳು, ಗುರುಗಳು, ಇವರಿಗೆ ವಿರುದ್ಧವಾಗಿ ಬೆನ್ನನ್ನು ತಿರುಗಿಸಿಕೊಂಡು, ಅಥವಾ ಪಶ್ಚಿಮಾಭಿಮುಖವಾಗಿ ಒಳ್ಳೆಯ ಕೆಲಸಗಳನ್ನಾಗಲಿ, ಜಪದ ಕೆಲಸವನ್ನಾಗಲಿ, ಏನನ್ನೂ ಮಾಡಬಾರದು. ಬೆಂಕಿಯಲ್ಲಿ ಕಾಲನ್ನು

**ಅಗ್ನೌ ನ ತಾಪಯೇ ತ್ಪಾದೌ ಹಸ್ತಂ ಪದ್ಭ್ಯಾಂ ನ ಸಂಸ್ಪೃಶೇತ್।**
**ಅಗ್ನೇ ರ್ನೋ ಚ್ಛ್ರಯ ಮಾಸೀತ ನಾಽಗ್ನೌ ಕಿಂಚಿನ್ಮಲಂ ತ್ಯಜೇತ್**
**ನ ಜಲಂ ತಾಡಯೇ ತ್ಪದ್ಭ್ಯಾಂ ನಾಽಂಭಸ್ಯಂಗ ಮಲಂ ತ್ಯಜೇತ್ ।**
**ಮಲಂ ಪ್ರಕ್ಷಾಲಯೇ ತ್ತೀರೇ ಪ್ರಕ್ಷಾಲ್ಯ ಸ್ನಾನ ಮಾಚರೇತ್ ॥**
**ನ ಖಾಗ್ರದೇ (ಕೇ)ಶ ನಿರ್ಧೂತ ಸ್ನಾನ ವಸ್ತ್ರ ಘಟೋದಕಂ ।**
**ಅಶ್ರೀಕರಂ ಮನುಷ್ಯಾಣಾ ಮಶುದ್ಧಂ ಸಂಸ್ಪೃಶೇದ್ಯದಿ ॥೧೫೨॥**
**ಅಜಾಶ್ವಾನ ಖರೋಷ್ಟ್ರಾಣಾಂ ಮಾರ್ಜನಾತ್ತು ಷ ರೇಣುಕಾನ್ ।**
**ಸಂಸ್ಪೃಶೇದ್ಯದಿ ಮೂಢಾತ್ಮಾ ಶ್ರಿಯಂ ಹಂತಿ ಹರೇ ರಪಿ ॥೧೫೩॥**
**ಮಾರ್ಜಾರಶ್ಚ ಗೃಹೇ ಯಸ್ಯ ಸೋಽಪ್ಯಂ ತ್ಯಜ ಸಮೋ ನರಃ ।**
**ಭೋಜಯೇ ದ್ಯಸ್ತು ವಿಪ್ರೇಂದ್ರಾ ನ್ಮಾರ್ಜಾರಾ ನ್ಸನ್ನಿಧೌ ಯದಿ ॥**

---

ಕಾಯಿಸಬಾರದು. ಮತ್ತು ಕಾಲಿನಿಂದ ಕೈಗಳನ್ನೂ ಮುಟ್ಟಬಾರದು. ಬೆಂಕಿಯನ್ನು ಕಾಲುಗಳಿಂದಲೂ ಮುಟ್ಟಬಾರದು. ಬೆಂಕಿಗಿಂತ ಮೇಲಿರುವ ಪೀಠದಲ್ಲಿ ಕುಳಿತುಕೊಳ್ಳಬಾರದು. ಬೆಂಕಿಯಲ್ಲಿ ಸ್ವಲ್ಪವೂ ಮಲವಿಸರ್ಜನ ಮಾಡಬಾರದು. ಕಾಲುಗಳಿಂದ ನೀರನ್ನು ಹೊಡೆಯಬಾರದು. ದೇಹದ ಮಲವಿಸರ್ಜನೆಯನ್ನು ನೀರಿನಲ್ಲಿ ಮಾಡಬಾರದು. ದಡದಲ್ಲಿ ಮಲವನ್ನು ಬಿಟ್ಟು ಶುದ್ಧಿಮಾಡಿಕೊಂಡು ಅನಂತರ ಸ್ನಾನ ಮಾಡಬೇಕು.

೧೫೨–೧೫೪. ಉಗುರಿನ ಮುಂಭಾಗ, ಕೂದಲು ಇವುಗಳ ಮೇಲೆ ಚಿಮ್ಮಿದ, ಸ್ನಾನಮಾಡಿದ ಬಟ್ಟೆಯನ್ನು ಒಗೆಯುವುದರಿಂದ ಕೊಳಕಾದ ನೀರನ್ನು ಮುಟ್ಟುವುದಾಗಲಿ, ಮನುಷ್ಯರಿಗೆ ಶ್ರೇಯಸ್ಸನ್ನು ಹಾಳು ಮಾಡುವುದು. ಈ ಬಗೆಯ ಶುದ್ಧವಲ್ಲದ ಮುಟ್ಟುವಿಕೆಯು ಯಾವಾಗಲೂ ಶ್ರೇಯಸ್ಕರವಲ್ಲ. ಮೇಕೆ, ನಾಯಿ, ಕತ್ತೆ, ಒಂಟೆ, ಇವುಗಳು ಹೊರಳಾಡಿರುವ ಬೂದಿಯನ್ನು ಮನುಷ್ಯನು ಮುಟ್ಟುವುದಾದರೆ ಸಂಪತ್ತನ್ನೂ, ಭಗವಂತನ ಕೃಪೆಯನ್ನೂ ಕಳೆದುಕೊಂಡು, ಮೂಢನಾಗಿ ಕಷ್ಟಕ್ಕೆ ಗುರಿಯಾಗುವನು.

ತಚ್ಚಾಂಡಾಲ ಸಮಂ ಜ್ಞೇಯಂ ನಾಽತ್ರ ಕಾರ್ಯಾ ವಿಚಾರಣಾ ।
ಸ್ಫಿಗ್ವಾತಂ ಶೂರ್ಪವಾತಂ ಚ ವಾತಂ ಪ್ರಾಣ ಮುಖಾನಿಲಂ ॥
ಸುಕೃತಾನಿ ಹರಂತ್ಯೇತೇ ಸಂಸ್ಪೃಷ್ಟಾಃ ಪುರುಷಸ್ಯ ತು ।
ಉಷ್ಣೀಷೀ ಕಂಚುಕೀ ನಗ್ನೋ ಮುಕ್ತ ಕೇಶೋ ಮಲಾವೃತಃ ॥
ಅಪವಿತ್ರ ಕರೋಽಶುದ್ಧಃ ಪ್ರಲಪನ್ನ ಜಪೇತ್ಕ್ವಚಿತ್ ।
ಕ್ರೋಧೋ ಮದಃ ಕ್ಷುಧಾ ತಂದ್ರಾ ನಿಷ್ಠೀವ ನ ವಿಜೃಂಭಣೇ ॥
ಶ್ವನೀಚ ದರ್ಶನಂ ನಿದ್ರಾ ಪ್ರಲಾಪಾಸ್ತೇ ಜಪದ್ವಿಷಃ ।
ಏತೇಷಾಂ ಸಂಭವೇ ನಾಽಪಿ ಕುರ್ಯಾ ತ್ಸೂರ್ಯಾದಿ ದರ್ಶನಂ ॥೧೫೮॥
ಆಚಮ್ಯ ವಾ ಜಪೇಚ್ಛೇಷಂ ಕೃತ್ವಾ ವಾ ಪ್ರಾಣ ಸಂಯಮಂ ।
ಸೂರ್ಯೋಽಗ್ನಿ ಶ್ಚಂದ್ರಮಾ ಶ್ಚೈವ ಗ್ರಹ ನಕ್ಷತ್ರ ತಾರಕಾಃ ॥೧೫೯॥

---

ಯಾವ ಮನುಷ್ಯನ ಮನೆಯಲ್ಲಿ ಕಾಡು ಬೆಕ್ಕು ಇದೆಯೋ ಅವನು ಪಂಚ ಮನಿಗೆ ಸಮಾನವಾದವನೇಸರಿ. ಮನುಷ್ಯನು ಬೆಕ್ಕುಗಳ ಹತ್ತಿರ ಬ್ರಾಹ್ಮಣ ಶ್ರೇಷ್ಠರಿಗೆ ಭೋಜನ ಮಾಡಿಸಿದರೆ ಚಂಡಾಲನಾಗುವನು.

೧೫೫–೧೫೭. ಹಿಂದೆ ಹೇಳಿದ ಕಾಡು ಬೆಕ್ಕುಗಳ ಹತ್ತಿರ ಬ್ರಾಹ್ಮಣರಿಗೆ (ಬ್ರಾಹ್ಮಣ ಶ್ರೇಷ್ಠರಿಗೂ) ಭೋಜನ ಮಾಡಿಸುವವನು ಚಂಡಾಲನಾಗುವುದರಲ್ಲಿ ಸಂದೇಹವಿಲ್ಲ. ಪೃಷ್ಠಭಾಗದ ಗಾಳಿಯನ್ನೂ, ಕೊಳಕಾದ ಪ್ರದೇಶದ ಗಾಳಿಯನ್ನೂ, ಪ್ರಾಣಿಗಳ ಮತ್ತು ಮುಖದ ಗಾಳಿಯನ್ನೂ, ಸೇವಿಸಿದರೆ ಮನುಷ್ಯನ ಪುಣ್ಯಗಳೆಲ್ಲವೂ ಹಾಳಾಗುವುದರಲ್ಲಿ ಸಂದೇಹವಿಲ್ಲ. ತಲೆ ಪೇಟ ಕಟ್ಟಿಕೊಂಡು, ಅಂಗಿ ಹಾಕಿಕೊಂಡು, ಬರಿಯ ಬೆತ್ತಲೆಯಲ್ಲಿ, ತಲೆಯನ್ನು ಕೆದರಿಕೊಂಡು, ಮಲದಿಂದ ಕೂಡಿದ ಶರೀರವುಳ್ಳವನಾಗಿ, ಅಪವಿತ್ರವಾದ ಕೆಲಸಗಳನ್ನು ಮಾಡುತ್ತಾ, ನಿರರ್ಥಕವಾಗಿ ವಾದ ಮಾಡುತ್ತಾ, ಮನುಷ್ಯನು ಜಪವನ್ನು ಎಲ್ಲಿಯೂ ಮಾಡಬಾರದು. ಕೋಪ, ಅಹಂಕಾರ, ಹಸಿವು, ಸೋಮಾರಿತನ, ಉಗುಳುವುದು ಮತ್ತು ಆಕಳಿಸುವುದು ಇವುಗಳು ಜಪ ಮಾಡುವವನಿಗೆ ನಿಷೇಧಿಸಲ್ಪಟ್ಟಿರುವುವು.

೧೫೮–೧೬೦. ನಾಯಿ, ನೀಚರಾದ ಮನುಷ್ಯರು, ಇವರನ್ನು ನೋಡುವುದು, ನಿದ್ರೆ, ಅಳುವುದು, ಇವೆಲ್ಲವೂ ಜಪ ಮಾಡುವವನಿಗೆ ನಿಷೇಧಿಸಲ್ಪಟ್ಟಿವೆ. ಇವುಗಳೇನಾದರೂ ಆಕಸ್ಮಾತ್ ಸಂಭವಿಸಿದರೆ ಸೂರ್ಯನೇ

ಏತೇ ಜ್ಯೋತೀಂಷಿ ಪ್ರೋಕ್ತಾನಿ ವಿದ್ವದ್ಭಿ ಬ್ರಾಹ್ಮಣೈ ಸ್ತಥಾ ।
ಪ್ರಸಾರ್ಯ ಪಾದೌ ನ ಜಪೇತ್ ಕುಕ್ಕುಟಾಸನ ಏವ ಚ ॥೧೬೦॥
ಅನಾಸನಃ ಶಯಾನೋ ವಾ ರಥ್ಯಾಯಾಂ ಶೂದ್ರ ಸನ್ನಿಧೌ ।
ರಕ್ತಭೂಮ್ಯಾಂ ಚ ಖಟ್ವಾಯಾಂ ನ ಜಪೇ ಜ್ಜಾಪಕ ಸ್ತಥಾ ॥೧೬೧॥
ಆಸನ ಸ್ಥೋ ಜಪೇತ್ಸಮ್ಯಕ್ ಮಂತ್ರಾರ್ಥ ಗತಮಾನಸಃ ।
ಕೌಶೇಯಂ ವ್ಯಾಘ್ರ ಚರ್ಮಂ ವಾ ಚೈಲಂ ತೌಲಮಥಾಪಿ ವಾ ॥
ದಾರವಂ ತಾಲಪರ್ಣಂ ವಾ ಆಸನಂ ಪರಿಕಲ್ಪಯೇತ್ ।
ತ್ರಿಸಂಧ್ಯಂ ತು ಗುರೋಃ ಪೂಜಾ ಕರ್ತವ್ಯಾ ಹಿತ ಮಿಚ್ಛತಾ ॥೧೬೩॥

---

ಮೊದಲಾದವರ ದರ್ಶನವನ್ನು ಮಾಡಬೇಕು. ಅನಂತರ ಆಚಮನ ಮಾಡಿ, ಪ್ರಾಣಾಯಾಮವನ್ನು ಮಾಡಿ, ಉಳಿದಿರಬಹುದಾದ ಜಪವನ್ನು ಮಾಡಬೇಕು. ಸೂರ್ಯ, ಅಗ್ನಿ, ಚಂದ್ರ, ಗ್ರಹಗಳು, ನಕ್ಷತ್ರಗಳು, ತಾರೆಗಳು ಇವು ಪರಿಶುದ್ಧಿ ಮಾಡತಕ್ಕ ತೇಜಸ್ಸುಗಳೆಂದು ವಿದ್ವಾಂಸರಿಂದಲೂ, ಬ್ರಾಹ್ಮಣರಿಂದಲೂ ಹೇಳಲ್ಪಟ್ಟಿದೆ. ಕಾಲುಗಳನ್ನು ಅಗಲಿಸಿಕೊಂಡು, ಕೋಳಿಯ ಹಾಗೆ ಆಸನ ಹಾಕಿಕೊಂಡು, ಜಪ ಮಾಡಕೂಡದು.

೧೬೧–೧೬೩. ಈ ಮಂತ್ರವನ್ನು ಜಪಿಸಬೇಕೆನ್ನುವವನು ಪೀಠವಿಲ್ಲದೆಯೂ, ಮಲಗಿಕೊಂಡೂ, ದಾರಿಯಲ್ಲಿಯೂ, ಶೂದ್ರನ ಹತ್ತಿರದಲ್ಲಿಯೂ, ರಕ್ತದಿಂದತೊಯ್ದಿರತಕ್ಕ ಭೂಮಿಯಮೇಲೆಯೂ, ಮಂಚದ ಮೇಲೆಯೂ ಎಂದಿಗೂ ಜಪ ಮಾಡಬಾರದು. ಮಂತ್ರದ ಅರ್ಥವಾದ ಶಿವರೂಪನಾದ ಪರಮಾತ್ಮನಮೇಲೆ ಮನಸ್ಸಿಟ್ಟು ಆಸನದಲ್ಲಿ ಕೂತುಕೊಂಡೇ ಚೆನ್ನಾಗಿ ಜಪ ಮಾಡಬೇಕು. ರೇಷ್ಮೆಯ ವಸ್ತ್ರ, ನಾರುಮಡಿ, ಅಥವಾ ಹುಲಿಯ ಚರ್ಮ, ಹತ್ತಿಯಬಟ್ಟೆ, ಮರದ ತೊಗಟೆ, ತಾಳೇ ಮರದ ಎಲೆ ಇವುಗಳಲ್ಲಿ ಯಾವುದನ್ನಾದರೂ ಆಸನವನ್ನಾಗಿ ಮಾಡಿಕೊಳ್ಳಬೇಕು. ಕ್ಷೇಮವನ್ನೂ ಶ್ರೇಯಸ್ಸನ್ನೂ ಬಯಸುವ ಮನುಷ್ಯನು ಮೂರು ಕಾಲದಲ್ಲಿಯೂ ಗುರುವಿನ ಪೂಜೆಯನ್ನು ಮಾಡಬೇಕು.

ಯೋ ಗುರುಃ ಸ ಶಿವಃ ಪ್ರೋಕ್ತೋ ಯಃ ಶಿವಃ ಸ ಗುರುಃ ಸ್ಮೃತಃ
ಯಥಾ ಶಿವ ಸ್ತಥಾ ವಿದ್ಯಾ ಯಥಾ ವಿದ್ಯಾ ತಥಾ ಗುರುಃ ॥೧೬೪॥
ಶಿವವಿದ್ಯಾ ಗುರೋ ಸ್ತಸ್ಮಾ ದ್ಭಕ್ತ್ಯಾ ಚ ಸದೃಶಂ ಫಲಂ ।
ಸರ್ವದೇವ ಮಯೋ ದೇವಿ ಸರ್ವ ಭಕ್ತಿ ಮಯೋ ಹಿ ಸಃ ॥೧೬೫॥
ಸಗುಣೋ ನಿರ್ಗುಣೋ ವಾಽಪಿ ತಸ್ಯಾಜ್ಞಾಂ ಶಿರಸಾ ವಹೇತ್ ।
ಶ್ರೇಯೋಽರ್ಥೀ ಯಸ್ತು ಗುರ್ವಾಜ್ಞಾಂ ಮನಸಾಽಪಿ ನ ಲಂಘಯೇತ್ ॥೧೬೬॥
ಗುರ್ವಾಜ್ಞಾ ಪಾಲಕಃ ಸಂಮ್ಯಕ್ ಜ್ಞಾನ ಸಂಪತ್ತಿ ಮಶ್ನುತೇ ।
ಗಚ್ಛಂ ಸ್ತಿಷ್ಠ ನ್ಸ್ವಪನ್ ಭುಂಜನ್ ಯದ್ಯತ್ಕರ್ಮ ಸಮಾಚರೇತ್ ॥

---

೧೬೪–೧೬೬. ಗುರುವೇ ಶಿವನೆಂದೂ ಶಿವನೇ ಗುರು ವೆಂದೂ ಹೇಳಲ್ಪಟ್ಟಿದೆ. ಜಪವು, ಸಿದ್ಧಿಯಾದಷ್ಟೂ ಶಿವನು ಮೆಚ್ಚುವನು. ಶಿವನು ಎಷ್ಟರಮಟ್ಟಿಗೆ ಮೆಚ್ಚುವನೋ ಅಷ್ಟರಮಟ್ಟಿಗೆ ವಿದ್ಯೆಯೂ ಲಭಿಸುವುದು. ಆದ್ದರಿಂದ ಗುರುವಿನ ಮೆಚ್ಚಿಗೆಗೆ ಅನುಸಾರವಾಗಿಯೇ ವಿದ್ಯೆಯೂ ಲಭಿಸುವುದೆಂದು ತಿಳಿಯಬೇಕು. ಆದ್ದರಿಂದ ಶಿವ ಮತ್ತು ವಿದ್ಯಾ ಗುರುಗಳು ಇಬ್ಬರೂ ಒಂದೇ ಆದ್ದರಿಂದ ಅವರನ್ನು ಎಷ್ಟರ ಮಟ್ಟಿಗೆ ಪೂಜಿಸುವೆವೋ ಅಷ್ಟರಮಟ್ಟಿಗೆ ಫಲವು ದೊರಕುವುದು. ಎಲೌ ಪಾರ್ವತೀ ದೇವಿಯೇ, ಗುರುವು ಎಲ್ಲಾ ದೇವತೆಗಳ ಸ್ವರೂಪನೂ ಎಲ್ಲಾ ಶಕ್ತಿಗಳ ಸ್ವರೂಪನೂ ಆಗಿದ್ದಾನೆ. ಗುರುವು ಗುಣಾಢ್ಯನಾಗಲಿ, ಅಥವಾ ಗುಣಾಢ್ಯನಲ್ಲದಿರಲಿ ಅವನ ಅಪ್ಪಣೆಯನ್ನು ತಲೆಬಾಗಿ ನಡೆಸಬೇಕು. ಶ್ರೇಯಸ್ಸನ್ನು ಅಪೇಕ್ಷಿಸುವ ಯಾವ ಮನುಷ್ಯನೂ ಗುರುವಿನ ಅಪ್ಪಣೆಯನ್ನು ಮನಸ್ಸಿನಿಂದಲೂ ಮೀರಬಾರದು.

೧೬೭–೧೬೯. ಗುರುವಿನ ಅಪ್ಪಣೆಯನ್ನು ನಡೆಸುವವನು ಉತ್ತಮವಾದ ಜ್ಞಾನವನ್ನು ಪಡೆಯುತ್ತಾನೆ. ಹೋಗುತ್ತಿರುವಾಗ, ನಿಂತಿರುವಾಗ, ಮಲಗಿರುವಾಗ, ಊಟಮಾಡುವಾಗ, ಅಥವಾ ಇನ್ನಾವ ಕೆಲಸ ಮಾಡುವಾಗಲಾಗಲೀ ಗುರುವಿನ ಹತ್ತಿರವಿರುವ ದಿನಗಳಲ್ಲಿ ಅವನ ಅಪ್ಪಣೆಯನ್ನು ಪಡೆದನಂತರದಲ್ಲೇ ಆಯಾಕಾರ್ಯಗಳನ್ನು ಮಾಡಬೇಕು. ಅದರಿಂದ ಜ್ಞಾನದ ಅತಿಶಯವು ದೊರೆಯುತ್ತದೆ. ಉಪಾಸಕನು

ಸಮುಕ್ಷಂ ಯದಿ ತತ್ಸರ್ವಂ ಕರ್ತವ್ಯಂ ಗುರ್ವನುಜ್ಞಯಾ ।
ಗುರೋ ರ್ದೇವ ಸಮುಕ್ಷಂ ವಾ ನ ಯಥೇಷ್ಟಾಸನೋ ಭವೇತ್ ॥

ಗುರು ರ್ದೇವೋ ಯತಃ ಸಾಕ್ಷಾ ತ್ತದ್ಗೃಹಂ ದೇವ ಮಂದಿರಂ ।
ಪಾಪಿನಾಂ ಚ ಯಥಾ ಸಂಗಾ ತ್ತ ತ್ಪಾಪೈಃ ಪತನಂ ಭವೇತ್ ॥

ತದ್ವ ದಾಚಾರ್ಯ ಸಂಗೇಸ ತದ್ಧರ್ಮ ಫಲ ಭಾಗ್ಭವೇತ್ ।
ಯಥೈವ ವಹ್ನಿ ಸಂಪರ್ಕಾ ನ್ಮಲಂ ತ್ಯಜತಿ ಕಾಂಚನಂ ॥೧೭೦॥

ತಥೈವ ಗುರುಸಂಪರ್ಕಾ ತ್ಪಾಪಂ ತ್ಯಜತಿ ಮಾನವಃ ।
ಯಥಾಽವಹ್ನಿ ಸಮೀಪಸ್ಥೋ ಘೃತ ಕುಂಭೋ ವಿಲೀಯತೇ ॥೧೭೧॥

ತಥಾ ಪಾಪಂ ವಿಲೀಯೇತ ಆಚಾರ್ಯಸ್ಯ ಸಮೀಪತಃ ।
ಯಥಾ ಪ್ರಜ್ವಲಿತೋ ವಹ್ನಿ ರ್ವಿಷ್ಟಾ ಕಾಷ್ಠಂ ಚ ನಿರ್ದಹೇತ್ ॥

---

ಗುರುವಿನ ಅಥವಾ ದೇವರ ಮುಂದೆ ಇಷ್ಟಬಂದ ಪೀಠದಲ್ಲಿ ತನ್ನ ಮನಸ್ಸು ಬಂದಂತೆ ಕೂತು ಕೊಳ್ಳಬಾರದು. ಗುರುವು ಸಾಕ್ಷಾತ್ ದೇವರ ಸ್ವರೂಪನೇ ಆದುದರಿಂದ ಅವನಿರುವ ಮನೆಯನ್ನು ದೇವಸ್ಥಾನ ವೆಂದೇ ಭಾವಿಸಬೇಕು. ಪಾಪಿಗಳ ಸಂಬಂಧದಿಂದ ಹೇಗೆ ಮನುಷ್ಯನು ಅವರ ಪಾಪಗಳ ಸಂಬಂಧ ಉಳ್ಳವನಾಗಿ ಕೆಟ್ಟುಹೋಗುತ್ತಾನೋ ಹಾಗೆಯೇ ಗುರುಗಳ ಸಂಬಂಧದಿಂದವ ಅವರ ಪುಣ್ಯಗಳಿಂದ ಇವನಿಗೆ ಉತ್ತಮ ಸ್ಥಿತಿಯು ಲಭಿಸುತ್ತದೆ.

೧೭೦. ಅದರಂತೆಯೇ ಗುರುಗಳ ಸಂಬಂಧದಿಂದ ಅವರು ಮಾಡಿದ ಧರ್ಮ ಫಲದಲ್ಲಿ ಶಿಷ್ಯನೂ ಭಾಗಿಯಾಗುವನು ಬೆಂಕಿಯ ಸಂಬಂಧ ದಿಂದ ಚಿನ್ನವು ಕಲ್ಮಷವನ್ನು ಬಿಡುವ ಹಾಗೆ ಗುರುವಿನ ಸಂಬಂಧದಿಂದ ಶಿಷ್ಯನ ಪಾಪಗಳೆಲ್ಲವೂ ತೊಲಗುತ್ತವೆ.

೧೭೧–೧೭೩. ಹಾಗೆಯೇ ಗುರುವಿನ ಸಂಬಂಧದಿಂದ ಮನುಷ್ಯನು ಪಾಪವನ್ನು ಕಳೆದುಕೊಳ್ಳುತ್ತಾನೆ. ಬೆಂಕಿಯ ಹತ್ತಿರದಲ್ಲಿರುವ ತುಪ್ಪದ ಗಡಿಗೆಯಲ್ಲಿರುವ ತುಪ್ಪವು ಹೇಗೆ ಕರಗುವುದೋ ಹಾಗೆ ಗುರುವಿನ ಹತ್ತಿರ ವಾಸಮಾಡುವ ಶಿಷ್ಯನ ಪಾಪಗಳೆಲ್ಲವೂ ನಾಶವಾಗುವುವು. ಉರಿಯು ಕೊಳಕು ಪದಾರ್ಥವನ್ನೂ ಮತ್ತು ಕಟ್ಟಿಗೆಯನ್ನೂ ಹೇಗೆ ಭಸ್ಮಮಾಡು

ಗುರು ಸ್ತುಷ್ಟೋ ದಹತ್ಯೇವಂ ಪಾಪಂ ತನ್ಮಂತ್ರ ತೇಜಸಾ ।
ಬ್ರಹ್ಮಾ ಹರಿಸ್ತಥಾ ರುದ್ರೋ ದೇವಾಶ್ಚ ಮುನಯಸ್ತಥಾ ॥೧೭೪॥
ಕುರ್ವಂತ್ಯನುಗ್ರಹಂ ತುಷ್ಟಾ ಗುರೌ ತುಷ್ಟೇ ನ ಸಂಶಯಃ ।
ಕರ್ಮಣಾ ಮನಸಾ ವಾಚಾ ಗುರೋಃ ಕ್ರೋಧಂ ನ ಕಾರಯೇತ್ ॥
ತಸ್ಯ ಕ್ರೋಧೇನ ದಹ್ಯಂತೇ ಆಯುಃ ಶ್ರೀಜ್ಞಾನ ಸತ್ಕ್ರಿಯಾಃ ।
ತತ್ಕ್ರೋಧಂ ಯೇ ಕರಿಷ್ಯಂತಿ ತೇಷಾಂ ಯಜ್ಞಾಶ್ಚ ನಿಷ್ಫಲಾಃ ॥೧೭೫॥
ಜಪಾಽನ್ಯ ನಿಯಮಾ ಶ್ಚೈವ ನಾಽತ್ರ ಕಾರ್ಯಾ ವಿಚಾರಣಾ ।
ಗುರೋ ರ್ವಿರುದ್ಧಂ ಯದ್ವಾಕ್ಯಂ ನ ವದೇತ್ಸರ್ವ ಯತ್ನತಃ ॥

---

ವುದೋ ಹಾಗೆಯೇ ಸಂತೋಷಗೊಂಡ ಗುರುವು ತನ್ನ ಮಂತ್ರದ ಶಕ್ತಿಯಿಂದ ಶಿಷ್ಯನ ಪಾಪಗಳನ್ನೆಲ್ಲವನ್ನೂ ನಾಶಮಾಡುವನು. ಗುರುವಿನ ಅನುಗ್ರಹವಿದ್ದರೆ ಬಹ್ಮಾ, ವಿಷ್ಣು, ಶಿವ, ದೇವತೆಗಳು, ಮತ್ತುಋಷಿಗಳು ಎಲ್ಲರೂ ಶಿಷ್ಯನಿಗೆ ಅನುಗ್ರಹ ಮಾಡುವರು.

೧೭೪–೧೭೬. ಮೇಲೆ ಹೇಳಿದ ದೇವತೆಗಳೆಲ್ಲರೂ ಗುರುವಿನ ಅನುಗ್ರಹವುಂಟಾದರೆ ಶಿಷ್ಯನಿಗೆ ಅನುಗ್ರಹ ಮಾಡುವರೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ಶಿಷ್ಯನು ತನ್ನ ಕೆಲಸದಿಂದಾಗಲಿ, ಮನಸ್ಸಿನಿಂದಾಗಲಿ, ಅಥವಾ ಮಾತಿನಿಂದಾಗಲಿ ಗುರುವಿಗೆ ಕೋಪಬರುವಂತೆ ಮಾಡಬಾರದು. ಅವನು ಕೋಪಿಸಿಕೊಂಡರೆ ಶಿಷ್ಯನ ಆಯುಸ್ಸು, ಐಶ್ವರ್ಯ, ಜ್ಞಾನ ಮತ್ತು ಒಳ್ಳೆಯ ಕೆಲಸಗಳೆಲ್ಲವೂ, ಸುಟ್ಟು ನಿಷ್ಫಲವಾಗುವುವು. ಗುರುವಿನ ಕೋಪಕ್ಕೆ ಪಾತ್ರರಾದವರು ಮಾಡಿದ ಯಾಗಗಳೆಲ್ಲವೂ ನಿಷ್ಫಲವೇ ಸರಿ ! ಹಾಗೆಯೇಅವನ ಕೋಪಕ್ಕೆ ಗುರಿಯಾದವರು ಮಾಡಿದ ಜಪ ಅಥವಾ ಬೇರೆ ಕೆಲಸಗಳು ವ್ಯರ್ಥ ವಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಗುರುವಿಗೆ ವಿರೋಧವನ್ನು ಉಂಟುಮಾಡುವ ಒಂದು ಮಾತನ್ನೂ ಶಿಷ್ಯನು ಆಡದೇ ಇರಲು ಎಲ್ಲಾ ಪ್ರಯತ್ನವನ್ನೂ ಮಾಡಬೇಕು.

ವದೇ ದ್ಯದಿ ಮಹಾ ಮೋಹಾ ದ್ರೌರವಂ ನರಕಂ ವ್ರಜೇತ್ ।
ಚಿತ್ತೇನೈವ ಚ ವಿತ್ತೇನ ತಥಾ ವಾಚಾ ಚ ಸುವ್ರತಾಃ ॥೧೭೭॥
ಮಿಥ್ಯಾ ನ ಕಾರಯೇದ್ದೇವಿ ಕ್ರಿಯಯಾ ಚ ಗುರೋಃ ಸದಾ ।
ದುರ್ಗುಣೇ ಖ್ಯಾಪಿತೇ ತಸ್ಯ ನೈರ್ಗುಣ್ಯ ಶತ ಭಾಗ್ಭವೇತ್ ॥೧೭೮॥
ಗುಣೇ ತು ಖ್ಯಾಪಿತೇ ತಸ್ಯ ಸಾರ್ವಗುಣ್ಯ ಫಲಂ ಭವೇತ್ ।
ಗುರೋರ್ಹಿತಂ ಪ್ರಿಯಂ ಕುರ್ಯಾದಾದಿಷ್ಟೋ ವಾ ನ ವಾ ಸದಾ ॥
ಅಸಮಕ್ಷಂ ಸಮಕ್ಷಂ ವಾ ಗುರೋಃ ಕಾರ್ಯಂ ಸಮಾಚರೇತ್ ।
ಗುರೋ ರ್ಹಿತಂ ಪ್ರಿಯಂ ಕುರ್ಯಾತ್ ಮನೋ ವಾಕ್ಕಾಯ ಕರ್ಮಭಿಃ ॥೧೮೦॥
ಕುರ್ವ ನ್ನುತತ್ಯಧೋ ಗತ್ವಾ ತತ್ರೈವ ಪರಿವರ್ತತೇ ।
ತಸ್ಮಾತ್ಸ ಸರ್ವದೋ ಪಾಸ್ಯೋ ವಂದನೀಯಶ್ಚ ಸರ್ವದಾ ॥೧೮೧॥

---

೧೭೭–೧೭೯. ಹಾಗೆ ಗುರುವಿಗೆ ವಿರೋಧವಾದ ಮಾತನ್ನು ಶಿಷ್ಯನು ಆಡುವುದಾದರೆ ಬಹಳ ಅಜ್ಞಾನವುಳ್ಳವನಾಗಿ ನರಕವನ್ನೇ ಹೊಂದು ವನು. ಎಲೌ ಪಾರ್ವತೀ ದೇವಿಯೇ, ಶಿಷ್ಯನು ಮಾನಸಿಕವಾದ ವ್ಯಾಪಾರ ದಲ್ಲಾಗಲಿ, ದುಡ್ಡುಮುಂತಾದ ವಿಷಯದಲ್ಲಾಗಲಿ, ಮಾತಿನಲ್ಲಾಗಲೀ ಅಥವಾ ಇನ್ಯಾವುದೇ ಕೆಲಸದಲ್ಲಾಗಲಿ, ಯಾವಾಗಲೂ ಗುರುವಿಗೆ ಸುಳ್ಳಾ ಡಬಾರದು. ಗುರುವು ದುರ್ಗುಣವುಳ್ಳವನೆಂದು ಶಿಷ್ಯನು ಹೇಳಿ ಪ್ರಕಟಿಸಿ ದರೆ, ಶಿಷ್ಯನು ಅನೇಕ ದೋಷಗಳಿಗೆ ಗುರಿಯಾಗುವನು. ಹಾಗಲ್ಲದೆ ಶಿಷ್ಯನು ಗುರುವನ್ನು ಸುಗುಣಿಯೆಂದು ಪ್ರಚಾರಮಾಡಿದರೆ, ಶಿಷ್ಯನಿಗೆ ಅನೇಕವಾದ ಸದ್ಗುಣಗಳ ಫಲಗಳು ದೊರಕುವುವು. ಶಿಷ್ಯನು ಗುರುವು ಅಪ್ಪಣೆ ಮಾಡಿರಲಿ ಅಥವಾ ಮಾಡದಿರಲಿ, ಯಾವಾಗಲೂ ಗುರುವು ಒಪ್ಪುವ, ಹಿತವೂ, ಪ್ರಿಯವೂ, ಆಗಿರುವ ಕೆಲಸವನ್ನೇ ಮಾಡುತ್ತಿರ ಬೇಕು.

೧೮೦–೧೮೩. ಗುರುವಿನ ಎದುರಿಗಾಗಲೀ ಅಥವಾ ಬೇರೇ ಕಡೆಯಲ್ಲಾ ಗಲಿ, ಗುರುವಿಗೆ ಇಷ್ಟವಾದ ಕೆಲಸವನ್ನೇ ಮಾಡಬೇಕು. ಮನಸ್ಸು,

ಸಮೀಪಸ್ಥೋಽಸ್ಯಾನುಜ್ಞಾಪ್ಯ ವದೇತ್ತದ್ವಿಮುಖೋ ಗುರುಂ ।
ಏವಮಾಚಾರ ವಾ ನ್ಭಕ್ತೋ ನಿತ್ಯಂ ಜಪ ಪರಾಯಣಃ ॥೧೮೩॥
ಗುರು ಪ್ರಿಯಕರೋ ಮಂತ್ರಂ ವಿನಿಯೋಕ್ತುಂ ತತೋಽರ್ಹತಿ ।
ವಿನಿಯೋಗಂ ಪ್ರವಕ್ಷ್ಯಾಮಿ ಸಿದ್ಧಮಂತ್ರ ಪ್ರಯೋಜನಂ ॥೧೮೪॥
ದೌರ್ಬಲ್ಯಂ ಯಾತಿ ತನ್ಮಂತ್ರಂ ವಿನಿಯೋಗ ಮಜಾನತಃ ।
ಯಸ್ಯ ಯೇನ ನಿಯುಂಜೀತ ಕಾರ್ಯೇಣ ತು ವಿಶೇಷತಃ ॥೧೮೫॥
ವಿನಿಯೋಗಃ ಸ ವಿಜ್ಞೇಯ ಐಹಿಕಾಽಮುಷ್ಮಿಕಂ ಫಲಂ ।
ವಿನಿಯೋಗಜ ಮಾಯುಷ್ಯ ಮಾರೋಗ್ಯಂ ತನು ನಿತ್ಯತಾ ॥೧೮೬॥
ರಾಜ್ಯೈಶ್ವರ್ಯಂ ಚ ವಿಜ್ಞಾನಂ ಸ್ವರ್ಗೋ ನಿರ್ವಾಣ ಏವ ಚ ।
ಪ್ರೋಕ್ಷಣಂ ಚಾಽಭಿ ಷೇಕಂ ಚ ಅಘಮರ್ಷಣ ಮೇವ ಚ ॥೧೮೭॥

---

ಮಾತು, ಶರೀರ, ಇವುಗಳಿಗೆ ಸಂಬಂಧವಾದ ಎಲ್ಲಾ ಕೆಲಸಗಳಲ್ಲಿಯೂ, ಗುರುವಿಗೆ ಇಷ್ಟವಾದದ್ದನ್ನೇ ಮಾಡಬೇಕು. ಹಾಗೇನಾದರೂ ಗುರುವಿಗೆ ವಿರೋಧವಾದದ್ದನ್ನು ಮಾಡಿದರೆ ಶಿಷ್ಯನು ಭಯಂಕರವಾದ ಕೆಳಗಿನ ಲೋಕಗಳನ್ನು ಹೊಂದಿ ಅಲ್ಲಿ ಕಷ್ಟಗಳನ್ನು ಪಡುತ್ತಾನೆ. ಆದ್ದರಿಂದ ಶಿಷ್ಯನಿಗೆ ಗುರುವು ಯಾವಾಗಲೂ ಪೂಜೆಗೆ, ನಮಸ್ಕಾರಕ್ಕೆ ಯೋಗ್ಯನಾಗಿರುತ್ತಾನೆ. ಹತ್ತಿರದಲ್ಲಿರುವಾಗ ಶಿಷ್ಯನು ಗುರುವಿನ ಹಿಂಭಾಗದಲ್ಲಿ ನಿಂತು ಅವನ ಅಪ್ಪಣೆಯನ್ನು ಪಡೆದ ಮೇಲೆಯೇ ಮಾತನಾಡಬೇಕು. ಹೀಗೆ ಶಿಷ್ಯನು ಒಳ್ಳೆಯ ಆಚಾರವುಳ್ಳವನೂ, ಗುರುವಿಗೆ ಭಕ್ತನೂ, ನಿತ್ಯದಲ್ಲಿಯೂ ಜಪವನ್ನು ಮಾಡುವವನೂ, ಆಗಿರಬೇಕು.

೧೮೪–೧೮೭. ಅನಂತರದಲ್ಲಿ ಶಿಷ್ಯನು ಇಷ್ಟವಾದ ಮಂತ್ರವನ್ನೇ, ಗುರುವಿನಿಂದ ಉಪಯೋಗಿಸುವ ವಿಧಾನವನ್ನು ತಿಳಿದು, ಉಪಯೋಗಿಸಬೇಕು ಕಾರ್ಯಸಿದ್ಧಿಯನ್ನುಂಟುಮಾಡುವ ಮಂತ್ರದ ಪ್ರಯೋಜನವನ್ನೂ, ಅದನ್ನು ಉಪಯೋಗಿಸುವ ವಿಧಾನವನ್ನೂ ತಿಳಿಯದಿದ್ದರೆ ಮಂತ್ರವು ಶಕ್ತಿಹೀನವಾಗುತ್ತದೆ. ಯಾವ ಮಂತ್ರವನ್ನು ಹೇಗೆ ಉಪಯೋಗಿಸಬೇಕೋ ಅದೇ ಕಾರ್ಯಕ್ಕೆ ಅದೇ ರೀತಿಯಲ್ಲಿ ಆ ಮಂತ್ರವನ್ನು ಉಪಯೋಗಿಸಬೇಕು.

ಸ್ನಾನೇ ಚ ಸಂಧ್ಯಯೋಶ್ಚೈವ ಕುರ್ಯಾದೇಕಾದಶೇನ ವೈ ।
ಶುಚಿಃ ಪರ್ವತ ಮಾರುಹ್ಯ ಜಪೇಲ್ಲಕ್ಷ ಮತಂದ್ರಿತಃ ॥೧೮೭॥
ಮಹಾನದ್ಯಾಂ ದ್ವಿಲಕ್ಷಂ ತು ದೀರ್ಘಮಾಯುರವಾಪ್ನುಯಾತ್ ।
ದೂರ್ವಾಂಕುರಾಸ್ತಿಲಾ ವಾಣೀ ಗಡೂಚೀ ಘುಟಿಕಾ ತಥಾ ॥೧೮೮॥
ತೇಷಾಂ ತು ದಶಸಾಹಸ್ರಂ ಹೋಮ ಮಾಯುಷ್ಯ ವರ್ಧನಂ ।
ಅಶ್ವತ್ಥ ವೃಕ್ಷಮಾಶ್ರಿತ್ಯ ಜಪೇಲ್ಲಕ್ಷದ್ವಯಂ ಸುಧೀಃ ॥೧೮೯॥
ಶನೈಶ್ಚರ ದಿನೇ ಸ್ಪೃಷ್ಟ್ವಾ ದೀರ್ಘಾಯುಷ್ಯಂ ಲಭೇನ್ನರಃ ।
ಶನೈಶ್ಚರದಿನೇಽಶ್ವತ್ಥಂ ಪಾಣಿಭ್ಯಾಂ ಸಂ ಸ್ಪೃಶೇತ್ಸುಧೀಃ ॥೧೯೦॥
ಜಪೇ ದಷ್ಟೋತ್ತರ ಶತಂ ಸೋಽಪ ಮೃತ್ಯು ಹರೋ ಭವೇತ್ ।
ಆದಿತ್ಯಾಭಿ ಮುಖೋ ಭೂತ್ವಾ ಜಪೇಲ್ಲಕ್ಷ ಮನನ್ಯಧೀಃ ॥೧೯೧॥

---

ಆದೇ ಮಂತ್ರದ ಉಪಯೋಗಕ್ರಮ ಮತ್ತು ಅದು ಇಹಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ, ಸುಫಲವನ್ನು ಕೊಡುವುದು. ಮಂತ್ರದ ಸದುಪಯೋಗದಿಂದಲೇ ಆಯುಸ್ಸು ವೃದ್ಧಿಯಾಗುವುದು. ಆರೋಗ್ಯವೂ, ಶರೀರದಾರ್ಢ್ಯವೂ ಉಂಟಾಗುವುದು. ರಾಜ್ಯ, ಐಶ್ವರ್ಯ, ವಿಶೇಷವಾದ ತಿಳಿವಳಿಕೆ,ಸ್ವರ್ಗ, ಮೋಕ್ಷ, ಎಲ್ಲವೂ. ಸಿಕ್ಕುವುವು. ಮಂತ್ರ ಪ್ರಯೋಗ ಕ್ಕಿಂತ ಮುಂಚೆ, ಪ್ರೋಕ್ಷಣೆ, ಅಭಿಷೇಕ, ಅಘಮರ್ಷಣ, ಎಂಬ ಸೂಕ್ತದ ಪಠನ, ಇವೆಲ್ಲವನ್ನೂ ಮಾಡಬೇಕು.

೧೮೭–೧೮೯. ಹನ್ನೊಂದಾವೃತ್ತಿ ಸ್ನಾನ ಮತ್ತು ಸಂಧ್ಯೆಯನ್ನೂ ಮಾಡಬೇಕು. ಹೀಗೆ ಪರಿಶುದ್ಧನಾಗಿ, ಅಲಸ್ಯವಿಲ್ಲದೇ, ಒಂದು ಲಕ್ಷ ಜಪವನ್ನು ಮಾಡಬೇಕು. ಮಹಾನದಿಯ ದಡದಲ್ಲಿ ಎರಡುಲಕ್ಷ ಜಪ ಮಾಡಿದರೆ ಆಯುಸ್ಸು ಬಹಳ ಹೆಚ್ಚಾಗುವುದು. ದೂರ್ವಾ ಎಂಬ ಹಲ್ಲು, ಎಳ್ಳು, ಬಾಣೀ ಎಂಬ ಹುಲ್ಲು, ಗುಡುಚಿ, ಘುಟಿಕೆ ಎಂಬ ಎಲೆಗಳನ್ನೂ ಹತ್ತುಸಾವಿರ ಹೋಮಮಾಡಿದರೆ ಆಯುಸ್ಸು ವೃದ್ಧಿಯಾಗುವುದು. ವಿದ್ವಾಂಸನು ಆರಳೀ ಮರದ ಕೆಳಗಡೆ ಎರಡುಲಕ್ಷ ಜಪವನ್ನು ಮಾಡಬೇಕು.

೧೯೦–೧೯೨. ಅರಳೀಮರವನ್ನು ವಿದ್ವಾಂಸನಾದವನು ಶನಿವಾರದ

ಅರ್ಕ್ಯ ರಷ್ಟಶತಂ ನಿತ್ಯಂ ಜುಹ್ವರ್ ವ್ಯಾಧೇ ರ್ವಿಮುಚ್ಯತೇ ।
ಸಮಸ್ತವ್ಯಾಧಿ ಶಾಂತ್ಯರ್ಥಂ ಪಲಾಶ ಸಮಿಧೈ ರ್ನರಃ ॥೧೯೩॥
ಹುತ್ವಾ ದಶ ಸಹಸ್ರಂ ತು ನೀರೋಗೀ ಮನುಜೋ ಭವೇತ್ ।
ನಿತ್ಯಮಷ್ಟಶತಂ ಜಪ್ತ್ವಾ ಪಿಬೇದಂಭೋಽರ್ಕ ಸನ್ನಿಧೌ ॥೧೯೪॥
ಔದರ್ಯೈ ರ್ವ್ಯಾಧಿಭಿಃ ಸರ್ವೈಃ ಮಾಸೇನೈಕೇನ ಮುಚ್ಯತೇ ।
ಏಕಾದಶೇನ ಭುಂಜೀಯಾ ದನ್ನಂ ಚೈವಾಽಭಿ ಮಂತ್ರಿತಂ ॥೧೯೫॥
ಭಕ್ಷ್ಯಂ ಚಾಽನ್ಯತ್ತಥಾ ಪೇಯಂ ವಿಷಮಪ್ಯ ಮೃತಂ ಭವೇತ್ ।
ಜಪೇಲ್ಲಕ್ಷಂ ತು ಪೂರ್ವಾಹ್ಣೇ ಹುತ್ವಾಚಾಽಷ್ಟ ಶತೇನ ವೈ ॥೧೯೬॥

---

ದಿನ ಮುಟ್ಟಿದರೆ ದೀರ್ಘಾಯುಸ್ಸನ್ನು ಹೊಂದುವನು. ಆದ್ದರಿಂದ ವಿದ್ವಾಂಸನು ಅರಳೀಮರವನ್ನು ಶನಿವಾರ ಮುಟ್ಟಬೇಕು ಮತ್ತು ಅವನು ಶಿವನ ನೂರೆಂಟು ನಾಮಗಳನ್ನು ಜಪಿಸಬೇಕು. ಹಾಗಿದ್ದರೆ ಅವನಿಗೆ ಅಕಾಲಮರಣವು ತಪ್ಪುವುದು. ಅವನು ಬೇರೆ ಎಲ್ಲೂ ಮನಸ್ಸನ್ನಿಡದೇ ಸೂರ್ಯನಿಗೆ ಎದುರಾಗಿ ಒಂದುಲಕ್ಷ ಜಪವನ್ನು ಮಾಡಬೇಕು. ದಿನಾಗಲೂ ನೂರೆಂಟು ಎಕ್ಕದ ಎಲೆಗಳನ್ನು ಹೋಮ ಮಾಡುವವನು ರೋಗದಿಂದ ಬಿಡುಗಡೆ ಹೊಂದುತ್ತಾನೆ. ಮನುಷ್ಯನು ಎಲ್ಲಾ ರೋಗದ ನಿವಾರಣೆಗಾಗಿ ಮುತ್ತುಗದ ಕೊನೆಗಳಿಂದ ಹೋಮಮಾಡಬೇಕು.

೧೯೩-೧೯೬. ಹತ್ತುಸಾವಿರ ಮುತ್ತುಗದ ಕಡ್ಡಿಗಳನ್ನು ಹೋಮ ಮಾಡಿದರೆ ಮನುಷ್ಯನು ರೋಗವೇ ಇಲ್ಲದವನಾಗುವನು. ದಿನಾಗಲೂ ನೂರೆಂಟು ಸಲ ಜಪಮಾಡಿ, ಸೂರ್ಯನು ಕಾಣಿಸುತ್ತಿರುವಾಗ ನೀರನ್ನು ಕುಡಿಯಬೇಕು. ಹೀಗೆ ಒಂದು ತಿಂಗಳು ಮಾಡಿದರೆ ಹೊಟ್ಟೆಗೆ ಸಂಬಂಧಿಸಿದ ಎಲ್ಲಾ ರೋಗಗಳಿಂದಲೂ ಮನುಷ್ಯನು ಬಿಡುಗಡೆಯನ್ನು ಹೊಂದುತ್ತಾನೆ. ಹನ್ನೊಂದನೆಯ ದಿನ ಮಂತ್ರದಿಂದ ಪರಿಶುದ್ಧವಾದ ಅನ್ನವನ್ನು ಊಟಮಾಡಬೇಕು. ಹಾಗೆಯೇ ಶುದ್ಧ ಭಕ್ಷ್ಯಗಳನ್ನು ಸೇವಿಸಿ, ನೀರನ್ನು ಕುಡಿದರೆ ಇಂಥವನಿಗೆ ವಿಷವೂ ಅಮೃತದಂತೆ ಹಿತಕರವಾಗುವುದು. ಮಧ್ಯಾಹ್ನಕ್ಕಿಂತ ಮುಂಚೆ ನೂರೆಂಟು ಸಲ ಹೋಮಮಾಡಿ, ಒಂದು ಲಕ್ಷಸಲ ಜಪಮಾಡಬೇಕು.

ಸೂರ್ಯಂ ನಿತ್ಯ ಮುಪಸ್ಥಾಯ ಸಮ್ಯಗಾರೋಗ್ಯ ಮಾಪ್ನುಯಾತ್ ।
ನದೀ ತೋಯೇನ ಸಂಪೂರ್ಣಂ ಘಟಂ ಸಂಸ್ಪೃಶ್ಯ ಶೋಭನಂ ॥
ಜಪ್ತ್ವಾಽಯುತಂ ಚ ತತ್ಸ್ನಾನಾತ್ ರೋಗಾಣಾಂ ಭೇಷಜಂ ಭವೇತ್
ಅಷ್ಟಾವಿಂಶ ಜ್ಜಪಿತ್ವಾಽನ್ನ ಮಶ್ನೀಯಾ ದನ್ವಹಂ ಶುಚಿಃ ॥೧೯೭॥
ಹುತ್ವಾ ಚ ತಾವತ್ಪಾಲಾಶೈ ರೇವಂ ಪಾಽರೋಽಗ್ಯ ಮಶ್ನುತೇ ।
ಚಂದ್ರ ಸೂರ್ಯಗ್ರಹೇ ಪೂರ್ವ ಮುಪೋಷ್ಯ ವಿಧಿನಾ ಶುಚಿಃ ॥೧೯೮॥
ಯಾವದ್ಗ್ರಹಣ ಮೋಕ್ಷಂ ತು ತಾವ ನ್ನದ್ಯಾಂ ಸಮಾಹಿತಃ ।
ಜಪೇತ್ಸಮುದ್ರ ಗಾಮಿನ್ಯಾಂ ವಿಮೋಕ್ಷೇ ಗ್ರಹಣಸ್ಯ ತು ॥೧೯೯॥
ಅಷ್ಟೋತ್ತರ ಸಹಸ್ರೇಣ ಪಿಬೇದ್ಬ್ರಾಹ್ಮೀ ರಸಂ ದ್ವಿಜಾಃ ।
ಐಹಿಕಾಂ ಲಭತೇ ಮೇಧಾಂ ಸರ್ವಶಾಸ್ತ್ರಧರಾಂ ಶುಭಾಂ ॥೨೦೦॥

---

೧೯೬–೧೯೮. ಸೂರ್ಯನನ್ನು ಪ್ರತಿದಿನದಲ್ಲೂ ಉಪಾಸನೆಮಾಡಿ, ಮನುಷ್ಯನು ಚೆನ್ನಾಗಿ ಆರೋಗ್ಯವನ್ನು ಹೊಂದಬಹುದು. ನದಿಯ ನೀರಿನಿಂದ ತುಂಬಿದ ಮಂಗಳಕರವಾದ ಕಲಶವನ್ನೂ ಮುಟ್ಟಿಕೊಂಡು ಎರಡು ಸಾವಿರ ಜಪವನ್ನುಮಾಡಿ, ಆ ಕಲಶದ ನೀರಿನಿಂದ ಸ್ನಾನಮಾಡಿದರೆ ರೋಗಗಳೆಲ್ಲವೂ ನಿವಾರಿತವಾಗುವುವು. ಪ್ರತಿ ದಿನದಲ್ಲಿಯೂ ಮನುಷ್ಯನು ಇಪ್ಪತ್ತೆಂಟಾವೃತ್ತಿ ಜಪವನ್ನು ಮಾಡಿ, ಅನ್ನವನ್ನು ಭೋಜನಮಾಡಬೇಕು. ಅಥವಾ ಮುತ್ತುಗದ ಕೊನೆಗಳಿಂದ ಇಪ್ಪತ್ತೆಂಟಾವೃತ್ತಿ ಹೋಮಮಾಡಿ ಭೋಜನಮಾಡಿದರೂ, ಮನುಷ್ಯನು ಆರೋಗ್ಯವನ್ನು ಹೊಂದುತ್ತಾನೆ. ಚಂದ್ರ, ಅಥವಾ ಸೂರ್ಯನ ಗ್ರಹಣವಾದಾಗ ಅದಕ್ಕೆ ಮುಂಚೆಯೇ ಉಪವಾಸಮಾಡಿ, ಮನುಷ್ಯನು ಶುದ್ಧನಾಗಿರಬೇಕು.

೧೯೯–೨೦೧. ಗ್ರಹಣದ ಬಿಡುಗಡೆಯಾಗುವವರೆಗೂ ಶಾಂತಚಿತ್ತನಾಗಿ, ಸಮುದ್ರಕ್ಕೆ ಹೋಗುವ ನದಿಯ ದಡದಲ್ಲಿ ಜಪಮಾಡಬೇಕು. ಗ್ರಹಣದ ಬಿಡುಗಡೆಯಾದ ಅನಂತರದಲ್ಲಿ ಸಾವಿರದೆಂಟು ಶಿವನಾಮಗಳಿಂದ ಪವಿತ್ರವಾದ “ಬ್ರಾಹ್ಮಿ” ಎಂಬ ಲತೆಯ ರಸವನ್ನು ಪಾನಮಾಡಬೇಕು. ಹೀಗೆ ಮಾಡಿದರೆ ಮನುಷ್ಯನು ಮಂಗಳಕರವಾದ, ಈ

**ಸಾರಸ್ವತೀ ಭವೇದ್ದೇವೀ ತಸ್ಯ ವಾಗತಿ ಮಾನುಷೀ ।**
**ಗ್ರಹ ನಕ್ಷತ್ರ ಪೀಡಾಸು ಜಪೇದ್ಭಕ್ತ್ಯಾಽಯುತಂ ನರಃ ॥೨೦೦॥**
**ಹುತ್ವಾ ಚಾಽಷ್ಟ ಸಹಸ್ರಂ ತು ಗ್ರಹ ಪೀಡಾಂ ವ್ಯಪೋಹತಿ ।**
**ದುಃಸ್ವಪ್ನ ದರ್ಶನೇ ಸ್ನಾತ್ವಾ ಜಪೇದ್ವೈ ಚಾಽಯುತಂ ನರಃ ॥**
**ಘೃತೇ ನಾಽಷ್ಟ ಶತಂ ಹುತ್ವಾ ಸದ್ಯಃ ಶಾಂತಿ ರ್ಭವಿಷ್ಯತಿ ।**
**ಚಂದ್ರ ಸೂರ್ಯಗ್ರಹೇ ಲಿಂಗಂ ಸಮಭ್ಯರ್ಚ್ಯ ಯಥಾ ವಿಧಿ ॥೨೦೩॥**
**ಯತ್ಕಿಂಚಿ ತ್ಪ್ರಾರ್ಥಯೇದ್ದೇವಿ ಜಪೇದಯುತ ಮಾದರಾತ್ ।**
**ಸನ್ನಿಧಾವಸ್ಯ ದೇವಸ್ಯ ಶುಚಿಃ ಸಂಯತ ಮಾನಸಃ ॥೨೦೪॥**
**ಸರ್ವಕಾಮಾ ನವಾಪ್ನೋತಿ ಪುರುಷೋ ನಾಽತ್ರ ಸಂಶಯಃ ।**
**ಗಜಾನಾಂ ತುರಗಾಣಾಂ ತು ಗೋಜಾತೀನಾಂ ವಿಶೇಷತಃ ॥೨೦೫॥**

---

ಪ್ರಪಂಚದ ವ್ಯವಹಾರಕ್ಕೆ ಬೇಕಾದ ಎಲ್ಲಾ ಶಾಸ್ತ್ರಗಳಲ್ಲಿಯೂ ಪಾಂಡಿತ್ಯವುಳ್ಳ ಮೇಧಾ ಶಕ್ತಿಯನ್ನು ಹೊಂದುತ್ತಾನೆ. ಇಂತಹವನ ಮಾತಿನಲ್ಲಿ ಅಮಾನುಷವಾದ ಪ್ರತಿಭೆಯೂ ಇರುವುದು ಹೆಚ್ಚೇನು? ಸಾಕ್ಷಾತ್ಸರಸ್ವತಿಯೇ ಅಲ್ಲಿ ಪ್ರಕಾಶಿಸುವಳು. ಗ್ರಹ, ನಕ್ಷತ್ರ, ಇವುಗಳಿಂದ ಸಂಕಟಬಂದಾಗ, ಮನುಷ್ಯನು ಭಕ್ತಿಯಿಂದ ಎರಡು ಸಾವಿರ ಜಪಮಾಡಬೇಕು.

೨೦೧–೨೦೪ ಎಂಟು ಸಾವಿರ ಶಿವ ನಾಮಗಳಿಂದ ಹೋಮ ಮಾಡಿದರೆ ಗ್ರಹಗಳ ಕಾಟವೆಲ್ಲವೂ ನಿವಾರಣೆಯಾಗುವುದು. ಮನುಷ್ಯನು ದುಃಸ್ವಪ್ನವನ್ನು ಕಂಡರೆ, ಅನಂತರದಲ್ಲಿ ಸ್ನಾನಮಾಡಿ ಎರಡು ಸಾವಿರ ಜಪಗಳನ್ನು ಮಾಡಬೇಕು. ಆಮೇಲೆ ಎಂಟುನೂರು ಶಿವ ನಾಮಗಳಿಂದ ತುಪ್ಪದಿಂದ ಹೋಮಮಾಡಿದರೆ ತತ್ಕ್ಷಣವೇ ಎಲ್ಲಕ್ಕೂ ಶಾಂತಿಯಾಗುವುದು. ಚಂದ್ರ,ಸೂರ್ಯರನ್ನೂ,ಗ್ರಹಗಳನ್ನು ಲಿಂಗವನ್ನೂ,ಶಾಸ್ತ್ರೋಕ್ತವಾದ ರೀತಿಯಲ್ಲಿ ಪೂಜಿಸಿ, ಏನನ್ನಾದರೂ ಪ್ರಾರ್ಥಿಸಿ ಕೊಳ್ಳಬಹುದು. ಅನಂತರ ಭಕ್ತಿಯಿಂದ ಎರಡು ಸಾವಿರ ಜಪಮಾಡಬೇಕು. ಶಿವನ ಸನ್ನಿಧಿಯಲ್ಲಿ ಮನಸ್ಸನ್ನು ಹತೋಟಿಯಲ್ಲಿಟ್ಟು ಪರಿಶುದ್ಧನಾಗಿ ಆ ರೀತಿಯಲ್ಲಿ ಜಪಮಾಡಬೇಕು.

೨೦೫–೨೦೭ ಹೀಗೆ ಮಾಡಿದರೆ ಮನುಷ್ಯನು ಎಲ್ಲ ಇಷ್ಟಾರ್ಥಗ

ವ್ಯಾಧ್ಯಾಗಮೇ ಶುಚಿರ್ಭೂತ್ವಾ ಜುಹುಯಾತ್ಸಮಿಧಾಹುತಿಂ ।
ಮಾಸ ಮಭ್ಯರ್ಚ್ಯ ವಿಧಿನಾಽಯುತಂ ಭಕ್ತಿ ಸಮನ್ವಿತಃ ॥೨೦೬॥
ತೇಷಾಂವೃದ್ಧಿಶ್ಚ ಶಾಂತಿಶ್ಚ ಭವಿಷ್ಯತಿ ನ ಸಂಶಯಃ ।
ಉತ್ಪಾತೇ ಶತ್ರು ಬಾಧಾಯಾಂ ಜುಹುಯಾ ದಯುತಂ ಶುಚಿಃ ॥
ಪಾಲಾಶ ಸಮಿಧೈ ರ್ದೇವಿ ತಸ್ಯ ಶಾಂತಿ ರ್ಭವಿಷ್ಯತಿ ।
ಅಭಿಚಾರಿಕ ಬಾಧಾಯಾ ಮೇತದ್ವೇಪಿ ಸಮಾಚರೇತ್. ॥೨೦೮॥
ಪ್ರತ್ಯಗ್ಭವತಿ ತಚ್ಛಕ್ತಿಃ ಶತ್ರೋಃ ಪೀಡಾ ಭವಿಷ್ಯತಿ ।
ವಿದ್ವೇಷಣಾಽರ್ಥಂ ಜುಹುಯಾ ದ್ವೈಭೀತ ಸಮಿಧಾಽಷ್ಟಕಂ ॥

---

ಳನ್ನೂ ಹೊಂದುವುದರಲ್ಲಿ ಸಂದೇಹವಿಲ್ಲ. ಆನೆಗಳಿಗೆ, ಕುದುರೆಗಳಿಗೆ, ಹಸುವೇ ಮುಂತಾದ ಪಶುಗಳಿಗೆ ರೋಗಬಂದಾಗ ಮನುಷ್ಯನು ಶುದ್ಧ ನಾಗಿ, ವಿಶೇಷವಾಗಿ, ಅರಳಿಯಮರದ ಕೊನೆಗಳಿಂದ ಹೋಮಮಾಡ ಬೇಕು. ಭಕ್ತಿಯಿಂದ ಒಂದು ತಿಂಗಳು ಕಾಲ ಶಾಸ್ತ್ರೋಕ್ತಕ್ರಮದಲ್ಲಿ ಎರಡು ಸಾವಿರ ಶಿವನಾಮಗಳಿಂದ ಶಿವನನ್ನು ಪೂಜಿಸಿದರೆ, ಆ ಪಶು ಗಳಿಗೆ ಆರೋಗ್ಯವೂ, ಅವುಗಳ ವೃದ್ಧಿಯೂ, ಅದಕ್ಕೆ ಬಂದಿರಬಹುದಾದ ಎಲ್ಲಾ ವಿಧವಾದ ಕಷ್ಟಗಳ ನಿವಾರಣೆಯೂ ಆಗುವುದು. ಯಾವುದಾದರೂ ಗ್ರಹಗಳಿಂದ ಕಾಟವು ಒದಗಿದಾಗ, ಶತ್ರುವಿನಿಂದ ಕಷ್ಟಬಂದಾಗ, ಮನುಷ್ಯನು ಪರಿಶುದ್ಧನಾಗಿ ಎರಡು ಸಾವಿರ ಶಿವನಾಮಗಳಿಂದ ಹೋಮ ವನ್ನು ಮಾಡಬೇಕು.

೨೦೮–೨೧೦ ಎಲೌ ಪಾರ್ವತೀದೇವಿಯೇ, ಮುತ್ತುಗದ ಕೊನೆಗಳಿಂದ ಹೋಮಮಾಡಿದರೆ ಆ ಕಷ್ಟನಿವಾರಣೆಯಾಗುವುದು. ಮಾಟ, ಕುಶಲ, ಮುಂತಾದುವುಗಳ ಕರ್ಮ ನಿವಾರಣೆ ಯಾಗಬೇಕಾದರೂ, ಹೀಗೆಯೇ ಹೋಮಮಾಡಬೇಕು. ಆಗ ಇದು ತೊಂದರೆಮಾಡುವ ಕಾಟಗಳನ್ನು ತಡೆದು ಅದನ್ನು ಮಾಡಿದ ಶತ್ರುವಿಗೇ ತೊಂದರೆಯನ್ನು ತಿರುಗಿಸಿ ತಂದು ಹಾಕುತ್ತದೆ. ಶತ್ರುಗಳಿಗೆ ವಿರೋಧವನ್ನುಂಟುಮಾಡುವುದಕ್ಕೋಸ್ಕರ 'ವಿಭೀತಕ' ಎಂಬ ಕಡ್ಡಿಯ ಎಂಟು ಕೊನೆಗಳನ್ನು ಹೋಮಮಾಡ ಬೇಕು. ಮಂತ್ರದ ಅಕ್ಷರಗಳನ್ನು ವ್ಯತ್ಯಾಸಮಾಡಿ ಹೇಳುವುದರಿಂದಲೂ, ತೀವ

ಅಕ್ಷರ ಪ್ರಾತಿ ಲೋಹಿತ್ಯೇನ ಆರ್ದ್ರೇಣ ರುಧಿರೇಣ ವಾ ।
ವಿಷೇಣ ರುಧಿರಾಭ್ಯಕ್ತೋ ವಿದ್ವೇಷಣ ಕರಂ ನೃಣಾಂ ॥೨೧೦॥
ಪ್ರಾಯಶ್ಚಿತ್ತಂ ಪ್ರವಕ್ಷ್ಯಾಮಿ ಸರ್ವಪಾಪ ವಿಶುದ್ಧಯೇ ।
ಪಾಪಶುದ್ಧಿರ್ಯಥಾ ಸಮ್ಯಕ್ ಕರ್ತು ಮಭ್ಯುದ್ಯತೋ ನರಃ ॥೨೧೧॥
ಪಾಪಶುದ್ಧಿರ್ಯತಃ ಸಮ್ಯಕ್ ಜ್ಞಾನ ಸಂಪತ್ತಿ ಹೇತುಕೀ ।
ಪಾಪಶುದ್ಧಿರ್ನ ಚೇತ್ಪುಂಸಃ ಕ್ರಿಯಾಃ ಸರ್ವಾಶ್ಚ ನಿಷ್ಫಲಾಃ ॥೨೧೨॥
ಜ್ಞಾನಂ ಚ ಹೀಯತೇ ತಸ್ಮಾ ತ್ಕರ್ತವ್ಯಂ ಪಾಪ ಶೋಧನಂ ।
ವಿದ್ಯಾ ಲಕ್ಷ್ಮ್ಯೋ ವಿಶುದ್ಧ್ಯರ್ಥಂ ಮಾಂ ಧ್ಯಾತ್ವಾಂಜಲಿನಾ ಶುಭೇ ॥
ಶಿವೇನೈಕಾದಶೇ ನಾಽದ್ಭಿ ರಭಿಷಿಂಚೇ ತ್ಸಮಂ ತತಃ ।
ಅಷ್ಟೋತ್ತರ ಶತೇನೈವ ಸ್ನಾಯಾ ತ್ಪಾಪ ವಿಶುದ್ಧಯೇ ॥೨೧೪॥

---

ವಾಗಿರುವ ರಕ್ತವನ್ನು ಶರೀರಕ್ಕೆ ಹಚ್ಚಿಕೊಂಡು,ಅಥವಾ ವಿಷಪೂರಿತವಾಗಿರುವ ರಕ್ತವನ್ನು ಶರೀರಕ್ಕೆ ಹಚ್ಚಿಕೊಂಡು, ಈ ರೀತಿ ಹೋಮಮಾಡಿದರೆ, ಶತ್ರುಗಳಿಗೆ ವಿಶೇಷವಾದ ಕಾಟಗಳು ಉಂಟಾಗುವುವು.

೨೧೧–೨೧೩. ಎಲ್ಲಾ ಪಾಪ ನಿವಾರಣೆಗಾಗಿ ಪ್ರಾಯಶ್ಚಿತ್ತವನ್ನು ಹೇಳುವೆನು ಮನುಷ್ಯನು ಪಾಪ ನಿವಾರಣೆಗಾಗಿ ಪ್ರಯತ್ನಪಡಬೇಕು. ಪಾಪ ನಿವಾರಣೆಯಿಂದಲೇ ಜ್ಞಾನ ವೃದ್ಧಿಯಾಗುವುದು. ಪಾಪ ನಿವಾರಣೆಯಾಗದಿದ್ದರೆ ಮನುಷ್ಯನ ಕರ್ಮಗಳೆಲ್ಲವೂ ವ್ಯರ್ಥವಾಗುವುವು. ಪಾಪವಿದ್ದರೆ ಮನುಷ್ಯನ ತಿಳಿವಳಿಕೆ ಎಲ್ಲವೂ ನಷ್ಟವಾಗುವುದು. ಆದ್ದರಿಂದ ಮನುಷ್ಯನು ಪಾಪಗಳನ್ನು ಕಳೆದುಕೊಳ್ಳಬೇಕು. ಮತ್ತು ಮಂಗಳವನ್ನುಂಟುಮಾಡುವ ವಿದ್ಯೆ ಮತ್ತು ಲಕ್ಷ್ಮೀ ದೇವಿಯರನ್ನೂ, ನನ್ನನ್ನೂ ಮನುಷ್ಯನು ಪಾಪನಿವಾರಣೆಗಾಗಿ ಕೈಮುಗಿದು ಧ್ಯಾನ ಮಾಡಬೇಕು.

೨೧೪–೨೧೬. ಹನ್ನೊಂದಾವೃತ್ತಿ ಎಲ್ಲಾ ಕಡೆಯಲ್ಲಿಯೂ ನೀರಿನಿಂದ ಅಭಿಷೇಕ ಮಾಡಬೇಕು. ನೂರೆಂಟು ಶಿವನಾಮಗಳಿಂದ ಪಾಪ ನಿವಾರಣೆಗಾಗಿ ಶಿವನಿಗೆ ಸ್ನಾನ ಮಾಡಿಸಬೇಕು. ಹೀಗೆ ಮಾಡಿದರೆ, ಎಲ್ಲಾ ತೀರ್ಥಯಾತ್ರೆಗಳನ್ನು ಮಾಡುವುದರಿಂದ ಬರುವ ಪುಣ್ಯವೂ ಬರು

ಸರ್ವತೀರ್ಥ ಫಲಂ ತಚ್ಚ ಸರ್ವಪಾಪ ಹರಂ ಶುಭಂ ।
ಸಂಧ್ಯೋಪಾಸನ ವಿಚ್ಛೇದೇ ಜಪೇ ದಷ್ಟ ಶತಂ ನರಃ ॥೨೧೫॥
ವಿಡ್ವರಾ ಹೈಶ್ಚ ಚಾಂಡಾಲೈಃ ದುರ್ಜನೈಃ ಕುಕ್ಕುಟೈರಪಿ ।
ಸ್ಪೃಷ್ಟಮನ್ನಂ ನ ಭುಂಜೀತ ಭುಕ್ತ್ವಾ ಚಾಽಷ್ಟಶತಂ ಜಪೇತ್ ॥
ಬ್ರಹ್ಮಹತ್ಯಾ ವಿಶುದ್ಧ್ಯರ್ಥಂ ಜಪೇಲ್ಲಕ್ಷಾಽಯುತಂ ನರಃ ।
ಪಾತಕಾನಾಂ ತದರ್ಧಂ ಸ್ಯಾನ್ನಾಽತ್ರ ಕಾರ್ಯಾ ವಿಚಾರಣಾ ॥೨೧೭॥
ಉಪ ಪಾತಕ ದುಷ್ಕೃತಾನಾಂ ತದರ್ಧಂ ಪರಿಕೀರ್ತಿತಂ ।
ಶೇಷಾಣಾ ಮಪಿ ಪಾಪಾನಾಂ ಜಪೇತ್ಪಂಚ ಸಹಸ್ರಕಂ ॥೨೧೮॥
ಆತ್ಮಬೋಧ ಪರಂ ಗುಹ್ಯಂ ಶಿವಬೋಧ ಪ್ರಕಾಶಕಂ ।
ಶಿವಃ ಸ್ಯಾತ್ಸ ಜಪೇನ್ಮಂತ್ರಂ ಪಂಚ ಲಕ್ಷ ಮನಾಕುಲಃ ॥೨೧೯॥

---

ವುದಲ್ಲದೆ, ಎಲ್ಲಾ ಪಾಪಗಳ ನಿವಾರಣೆಯಾಗಿ, ಮಂಗಳವುಂಟಾಗುವುದು. ಮನುಷ್ಯನು ಸಂಧ್ಯಾಕಾಲದಲ್ಲಿ ಅಕಸ್ಮಾತ್ ಶಿವನ ಪೂಜೆಯನ್ನು ಮಾಡದೆ ತಪ್ಪಿದರೆ ಎಂಟುನೂರು ಜಪವನ್ನು ಮಾಡಬೇಕು. ಹಂದಿಗಳು, ಕೆಟ್ಟ ಜನರು, ಚಂಡಾಲರು, ಕೋಳಿಗಳು, ಇವುಗಳಿಂದ ಮುಟ್ಟಲ್ಪಟ್ಟ ಅನ್ನವನ್ನು ಭೋಜನ ಮಾಡಬಾರದು. ಅಕಸ್ಮಾತ್ ತಿಂದರೆ ಒಂದು ನೂರು ಎಂಟು ಜಪಗಳನ್ನು ಮಾಡಬೇಕು.

೨೧೭–೨೧೯. ಮನುಷ್ಯನು ಬ್ರಾಹ್ಮಣನನ್ನು ಕೊಂದ ಪಾಪ ನಿವಾರಣೆಗಾಗಿ ನೂರು ಕೋಟಿ ಶಿವನಾಮ ಜಪವನ್ನು ಮಾಡಬೇಕು. ಅದಕ್ಕಿಂತ ಸ್ವಲ್ಪ ಕಡಿಮೆಯಾದ ಪಾಪವನ್ನು ಮಾಡಿದ್ದರೆ, ಅರ್ಧ ಕೋಟಿ ಸಲ ಶಿವನಾಮ ಜಪವನ್ನು ಮಾಡಬೇಕು. ಇದರಲ್ಲಿ ಸಂದೇಹ ಪಡಬಾರದು. ಈ ಪಾಪಗಳಿಗಿಂತಲೂ ಕಡಿಮೆ ಪಾಪವನ್ನು ಮಾಡಿದ್ದರೆ, ಆದರಲ್ಲಿ ಅರ್ಧವಾದ ಕಾಲು ಕೋಟಿ ಜಪವನ್ನೂ, ಅದಕ್ಕಿಂತಲೂ ಕಡಿಮೆ ಪಾಪಗಳಿಗೆ ಐದು ಸಾವಿರ ಜಪವನ್ನೂ ಮಾಡಬೇಕು. ರಹಸ್ಯವಾಗಿ ಶಿವನನ್ನು ಪುನಃ ಪುನಃ ಜಪಿಸುವಿಕೆಯು ಆತ್ಮಜ್ಞಾನವನ್ನು ಉಂಟುಮಾಡುವುದೂ, ಶಿವನ ಜ್ಞಾನವನ್ನುಂಟುಮಾಡುವುದೂ ಆಗಿದೆ. ಸಮಾಧಾನ ಚಿತ್ತದಿಂದ ಐದುಲಕ್ಷ ಜಪಮಾಡಿದವನು ಶಿವನೇ ಆಗುವುದರಲ್ಲಿ ಸಂದೇಹವೇ ಇಲ್ಲವು.

**ಪಂಚ ವಾಯು ಜಯಂ ಭದ್ರೇ ಪ್ರಾಪ್ನೋತಿ ಮನುಜಃ ಸುಖಂ ।**
**ಜಪ್ತೇಚ್ಚ ಪಂಚ ಲಕ್ಷಂ ತು ವಿಗೃಹೀತೇಂದ್ರಿಯಃ ಶುಚಿಃ ॥೨೨೦॥**
**ಪಂಚೇಂದ್ರಿಯಾಣಾಂ ವಿಜಯೋ ಭವಿಷ್ಯತಿ ವರಾನನೇ ।**
**ಧ್ಯಾನಯುಕ್ತೋ ಜಪೇದ್ಯಸ್ತು ಪಂಚ ಲಕ್ಷ ಮನಾಕುಲಃ ॥೨೨೧॥**
**ವಿಷಯಾಣಾಂ ಚ ಪಂಚಾನಾಂ ಜಯಂ ಪ್ರಾಪ್ನೋತಿ ಮಾನವಃ ।**
**ಚತುರ್ಥಂ ಪಂಚ ಲಕ್ಷಂ ತು ಯೋ ಜಪೇದ್ಭಕ್ತಿ ಸಂಯುತಃ ॥**
**ಭೂತಾನಾ ಮಿಹ ಪಂಚಾನಾಂ ವಿಜಯಂ ಮನುಜೋ ಲಭೇತ್ ।**
**ಚತುರ್ಲಕ್ಷಂ ಜಪೇದ್ಯಸ್ತು ಮನಃ ಸಂಯಮ್ಯ ಯತ್ನತಃ ॥೨೨೩॥**
**ಸಮ್ಯಗ್ವಿಜಯ ಮಾಪ್ನೋತಿ ಕರಣಾನಾಂ ವರಾನನೇ ।**
**ಪಂಚ ವಿಂಶತಿ ಲಕ್ಷಾಣಾಂ ಜಪೇನ ಕಮಲಾ ನನೇ ॥೨೨೪॥**

---

೨೨೦–೨೨೨. ಎಲೌ ಮಂಗಳಕರಳೇ, ಮನುಷ್ಯನು ಜಿತೇಂದ್ರಿಯನಾಗಿ, ಪರಿಶುದ್ಧನಾಗಿ, ಐದುಲಕ್ಷ ಜಪಮಾಡಿದರೆ ಐದು ಬಗೆಯ ಪ್ರಾಣವೇ ಮುಂತಾದ ವಾಯುಗಳನ್ನು ಜಯಿಸಲು ಶಕ್ತನಾಗಿ ಸುಖವನ್ನು ಅನುಭವಿಸುವನು. ಎಲೌ ಸುಂದರ ಮುಖಿಯೇ, ಧ್ಯಾನಮಾಡುತ್ತಾ ಐದುಲಕ್ಷ ಜಪವನ್ನು ಸಮಾಧಾನ ಚಿತ್ತದಿಂದ ಯಾವನು ಮಾಡುವನೋ ಅವನಿಗೆ ಐದು ಇಂದ್ರಿಯಗಳ ಜಯವು ಸಾಧ್ಯವಾಗುವುದು. ಯಾವ ಮನುಷ್ಯನು ಭಕ್ತಿಯಿಂದ ನಾಲ್ಕೈದು ಲಕ್ಷ ಜಪವನ್ನು ಮಾಡುತ್ತಾನೋ ಅವನು ಎಲ್ಲಾ ಇಂದ್ರಿಯಗಳನ್ನೂ ಹತೋಟಿಯಲ್ಲಿಡುವ ಶಕ್ತಿಯನ್ನು ಹೊಂದುತ್ತಾನೆ.

೨೨೩–೨೨೫. ಯಾವ ಮನುಷ್ಯನು ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು, ಪ್ರಯತ್ನ ಪೂರ್ವಕವಾಗಿ ನಾಲ್ಕು ಲಕ್ಷ ಜಪಮಾಡುವುದಾದರೆ, ಭೂಮಿಯೇ ಮೊದಲಾದ ಐದು ಭೂತಗಳನ್ನೂ ಹತೋಟಿಯಲ್ಲಿಟ್ಟುಕೊಳ್ಳಬಹುದು. ಎಲೌ ಸುಂದರಮುಖಿಯೇ, ಅಂಥವನು ಎಲ್ಲಾ ವಿಧವಾದ ಜಪ ಫಲವನ್ನೂ ಹೊಂದುವನು ಎಲೌ ಕಮಲಮುಖಿಯೇ, ಇಪ್ಪತ್ತೈದುಲಕ್ಷ ಜಪದಿಂದ ಮನುಷ್ಯನಿಗೆ ತನ್ನ ಇಂದ್ರಿಯಗಳ ಮೇಲೆ, ಸಂಪೂರ್ಣ ಹತೋಟಿಯುಂಟಾಗುವುದು. ಅಲ್ಲದೆ ಪ್ರಪಂಚಕ್ಕೆಮೂಲ

**ಪಂಚ ವಿಂಶತಿ ತತ್ವಾನಾಂ ವಿಜಯಂ ಮನುಜೋ ಲಭೇತ್ ।**
**ಮಧ್ಯರಾತ್ರೇಽತಿ ನಿರ್ವಾತೇ ಜಪೇದಯುತ ಮಾದರಾತ್ ॥೨೨೫॥**

**ಬ್ರಹ್ಮ ಸಿದ್ಧಿ ಮವಾಪ್ನೋತಿ ವ್ರತೇನಾಽನೇನ ಸುಂದರಿ ।**
**ಜಪೇ ಲ್ಲಕ್ಷ ಮನಾಲಸ್ಯೋ ನಿರ್ವಾತೇ ಧ್ವನಿ ವರ್ಜಿತೇ ॥೨೨೬॥**

**ಮಧ್ಯ ರಾತ್ರೇ ಚ ಶಿವಯೋಃ ಪಶ್ಯತ್ಯೇವ ನ ಸಂಶಯಃ ।**
**ಅಂಧ ಕಾರ ವಿನಾಶಶ್ಚ ದೀಪಸ್ಯೇವ ಪ್ರಕಾಶನಂ ॥೨೨೭॥**

**ಹೃದಯಾಂತ ರ್ಬಹಿರ್ವಾಽಪಿ ಭವಿಷ್ಯತಿ ನ ಸಂಶಯಃ ।**
**ಸರ್ವ ಸಂಪ ತ್ಸಮೃದ್ಧ್ಯರ್ಥಂ ಜಪೇ ದಯುತ ಮಾತ್ಮವಾನ್ ॥೨೨೮॥**

**ಸಬೀಜ ಸಂಪುಟಂ ಮಂತ್ರಂ ಶತಲಕ್ಷಂ ಜಪೇಚ್ಛುಚಿಃ ।**
**ಮತ್ಸಾಯುಜ್ಯ ಮವಾಪ್ನೋತಿ ಭಕ್ತಿಮಾ ನ್ನಿಮತಃ ಪರಂ ॥೨೨೯॥**

---

ಕಾರಣವಾದ ಇಪ್ಪತ್ತೈದು ತತ್ವಗಳ ಮೇಲೆಯೂ ಹತೋಟಿಯುಂಟಾಗುವುದು. ಮನುಷ್ಯನು ಸ್ವಲ್ಪವೂ ಗಾಳಿಯಿಲ್ಲದಿರುವ ರಾತ್ರಿಯಲ್ಲಿ ಎರಡು ಸಹಸ್ರ ಜಪವನ್ನು ಭಕ್ತಿಯಿಂದ ಮಾಡಬೇಕು.

೨೨೬–೨೨೮. ಎಲೌ ಸುಂದರಿಯೇ, ಮನುಷ್ಯನು ಈ ವ್ರತವನ್ನು ಮಾಡುವುದರಿಂದ, ಬ್ರಹ್ಮನ ಸ್ವರೂಪವನ್ನೇ ಹೊಂದುವನು. ಉಪಾಸಕನು ಆಲಸ್ಯವಿಲ್ಲದೇ ಗಾಳಿಯಿಲ್ಲದ, ಶಬ್ದವೂ ಇಲ್ಲದ ಪ್ರದೇಶದಲ್ಲಿ ಒಂದು ಲಕ್ಷ ಜಪಮಾಡಬೇಕು. ಹೀಗೆ ಮಾಡಿದರೆ ಅವನು ಮಧ್ಯ ರಾತ್ರಿಯಲ್ಲಿ ಶಿವ ಪಾರ್ವತಿಯರ ದರ್ಶನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಅವನಿಗೆ ಅಜ್ಞಾನವೆಂಬ ಕತ್ತಲು ತೊಲಗಿ, ಮನಸ್ಸಿನ ಒಳಗೂ ಮತ್ತು ಹೊರಗಡೆಯೂ, ಜ್ಞಾನ, ಮತ್ತು ತೇಜಸ್ಸುಗಳೆಂಬ ಪ್ರಕಾಶವುಂಟಾಗುವುದರಲ್ಲಿ ಸಂದೇಹವಿಲ್ಲ. ಸತ್ಪುರುಷನು ಎಲ್ಲಾ ವಿಧವಾದ ಸಂಪತ್ತಿನ ಸಮೃದ್ಧಿಯಾಗುವುದಕ್ಕೋಸ್ಕರ ಎರಡು ಸಾವಿರ ಜಪವನ್ನು ಮಾಡಬೇಕು.

೨೨೯–೨೩೧. ಮನುಷ್ಯನು ಪರಿಶುದ್ಧನಾಗಿ ಬೀಜ ಸಂಪುಟಗಳೊಡನೆ ನೂರು ಲಕ್ಷ ಜಪಮಾಡಬೇಕು. ಹೀಗೆ ಭಕ್ತಿಯಿಂದ ಮಾಡಿದ ಮನುಷ್ಯನು ನನ್ನೊಂದಿಗೆ ಐಕ್ಯವಾಗುತ್ತಾನೆ. ಅವನಿಗೆ ಇದಕ್ಕಿಂತಲೂ

**ಇತಿ ತೇ ಸರ್ವ ಮಾಹಾತ್ಮ್ಯಂ ಪಂಚಾಕ್ಷರ ವಿಧಿ ಕ್ರಮಂ ।**
**ಯಃ ಪಠೇ ಚ್ಛೃಣುಯಾ ದ್ವಾಽಪಿ ಸ ಯಾತಿ ಪರಮಾಂ ಗತಿಂ ॥**
**ಶ್ರಾವಯೇಚ್ಚ ದ್ವಿಜಾನ್ ಶುದ್ಧಾ ನ್ಪಂಚಾಕ್ಷರ ವಿಧಿ ಕ್ರಮಂ ।**
**ದೈವೇ ಕರ್ಮಣಿ ಪಿತ್ರ್ಯೇ ವಾ ಶಿವಲೋಕೇ ಮಹೀಯತೇ ॥೨೩॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಪಂಚಾಕ್ಷರಮಂತ್ರ ಮಹಿಮ ವಿಚಾರ ವರ್ಣನಂ ನಾಮ ಪಂಚಾಶೀತಿ ತಮೋಽಧ್ಯಾಯಃ**

---

ಹೆಚ್ಚಾದದ್ದು ಏನು ಬೇಕು? ಈ ರೀತಿಯಾಗಿ ಪಂಚಾಕ್ಷರ ಮಂತ್ರದ ಜಪದ ವಿಧಾನವನ್ನು ಎಲ್ಲವನ್ನೂ ನಿನಗೆ ಚೆನ್ನಾಗಿ ಹೇಳಿದ್ದೇನೆ. ಯಾವ ಮನುಷ್ಯನು ಇದನ್ನು ಕೇಳುವನೋ ಅವನೂ ಕೂಡ ಸದ್ಗತಿಯನ್ನು ಹೊಂದುತ್ತಾನೆ. ಯಾವ ಮಾನವನು ಯೋಗ್ಯರಾದ ಬ್ರಾಹ್ಮಣರಿಗೆ ಈ ಪಂಚಾಕ್ಷರ ಮಂತ್ರದ ವಿಧಾನ ಕ್ರಮವನ್ನು ಹೇಳುತ್ತಾನೋ, ದೇವ ಕಾರ್ಯಗಳಲ್ಲಾಗಲಿ ಅಥವಾ ಪಿತೃಕಾರ್ಯಗಳಲ್ಲಾಗಲಿ, ಇದನ್ನು ಜಪಿಸುತ್ತಾನೋ ಅವನು ಶಿವನ ಲೋಕದಲ್ಲಿ ಮಾನಿತನಾಗುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಪಂಚಾಕ್ಷರ ಮಂತ್ರದ ಮಹಿಮೆಯನ್ನು ವರ್ಣಿಸಿರುವ ಎಂಬತ್ತೈದನೆಯ ಅಧ್ಯಾಯವು ಮುಗಿದುದು.

## ಅಥ ಲಿಂಗಮಹಾಪುರಾಣೇ ಪೂರ್ವಭಾಗೇ
## ಷಡಶೀತಿತಮೋಽಧ್ಯಾಯಃ

॥ ಋಷಯ ಊಚುಃ ॥

ಜಪಾಚ್ಛ್ರೇಷ್ಠತಮಂ ಪ್ರಾಹು ಬ್ರಾಹ್ಮಣಾ ದಗ್ಧ ಕಿಲ್ಬಿಷಾಃ ।
ವಿರಕ್ತಾನಾಂ ಪ್ರಬುದ್ಧಾನಾಂ ಧ್ಯಾನಯಜ್ಞಂ ಸು ಶೋಭನಂ ॥ ೧ ॥
ತಸ್ಮಾದ್ವದಸ್ವ ಸೂತಾದ್ಯ ಧ್ಯಾನಯಜ್ಞ ಮಶೇಷತಃ ।
ವಿಸ್ತರಾತ್ಸರ್ವ ಯತ್ನೇನ ವಿರಕ್ತಾನಾಂ ಮಹಾತ್ಮನಾಂ ॥ ೨ ॥
ತೇಷಾಂ ತದ್ವಚನಂ ಶ್ರುತ್ವಾ ಮುನೀನಾಂ ದೀರ್ಘ ಸತ್ರಿಣಾಂ ।
ರುದ್ರೇಣ ಕಥಿತಂ ಪ್ರಾಹ ಗುಹಾಂ ಪ್ರಾಪ್ಯ ಮಹಾತ್ಮನಾಂ ॥ ೩ ॥
ಸಂಹೃತ್ಯ ಕಾಲಕೂಟಾಖ್ಯಂ ವಿಷಂ ವೈ ವಿಶ್ವಕರ್ಮಣಾ ।

---

ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತಾರನೆಯ ಅಧ್ಯಾಯವು.

೧–೩. ಋಷಿಗಳು ಹೇಳಿದರು :—ಓ ಸೂತಮಹರ್ಷಿಯೇ, ಪಾಪರಹಿತರಾದ ಬ್ರಾಹ್ಮಣರು ವೈರಾಗ್ಯವನ್ನು ಹೊಂದಿರುವ, ಜ್ಞಾನಿಗಳಾದ ಜನರಿಗೆ, ಮಂಗಳಕರವಾದ, ಧ್ಯಾನರೂಪವಾದ ಯಾಗವು ಜಪಕ್ಕಿಂತಲೂ ಅತ್ಯಂತ ಶ್ರೇಷ್ಠವೆಂದು ಹೇಳುತ್ತಾರೆ. ಆದ್ದರಿಂದ ವೈರಾಗ್ಯವುಳ್ಳ, ಮಹಾತ್ಮರಾದ ಜನರು ಮಾಡುವ ಶಿವನ ಧ್ಯಾನರೂಪವಾದ ಯಾಗದ ಸ್ವರೂಪವನ್ನು ತಾವು ಪ್ರಯತ್ನ ಪೂರ್ವಕವಾಗಿ, ಸಂಪೂರ್ಣವಾಗಿ, ದಯವಿಟ್ಟು ನಮಗೆ ತಿಳಿಸಬೇಕು. ಋಷಿಗಳ ಆ ಮಾತನ್ನು ಕೇಳಿ ಶಿವನು, ಮಹಾತ್ಮರೂ, ದೊಡ್ಡ ಯಾಗವನ್ನು ಮಾಡಿದವರೂ, ಆದ ಋಷಿಗಳ ಗುಹೆ ಎಂದರೆ ಹೃದಯಕ್ಕೆ ಹೋಗಿ, ಅವರಿಗೆ ತಿಳಿಯುವಂತೆ ಧ್ಯಾನರೂಪವಾದ ಯಾಗಸ್ವರೂಪವನ್ನು ಹೇಳಲಾರಂಭಿಸಿದನು.

೪–೬. ಪ್ರಪಂಚದ ಸೃಷ್ಟಿಕರ್ತನಾದ ಶಿವನು ಕಾಲಕೂಟವೆಂಬ ವಿಷವನ್ನು ನಾಶಮಾಡಿ, ಅನಂತರ ಮೇರುಪರ್ವತದ ಗುಹೆಗೆ ಹೋಗಿದ್ದನು.

॥ ಸೂತ ಉವಾಚ ॥

ಗುಹಾಂ ಪ್ರಾಪ್ಯ ಸುಖಾ ಸೀನಂ ಭವಾನ್ಯಾ ಸಹ ಶಂಕರಂ ॥ ೪ ॥
ಮುನಯಃ ಸಂಶಿತಾಽತ್ಮಾನಃ ಪ್ರಣೇಮುಸ್ತಂ ಗುಹಾಽಽಶ್ರಯಂ ।
ಅಸ್ತು ವಂಶ್ಚ ತತಃ ಸರ್ವೇ ನೀಲ ಕಂಠ ಮುಮಾಪತಿಂ ॥ ೫ ॥
ಅತ್ಯುಗ್ರಂ ಕಾಲ ಕೂಟಾಖ್ಯಂ ಸಂಹೃತಂ ಭಗವಂ ಸ್ತ್ವಯಾ ।
ಅತಃ ಪ್ರತಿಷ್ಠಿತಂ ಸರ್ವಂ ತ್ವಯಾ ದೇವ ವೃಷಧ್ವಜ ॥ ೬ ॥
ತೇಷಾಂ ತದ್ವಚನಂ ಶ್ರುತ್ವಾ ಭಗವಾ ನ್ನೀಲ ಲೋಹಿತಃ ।
ಪ್ರಹಸ ನ್ನಾಹ ವಿಶ್ವಾತ್ಮಾ ಸನಂದನ ಪುರೋಗಮಾನ್ ॥ ೭ ॥
ಕಿಮನೇನ ದ್ವಿಜ ಶ್ರೇಷ್ಠಾ ವಿಷಂ ವಕ್ಷ್ಯೇ ಸು ದಾರುಣಂ ।
ಸಂಹರೇ ತ್ತದ್ವಿಷಂ ಯಸ್ತು ಸ ಸಮರ್ಥೋ ಹ್ಯನೇನ ಕಿಂ ॥ ೮ ॥

---

ಸೂತನು ಹೇಳಿದನು: ಮೇರು ಪರ್ವತದ ಗುಹೆಗೆ ಪಾರ್ವತಿಯೊಂದಿಗೆ ಬಂದು ಕೂತಿರುವ ಶಿವನನ್ನು ನೋಡಿ, ಸಂತೋಷಗೊಂಡು ಋಷಿಗಳು ನಮಸ್ಕರಿಸಿದರು. ಕಪ್ಪಾದ ಕತ್ತುಳ್ಳವನೂ, ಪಾರ್ವತೀ ಪತಿಯೂ ಆದ ಶಿವನನ್ನು ಆ ಮೇಲೆ ಎಲ್ಲರೂ ಸ್ತೋತ್ರ ಮಾಡಿದರು. ಓ ಪೂಜ್ಯನಾದ ಶಿವನೇ, ಬಹಳ ಭಯಂಕರವಾದ, ಕಾಲಕೂಟವೆಂಬ ಹೆಸರುಳ್ಳ ವಿಷವು ನಿನ್ನಿಂದ ನಾಶಮಾಡಲ್ಪಟ್ಟಿತು. ಓ ಧರ್ಮವೇ ಬಾವುಟವಾಗಿ ಉಳ್ಳ ಶಿವನೇ, ಆದ್ದರಿಂದ ನಿನ್ನಿಂದ ಎಲ್ಲವೂ ರಕ್ಷಿಸಲ್ಪಟ್ಟಿತು.

೭–೮. ಪೂಜ್ಯನಾದ, ಪ್ರಪಂಚದ ಸ್ವರೂಪನಾದ ಶಿವನು ಅವರ ಮಾತನ್ನು ಕೇಳಿ, ನಗುತ್ತಾ ಸನಂದನನೇ ಮೊದಲಾದ ಋಷಿಗಳನ್ನು ಕುರಿತು ಹೀಗೆ ಹೇಳಿದನು. ಎಲೈ ಬ್ರಾಹ್ಮಣ ಶ್ರೇಷ್ಠರೇ, ಈ ಕಾಲ ಕೂಟದ ವಿಷಯ ಹಾಗಿರಲಿ. ಇದಕ್ಕಿಂತಲೂ ಬಹಳ ಭಯಂಕರವಾದ ವಿಷದ ವಿಷಯುವನ್ನು ಹೇಳುವೆನು! ಆ ವಿಷವನ್ನು ಯಾವನು ನಾಶ ಮಾಡುವನೋ ಅವನೇ ಶಕ್ತನು. ಆದ್ದರಿಂದ ಕಾಲಕೂಟ ವಿಷದ ನಾಶವು ಅತಿಶಯವಾದದ್ದೇನು? ನಿಜವಾಗಿ ವಿಚಾರಮಾಡಿದರೆ ಕಾಲ

ನ ವಿಷಂ ಕಾಲ ಕೂಟಾಽಖ್ಯಂ ಸಂಸಾರೋ ವಿಷಮುಚ್ಯತೇ ।
ತಸ್ಮಾತ್ಸರ್ವ ಪ್ರಯತ್ನೇನ ಸಂಹರೇತ ಸು ದಾರುಣಂ ॥ ೯ ॥

ಸಂಸಾರೋ ದ್ವಿವಿಧಃ ಪ್ರೋಕ್ತಃ ಸ್ವಾಧಿ ಕಾರಾಽನು ರೂಪತಃ ।
ಪುಂಸಾಂ ಸಂಮೂಢ ಚಿತ್ತಾನಾಂ ಅಸಂಕ್ಲೇಣಃ ಸು ದಾರುಣಃ॥೧೦॥

ಈಷಣಾ ರಾಗ ದೋಷೇಣ ಸರ್ಗೋ ಜ್ಞಾನೇನ ಸುವ್ರತಾಃ ।
ತದ್ವ ಶಾ ದೇವ ಸರ್ವೇಷಾಂ ಧರ್ಮಾಧರ್ಮೌ ನ ಸಂಶಯಃ ॥೧೧॥

ಅಸನ್ನಿಕೃಷ್ಟೇ ತ್ವರ್ಥೇಽಪಿ ಶಾಸ್ತ್ರಂ ತ ಚ್ಛ್ರವಣಾ ತ್ಸತಾಂ ।
ಬುದ್ಧಿ ಮುತ್ಪಾದಯ ತ್ಯೇವ ಸಂಸಾರೇ ವಿದುಷಾಂ ದ್ವಿಜಾಃ ॥೧೨॥

ತಸ್ಮಾ ದ್ದೃಷ್ಟಾಽನುಶ್ರವಿಕಂ ದುಷ್ಟ ಮಿತ್ಯುಭಯಾಽತ್ಮಕಂ ।
ಸಂ ತ್ಯಜೇ ತ್ಸರ್ವ ಯತ್ನೇನ ವಿರಕ್ತಃ ಸೋಽಭಿಧೀಯತೇ ॥೧೩॥

---

ಕೂಟವು ವಿಷವಲ್ಲ. ಸಂಸಾರವೇ ವಿಷವೆಂದು ತಿಳಿಯಿರಿ. ಆದ್ದರಿಂದ ಮನುಷ್ಯನು ಸರ್ವ ಪ್ರಯತ್ನದಿಂದಲೂ, ಬಹಳ ಭಯಂಕರವಾದ, ಸಂಸಾರವೆಂಬ ವಿಷವನ್ನು ನಾಶಮಾಡಬೇಕು.

೧೦–೧೩. ಜನರ ಯೋಗ್ಯತಾನುಸಾರವಾಗಿ ಸಂಸಾರವು ರಾಜಸ, ತಾಮಸ,ವೆಂದು ಎರಡು ವಿಧವಾಗಿದೆ. ಅಜ್ಞಾನಿಗಳಿಗೆ ತಾಮಸ ಸಂಸಾರವು ಮುಗಿಯದೇ ಭಯಂಕರವಾಗಿರುತ್ತದೆ. ಇಚ್ಛೆ ಮತ್ತು ಮೋಹದ ದೋಷ ಗಳಿಂದಾದ ಸೃಷ್ಟಿಯ ಕಾರಣದ ತಿಳಿವಳಿಕೆಯಿಂದ ಧರ್ಮ ಮತ್ತು ಅಧರ್ಮಗಳ ಸ್ವರೂಪಗಳನ್ನು ಪ್ರತ್ಯೇಕಿಸುವುದಕ್ಕೆ ಸಾಧ್ಯವಾಗುವು ದಾದರೂ, ಎಲೈ ಬ್ರಾಹ್ಮಣರೇ, ಇಂದ್ರಿಯಗಳಿಗೆ ಗೋಚರವಾಗದಿರುವ ವಿಷಯಗಳಲ್ಲಿಯೂ ಶಾಸ್ತ್ರವು ತಿಳಿವಳಿಕೆಯನ್ನುಂಟುಮಾಡುತ್ತದೆ. ಇಂಥಾ ಶಾಸ್ತ್ರಗಳನ್ನು ಕೇಳುವುದರಿಂದ ಸತ್ಪುರುಷರುಗಳಿಗೂ ಸಂಸಾರದಲ್ಲಿ ಮನಸ್ಸುಂಟಾಗುತ್ತದೆ. ಆದ್ದರಿಂದ ವೈರಾಗ್ಯವುಳ್ಳ ಮನುಷ್ಯನು ಕಾಣುವ ಈ ಪ್ರಪಂಚದ ವಿಷಯದಲ್ಲಿಯೂ, ಕಾಣಿಸದ ಪರಲೋಕದ ವಿಷಯ ದಲ್ಲಿಯೂ, ಈ ರಾಜಸ ಸಂಸಾರದಲ್ಲಿ ಸಕಲ ಪ್ರಯತ್ನದಿಂದಲೂ ನಿಜವಾದ ವಿರಕ್ತನು ಆಸಕ್ತಿಯನ್ನು ತೊರೆಯಬೇಕು.

ಶಾಸ್ತ್ರ ಮಿತ್ಯುಚ್ಯತೇಃ ಭಾಗಂ ಶ್ರುತೇಃ ಕರ್ಮಸುತದ್ದ್ವಿಜಾಃ ।
ಮೂರ್ಧಾನಂ ಬ್ರಹ್ಮಣಃ ಸಾರಂ ಋಷೀಣಾಂ ಕರ್ಮಣಃ ಫಲಂ ॥

ನನು ಸ್ವಭಾವಃ ಸರ್ವೇಷಾಂ ಕಾಮೋ ದೃಷ್ಟೋ ನ ಚಾಽನ್ಯಥಾ ।
ಶ್ರುತಿಃ ಪ್ರವರ್ತಿಕಾ ತೇಷಾ ಮಿತಿ ಕರ್ಮಣ್ಯ ತ ದ್ವಿದಃ ॥೧೫॥

ನಿವೃತ್ತಿ ಲಕ್ಷಣೋ ಧರ್ಮಃ ಸಮುಥಾನಾ ಮಿಹೋಚ್ಯತೇ ।
ತಸ್ಮಾ ದಜ್ಞಾನ ಮೂಲೋ ಹಿ ಸಂಸಾರಃ ಸರ್ವ ದೇಹಿನಾಂ ॥೧೬॥

ಕಲಾ ಸಂಶೋಷ ಮಾಯಾತಿ ಕರ್ಮಣಾಽನ್ಯ ಸ್ವಭಾವತಃ ।
ಸಕಲ ಸ್ತ್ರಿವಿಧೋ ಜೀವೋ ಜ್ಞಾನಹೀನಸ್ತ್ವ ವಿದ್ಯಯಾ ॥೧೭॥

---

೧೪. ಎಲೈ ಬ್ರಾಹ್ಮಣರೇ, ವೇದದಲ್ಲಿ ಹೇಳಿರುವ ಕರ್ಮಕ್ಕೆ ಅಂಗ ವಲ್ಲದ, ಮೂರು ವೇದಭಾಗಗಳಲ್ಲಿ ಶಿರಸ್ಸಿನಂತೆ ಮುಖ್ಯ ಭಾಗವಾದ, ಅತೀಂದ್ರಿಯಾರ್ಥಗಳನ್ನೂ ಬಲ್ಲ ಋಷಿಗಳು ಮನಗಂಡ ವಿಷಯಗಳಲ್ಲಿ ಉತ್ತಮವಾದ, ನಿಷ್ಕಾಮ ಕರ್ಮಾನುಷ್ಠಾನಕ್ಕೆ ಕಡೆಯ ಫಲವಾದ ತತ್ತ್ವ ಜ್ಞಾನವನ್ನುಂಟುಮಾಡುವ, ವೇದಾಂತ, ಉಪನಿಷತ್ತೆಂಬ ಅಧ್ಯಾತ್ಮ ಶಾಸ್ತ್ರವೇ ನಿಜವಾದ ಶಾಸ್ತ್ರವು.

೧೫-೧೭. ಎಲ್ಲಾ ಜೀವರಿಗೂ ಆಶೆಯೆಂಬುದು ಸ್ವಭಾವವಾಗಿಯೇ ಉಂಟಾಗುವುದು. ಇದನ್ನು ವೇದಗಳು ಹೇಳಿಕೊಡಬೇಕಾಗಿಲ್ಲ. ಆದರೆ ವೇದದ ತಾತ್ಪರ್ಯವನ್ನು ತಿಳಿಯದ ಅಜ್ಞಾನಿಗಳು ವೇದಗಳೇ ಮನುಷ್ಯನಿಗೆ ಕರ್ಮಫಲದಲ್ಲಿ ಆಶೆ ಹುಟ್ಟುವಂತೆ ಮಾಡುವುವೆಂದು ಹೇಳುತ್ತಾರೆ. ಆದರೆ ಇದು ವಾಸ್ತವವಲ್ಲ. ವೈರಾಗ್ಯವುಳ್ಳ ಜನರಿಗೆ ಆಶೆಗಳಿಂದ ನಿವೃತ್ತಿರೂಪ ವಾದ ಧರ್ಮವು ಹೇಳಲ್ಪಟ್ಟಿದೆ. ಆದ್ದರಿಂದ ಎಲ್ಲಾ ಜೀವರಿಗೂ ಸಂಸಾರವು ಅಜ್ಞಾನಮೂಲಕವಾಗಿ ಉಂಟಾಗಿದೆ. ವೇದದಲ್ಲಿ ಹೇಳಲ್ಪಟ್ಟ, ನಿಷ್ಕಾಮ ಕರ್ಮಮಾರ್ಗದಿಂದ ಜೀವನ ವ್ಯಾಮೋಹವು ತೊಲಗುತ್ತದೆ. ಫಲಕಾಮನೆಯಿಂದ ಕೂಡಿದ ಕರ್ಮದಿಂದ ವಿಷಯ ವ್ಯಾಮೋಹವುಳ್ಳ ಜೀವನು ಮೂರು ವಿಧವಾಗಿ ಹೇಳಲ್ಪಟ್ಟದ್ದಾನೆ. ಅಜ್ಞಾನದಿಂದ ಅವನ ಸಹಜವಾದ ತಿಳಿವಳಿಕೆಯು ಮುಚ್ಚಿಹೋಗಿ ಕಾಮ್ಯಕರ್ಮಾಧೀನನಾಗಿರುತ್ತಾನೆ.

ನಾರಕೀ ಪಾಪ ಕೃತ್ಸ್ವರ್ಗೀ ಪುಣ್ಯ ಕೃತ್ಪುಣ್ಯ ಗೌರವಾತ್ ।
ವ್ಯತಿ ಮಿಶ್ರೇಣ ವೈ ಜೀವ ಶ್ಚತುರ್ಧಾಸಂ ವ್ಯವಸ್ಥಿತಃ ॥೧೮॥
ಉದ್ಭಿಜ್ಜಃ ಸ್ವೇದಜ ಶ್ಚೈವ ಅಂಡಜೋ ವೈ ಜರಾಯುಜಃ ।
ಏವಂ ವ್ಯವಸ್ಥಿತೋ ದೇಹೀ ಕರ್ಮಣಾಽಜ್ಞೋ ಹ್ಯನಿರ್ವೃತಃ ॥೧೯॥
ಪ್ರಜಯಾ ಕರ್ಮಣಾ ಮುಕ್ತಿರ್ಧನೇನ ಚ ಸತಾಂ ನ ಹಿ ।
ತ್ಯಾಗೇ ನೈಕೇನ ಮುಕ್ತಿಃ ಸ್ಯಾತ್ತದ ಭಾವಾದ್ಭ್ರಮತ್ಯಸೌ ॥೨೦॥
ಏವ ಮಜ್ಞಾನದೋಷೇಣ ನಾನಾ ಕರ್ಮ ವಶೇನ ಚ ।
ಷಟ್ಕೌಶಿಕಂ ಸಮುದ್ಭೂತಂ ಭಜತ್ಯೇಷ ಕಲೇಬರಂ ॥೨೧॥
ಗರ್ಭೇ ದುಃಖಾನ್ಯನೇಕಾನಿ ಯೋನಿ ಮಾರ್ಗೇ ಚ ಭೂತಲೇ ।
ಕೌಮಾರೇ ಯೌವನೇ ಚೈವ ವಾರ್ಧಕೇ ಮರಣೇಽಪಿ ವಾ ॥೨೨॥

---

೧೮–೨೦. ಪಾಪವನ್ನು ಮಾಡಿದ ಜೀವಿಯು ನರಕ ಲೋಕವಾಸಿಯಾಗಿಯೂ, ಪುಣ್ಯದ ಪ್ರಭಾವದಿಂದ ಸ್ವರ್ಗವಾಸಿಯಾಗಿಯೂ, ಪುಣ್ಯ, ಪಾಪ ಇವೆರಡರ ಮಿಶ್ರಣದಿಂದ,ಮಿಶ್ರಜೀವಿಮಾನವನಾಗಿಯೂ,ಜೀವನು ಮೂರುಬಗೆಯಾಗಿ ವಿಭಾಗಿಸಲ್ಪಟ್ಟಿದ್ದಾನೆ. ಹಾಗೆಯೇ ಪ್ರಾಣಿಗಳೂ ಸಹ ಉದ್ಭಿಜ್ಜ, ಸ್ವೇದಜ, ಅಂಡಜ, ಜರಾಯುಜ, ಎಂದು ನಾಲ್ಕು ವಿಧವಾಗಿ ವಿಂಗಡಿಸಲ್ಪಟ್ಟಿವೆ. ಹೀಗೆ ಅಜ್ಞಾನದಿಂದ ಕರ್ಮಮಾಡುತ್ತಾ ಜೀವನು ಸುಖವಿಲ್ಲದವನೆಂದು ನಿಶ್ಚಯಿಸಲ್ಪಟ್ಟಿದ್ದಾನೆ. ಸತ್ಪುರುಷರಿಗೆ, ಸಂತಾನ, ಕರ್ಮಗಳು, ಐಶ್ವರ್ಯ, ಇವೊಂದರಿಂದಲೂ ಮೋಕ್ಷವಿಲ್ಲ. ಪ್ರಪಂಚದ ವ್ಯಾಮೋಹವನ್ನು ಬಿಟ್ಟು ಬಿಟ್ಟರೇ ಮೋಕ್ಷವು ಸಿಕ್ಕುವುದು. ಹಾಗೆ ವ್ಯಾಮೋಹವನ್ನು ಬಿಡದೇ ಇರುವುದರಿಂದ ಜೀವನು ಹೀಗೆಯೇ ಸಂಸಾರ ಚಕ್ರದಲ್ಲಿ ಸುತ್ತುತ್ತಾ ಇರುವನು.

೨೧–೨೨. ಹೀಗೆ ಜೀವನಿಗೆ ಅಜ್ಞಾನದ ದೋಷದಿಂದಲೂ, ಅನೇಕ ಪ್ರಾಚೀನಕರ್ಮಗಳ ಮೂಲಕವೂ, ಆರು ಕೋಶಗಳಿಂದ, ನರ, ಮೂಳೆ, ಮಜ್ಜೆ, ಚರ್ಮ, ಮಾಂಸ, ರಕ್ತಗಳಿಂದ ಕೂಡಿದ ಶರೀರವು ದೊರೆಯುವುದು. ಜೀವನು ಗರ್ಭದಲ್ಲೇ ಅನೇಕ ದುಃಖಗಳನ್ನೂ, ಹುಟ್ಟುವಾಗ ಅನೇಕ

**ವಿಚಾರತಃ ಸತಾಂ ದುಃಖಂ ಸ್ತ್ರೀ ಸಂಸರ್ಗಾದಿಭಿ ರ್ದ್ವಿಜಾಃ ।**
**ದುಃಖೇ ನೈಕೇನ ವೈ ದುಃಖಂ ಪ್ರಶಾಮ್ಯಂ ತೀ ಹ ದುಃಖಿನಃ॥೨೩॥**

**ನ ಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣ ವರ್ತ್ಮೇವ ಭೂಯ ಏವಾಽಭಿ ವರ್ಧತೇ ॥೨೪॥**

**ತಸ್ಮಾ ದ್ವಿಚಾರತೋ ನಾಸ್ತಿ ಸಂಯೋಗಾದಪಿ ವೈ ನೃಣಾಂ ।**
**ಅರ್ಥಾನಾ ಮಾರ್ಜನೇಽಪ್ಯೇವಂ ಪಾಲನೇ ಚ ವ್ಯಯೇ ತಥಾ ॥೨೫॥**

**ಪೈಶಾಚೇ ರಾಕ್ಷಸೇ ದುಃಖಂ ಯಾಕ್ಷೇ ಚೈವ ವಿಚಾರತಃ ।**
**ಗಾಂಧರ್ವೇ ಚ ತಥಾ ಚಾಂದ್ರೇ ಸೌಮ್ಯಲೋಕೇ ದ್ವಿಜೋತ್ತಮಾಃ॥**

---

ದುಃಖಗಳನ್ನೂ, ಬಾಲ್ಯ, ಯೌವನ, ವೃದ್ಧಾಪ್ಯ ಮತ್ತು ಮರಣ ಕಾಲಗಳಲ್ಲಿಯೂ, ಅನೇಕ ದುಃಖಗಳನ್ನು ಅನುಭವಿಸುತ್ತಾನೆ. ಎಲೈ ಬ್ರಾಹ್ಮಣರೇ, ವಿಚಾರಮಾಡಿದರೆ ಹೆಂಗುಸಿನ ಸಂಬಂಧ ಮುಂತಾದ್ದರಿಂದಲೂ, ಜೀವನು ದುಃಖವನ್ನೇ ಅನುಭವಿಸುತ್ತಾನೆ. ಈ ರೀತಿಯಾಗಿ ಜೀವನು ಸಂಸಾರದಲ್ಲಿ ಎಲ್ಲೆಲ್ಲಿಯೂ ದುಃಖವನ್ನೇ ಅನುಭವಿಸುತ್ತಾನೆ.

೨೪–೨೬. ಆಶೆಗಳನ್ನೆಲ್ಲವನ್ನೂ ಅನುಭವಿಸಿದರೂ ತೃಪ್ತಿಯಾಗುವುದೇ ಇಲ್ಲ. ಬೆಂಕಿಗೆ ತುಪ್ಪವನ್ನು ಹಾಕುತ್ತಿದ್ದರೆ ಅದು ಇನ್ನೂ ಹೆಚ್ಚಾಗಿಯೇ ಉರಿಯುವಂತೆ ಆಶೆಗಳನ್ನು ಅನುಭವಿಸುವುದರಿಂದ ಅವು ಇನ್ನೂ ಹೆಚ್ಚಾಗುವುವು. ಆದ್ದರಿಂದ ವಿಚಾರಮಾಡಿದರೆ ವಿಷಯೇಂದ್ರಿಯಗಳ ಸಂಬಂಧದಿಂದಲೂ, ಸೌಖ್ಯವು ಬರುವುದೇ ಇಲ್ಲ. ದುಡ್ಡನ್ನು ಗಳಿಸುವುದರಲ್ಲಾಗಲಿ, ಅದನ್ನು ಕಾಪಾಡುವುದರಲ್ಲಾಗಲಿ, ಅದು ವೆಚ್ಚವಾಗಿ ಹೋದರೂ, ಎಲ್ಲಾ ವಿಧವಾಗಿಯೂ ಮನುಷ್ಯನಿಗೆ ದುಃಖವೇ ಆಗುವುದು ಪಿಶಾಚಿ ದೇಹದಲ್ಲಾಗಲಿ, ರಾಕ್ಷಸ, ಯಕ್ಷ, ಗಂಧರ್ವ, ಚಂದ್ರ, ಇವೆಲ್ಲಕ್ಕೂ ಸಂಬಂಧಪಟ್ಟ ಶರೀರಗಳನ್ನು ಹೊಂದಿ, ಆ ಲೋಕಗಳಿಗೆ ಹೋದರೂ ಮನುಷ್ಯನಿಗೆ ದುಃಖವು ಹೋಗುವುದೇ ಇಲ್ಲ.

ಪ್ರಾಜಾಪತ್ಯೇ ತಥಾ ಬ್ರಾಹ್ಮೇ ಪ್ರಾಕೃತೇ ಪೌರುಷೇ ತಥಾ ।
ಕ್ಷಯ ಸಾಽತಿಶಯಾದ್ಯೈಸ್ತು ದುಃಖೈ ರ್ದುಃಖಾನಿ ಸುವ್ರತಾಃ ॥
ತಾನಿ ಭಾಗ್ಯಾನ್ಯ ಶುದ್ಧಾನಿ ಸಂತ್ಯಜೇಚ್ಚ ಧನಾನಿ ಚ ।
ತಸ್ಮಾ ದಷ್ಟಗುಣಂ ಭೋಗಂ ತಥಾ ಷೋಡಶಧಾ ಸ್ಥಿತಂ ॥೨೮॥
ಚತುರ್ವಿಂಶತ್ಪ್ರಕಾರೇಣ ಸಂಸ್ಥಿತಂ ಚಾಽಪಿ ಸುವ್ರತಾಃ ।
ದ್ವಾತ್ರಿಂಶದ್ಭೇದ ಮನಘಾ ಶ್ಚತ್ವಾರಿಂಶದ್ಗುಣಂ ಪುನಃ ॥೨೯॥
ತಥಾಽಷ್ಟ ಚತ್ವಾರಿಂಶ ಚ್ಚ ಷಟ್ಪಂಚಾ ಶತ್ಪ್ರಕಾರಕಃ ।
ಚತುಃ ಷಷ್ಟಿ ವಿಧಂ ಚ್ಚೈವ ದುಃಖಮೇವ ವಿವೇಕಿನಃ ॥೩೦॥
ಪಾರ್ಥಿವಂ ಚ ತಥಾಽಪ್ಯಂ ಚ ತೈಜಸಂ ಚ ವಿಚಾರತಃ ।
ವಾಯವ್ಯಂ ಚ ತಥಾ ವ್ಯೊಮ ಮಾನಸಂ ಚ ಯಥಾ ಕ್ರಮಂ ॥
ಆಭಿಮಾನಿಕ ಮಪ್ಯೇವಂ ಬೌದ್ಧಂ ಪ್ರಾಕೃತ ಮೇವ ಚ ।
ದುಃಖಮೇವ ನ ಸಂದೇಹೋ ಯೋಗಿನಾಂ ಬ್ರಹ್ಮವಾದಿನಾಂ ॥

---

೨೭-೨೯. ಎಲೈ ಬ್ರಾಹ್ಮಣ ಶ್ರೇಷ್ಠರೇ, ಬ್ರಹ್ಮನ ಲೋಕದಲ್ಲಾಗಲಿ, ಪ್ರಕೃತಿಗೆ ಸಂಬಂಧಪಟ್ಟ ಅಥವಾ ಪುರುಷನಿಗೆ ಸಂಬಂಧಪಟ್ಟ ಶರೀರದ ಭೋಗದಲ್ಲಾಗಲಿ, ನಾಶ, ತಾರತಮ್ಯ, ಪಾಪ ಮುಂತಾದ ದೋಷಗಳಿರುವುದರಿಂದ ಜೀವನಿಗೆ ದುಃಖವೇ ಆಗುತ್ತದೆ. ಆದ್ದರಿಂದ ಇಂಥಾ ಪುಣ್ಯಗಳನ್ನೂ, ಐಶ್ವರ್ಯವನ್ನೂ, ಎಲ್ಲವನ್ನೂ, ಮನುಷ್ಯನು ಬಿಟ್ಟು ಬಿಡಬೇಕು. ಆದ್ದರಿಂದ ಎಂಟು ಗುಣಗಳುಳ್ಳ ಭೋಗಗಳೂ, ಹದಿನಾರು ಭೋಗಗಳೂ, ಇಪ್ಪತ್ತುನಾಲ್ಕು ಬಗೆಯ ಭೋಗಗಳೂ,ಜೀವನಿಗೆ ದುಃಖವನ್ನೇ ಉಂಟು ಮಾಡುತ್ತವೆ.

೩೦-೩೨. ಹಾಗೆಯೇ ನಲವತ್ತೆಂಟು ಭೋಗಗಳನ್ನೂ,ವಿವೇಕಿಯಾದ ಮನುಷ್ಯನು ದುಃಖದಾಯಕಗಳೆಂದು ತಿಳಿಯುತ್ತಾನೆ. ಭೂಮಿಗೆ, ನೀರಿಗೆ, ಅಗ್ನಿಗೆ, ಗಾಳಿಗೆ, ಆಕಾಶಕ್ಕೆ, ಮನಸ್ಸಿಗೆ, ಅಹಂಕಾರಕ್ಕೆ, ಬುದ್ಧಿಗೆ ಪ್ರಕೃತಿಗೆ, ಸಂಬಂಧಪಟ್ಟ, ಸಕಲ ಭೋಗಗಳನ್ನೂ ಬ್ರಹ್ಮಜ್ಞಾನಿಗಳಾದ ಯೋಗಿಗಳು ದುಃಖದಾಯಕಗಳೆಂದು ತಿಳಿಯಬೇಕು. ಸಂಶಯವಿಲ್ಲವು.

ಗೌಣಂ ಗಣೇಶ್ವರಾಣಾಂ ಚ ದುಃಖಮೇವ ವಿಚಾರತಃ ।
ಆದೌ ಮಧ್ಯೇ ತಥಾ ಚಾಽಂತೇ ಸರ್ವಲೋಕೇಷು ಸರ್ವದಾ ॥೩೩॥

ವರ್ತಮಾನಾನಿ ದುಃಖಾನಿ ಭವಿಷ್ಯಾಣಿ ಯಥಾ ತಥಂ ।
ದೋಷ ದುಷ್ಟೇಷು ದೇಶೇಷು ದುಃಖಾನಿ ವಿವಿಧಾನಿ ಚ ॥೩೪॥

ನ ಭಾವಯಂತ್ಯತೀತಾನಿ ಹ್ಯಜ್ಞಾನೇ ಜ್ಞಾನಮಾನಿನಃ ।
ಕ್ಷುದ್ವ್ಯಾಧೇಃ ಪರಿಹಾರಾರ್ಥಂ ನ ಸುಖಾಯಾಽನ್ನ ಮುಚ್ಯತೇ ॥

ಯಥೇ ತರೇಷಾಂ ರೋಗಾಣಾ ಮೌಷಧಂ ನ ಸುಖಾಯ ತತ್ ।
ಶೀತೋಷ್ಣ ವಾತ ವರ್ಷಾದ್ಯೈ ಸ್ತತ್ತತ್ಕಾಲೇಷು ದೇಹಿನಾಂ ॥೩೬॥

ದುಃಖಮೇವ ನ ಸಂದೇಹೋ ನ ಜಾನಂತಿ ಹ್ಯ ಪಂಡಿತಾಃ ।
ಸ್ವರ್ಗೇಽಪ್ಯೇವಂ ಮುನಿಶ್ರೇಷ್ಠಾ ಹ್ಯವಿಶುದ್ಧಿ ಕ್ಷಯಾದಿಭಿಃ ॥೩೭॥

---

೩೩–೩೫. ವಿಚಾರಮಾಡಿ ನೋಡಿದ್ದಾದರೆ ಗಣಾಧಿಪತಿಗಳ ಗುಣಗಳಿಂದ ಕೂಡಿದ ಭೋಗವೂ ದುಃಖವನ್ನೇ ಉಂಟುಮಾಡುವುದು. ಆದಿಯಲ್ಲಿ, ಮಧ್ಯದಲ್ಲಿ, ಕೊನೆಯಲ್ಲಿ, ಎಲ್ಲಾ ಲೋಕಗಳಲ್ಲಿ, ಎಲ್ಲಾ ಕಾಲಗಳಲ್ಲಿ ಎಂದರೆ ಭೂತಕಾಲ ವರ್ತಮಾನಕಾಲಗಳಲ್ಲಿ, ಅಥವಾ ಭವಿಷ್ಯತ್ತಿನಲ್ಲಿ, ಜೀವನಿಗೆ ದುಃಖವೇ ಆಗುತ್ತದೆ. ಅನೇಕ ದೋಷಗಳಿಂದ ಕೂಡಿದ ಪ್ರದೇಶಗಳಲ್ಲಿ ಅನೇಕ ಬಗೆಯ ದುಃಖಗಳಾಗುವುದರಲ್ಲಿ ಸಂದೇಹವೇ ಇಲ್ಲ. ಹೀಗೆ ಜೀವರು ಅಜ್ಞಾನದಿಂದ ಕಷ್ಟಗಳಿಗೆ ಗುರಿಯಾಗಿದ್ದರೂ, ತಾವು ಜ್ಞಾನಿಗಳೆಂಬ ಹೆಮ್ಮೆಯಿಂದ ಹಿಂದೆ ಕಳೆದ ದುಃಖವನ್ನು ಭಾವಿಸುವುದೇ ಇಲ್ಲ! ಅನ್ನವು ಹಸಿವೆಂಬ ರೋಗವನ್ನು ತಾತ್ಕಾಲಿಕವಾಗಿ ಹೋಗಲಾಡಿಸುತ್ತದೆಯೇ ಹೊರತು ಸುಖವನ್ನುಂಟು ಮಾಡುವುದೆಂದು ತಿಳಿಯಬೇಡಿ.

೩೬–೩೮. ಅಲ್ಲದೆ ಶೀತ, ಉಷ್ಣ, ವಾತ, ಮುಂತಾದ್ದರಿಂದ ಉಂಟಾದ ರೋಗಗಳಿಗೆ ಔಷಧಿಯನ್ನು ತೆಗೆದುಕೊಂಡರೂ, ಔಷಧಿಯು ಹೇಗೆ ರುಚಿಕರ ವಾಗಿರುವುದಿಲ್ಲವೋ ಹಾಗೆ ಜೀವರಿಗೆ ಈ ಭೋಗಗಳಿಂದ ದುಃಖವೇ ಉಂಟಾಗುತ್ತದೆ. ಇವೆಲ್ಲವೂ ದುಃಖ ಮಯವಾಗಿದ್ದಾಗ್ಯೂ ಅಜ್ಞಾನಿಗಳು ಇದನ್ನು ಹಾಗೆ ತಿಳಿಯುವುದಿಲ್ಲ. ಸ್ವರ್ಗದಲ್ಲಿಯೂ ಜೀವನಿಗೆ

ರೋಗೈರ್ನಾನಾ ವಿಧೈರ್ಗ್ರಸ್ತಾ ರಾಗದ್ವೇಷ ಭಯಾದಿಭಿಃ ।
ಛಿನ್ನಮೂಲ ತರೋರ್‍ಯದ್ವ ದವಶಃ ಪತತಿ ಕ್ಷಿತೌ ॥೩೮॥

ಪುಣ್ಯ ವೃಕ್ಷಕ್ಷಯಾ ತ್ತದ್ವತ್ ಗಾಂ ಪತಂತಿ ದಿವೌ ಕಸಃ ।
ದುಃಖಾಭಿಲಾಷ ನಿಷ್ಠಾನಾಂ ದುಃಖ ಭೋಗಾದಿ ಸಂಪದಾಂ ॥೩೯॥

ಅಸ್ಮಾತ್ತು ಪತತಾಂ ದುಃಖಂ ಕಷ್ಟಂ ಸ್ವರ್ಗಾದ್ದಿವೌಕಸಾಂ ।
ನರಕೇ ದುಃಖಮೇವಾತ್ರ ನರಕಾಣಾಂ ನಿಷೇವಣಾತ್ ॥೪೦॥

ವಿಹಿತಾ ಕರಣಾ ಚ್ಚೈವ ವರ್ಣಿನಾಂ ಮುನಿಪುಂಗವಾಃ ॥೪೧॥

ಯಥಾ ಮೃಗೋ ಮೃತ್ಯು ಭಯಸ್ಯ ಭೀತೋ ।
ಉಚ್ಛಿನ್ನವಾಸೋ ನ ಲಭೇತ ನಿದ್ರಾಂ ॥
ಏವಂ ಯತಿರ್ಧ್ಯಾನ ಪರೋ ಮಹಾತ್ಮಾ ।
ಸಂಸಾರ ಭೀತೋ ನ ಲಭೇತ ನಿದ್ರಾಂ ॥೪೨॥

---

ತಾರತಮ್ಯ, ನಾಶ, ಮುಂತಾದ್ದರಿಂದ ಕೊನೆಗೆ ದುಃಖವೇ ಉಂಟಾಗಿ ಅನೇಕ ಬಗೆಯ ರಾಗದ್ವೇಷ ಮೊದಲಾದ ರೋಗಗಳಿಂದಲೂ, ಕಾಮ, ಕ್ರೋಧವೇ ಮೊದಲಾದ ದೋಷಗಳಿಂದಲೂ ದುಃಖವೇ ವುಂಟಾಗಿ, ಬುಡವನ್ನು ಕತ್ತರಿಸಿದರೆ ಮರವು ಹೇಗೋ ಹಾಗೆ ಕರ್ಮ ಪರಾಧೀನನಾದ ಜೀವನು ಆ ಪುಣ್ಯವೂ ಮುಗಿಯಲು ಭೂಮಿಗೆ ಬೀಳುವನು.

೩೯. ಹಾಗೆಯೇ ಜೀವರು ಕೆಲವು ದಿವಸ ಸ್ವರ್ಗಲೋಕದಲ್ಲಿ ದೇವತೆಗಳಾಗಿದ್ದು, ಪುಣ್ಯವೆಂಬ ಮರವು ನಾಶವಾಕೂಡಲೇ ಸ್ವರ್ಗದಿಂದ ಭೂಮಿಗೆ ಬೀಳುತ್ತಾರೆ. ದುಃಖವನ್ನುಂಟುಮಾಡುವ ಆಶೆಗಳನ್ನು ಹೊಂದಿದ್ದುದರಿಂದಲೇ ಆ ಜೀವರೂ ಹೀಗೆ ಕೊನೆಯಲ್ಲಿ ದುಃಖವನ್ನೇ ಉಂಟುಮಾಡುವ ಭೋಗಗಳನ್ನು ಅನುಭವಿಸುತ್ತಾರೆಂಬುದನ್ನು ತಿಳಿಯ ಬೇಕು.

೪೦–೪೨. ದೇವತೆಗಳಾಗಿದ್ದು, ಪುಣ್ಯವು ಕ್ಷಯಿಸಿದ ಕಾರಣ ಸ್ವರ್ಗ ದಿಂದ ಬೀಳುವ ಈ ಜನರಿಗೆ ಕಷ್ಟವು ಹೇಳಲಸದಳವು. ನರಕ ಲೋಕಕ್ಕೆ ಇವರು ಬಿದ್ದಾಗ ನರಕಲೋಕದ ಕಷ್ಟಗಳನ್ನು ಅನುಭವಿಸುವುದರಿಂದ ಇನ್ನೂ ಹೆಚ್ಚಾಗಿ ದುಃಖವಾಗುವುದು. ಎಲೈ ಋಷಿಶ್ರೇಷ್ಠರೇ, ಬ್ರಹ್ಮಚಾರಿಗಳು ಕೂಡ ತಮ್ಮ ಕರ್ತವ್ಯವನ್ನು ನಡೆಸದಿದ್ದರೆ ಇದೇ ರೀತಿ ದುಃಖವಾಗುತ್ತದೆ. ಹೇಗೆ ಮೃಗವು ಸಾವಿನ ಭಯದಿಂದ ಕೂಡಿರುವಾಗ ತನ್ನ ವಾಸಸ್ಥಳವನ್ನು

**ಕೀಟ ಪಕ್ಷಿಮೃಗಾಣಾಂ ಚ ಪಶೂನಾಂ ಗಜ ವಾಜಿನಾಂ ।**
**ದೃಷ್ಟಮೇವಾಽಸುಖಂ ತಸ್ಮಾತ್ತ್ಯಜತಃ ಸುಖಮುತ್ತಮಂ ॥೪೩॥**
**ವೈಮಾನಿಕಾನಾಂ ಮಪ್ಯೇವಂ ದುಃಖಂ ಕಲ್ಪಾಽಧಿ ಕಾರಿಣಾಂ ।**
**ಸ್ಥಾನಾಭಿ ಮಾನಿನಾಂ ಚೈವ ಮನ್ವಾದೀನಾಂ ಚ ಸುವ್ರತಾಃ ॥೪೪॥**
**ದೇವಾನಾಂ ಚೈವ ದೈತ್ಯಾನಾ ಮನ್ಯೋನ್ಯ ವಿಜಗೀಷಯಾ ।**
**ದುಃಖಮೇವ ನೃಪಾಣಾಂ ಚ ರಾಕ್ಷಸಾನಾಂ ಜಗತ್ತ್ರಯೇ ॥೪೫॥**
**ಶ್ರಮಾಽರ್ಥ ಮಾಶ್ರಮ ಶ್ಚಾಽಪಿ ವರ್ಣಾನಾಂ ಪರಮಾರ್ಥತಃ ।**
**ಆಶ್ರಮೈ ರ್ನ ಚ ದೇವೈಶ್ಚ ಯಜ್ಞೈಃ ಸಾಂಖ್ಯೈ ರ್ವ್ರತೈ ಸ್ತಥಾ ॥**
**ಉಗ್ರೈಸ್ತಪೋಭಿ ರ್ವಿವಿಧೈ ರ್ದಾನೈ ರ್ನಾನಾ ವಿಧೈರಪಿ ।**
**ನ ಲಭಂತೇ ತಥಾಽಽತ್ಮಾನಂ ಲಭಂತೇ ಜ್ಞಾನಿನಃ ಸ್ವಯಂ ॥೪೭॥**

---

ಬಿಟ್ಟು, ಅಲ್ಲಿ ಇಲ್ಲಿ ಓಡಾಡುತ್ತಾ ನಿದ್ರೆಮಾಡಲಾರದೋ ಹಾಗೆಯೇ ಸಂಸಾರದಿಂದ ಭಯಗೊಂಡ ಮಹಾತ್ಮನಾದ ಸಂನ್ಯಾಸಿಯೂ ನಿದ್ರೆಯನ್ನು ಹೊಂದುವುದಿಲ್ಲ.

೪೩–೪೫. ಹುಳುಗಳು, ಹಕ್ಕಿಗಳು, ಮೃಗಗಳು, ಪಶುಗಳು, ಆನೆಗಳು, ಕುದುರೆಗಳು, ಇವುಗಳಿಗೆ ದುಃಖವು ಹೆಚ್ಚೆಂಬುದು ಎಲ್ಲರಿಗೂ ತಿಳಿದ ವಿಷಯವು. ಆದ್ದರಿಂದ ಈ ಸಂಸಾರವನ್ನು ಬಿಟ್ಟ ಜ್ಞಾನಿ ಮಾನವನಿಗೆ ಉತ್ತಮವಾದ ಸುಖವು ದೊರಕುವುದು. ಮನ್ವಂತರಗಳಲ್ಲಿ ಅಧಿಪತಿಗಳಾದ ದೇವತೆಗಳಿಗೂ, ದುಃಖವು ತಪ್ಪುವುದಿಲ್ಲ. ಪ್ರಪಂಚಕ್ಕೆ ಅಭಿಮಾನಿ ದೇವತೆಗಳಾದ ಮನು ಮೊದಲಾದವರುಗಳಿಗೂ, ದೇವತೆಗಳಿಗೂ, ರಾಕ್ಷಸರುಗಳಿಗೂ, ಪರಸ್ಪರ ಜಯಿಸಬೇಕೆಂಬ ಇಚ್ಛೆಯಿಂದಲೂ ಮತ್ತು ದೊರೆಗಳು ರಾಕ್ಷಸರೂ ಮೊದಲಾದ ಮೂರು ಲೋಕದಲ್ಲಿಯೂ, ಅಧಿಪತಿಗಳಾಗಿರುವವರಿಗೂ ದುಃಖವು ತಪ್ಪಿದ್ದಲ್ಲವು.

೪೬–೪೭. ಕಾಮ್ಯ ವರ್ಣಾಶ್ರಮ ಧರ್ಮಗಳನ್ನು ಚೆನ್ನಾಗಿ ನಡೆಸಿದರೂ, ವಾಸ್ತವವಾಗಿ ಅದು ನಿಜವಾದ ಸುಖವನ್ನು ಕೊಡದೇ ಆಯಾಸವನ್ನುಂಟುಮಾಡುವುದೇ ಆಗಿರುವುದು. ಫಲದಲ್ಲಿ ಕಾಮನೆಯಿಂದ ವರ್ಣಾಶ್ರಮ ಧರ್ಮಗಳನ್ನು ನೆರವೇರಿಸುವುದರಿಂದಲಾಗಲೀ, ದೇವತೆಗಳನ್ನು ಪೂಜಿಸುವುದರಿಂದಲಾಗಲಿ, ಹಾಗೆಯೇ ಯಾಗ

ತಸ್ಮಾತ್ಸರ್ವ ಪ್ರಯತ್ನೇನ ಚರೇತ್ಪಾಶುಪತ ವ್ರತಂ ।
ಭಸ್ಮಶಾಯೀ ಭವೇನ್ನಿತ್ಯಂ ವ್ರತೇ ಪಾಶುಪತೇ ಬುಧಃ ॥೪೮॥

ಪಂಚಾರ್ಥ ಜ್ಞಾನ ಸಂಪನ್ನಃ ಶಿವತತ್ತ್ವೇ ಸಮಾಹಿತಃ ।
ಕೈವಲ್ಯ ಕರಣಂ ಯೋಗ ವಿಧಿ ಕರ್ಮಚ್ಛಿದಂ ಬುಧಃ ॥೪೯॥

ಪಂಚಾರ್ಥ ಯೋಗ ಸಂಪನ್ನೋ ದುಃಖಾಂತಂ ವ್ರಜತೇ ಸುಧೀಃ ।
ಪರಯಾ ವಿದ್ಯಯಾ ವೇದ್ಯಂ ವಿದಂತ್ಯ ಪರಯಾ ನ ಹಿ ॥೫೦॥

ದ್ವೇ ವಿದ್ಯೇ ವೇದಿತವ್ಯೇ ಹಿ ಪರಾ ಚೈವಾಪರಾ ತಥಾ ।
ಅಪರಾ ತತ್ರ ಋಗ್ವೇದೋ ಯಜುರ್ವೇದೋ ದ್ವಿಜೋತ್ತಮಾಃ ॥

---

ಗಳಿಂದಲಾಗಲಿ, ಅನೇಕ ವ್ರತಗಳಿಂದಲಾಗಲಿ, ಕ್ರೂರವಾದ ತಪಸ್ಸನ್ನು ಮಾಡುವುದರಿಂದಲಾಗಲಿ, ಅನೇಕ ಬಗೆಯ ದಾನಗಳಿಂದಲಾಗಲಿ, ಜ್ಞಾನವನ್ನು ಹೊಂದಲು ಸಾಧ್ಯವಿಲ್ಲ. ಜ್ಞಾನಿಗಳಾದವರು ಜ್ಞಾನ ಒಂದರಿಂದಲೇ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬಲ್ಲರು. ಆದ್ದರಿಂದ ವಿದ್ವಾಂಸನು ಬೂದಿಯ ಮೇಲೆ ಮಲಗುತ್ತಾ ಪಶುಗಳಿಗೆಲ್ಲರಿಗೂ ಒಡೆಯನಾದ ಶಿವನನ್ನು ಪಾಶುಪತ ವ್ರತದಿಂದ ನಿತ್ಯವೂ ಪೂಜಿಸಬೇಕು.

೪೯–೫೧ ಹಿಂದೆ ಹೇಳಿದ ಮಂತ್ರವೇ ಮೊದಲಾದ ಐದು ಬಗೆಯ ಯೋಗಗಳ ಅರ್ಥವನ್ನು ಚೆನ್ನಾಗಿ ಅರಿತು, ಶಿವನಿಗೆ ಸಂಬಂಧಪಟ್ಟ ತತ್ತ್ವ ಜ್ಞಾನವನ್ನು ಪಡೆದು, ಸಮಾಧಾನ ಚಿತ್ತದಿಂದ ಅದೃಷ್ಟಕಾರಣ ಮತ್ತು ಕರ್ಮ ಇವೆರಡನ್ನೂ ನಾಶಮಾಡುವ, ಮೋಕ್ಷಕ್ಕೆ ಕಾರಣವಾದ ಜ್ಞಾನವನ್ನು ವಿದ್ವಾಂಸನು ಪಡೆಯಬೇಕು. ವಿದ್ವಾಂಸನು ಈ ಐದು ಯೋಗ ಮಂತ್ರಗಳ ಅರ್ಥವನ್ನು ಚೆನ್ನಾಗಿ ಅರಿತು, ಎಲ್ಲಾ ದುಃಖಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಇಂಥಾ ಜ್ಞಾನವು ಆತ್ಮಜ್ಞಾನದಿಂದ ಬರುವುದೇ ವಿನಾ ಬೇರೆ ಯಾವುದರಿಂದಲೂ ಬರಲಾರದು. "ಪರಾವಿದ್ಯೆ" ಮತ್ತು "ಅಪರಾವಿದ್ಯೆ" ಎಂದು ವಿದ್ಯೆಯು ಎರಡು ವಿಧವಾದುದೆಂದು ತಿಳಿಯಬೇಕು. ಎಲೈ ಬ್ರಾಹ್ಮಣ ಶ್ರೇಷ್ಠರೇ, ಇವುಗಳ ಪೈಕಿ, ಋಗ್ವೇದ, ಯಜುರ್ವೇದ, ಇವೇ ಮುಂತಾದವುಗಳು ಅಪರಾವಿದ್ಯೆಯಲ್ಲಿ ಸೇರಿರುತ್ತವೆ.

ಅಧೋ ದೃಷ್ಟ್ಯಾ ವಿತಸ್ತ್ಯಾಂತು ನಾಭ್ಯಾ ಮುಪರಿ ತಿಷ್ಠತಿ ।
ಹೃದಯಂ ತದ್ವಿಜಾನೀಯಾ ದ್ವಿಶ್ವಸ್ಯಾಯತನಂ ಮಹತ್ ॥೬೨॥

ಹೃದಯ ಸ್ಯಾಸ್ಯ ಮಧ್ಯೇ ತು ಪುಂಡರೀಕ ಮವಸ್ಥಿತಂ ।
ಧರ್ಮ ಕಂದ ಸಮುದ್ಭೂತಂ ಜ್ಞಾನ ನಾಲಂ ಸು ಶೋಭನಂ ॥೬೩॥

ಐಶ್ವರ್ಯಾಷ್ಟದಲಂ ಶ್ವೇತಂ ಪರಂ ವೈರಾಗ್ಯ ಕಾರಣಂ ।
ಛಿದ್ರಾಣಿ ಚ ದಿಶೋಯಸ್ಯ ಪ್ರಾಣಾದ್ಯಾಶ್ಚ ಪ್ರತಿಷ್ಠಿತಾಃ ॥೬೪॥

ಪ್ರಾಣಾದ್ಯೈ ಶ್ಚೈವ ಸಂಯುಕ್ತಃ ಪಶ್ಯತೇ ಬಹುಧಾ ಕ್ರಮಾತ್ ।
ದಶಪ್ರಾಣ ವಹಾ ನಾಡ್ಯಃ ಪ್ರತ್ಯೇಕಂ ಮುನಿ ಪುಂಗವಾಃ ॥೬೫॥

ದ್ವಿಸಪ್ತತಿ ಸಹಸ್ರಾಣಿ ನಾಡ್ಯಃ ಸಂ ಪರಿಕೀರ್ತಿತಾಃ ।
ನೇತ್ರಸ್ಥಂ ಜಾಗ್ರತಂ ವಿದ್ಯಾ ತ್ಕಂಠೇ ಸ್ವಪ್ನಂ ಸಮಾದಿಶೇತ್ ॥೬೬॥

---

೬೨–೬೪. ದಹರೋಪಾಸನೆಯಲ್ಲಿ ಹೊಕ್ಕುಳಿನ ಮೇಲುಗಡೆ, ಬಗ್ಗಿ, 'ವಿತಸ್ತಿ' ಎಂಬ ನರದಲ್ಲಿರುವ ಹೃದಯವೆಂಬ ಕಮಲವೇ ಈ ಎಲ್ಲಕ್ಕೂ ಆಧಾರವಾದ ದೊಡ್ಡ ಮನೆಯೆಂದು ತಿಳಿಯಬೇಕು. ಇದರ ಮಧ್ಯದಲ್ಲಿ ಧರ್ಮವೆಂಬ ಬೇರಿನಿಂದ ಉಂಟಾದ ಮತ್ತು ಮಂಗಳಕರವಾದ ಜ್ಞಾನವೆಂಬ ನಾಳವುಳ್ಳ, ಕಮಲವು ಬಗ್ಗಿ ಇದೆ. ಬೆಳ್ಳಗಿರುವ, ಶ್ರೇಷ್ಠವಾದ, ವೈರಾಗ್ಯಕ್ಕೆ ಕಾರಣವಾದ, ಅಣಿಮಾದಿ ಅಷ್ಟೈಶ್ವರ್ಯಗಳಿಗೆ ಸಂಬಂಧಪಟ್ಟ ಎಂಟು ದಳಗಳೂ, ದಿಕ್ಕುಗಳೂ, ಪ್ರಾಣವೇ ಮೊದಲಾದವೂ, ಇದಕ್ಕೆ ರಂಧ್ರಗಳಾಗಿಯೂ, ಸ್ಥಿರವಾಗಿವೆ. ಎಂದು ಧ್ಯಾನಮಾಡಬೇಕು.

೬೫–೬೬. ಎಲೈ ಋಷಿ ಶ್ರೇಷ್ಠರೇ, ಇದು ಪ್ರಾಣವೇ ಮೊದಲಾದುವರಿಂದ ಕೂಡಿ, ಅನೇಕ ವಿಧವಾಗಿ ಕಾಣಿಸುತ್ತದೆ. ಅಲ್ಲದೆ ಹತ್ತು ಬಗೆಯ ಪ್ರಾಣಗಳಿಂದ ಕೂಡಿದ ನಾಡಿಗಳೂ ಇದಕ್ಕೆ ಸೇರಿವೆ. ಇದಕ್ಕೇ ಸಂಬಂಧಪಟ್ಟು ಎಪ್ಪತ್ತೆರಡು ಸಾವಿರ ನಾಡಿಗಳು ಇರುತ್ತವೆಯೆಂದು ಹೇಳಲ್ಪಟ್ಟಿದೆ. ಕಣ್ಣಿನಲ್ಲಿರುವುದೂ, ಜಾಗ್ರದವಸ್ಥಾ ಕಾಲದ ನಾಡಿಯೆಂದೂ, ಕಂಠದಲ್ಲಿರುವುದು ಸ್ವಪ್ನಾವಸ್ಥಾ ನಾಡಿಯೆಂದೂ, ಮನಸ್ಸಿಗೆ ಸಂಬಂಧಪಟ್ಟಂತಿರುವುದುನಿದ್ರಾವಸ್ಥೆಯ ನಾಡಿಯೆಂದೂ, ಶಿರಸ್ಸಿನಲ್ಲಿರುವ

ಸುಷುಪ್ತಂ ಹೃದಯಸ್ಥಂ ತು ತುರೀಯಂ ಮೂರ್ಧನಿ ಸ್ಥಿತಂ ।
ಜಾಗ್ರೇ ಬ್ರಹ್ಮಾ ಚ ವಿಷ್ಣುಶ್ಚ ಸ್ವಪ್ನೇ ಚೈವ ಯಥಾ ಕ್ರಮಾತ್ ॥
ಈಶ್ವರಸ್ತು ಸುಷುಪ್ತೇ ತು ತುರೀಯೇ ಚ ಮಹೇಶ್ವರಃ ।
ವದಂತ್ಯೇವ ಮಥಾಽನ್ಯೇಽಪಿ ಸಮಸ್ತ ಕರಣೈಃ ಪುಮಾನ್ ॥೬೮॥

ವರ್ತಮಾನ ಸ್ತದಾ ತಸ್ಯ ಜಾಗ್ರದಿತ್ಯ ಭಿಧೀಯತೇ ।
ಮನೋ ಬುದ್ಧಿ ರಹಂಕಾರಂ ಚಿತ್ತಂ ಚೇತಿ ಚತುಷ್ಟಯಂ ॥೬೯॥

ಯದಾ ವ್ಯವಸ್ಥಿತ ಸ್ತ್ವೇತೈಃ ಸ್ವಪ್ನ ಇತ್ಯಭಿ ಧೀಯತೇ ।
ಕರಣಾನಿ ವಿಲೀನಾನಿ ಯದಾ ಸ್ವಾತ್ಮನಿ ಸುವ್ರತಾಃ ॥೭೦॥

ಸುಷುಪ್ತಃ ಕರಣೈರ್ಭಿನ್ನ ಸ್ತುರೀಯಃ ಪರಿಕೀರ್ತ್ಯತೇ ।
ಪರಸ್ತುರೀಯಾಽತೀತೋಽಸೌ ಶಿವಃ ಪರಮಕಾರಣಂ ॥೭೧॥

---

ನಾಡಿಯು ನಾಲ್ಕನೆಯದಾಗಿಯೂ, ತಿಳಿಯಬೇಕು. ಎಚ್ಚರ ಕಾಲದಲ್ಲಿ ಜೀವನಿಗೆ ಬ್ರಹ್ಮನೂ, ಸ್ವಪ್ನಕಾಲದಲ್ಲಿ ವಿಷ್ಣುವೂ, ಕ್ರಮವಾಗಿ ಅಧಿದೇವತೆಗಳಾಗಿ ಇರುವರೆಂದು ಹೇಳಲ್ಪಟ್ಟವೆ. ಹಾಗೆಯೇ,

೬೮–೭೦. ನಿದ್ರೆಯ ಕಾಲದಲ್ಲಿ ಈಶ್ವರನೂ, ನಾಲ್ಕನೆಯ ಅವಸ್ಥೆಯಲ್ಲಿ ಮಹೇಶ್ವರನೂ ಇದ್ದಾರೆಂದು ಹೇಳುತ್ತಾರೆ. ಹಾಗೆಯೇ ಎಚ್ಚರದ ಅವಸ್ಥೆಯಲ್ಲಿ ಎಲ್ಲ ಇಂದ್ರಿಯಗಳಿಂದ ಕೂಡಿರುವ ಪುರುಷನಿಗೆ, ಎಚ್ಚರದ ಕಾಲವು ಜಾಗ್ರತ್ ಕಾಲ, ಎನ್ನಿಸಿಕೊಳ್ಳುತ್ತದೆ. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಇವು ನಾಲ್ಕು ಮಾತ್ರ ಸರಿಯಾದ ಕ್ರಮದಲ್ಲಿರುವಾಗ ಇದು ಸ್ವಪ್ನಕಾಲ, ಎನ್ನಿಸಿಕೊಳ್ಳುತ್ತದೆ. ನಮ್ಮ ಆತ್ಮನಲ್ಲಿ ಇಂದ್ರಿಯಗಳೆಲ್ಲವೂ ಯಾವಾಗ ಅಡಗಿಹೋಗುತ್ತವೆಯೋ ಅದು ನಿದ್ರಾಕಾಲವೆಂದೂ ತಿಳಿಯಬೇಕು.

೭೧–೭೩. ಹಿಂದೆ ಹೇಳಿದ ಕಾಲವು ನಿದ್ರಾಕಾಲವೆಂದೂ, ಇಂದ್ರಿಯಗಳೆಲ್ಲವೂ ನಾಶವಾದಾಗ ನಾಲ್ಕನೆಯ ಅವಸ್ಥೆಯೆಂದೂ, ತಿಳಿಯಬೇಕು. ಈ ನಾಲ್ಕನೆಯ ಅವಸ್ಥೆಯನ್ನು ಮೀರಿದವನೂ, ಜಗತ್ತಿಗೆ ಮೂಲಕಾರ

ಜಾಗ್ರತ್ಸ್ವಪ್ನ ಸುಷುಪ್ತಿಶ್ಚ ತುರೀಯಂ ಚಾಧಿ ಭೌತಿಕಂ ।
ಆಧ್ಯಾತ್ಮಿಕಂ ಚ ವಿಪ್ರೇಂದ್ರಾ ಶ್ಚಾಽಧಿ ದೈವಿಕ ಮುಚ್ಯತೇ ॥೭೨॥

ತತ್ಸರ್ವ ಮಹ ಮೇವೇತಿ ವೇದಿತವ್ಯಂ ವಿಜಾನತಾ ।
ಬುದ್ಧೀಂದ್ರಿಯಾಣಿ ವಿಪ್ರೇಂದ್ರಾಸ್ತಥಾ ಕರ್ಮೇಂದ್ರಿಯಾಣಿ ಚ ॥೭೩॥

ಮನೋ ಬುದ್ಧಿ ರಹಂಕಾರ ಚ್ಚಿತ್ತಂ ಚೇತಿ ಚತುಷ್ಟಯಂ ।
ಅಧ್ಯಾತ್ಮಂ ಪೃಥಗೇ ವೇದಂ ಚತುರ್ದಶ ವಿಧಂ ಸ್ಮೃತಂ ॥೭೪॥

ದ್ರಷ್ಟವ್ಯಂ ಚೈವ ಶ್ರೋತವ್ಯಂ ಘ್ರಾತವ್ಯಂ ಚ ಯಥಾ ಕ್ರಮಂ ।
ರಸಿತವ್ಯಂ ಮುನಿಶ್ರೇಷ್ಠಾಃ ಸ್ಪರ್ಶಿತವ್ಯಂ ತಥೈವ ಚ ॥೭೫॥

ಮಂತವ್ಯಂ ಚೈವ ಬೋದ್ಧವ್ಯಂ ಅಹಂಕರ್ತವ್ಯ ಮೇವ ಚ ।
ತಥಾ ಚೇತಯಿ ತವ್ಯಂ ಚ ವಕ್ತವ್ಯಂ ಮುನಿ ಪುಂಗವಾಃ ॥೭೬॥

---

ಣನೂ ಆದ ಶಿವನೇ ಪರಮಶ್ರೇಷ್ಠನೆಂದು ತಿಳಿಯಬೇಕು. ಎಲೈ ಬ್ರಾಹ್ಮಣ ಶ್ರೇಷ್ಠರೇ, ಹೀಗೆ ಎಚ್ಚರಕಾಲ, ಕನಸಿನಕಾಲ, ನಿದ್ರಾಕಾಲ, ನಾಲ್ಕನೆಯ ಅವಸ್ಥೆ, ಇವೂ, ಪಂಚಭೂತಕ್ಕೆ ಸಂಬಂಧಪಟ್ಟ ಪದಾರ್ಥಗಳೂ, ಆತ್ಮಕ್ಕೆಸಂಬಂಧಪಟ್ಟ ವಸ್ತುಗಳೂ, ದೈವಕ್ಕೆ ಸಂಬಂಧಪಟ್ಟ ವಸ್ತುಗಳೂ, ಇವೆಲ್ಲವೂ ಶಿವನಾದ ನನ್ನ ಸ್ವರೂಪವೇ ಆಗಿರುವುದೆಂದು ವಿದ್ವಾಂಸನು ತಿಳಿಯಬೇಕು. ಅಲ್ಲದೇ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳೂ, ಇವುಗಳೂ ನನ್ನ ಸ್ವರೂಪವೇ ಎಂದು ತಿಳಿಯಬೇಕು.

೭೪–೭೬. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಎಂಬ ನಾಲ್ಕು ತತ್ವಗಳೂ ಸೇರಿ, ಒಟ್ಟು ಹದಿನಾಲ್ಕು ತತ್ವಗಳೂ, ಆತ್ಮನಲ್ಲೇ ಅಡಗಿವೆಯೆಂದು ತಿಳಿಯಬೇಕು. ನೋಡುವುದಕ್ಕೆ ಯೋಗ್ಯವಾದದ್ದೂ, ಕೇಳುವುದಕ್ಕೆ ಅರ್ಹವಾದದ್ದೂ, ವಾಸನೆಯಿಂದ ಹಿಡಿಯಬಹುದಾದದ್ದೂ, ಸವಿನೋಡಲು ಯೋಗ್ಯವಾದದ್ದೂ, ಮುಟ್ಟುವುದಕ್ಕೆ ಅರ್ಹವಾದದ್ದೂ, ಎಲ್ಲವೂ ಪರಮಾತ್ಮನ ಸ್ವರೂಪವೇ ಆಗಿದೆ. ತಿಳಿಯುವುದಕ್ಕೆ ಯೋಗ್ಯವಾದದ್ದೂ, ಅಭಿಮಾನಕ್ಕೆ ಯೋಗ್ಯವಾದದ್ದೂ, ಮನಸ್ಸಿನಿಂದ ಭಾವಿಸಲು ಯೋಗ್ಯವಾದದ್ದೂ, ಮಾತನಾಡಲು ಯೋಗ್ಯವಾದದ್ದೂ, ಎಲ್ಲವೂ ಪರಮಾತ್ಮನ ಸ್ವರೂಪವೇ ಆಗಿದೆ. ಎಂದು ಭಾವಿಸಬೇಕು.

ಅದಾತವ್ಯಂ ಚ ಗಂತವ್ಯಂ ವಿಸರ್ಗಾಯಿತ ಮೇವಚ ।
ಅನಂದಿತವ್ಯ ಮಿತ್ಯೇತೇ ಹ್ಯಧಿ ಭೂತ ಮನುಕ್ರಮಾತ್ ॥೭೭॥
ಆದಿತ್ಯೋಽಪಿ ದಿಶ ಶ್ಚೈವ ಪೃಥಿವೀ ವರುಣ ಸ್ತಥಾ ।
ವಾಯುಃ ಶ್ಚಂದ್ರ ಸ್ತಥಾ ಬ್ರಹ್ಮಾ ರುದ್ರಃ ಕ್ಷೇತ್ರಜ್ಞ ಏವ ಚ ॥೭೮॥
ಅಗ್ನಿರಿಂದ್ರ ಸ್ತಥಾ ವಿಷ್ಣು ರ್ಮಿತ್ರೋ ದೇವಃ ಪ್ರಜಾಪತಿಃ ।
ಅಧಿ ದೈವಿಕ ಮೇವಂ ಹಿ ಚತುರ್ದಶ ವಿಧಂ ಕ್ರಮಾತ್ ॥೭೯॥
ರಾಜ್ಞೀ ಸುದರ್ಶನಾ ಚೈವ ಜಿತಾ ಸೌಮ್ಯಾ ಯಥಾ ಕ್ರಮಂ ।
ಮೇಘಾ ರುದ್ರಾಽಮೃತಾ ಸತ್ಯಾ ಮಧ್ಯಮಾ ಚ ದ್ವಿಜೋತ್ತಮಾಃ ॥
ನಾಡೀ ರಾಶಿಶುಕಾ ಚೈವ ಅಸುರಾ ಚೈವ ಕೃತ್ತಿಕಾ ।
ಭಾಸ್ವತೀ ನಾಡಯ ಶ್ಚೈತಾ ಶ್ಚತುರ್ದಶ ನಿಬಂಧನಾಃ ॥೮೦॥
ವಾಯವೋ ನಾಡಿ ಮಧ್ಯಸ್ಥಾ ವಾಹಕಾಶ್ಚ ಚತುರ್ದಶ ।
ಪ್ರಾಣೋ ವ್ಯಾನ ಸ್ತ್ವಪಾನಶ್ಚ ಉದಾನಶ್ಚ ಸಮಾನಕಃ ॥೮೧॥

---

೭೭–೭೯. ತೆಗೆದುಕೊಳ್ಳಲು ಯೋಗ್ಯವಾದದ್ದು, ಹೊಂದಲು ಯೋಗ್ಯವಾದದ್ದು, ಬಿಡಲು ಯೋಗ್ಯವಾದದ್ದು, ಸಂತೋಷಪಡಲು ಯೋಗ್ಯವಾದದ್ದು, ಇವೆಲ್ಲವೂ ಪಂಚಭೂತಗಳಿಗೆ ಸಂಬಂಧಪಟ್ಟ ಅಧಿಭೂತವೆನಿಸಿರುವ ವಸ್ತುಗಳಾಗಿವೆ. ಸೂರ್ಯ, ದಿಕ್ಕುಗಳು, ಭೂಮಿ, ವರುಣ, ವಾಯು, ಬ್ರಹ್ಮ, ಚಂದ್ರ, ರುದ್ರ, ಶರೀರವನ್ನು ತಿಳಿಯುವ ಜೀವಾತ್ಮ, ಅಗ್ನಿ, ಇಂದ್ರ, ವಿಷ್ಣು, ಮಿತ್ರ, ಬ್ರಹ್ಮ, ಹೀಗೆ ಈ ಹದಿನಾಲ್ಕು ದೇವತೆಗಳು, ದೇವತ್ವದಿಂದ ಕೂಡಿ ಅಧಿದೈವಿಕವೆನಿಸಿಕೊಂಡಿರುವರು.

೮೦–೮೧. ರಾಜ್ಞೀ, ಸುದರ್ಶನಾ, ಜಿತಾ, ಸೌಮ್ಯಾ, ಮೇಘಾ, ರುದ್ರ, ಅಮೃತಾ, ಸತ್ಯಾ, ಮಧ್ಯಮಾ, ನಾಡೀರಾ, ಶಿಶುಕಾ, (ನಾಡಿ,ರಾಶಿಶುಕಾ,) ಅಸುರಾ, ಕೃತ್ತಿಕಾ, ಭಾಸ್ವತೀ, ಎಂಬ ಹದಿನಾಲ್ಕು ವಾಹಕನಾಡಿಗಳಿವೆ. ಈ ನಾಡಿಗಳ ಮಧ್ಯದಲ್ಲಿ ಚಲಿಸುವ ಹದಿನಾಲ್ಕು ಬಗೆಯ ವಾಯುಗಳೂ ಇವೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಎಂಬುವು ಆ ವಾಯುಗಳ ಪೈಕಿ ಐದು ಮುಖ್ಯವಾದ ವಾಯುಗಳು,

ವೈರಂಭ ಶ್ಚ ತಥಾ ಮುಖ್ಯೋಽಪ್ಯಂತರ್ಯಾಮಃ ಪ್ರಭಂಜನಃ ।
ಕೂರ್ಮಕಶ್ಚ ತಥಾ ಶ್ಯೇನಃ ಶ್ವೇತಃ ಕೃಷ್ಣ ಸ್ತಥಾಽನಿಲಃ ॥೮೪॥
ನಾಗ ಇತ್ಯೇವ ಕಥಿತಾ ವಾಯವಶ್ಚ ಚತುರ್ದಶ ।
ಯಶ್ಚ ಕ್ಷ್ನಿ ಷ್ವಥ ದ್ರಷ್ಟವ್ಯೇ ತಥಾಽದಿತ್ಯೇ ಚ ಸುವ್ರತಾಃ ॥೮೫॥
ನಾಡ್ಯಾಂ ಪ್ರಾಣೇ ಚ ವಿಜ್ಞಾನೇ ತ್ವಾಽನಂದೇ ಚ ಯಥಾ ಕ್ರಮಂ ।
ಹೃದ್ಯಾಕಾಶೇ ಯ ಏಕಸ್ಮಿನ್ಸರ್ವಸ್ಮಿನ್ನಂತರೇ ಪರಃ ॥೮೬॥
ಆತ್ಮಾ ಏಕಶ್ಚ ಚರತಿ ತಮುಪಾಸೀತ ಮಾಂ ಪ್ರಭುಂ ।
ಅಜರಂ ತ ಮನಂತಂ ಚ ಅಶೋಕ ಮಮೃತಂ ಧ್ರುವಂ ॥೮೭॥
ಚತುರ್ದಶ ವಿಧೇಷ್ವೇವ ಸಂಚರ ತ್ಯೇಕ ಏವ ಸಃ ।
ಲೀಯಂತೇ ತಾನಿ ತತ್ರೈವ ಯದನ್ಯಂ ನಾಸ್ತಿ ವೈ ದ್ವಿಜಾಃ ॥೮೮॥

---

೮೪–೮೫. ವೈರಂಭ, ಮುಖ್ಯ, ಅಂತರ್ಯಾಮ, ಪ್ರಭಂಜನ, ಕೂರ್ಮಕ, ಶ್ಯೇನ, ಶ್ವೇತ, ಕೃಷ್ಣ, ಅನಿಲ, ನಾಗ, ಹೀಗೆ ಒಟ್ಟು ಹದಿನಾಲ್ಕು ವಾಯುಗಳಿವೆ. ಎಲೈ ಋಷಿಶ್ರೇಷ್ಠರೇ, ಕಣ್ಣುಗಳಲ್ಲಿಯೂ ನೋಡಲ್ಪಡುವ ವಸ್ತುಗಳಲ್ಲಿಯೂ, ಸೂರ್ಯನಲ್ಲಿಯೂ, ನಾಡಿಯಲ್ಲಿಯೂ, ಪ್ರಾಣವಾಯುವಿನಲ್ಲಿಯೂ, ವಿಜ್ಞಾನದಲ್ಲಿಯೂ, ಆನಂದದಲ್ಲಿಯೂ, ಮನಸ್ಸಿನಲ್ಲಿಯೂ, ದಹರಾಕಾಶದಲ್ಲಿಯೂ, ಎಲ್ಲರ ಒಳಗೂ ಪರಮಾತ್ಮನು ಸರ್ವೋತ್ಕೃಷ್ಟನಾಗಿರುವನು.

೮೬–೮೮. ಪರಮಾತ್ಮನು ಒಬ್ಬನೇ ಎಂದೂ, ಅವನು ಸ್ವಾಮಿಯಾದ ನಾನೇ, ಎಂದು ತಿಳಿದು ನನ್ನನ್ನು ಉಪಾಸನೆ ಮಾಡಿರಿ. ಮುಪ್ಪಿಲ್ಲದವನೂ, ನಾಶವಿಲ್ಲದವನೂ, ದುಃಖವಿಲ್ಲದವನೂ, ಸಾವಿಲ್ಲದವನೂ, ನಿತ್ಯನಾದವನೂ, ಆಗಿರುವ ಪರಮಾತ್ಮನೂ, ಹದಿನಾಲ್ಕು ವಿಧವಾದ ವಾಯುಗಳಲ್ಲೂ, ಒಬ್ಬನೇ ಆಗಿ ಸಂಚರಿಸುತ್ತಾನೆ. ಎಲೈ ಬ್ರಾಹ್ಮಣರೇ, ಈ ಹದಿನಾಲ್ಕು ವಾಯುಗಳೂ, ಅವನಲ್ಲೇ ಅಡಗುತ್ತವೆ. ಪರಮಾತ್ಮನು ವಿನಾ ಬೇರೊಂದು ವಸ್ತುವೂ ವಾಸ್ತವವಾಗಿ ಇಲ್ಲ. ಅವನು ಒಬ್ಬನೇ ಆಗಿಯೂ ಎಲ್ಲವನ್ನೂ ತಿಳಿಯುವವನಾಗಿಯೂ, ಎಲ್ಲರಿಗೂ ಒಡೆಯನಾ

ಏಕ ಏವ ಹಿ ಸರ್ವಜ್ಞಃ ಸರ್ವೇ ಶಸ್ತ್ವೇಕ ಏವ ಸಃ ।
ಏಷ ಸರ್ವಾಧಿಪೋ ದೇವ ಸ್ತ್ವಂತರ್ಯಾಮೀ ಮಹಾದ್ಯುತಿಃ ॥೮೮॥

ಉಪಾಸ್ಯಮಾನಃ ಸರ್ವಸ್ಯ ಸರ್ವಸೌಖ್ಯಃ ಸನಾತನಃ ।
ಉಪಾಸ್ಯತಿ ನ ಚೈವೇಹ ಸರ್ವಸೌಖ್ಯಂ ದ್ವಿಜೋತ್ತಮಾಃ ॥೮೯॥

ಉಪಾಸ್ಯಮಾನೋ ವೇದೈಶ್ಚ ಶಾಸ್ತ್ರೈ ರ್ನಾನಾ ವಿಧೈರಪಿ ।
ನ ವೈಷ ವೇದ ಶಾಸ್ತ್ರಾಣಿ ಸರ್ವಜ್ಞೋ ಯಾಸ್ಯತಿ ಪ್ರಭುಃ ॥೯೦॥

ಅಸ್ಯೈವಾಽನ್ನ ಮಿದಂ ಸರ್ವಂ ನ ಸೋಽನ್ನಂ ಭವತಿ ಸ್ವಯಂ ।
ಸ್ವಾತ್ಮನಾ ರಕ್ಷಿತಂ ಚಾಽದ್ಯಾ ದನ್ನ ಭೂತಂ ನ ಕುತ್ರಚಿತ್ ॥೯೧॥

ಸರ್ವತ್ರ ಪ್ರಾಣಿನಾ ಮನ್ನಂ ಪ್ರಾಣಿನಾಂ ಗ್ರಂಥಿ ರಸ್ಮ್ಯಹಂ ।
ಪ್ರಶಾಸ್ತಾ ನಯನ ಶ್ಚೈವ ಪಂಚಾಽತ್ಮಾ ಸ ವಿಭಾಗಶಃ ॥೯೨॥

---

ಗಿಯೂ, ಇದ್ದಾನೆ. ಇವನು ಎಲ್ಲರಿಗೂ ಒಡೆಯನೂ, ಎಲ್ಲಾ ವಸ್ತು ಗಳೊಳಗೂ ಇರುವವನೂ, ಬಹಳ ತೇಜಸ್ವಿಯೂ ಆಗಿದ್ದಾನೆ.

೮೯-೯೧. ಎಲ್ಲರಿಗೂ ಪೂಜೆಗೆ ಯೋಗ್ಯನೂ, ಎಲ್ಲರಿಗೂ ಎಲ್ಲ ವಿಧವಾದ ಸುಖವನ್ನುಂಟುಮಾಡುವವನಾದರೂ,ಬಹಳ ಹಿಂದಿನವನೂ ನಿರ್ಲಿಪ್ತನೂ ಆಗಿ, ಎಲ್ಲರ ಸೌಖ್ಯವನ್ನೂ ತಾನೇ ಅನುಭವಿಸುವುದಿಲ್ಲ. ವೇದಗಳೂ, ಅನೇಕ ಬಗೆಯ ಶಾಸ್ತ್ರಗಳೂ, ಇವುಗಳಿಂದ ಪೂಜಿಸಲ್ಪಡುತ್ತಿದ್ದರೂ ಪರಮಾತ್ಮನು ವೇದಶಾಸ್ತ್ರಗಳನ್ನು ತನ್ನ ಉಪಯೋಗಕ್ಕಾಗಿ ಸೃಷ್ಟಿಮಾಡಿಲ್ಲ. ಪ್ರಪಂಚದ ಅನ್ನವೆಲ್ಲವೂ ಅವನಿಂದಲೇ ಸೃಷ್ಟಿಸಲ್ಪಟ್ಟಿದೆ. ಅವನೂ ಇನ್ನೊಬ್ಬರಿಗೆ ಅನ್ನಸ್ವರೂಪನಲ್ಲ. ಪರಮಾತ್ಮನಿಂದ ಕಾಪಾಡಲ್ಪಟ್ಟಿರುವ ಅನ್ನವನ್ನೇ ಜನಗಳು ಅನುಗ್ರಹವೆಂದು, ಅನುಭವಿಸಬೇಕು. ಅವನನ್ನು ಇನ್ನೊಬ್ಬನಿಗೆ ಅನ್ನಸ್ವರೂಪನೆಂದು ಎಲ್ಲಿಯೂ ತಿಳಿಯಬಾರದು.

೯೨-೯೪. ವಾಸ್ತವವಾಗಿ ವಿಚಾರಮಾಡಿದರೆ ಎಲ್ಲ ಪ್ರಾಣಿಗಳಿಗೂ ತಿನ್ನಲು ಯೋಗ್ಯವಾದ ಅನ್ನದ ಸ್ವರೂಪನೂ, ಪ್ರಾಣಿಗಳಲ್ಲಿ ಪ್ರಾಣಾಪಾನಗಳ ಗಂಟಿನ ಸ್ವರೂಪನೂ, ಆಳುವವನೂ, ಜನರ ಕಣ್ಣು ಮುಂತಾದ

**ಅನ್ನಮಯೋಽಸೌ ಭೂತಾತ್ಮಾ ಚಾದ್ಯತೇ ಹ್ಯನ್ನ ಮುಚ್ಯತೇ ।**
**ಪ್ರಾಣ ಮಯ ಶ್ಚೇಂದ್ರಿಯಾತ್ಮಾ ಸಂಕಲ್ಪಾತ್ಮಾ ಮನೋಮಯಃ**
**ಕಾಲಾತ್ಮಾ ಸೋಮ ಏವೇಹ ವಿಜ್ಞಾನಮಯ ಉಚ್ಯತೇ ।**
**ಸದಾಽನಂದ ಮಯೋ ಭೂತ್ವಾ ಮಹೇಶಃ ಪರಮೇಶ್ವರಃ ॥೯೪॥**
**ಸೋಽಹಮೇವಂ ಜಗತ್ಸರ್ವಂ ಮಯ್ಯೇವ ಸಕಲಂ ಸ್ಥಿತಂ ।**
**ಪರತಂತ್ರಂ ಸ್ವತಂತ್ರೇಽಪಿ ತದಭಾವಾ ದ್ವಿ ಚಾರತಃ ॥೯೫॥**
**ಏಕತ್ವಮಪಿನಾಸ್ತ್ಯೇವ ದ್ವೈತಂ ತತ್ರ ಕುತ ಸ್ತ್ವಹೋ ।**
**ಏವಂ ನಾಽಸ್ತ್ಯರ್ಥ ಮರ್ತ್ಯಂ ಚ ಕುತೋಽಮೃತ ಮಹೋದ್ಭವಃ ॥**

---

ಸಾಧನ ಸ್ವರೂಪನೂ, ಪಂಚೇಂದ್ರಿಯ ಸ್ವರೂಪನೂ, ಇವನೇ ಆಗಿದ್ದಾನೆ. ಪರಮಾತ್ಮನು ಅನ್ನಸ್ವರೂಪನೂ, ಪ್ರಾಣಿಗಳಿಗೆಲ್ಲಕ್ಕೂ ಅತ್ಮನೂ ಆಗಿದ್ದಾನೆ. ತಿನ್ನುವುದಕ್ಕೆ ಯೋಗ್ಯವಾದ ಪದಾರ್ಥರೂಪನಾದುದರಿಂದಲೇ ಅನ್ನ ವೆಂದು ಹೆಸರು ಬಂದಿದೆ. ಪರಮಾತ್ಮನು ಪ್ರಾಣವಾಯು ಸ್ವರೂಪನೂ, ಇಂದ್ರಿಯ ಸ್ವರೂಪನೂ, ಸಂಕಲ್ಪ ಸ್ವರೂಪನೂ, ಮನಸ್ಸಿನ ಸ್ವರೂಪನೂ, ಕಾಲಸ್ವರೂಪನೂ, ಚಂದ್ರಸ್ವರೂಪನೂ, ಅರ್ಧನಾರೀಶ್ವರ ಸ್ವರೂಪನೂ, ವಿಜ್ಞಾನ ಸ್ವರೂಪನೂ, ಎಂದು ಹೇಳಲ್ಪಟ್ಟಿದ್ದಾನೆ. ಆ ಪರಮೇಶ್ವರನಾದ ಪರಶಿವನು ಸತ್ಯ ಮತ್ತು ಆನಂದ ಸ್ವರೂಪನೂ, ಪಂಚಕೋಶ ರೂಪನೂ ಆಗಿದ್ದಾನೆ. ಜೀವರೂ ಈಶ್ವರನೂ ಒಂದೇ ಚೈತನ್ಯರೂಪರು.

೯೫-೯೭. ಹೀಗೆ ನಾನೇ ಸಕಲ ಜಗತ್ತಿನ ಸ್ವರೂಪನಾಗಿದ್ದೇನೆ. ನನ್ನಲ್ಲಿಯೇ ಸಕಲ ಪ್ರಪಂಚವೂ ಅಧ್ಯಸ್ತವಾಗಿ ತೋರುತ್ತಾ ಇದೆ. ನಾನು ಸ್ವತಂತ್ರನಾಗಿದ್ದರೂ ಜೀವನ ಸ್ವರೂಪನನ್ನು ತೆಗೆದುಕೊಂಡಾಗ ಪರಾಧೀನನ ಹಾಗೆ ಕಾಣುತ್ತೇನೆ. ವಿಚಾರಮಾಡಿದರೆ ಪರಾಧೀನತೆ ನನಗೆ ಲೇಶಮಾತ್ರವೂ ಇಲ್ಲ. ಒಂದು ಎಂಬ ಭಾವವೂ, ಎರಡನೆಯದೇ ಇಲ್ಲದಿರುವುದರಿಂದ, ಕಲ್ಪಿತವೇ ಸರಿ. ಹೀಗಿರುವಾಗ ಎರಡನೆಯದೆಂಬ ಭಾವವು ಹೇಗೆ ನಿಜವಾಗ ಬಲ್ಲದು ? ಈ ರೀತಿಯಲ್ಲಿ ವಿಚಾರ ಮಾಡಿದರೆ ಜೀವನಿಗೆ, ಮರಣ, ಉತ್ಪತ್ತಿಗಳೆಂಬುದೂ, ಸುಳ್ಳೇ, ಆಗಿವೆ. ಎಂದು ತಿಳಿಯಬೇಕು. ಪರಮಾತ್ಮನಿಗೆ ಹುಟ್ಟು ಸಾವುಗಳಿಲ್ಲ. ಪರಮಾತ್ಮನು

ನಾಂತಃ ಪ್ರಜ್ಞೋ ಬಹಿಃಪ್ರಜ್ಞೋ ನ ಚೋಭಯ ಗತ ಸ್ತಥಾ ।
ಸ ಪ್ರಜ್ಞಾನ ಘನಸ್ತ್ವೇವಂ ನ ಪ್ರಾಜ್ಞೋ ಜ್ಞಾನ ಪೂರ್ವಕಃ ॥೯೭॥
ವಿದಿತಂ ನಾಽಸ್ತಿ ವೇದ್ಯಂ ಚ ನಿರ್ವಾಣಂ ಪರಮಾರ್ಥತಃ ।
ನಿರ್ವಾಣಂ ಚೈವ ಕೈವಲ್ಯಂ ನಿ ಶ್ರೇಯಸ ಮನಾಮಯಂ ॥೯೮॥
ಅಮೃತಂ ಚಾಽಕ್ಷರಂ ಬ್ರಹ್ಮ ಪರಮಾತ್ಮಾ ಪರಾಪರಂ ।
ನಿರ್ವಿಕಲ್ಪಂ ನಿರಾಭಾಸಂ ಜ್ಞಾನಂ ಪರ್ಯಾಯ ವಾಚಕಂ ॥೯೯॥
ಪ್ರಸನ್ನಂ ಚ ಯದೇಕಾಗ್ರಂ ತದಾ ಜ್ಞಾನ ಮಿತಿ ಸ್ಮೃತಂ ।
ಅಜ್ಞಾನ ಮಿತರ ತ್ಸರ್ವಂ ನಾತ್ರ ಕಾರ್ಯಾ ವಿಚಾರಣಾ ॥೧೦೦॥

---

ವಿಶ್ವನಲ್ಲದ, ತೈಜಸನಲ್ಲದ. ಒಳಗಿನ ವಿಷಯುವನ್ನು ಅರಿಯದ, ಹೊರಗಿನ ವಿಷಯುಗಳನ್ನೂ ಅರಿಯದ, ಪ್ರಾಜ್ಞನಲ್ಲದ, ಈ ಎರಡನ್ನೂ ಅರಿಯದ, ಜ್ಞಾನದ ಗಟ್ಟಿಯೂ ಅಲ್ಲದ, ಎಂದರೆ ವೃತ್ತಿಜ್ಞಾನ ಸ್ವರೂಪನಲ್ಲದ, ಆತ್ಮನು ಜ್ಞಾನಸ್ವರೂಪನೇ ಆಗಿದ್ದಾನೆ. ಎಂದು ಭಾವವು.

೯೮. ಪರಮಾತ್ಮನಿಗಿಂತ ಬೇರೆಯಾದ ತಿಳಿಯದಿರುವುದೂ. ತಿಳಿಯಬೇಕಾದುದೂ, ಯಾವುದೂ ಇಲ್ಲ. ವಾಸ್ತವವಾಗಿ ಅವನು ಸುಖಸ್ವರೂಪನೂ, ಒಬ್ಬನೂ ಎಂದರೆ ಅದ್ವಿತರೂಪನೂ, ಮೋಕ್ಷಸ್ವರೂಪನೂ, ರೋಗರಹಿತನೂ ಆಗಿದ್ದಾನೆ. ಪರಶಿವನ ಪರತತ್ವವನ್ನು ತಿಳಿಸುವ ಹನ್ನೆರಡು ದಿವ್ಯನಾಮಗಳನ್ನು ಇಲ್ಲಿ ಸಂಗ್ರಹಿಸಿ ಹೇಳಿದೆ. ನಿರ್ವಾಣಂ ಎಂದು ಮೊದಲಾಗಿ ಜ್ಞಾನಂ. ಎಂಬ ನಾಮದವರೆಗಿನ ಹೆಸರುಗಳು ಪರ್ಯಾಯ ಪದಗಳಾಗಿವೆ.

೯೯-೧೦೦. ಪರಮಾತ್ಮನು ನಾಶರಹಿತನೂ, ಬ್ರಹ್ಮಸ್ವರೂಪನೂ, ಎಲ್ಲಕ್ಕಿಂತಲೂ ಅತ್ಯಂತ ಶ್ರೇಷ್ಠನೂ, ಸಂಶಯ ಮುಂತಾದ ಜ್ಞಾನದೋಷವಿಲ್ಲದವನೂ, ಅಜ್ಞಾನವಿಲ್ಲದವನೂ, ಜ್ಞಾನಸ್ವರೂಪನೂ, ಜ್ಞಾನವೆಂಬ ಅರ್ಥವನ್ನು ಕೊಡುವ ಹನ್ನೆರಡು ಹೆಸರುಳ್ಳವನೂ, ಕಲ್ಮಷವಿಲ್ಲದವನೂ, ಒಂದೇ ಮನಸ್ಸುಳ್ಳವನೂ ಆಗಿ, ಏಕಂ ಅದ್ವಿತೀಯ ಬ್ರಹ್ಮ ಒಂದೇ, ಅಗ್ರಂ ಮುಖ್ಯಸ್ವರೂಪವಾಗಿ, ಅಂತಃಕರಣದ ಸಮರ ಸಭಾವವಾಗಿರುವ, ಅವನೇ ಜ್ಞಾನಸ್ವರೂಪನೆಂದು ಹೇಳಲ್ಪಟ್ಟಿದ್ದಾನೆ. ಅವನನ್ನು

ಇತ್ಥಂ ಪ್ರಸನ್ನಂ ವಿಜ್ಞಾನಂ ಗುರು ಸಂಪರ್ಕಜಂ ಧ್ರುವಂ ।
ರಾಗ ದ್ವೇಷಾಽನೃತ ಕ್ರೋಧಂ ಕಾಮ ತೃಷ್ಣಾದಿಭಿಃ ಸದಾ ॥೧೦೧॥
ಅಪರಾ ಮೃಷ್ಟ ಮದ್ಯೈವ ವಿಜ್ಞೇಯಂ ಮುಕ್ತಿದಂ ತ್ವಿದಂ ।
ಅಜ್ಞಾನ ಮಲ ಪೂರ್ವತ್ವಾ ತ್ಪುರುಷೋ ಮಲಿನಃ ಸ್ಮೃತಃ ॥೧೦೨॥
ತತ್ಕ್ಷಯಾ ದ್ಧಿ ಭವೇನ್ಮುಕ್ತಿಃ ನಾಽನ್ಯಥಾ ಜನ್ಮ ಕೋಟಿಭಿಃ ।
ಜ್ಞಾನಮೇಕಂ ವಿನಾ ನಾಽಸ್ತಿ ಪುಣ್ಯ ಪಾಪ ಪರಿಕ್ಷಯಃ ॥೧೦೩॥
ಜ್ಞಾನಮೇವಾಽಭ್ಯಸೇತ್ತಸ್ಮಾ ನ್ಮುಕ್ತ್ಯರ್ಥಂ ಬ್ರಹ್ಮವಿತ್ತಮಾಃ ।
ಜ್ಞಾನಾಽಭ್ಯಾಸಾದ್ಧಿ ವೈ ಪುಂಸಾಂ ಬುದ್ಧಿ ರ್ಭವತಿ ನಿರ್ಮಲಾ ॥

---

ಬಿಟ್ಟು ಮಿಕ್ಕೆಲ್ಲವೂ, ಅಜ್ಞಾನವೇ ಎಂದು ತಿಳಿಯಬೇಕು. ಇದರಲ್ಲಿ ಸಂದೇಹವಿಲ್ಲ. ಹೀಗೆ ಶಿಷ್ಯನಲ್ಲಿ ಗುರುವಿನ ಈಕ್ಷಣಾನುಗ್ರಹ ರೂಪವಾದ ಸಂಗದಿಂದ ಅನುಭವಕ್ಕೆ ಬರುವ, ನಿತ್ಯವಾದ, ನಿರ್ಮಲವಾದ, ಇಚ್ಛೆ, ದ್ವೇಷ, ಸುಳ್ಳು, ಕೋಪ, ದುರಾಶೆ ಮುಂತಾದ ದೋಷಗಳಿಂದ ಬಿಡಲ್ಪಟ್ಟ ಜ್ಞಾನವು ಲಭಿಸುವುದು.

೧೦೨–೧೦೪. ಹೀಗೆ ಎಲ್ಲಾ ದೋಷಗಳಿಂದಲೂ ಬಿಡಲ್ಪಟ್ಟ ಜ್ಞಾನವೇ ಈಗಲೇ ಇಲ್ಲಿಯೇ, ಕಾಲಾಂತರ ದೇಶಾಂತರ ನಿರೀಕ್ಷಣೆಯ ಅವಶ್ಯಕತೆ ಇಲ್ಲದೆ ಮೋಕ್ಷಕ್ಕೆ ಕಾರಣವೆಂದು ತಿಳಿಯಿರಿ. ಜೀವನು ಅಜ್ಞಾನವೆಂಬ ಕೊಳಕಿನಿಂದ ಕೂಡಿರುವುದರಿಂದ ಕಲ್ಮಷವುಳ್ಳವನಾಗಿದ್ದಾನೆ. ಆ ಕಲ್ಮಷದಿಂದ, ಅಜ್ಞಾನವೆಂಬ ಕೊಳಕಿನಿಂದ, ಬಿಡುಗಡೆ ಹೊಂದಿದರೇ ಜೀವನಿಗೆ ಮೋಕ್ಷವು ದೊರೆಯುವುದು. ಅದುವಿನಾ ಕೋಟಿ ಜನ್ಮಗಳನ್ನು ಪಡೆದರೂ, "ಜ್ಞಾನಾದೇವ ಹಿಕೈವಲ್ಯಂ" ಎಂಬ ಶ್ರುತಿಯಂತೆ ಮೋಕ್ಷಪ್ರಾಪ್ತಿ ಯಾಗಲಾರದು. ಏಕೆಂದರೆ ಜ್ಞಾನ ಒಂದನ್ನು ಬಿಟ್ಟು ಈ ಪುಣ್ಯ, ಪಾಪಗಳು ನಾಶವಾಗಲು ಬೇರೊಂದು ಉಪಾಯವೇ ಇಲ್ಲ. ಎಲ್ಲೈ ಶ್ರೇಷ್ಠರಾದ ಬ್ರಹ್ಮಜ್ಞಾನಿಗಳೇ, ಆದ್ದರಿಂದ ಮೋಕ್ಷವನ್ನು ಹೊಂದಲು ಜ್ಞಾನವನ್ನೇ ಅಭ್ಯಾಸಮಾಡಬೇಕು. ಜ್ಞಾನವನ್ನು ಅಭ್ಯಾಸಮಾಡುವುದರಿಂದ ಮನುಷ್ಯರ ಬುದ್ಧಿಯು ಶುದ್ಧಿಯುಳ್ಳದ್ದಾಗುತ್ತದೆ.

**ತಸ್ಮಾತ್ಸದಾಽಭ್ಯಸೇತ್ ಜ್ಞಾನಂ ತನ್ನಿಷ್ಠ ಸ್ತತ್ಪರಾಯಣಃ ।**
**ಜ್ಞಾನೇ ನೈಕೇನ ತೃಪ್ತ ಸ್ಯ ತ್ಯಕ್ತ ಸಂಗಸ್ಯ ಯೋಗಿನಃ ॥೧೦೫॥**
**ಕರ್ತವ್ಯಂ ನಾಸ್ತಿ ವಿಪ್ರೇಂದ್ರಾ ಅಸ್ತಿಚೇ ತ್ತತ್ತ್ವವಿನ್ನ ಚ ।**
**ಇಹ ಲೋಕೇ ಪರೇ ಚಾಽಪಿ ಕರ್ತವ್ಯಂ ನಾಽಸ್ತಿ ತಸ್ಯ ವೈ ॥೧೦೬॥**
**ಜೀವನ್ಮುಕ್ತೋ ಯತಸ್ತಸ್ಮಾತ್ ಬ್ರಹ್ಮ ವಿತ್ಸರ್ವ ಮಾಽರ್ಥತಃ ।**
**ಜ್ಞಾನಾಽಭ್ಯಾಸ ರತೋ ನಿತ್ಯಂ ಜ್ಞಾನ ತತ್ತ್ವಾಽರ್ಥ ವಿತ್ಸ್ವಯಂ ॥**
**ಕರ್ತವ್ಯಾಽಭ್ಯಾಸ ಮುತ್ಸೃಜ್ಯ ಜ್ಞಾನ ಮೇವಾಽಧಿ ಗಚ್ಛತಿ ।**
**ವರ್ಣಾಽಶ್ರಮಾಭಿ ಮಾನೀ ಯಃ ತ್ಯಕ್ತ ಕ್ರೋಧೋ ದ್ವಿಜೋತ್ತಮಾಃ**

---

೧೦೫–೧೦೭. ಆದ್ದರಿಂದ ಬ್ರಾಹ್ಮಣನು ಬ್ರಹ್ಮಜ್ಞಾನವಲ್ಲಿಯೇ ಆಸಕ್ತಿಯುಳ್ಳವನಾಗಿ, ಬ್ರಹ್ಮನನ್ನು ಚಿಂತಿಸುತ್ತಾ ವಿಕ್ಷೇಪಗಳ ನಿವಾರಣೆಗಾಗಿ ಪುನಃಪುನಃ ಬ್ರಹ್ಮಜ್ಞಾನವನ್ನು ಅಭ್ಯಾಸಮಾಡಬೇಕು. ಅನಂತರ ಜ್ಞಾನವಾದುದರ ಗುರುತುಗಳು ಇವು. ಪ್ರಪಂಚದ ಸಂಬಂಧವನ್ನು ಬಿಟ್ಟು, ಯೋಗಿಯಾದ, ಜ್ಞಾನ ಒಂದರಿಂದಲೇ ತೃಪ್ತಿಯನ್ನು ಹೊಂದಿರುವ, ಬ್ರಹ್ಮಜ್ಞಾನಿಗೆ ಪ್ರಪಂಚದಲ್ಲಿ ಮಾಡಬೇಕಾದ ಕೆಲಸಗಳಾವುವೂ ಇರುವುದಿಲ್ಲ. ಆತ್ಮಾನಂ ಚೇದ್ವಿಜಾನೀಯಾದ ಹಮಸ್ಮೀತಿ ಪೂರುಷಃ । ಕಿಂಜಪನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ॥ ಎಂದು ಪಂಚದಶಿಯೂ ಹೇಳುತ್ತಿದೆ. ಹಾಗಲ್ಲದೆ ಕೆಲಸಮಾಡುವುದಿನ್ನೂ ಉಳಿದಿದ್ದರೆ ಅವನು ಇನ್ನೂ ಪೂರ್ಣ ಬ್ರಹ್ಮಜ್ಞಾನಿಯಲ್ಲವೆಂದು ತಿಳಿಯಬೇಕು. ಬ್ರಹ್ಮಜ್ಞಾನಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ, ಮಾಡಬೇಕಾದದ್ದು ಏನೂ ಇರುವುದಿಲ್ಲವು. ಬ್ರಹ್ಮಜ್ಞಾನಿಯು ಬದುಕಿದ್ದರೂ ಮೋಕ್ಷವನ್ನು ಅಪರೋಕ್ಷಸ್ವರೂಪದಿಂದ ಹೊಂದಿದವನಾಗಿ, ಬ್ರಹ್ಮನಲ್ಲಿಯೇ ವಾಸ್ತವವಾಗಿ ಐಕ್ಯವನ್ನು ಹೊಂದಿರುತ್ತಾನೆ. ಆದರೂ ಜ್ಞಾನದ ನಿಜವಾದ ಸ್ವರೂಪವನ್ನು ಶಾಸ್ತ್ರಶಬ್ದ ಸಹಾಯದಿಂದ ತಿಳಿದಿದ್ದರೂ, ಅವನು ಆ ಶಬ್ದಜ್ಞಾನರೂಪವಾದ ಬ್ರಹ್ಮಜ್ಞಾನವನ್ನು ಮನಸ್ಸಿನಲ್ಲಿಯೇ ಪುನಃ ಪುನಃ ಯೋಚಿಸುತ್ತಾ ಅಪರೋಕ್ಷಾನುಭವಮಾಡುತ್ತಿರುತ್ತಾನೆ.

೧೦೮–೧೧೦. ಎಲೈ ಬ್ರಾಹ್ಮಣ ಶ್ರೇಷ್ಠರೇ, ಬ್ರಹ್ಮಜ್ಞಾನಿಯು ಕರ್ಮಮಾಡುವುದರಲ್ಲಿ ಸಂಕಲ್ಪವನ್ನು ಬಿಟ್ಟು ಜ್ಞಾನವನ್ನೇ ಹೊಂದಿರು

ಅನ್ಯತ್ರ ರಮತೇ ಮೂಢಃ ಸೋಽಜ್ಞಾನೀ ನಾಽತ್ರ ಸಂಶಯಃ ।
ಸಂಸಾರ ಹೇತುರಜ್ಞಾನಂ ಸಂಸಾರ ಸ್ತನು ಸಂಗ್ರಹಃ ॥೧೦೯॥
ಮೋಕ್ಷಹೇತು ಸ್ತಥಾ ಜ್ಞಾನಂ ಮುಕ್ತಃ ಸ್ವಾಽತ್ಮನ್ಯವಸ್ಥಿತಃ ।
ಅಜ್ಞಾನೇ ಸತಿ ವಿಪ್ರೇಂದ್ರಾಃ ಕ್ರೋಧಾಽದ್ಯಾ ನಾಽತ್ರ ಸಂಶಯಃ ॥
ಕ್ರೋಧೋ ಹರ್ಷಸ್ತಥಾ ಲೋಭೋ ಮೋಹೋ ದಂಭೋ ದ್ವಿಜೋತ್ತಮಾಃ ।
ಧರ್ಮಾ ಧರ್ಮೌ ಹಿ ತೇಷಾಂ ಚ ತದ್ವಶಾತ್ತನು ಸಂಗ್ರಹಃ॥೧೧೧॥

---

ತ್ತಾನೆ. ಇವನು ವರ್ಣಾಶ್ರಮಧರ್ಮ ಮುಂತಾದ ಜ್ಞಾನೇತರವಾದ ಸಾಧನಗಳಲ್ಲೂ ಅಭಿಮಾನವನ್ನಿಡವೆ. ಕೋಪಾದಿಗಳನ್ನೆಲ್ಲವನ್ನೂ ಬಿಟ್ಟು ಜ್ಞಾನಿಯಾಗಿರುತ್ತಾನೆ. ಆದರೆ ಮೂಢನು ಇಂಥಾ ಜ್ಞಾನಮಾರ್ಗವನ್ನು ಬಿಟ್ಟು, ಪ್ರಾಪಂಚಿಕ ವಸ್ತುಗಳಲ್ಲಿ ಆಶೆಯನ್ನು ತೋರಿಸುತ್ತಾನೆ. ಇವನು ಅಜ್ಞಾನಿಯೆಂಬುವುದರಲ್ಲಿ ಸಂದೇಹವಿಲ್ಲ. ಅಜ್ಞಾನವು ಮನುಷ್ಯನಿಗೆ ಸಂಸಾರಕ್ಕೆ ಕಾರಣವಾಗಿದೆ. ಸಂಸಾರವೆಂದರೆ ಕರ್ತೃತ್ವ, ಭೋಕ್ತೃತ್ವ, ಜನನ, ಮರಣಗಳ ಪ್ರವಾಹದಲ್ಲಿ ಸಿಕ್ಕಿಕೊಂಡಿರುವಿಕೆಯಿಂದ ಅನೇಕ ಕಷ್ಟಗಳಿಗೆ ಈಡಾದ ಶರೀರವನ್ನು ಹೊಂದುತ್ತಿರುವುದೆಂದರ್ಥವು. ಅದಕ್ಕೆ ವಿರುದ್ಧವಾಗಿ ಜ್ಞಾನವು ಮೋಕ್ಷಕ್ಕೆ ಕಾರಣವಾಗಿದೆ. ಮೋಕ್ಷವನ್ನು ಹೊಂದಿದವನು ಯಾವಾಗಲೂ ಪರಮಾತ್ಮನಲ್ಲೇ ಸ್ವರೂಪದಿಂದ ಇರುವನು. ಎಲೈ ಬ್ರಾಹ್ಮಣ ಶ್ರೇಷ್ಠರೇ, ಅಜ್ಞಾನವಿದ್ದರೆ ಕೋಪವೇ ಮೊದಲಾದುವುಗಳು ಉಂಟಾಗುವುದರಲ್ಲಿ ಸಂದೇಹವೇ ಇಲ್ಲ.

೧೧೧–೧೧೩. ಮನುಷ್ಯರಿಗೆ ಕೋಪ, ಸಂತೋಷ, ಆಶೆ, ಅಜ್ಞಾನ, ಜಂಭ, ಧರ್ಮ, ಅಧರ್ಮ, ಈ ಎಲ್ಲವೂ ಮತ್ತು ಶರೀರವೂ, ಮಾಯೆಯಿಂದಲೇ ಉಂಟಾಗುತ್ತವೆ. ಶರೀರವು ಒಂದಾದ ಮೇಲೆ ಮತ್ತೊಂದರಂತೆ ತಪ್ಪದೆ ಅನುಸ್ಯೂತವಾಗಿ ಎಡೆಬಿಡದೆ ಬರುತ್ತಿದ್ದರೆ ಅಂತಹ ಶರೀರವು ಬರುತ್ತಿರುವವರೆಗೂ ಕ್ಲೇಶವು ತಪ್ಪಿದ್ದಲ್ಲ. ಆದ್ದರಿಂದ ವಿದ್ವಾಂಸನು ಇವೆಲ್ಲಕ್ಕೂ ಕಾರಣವಾದ ಅವಿದ್ಯೆ, ಯನ್ನು ಹಾಳುಮಾಡಬೇಕು. ವಿದ್ಯೆ

ಶರೀರೇ ಸತಿ ವೈ ಕ್ಲೇಶಃ ಸೋಽವಿದ್ಯಾಂ ಸಂತ್ಯಜೇದ್ಬುಧಃ ।
ಅವಿದ್ಯಾಂ ವಿದ್ಯಯಾ ಹಿತ್ವಾ ಸ್ಥಿತ ಸ್ಯೈವ ಚ ಯೋಗಿನಃ ॥೧೧೩॥
ಕ್ರೋಧಾ ದ್ಯಾ ನಾಶಮಾಯಾಂತಿ ಧರ್ಮಾಧರ್ಮೌ ಚ ವೈ ದ್ವಿಜಾಃ
ತತ್ಕ್ಷಯಾ ಚ್ಚ ಶರೀರೇಣ ನ ಪುನಃ ಸಂಪ್ರಯುಜ್ಯತೇ ॥೧೧೪॥
ಸ ಏವ ಮುಕ್ತಃ ಸಂಸಾರಾ ದ್ದುಃಖತ್ರಯ ವಿವರ್ಜಿತಃ ।
ಏವಂ ಜ್ಞಾನಂ ವಿನಾ ನಾಸ್ತಿ ಧ್ಯಾನಂ ಧ್ಯಾತುರ್ದ್ವಿಜರ್ಷಭಾಃ ॥
ಜ್ಞಾನಂ ಗುರೋರ್ಹಿ ಸಂಪರ್ಕಾನ್ನ ವಾಚಾ ಪರಮಾರ್ಥತಃ ।
ಚತು ರ್ವ್ಯೂಹ ಮಿತಿ ಜ್ಞಾತ್ವಾ ಧ್ಯಾತಾ ಧ್ಯಾನಂ ಸಮಭ್ಯಸೇತ್ ॥
ಸಹಜಾಽಗಂತುಕಂ ಪಾಪ ಮಸ್ಥಿವಾಗು ದ್ಭವಂ ತಥಾ ।

---

ಯಿಂದ ಅವಿದ್ಯೆಯನ್ನು ನಾಶಮಾಡುವ ಯೋಗಿಗೆ, ಕೋಪವೇ ಮೊದಲಾದುವುಗಳೂ, ಧರ್ಮ, ಅಧರ್ಮಗಳೂ, ನಾಶವಾಗುತ್ತವೆ. ಇವೆಲ್ಲವೂ ನಷ್ಟವಾಗುವುದರಿಂದ ಯೋಗಿಯು ಪುನಃ ಶರೀರ ಮುಂತಾದುವನ್ನೂ, ಅವುಗಳಲ್ಲಿ ನಾನು ನನ್ನದು ಎಂಬ ಅಭಿಮಾನವನ್ನೂ ಹೊಂದುವುದೇ ಇಲ್ಲ.

೧೧೫–೧೧೬. ಯಾವನು ಹೀಗೆ ಜ್ಞಾನಿಯಾಗಿದ್ದಾನೆಯೋ ಅವನೇ ನಿಜವಾಗಿ ಸಂಸಾರದಿಂದ ಬಿಡುಗಡೆಯನ್ನು ಹೊಂದಿದವನೂ, ಆಧ್ಯಾತ್ಮಿಕ, ಆಧಿಭೌತಿಕ, ಅಧಿದೈವಿಕಗಳೆಂಬ ತಾಪತ್ರಯಗಳಿಲ್ಲದವನೂ ಜೀವನ್ಮುಕ್ತನೂ ಆಗಿದ್ದಾನೆ. ಎಲೈ ಬ್ರಾಹ್ಮಣ ಶ್ರೇಷ್ಠರೇ, ಹೀಗೆ ಜ್ಞಾನವಿಲ್ಲದೇ ಈಶ್ವರನ ಧ್ಯಾನವು ಸಿದ್ಧಿಸುವುದಿಲ್ಲ. ವಾಸ್ತವವಾಗಿ ಇಂಥಾ ಜ್ಞಾನವು ಗುರುವಿನ ಈಕ್ಷಣಾನುಗ್ರಹದಿಂದಲೇ ಬರುವುದೇ ವಿನಾ ಬರಿಯ ಬಾಯಿ ಮಾತಿನಿಂದಲ್ಲವು. ಧ್ಯಾನಮಾಡುವವನು ಗುರುಪ್ರಸಾದದಿಂದುಂಟಾದ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಎಂಬ ನಾಲ್ಕು ರೂಪದಲ್ಲೂ ನಿತ್ಯನಾದ ಆತ್ಮನ ಧ್ಯಾನವನ್ನು ಅಭ್ಯಾಸ ಮಾಡಬೇಕು. ಜ್ಞಾನವೆಂಬ ಬೆಂಕಿಯು ಮನುಷ್ಯನ ಸಹಜವಾದ ಮತ್ತು ಆಗುಂತುಕವಾದ, ಶರೀರದಿಂದ ಮತ್ತು ಮಾತಿನಿಂದ ಹುಟ್ಟಿದ, ಎಲ್ಲಾ ಬಗೆಯ ಪುಣ್ಯ ಪಾಪಗಳನ್ನೂ, ಬೆಂಕಿಯು ಒಣಗಿದ ಕಟ್ಟಿಗೆಯನ್ನು ಒಂದು ಕ್ಷಣದಲ್ಲೇ ಸುಟ್ಟು ಹಾಕು

ಜ್ಞಾನಾಽಗ್ನಿ ರ್ದಹತೇ ಕ್ಷಿಪ್ರಂ ಶುಷ್ಕೇಂಧನ ಮಿವಾಽನಲಃ ॥೧೧೬॥
ಜ್ಞಾನಾತ್ಪರತರಂ ನಾಽಸ್ತಿ ಸರ್ವ ಪಾಪ ವಿನಾಶನಂ ।
ಅಭ್ಯಸೇ ಚ್ಚ ಸದಾ ಜ್ಞಾನಂ ಸರ್ವ ಸಂಗ ವಿವರ್ಜಿತಃ ॥೧೧೭॥
ಜ್ಞಾನಿನಃ ಸರ್ವ ಪಾಪಾನಿ ಜೀರ್ಯಂತೇ ನಾಽತ್ರ ಸಂಶಯಃ ।
ಕ್ರೀಡನ್ನಪಿ ನ ಲಿಪ್ಯೇತ ಪಾಪೈ ರ್ನಾನಾ ವಿಧೈರಪಿ ॥೧೧೮॥
ಜ್ಞಾನಂ ಯಥಾ ತಥಾ ಧ್ಯಾನಂ ತಸ್ಮಾ ದ್ಧ್ಯಾನಂ ಸಮಭ್ಯಸೇತ್ ।
ಧ್ಯಾನಂ ನಿರ್ವಿಷಯಂ ಪ್ರೋಕ್ತ ಮಾದೌ ಸ ವಿಷಯಂ ತಥಾ ॥೧೧೯॥

---

ವಂತೆ, ಸುಟ್ಟುಹಾಕಿ ಬಿಡುತ್ತದೆ. ಎಂದರೆ ಅವುಗಳಲ್ಲಿ ಅಭಿಮಾನ ವಿಲ್ಲದ್ದರಿಂದ ಸುಖ ದುಃಖಗಳನ್ನು ಕೊಡುವ ಶಕ್ತಿಯನ್ನು ನಾಶಮಾಡುತ್ತದೆ.

೧೧೭–೧೧೯. ಹೀಗೆ ಎಲ್ಲಾ ಪಾಪವನ್ನೂ ನಾಶಮಾಡುವ ವಿಷಯದಲ್ಲಿ ಜ್ಞಾನಕ್ಕಿಂತಲೂ ಬೇರೆಯಾದ ಮತ್ತೊಂದು ಸಾಧನವಿಲ್ಲವು. ಶ್ರೇಷ್ಠವಾದ ಪಡೆಯಬೇಕಾದ ವಸ್ತುವೂ ಬೇರೊಂದಿಲ್ಲವು. ಆದ್ದರಿಂದ ಬ್ರಾಹ್ಮಣನು ನಾನು ನನ್ನದು, ಎಂಬ ವ್ಯಾಮೋಹವನ್ನು ಬಿಟ್ಟು ಜ್ಞಾನವನ್ನು ಎಲ್ಲಾ ಕಾಲದಲ್ಲಿಯೂ ಅಭ್ಯಾಸ ಮಾಡಬೇಕು. ಜ್ಞಾನಿಗಳ ಎಲ್ಲಾ ಪಾಪಗಳೂ ನಾಶವಾಗುವವೆಂಬ ವಿಷಯದಲ್ಲಿ ಸಂದೇಹವಿಲ್ಲ. ಜ್ಞಾನಿಯು ವಿನೋದವಾಗಿದ್ದರೂ ಅವನಿಗೆ ಯಾವ ಬಗೆಯ ಪಾಪಗಳೂ ಅಂಟುವುದೇ ಇಲ್ಲ. ಇಂತಹ ಮಹಿಮೆಯುಳ್ಳ ಜ್ಞಾನವು ಮುಕ್ತಿಗೆ ಹೇಗೆ ಉತ್ತಮ ಸಾಧನವೋ, ಹಾಗೆ ಧ್ಯಾನವೂ ಜ್ಞಾನಸಾಧನವು. ಆದುದರಿಂದ ಜ್ಞಾನದ ಅಭ್ಯಾಸಕ್ರಮವು ಹೇಗೋ ಹಾಗೆಯೇ ಧ್ಯಾನಕ್ರಮವೂ ಸಾಧನ ವೆಂದು ತಿಳಿದು, ಧ್ಯಾನವನ್ನೂ ಅಭ್ಯಾಸಮಾಡಬೇಕು. ಧ್ಯಾನವು ಸಾಲಂಬವೆಂದೂ ನಿರಾಲಂಬವೆಂದೂ ಎರಡು ಬಗೆಯಾಗಿದೆ. ಅವುಗಳಲ್ಲಿ ಸಾಲಂಬವು ಮೊದಲು ಒಂದು ಮೂರ್ತಿಯನ್ನು ಉದ್ದೇಶಿಸಿರುತ್ತದೆ. ಚಿತ್ತೈಕಾಗ್ರತೆಯು ಸಿದ್ಧಿಸಿದಮೇಲೆ ಕೊನೆಗೆ ನಿರಾಲಂಬ ಧ್ಯಾನವು ಕೇವಲ ನಿರಾಕಾರ ಬ್ರಹ್ಮ ಸ್ವರೂಪವನ್ನೂ ಉದ್ದೇಶಿಸಿದುದೂ ಆಗಿರುತ್ತದೆ.

ಷಟ್ಪ್ರಕಾರಂ ಸಮಭ್ಯಸ್ಯ ಚತುಃ ಷಟ್‌ದಶಭಿ ಸ್ತಥಾ ।
ತಥಾ ದ್ವಾದಶಧಾ ಚೈವ ಪುನಃ ಷೋಡಶಧಾ ಕ್ರಮಾತ್ ॥೧೨೦॥
ದ್ವಿಧಾಽಭ್ಯಸ್ಯ ಚ ಯೋಗೀಂದ್ರೋ ಮುಚ್ಯತೇ ನಾಽತ್ರ ಸಂಶಯಃ ।
ಶುದ್ಧ ಜಾಂಬೂನದಾ ಕಾರಂ ವಿಧೂ ಮಾಂಗಾರ ಸನ್ನಿಭಂ ॥೧೨೧॥
ಪೀತಂ ರಕ್ತಂ ಸಿತಂ ವಿದ್ಯು ತ್ಕೋಟಿ ಕೋಟಿ ಸಮಪ್ರಭಂ ।
ಅಥವಾ ಬ್ರಹ್ಮ ರಂಧ್ರಸ್ಥಂ ಚಿತ್ತಂ ಕೃತ್ವಾ ಪ್ರಯತ್ನತಃ ॥೧೨೨॥
ನ ಸಿತಂ ವಾಽಸಿತಂ ಪೀತಂ ನ ಸ್ಮರೇದ್ಬ್ರಹ್ಮ ವಿದ್ಭವೇತ್ ।
ಅಹಿಂಸಕಃ ಸತ್ಯವಾದೀ ಅಸ್ತೇಯೀ ಸರ್ವ ಯತ್ನತಃ ॥೧೨೩॥
ಪರಿಗ್ರಹ ವಿನಿರ್ಮುಕ್ತೋ ಬ್ರಹ್ಮಚಾರೀ ದೃಢವ್ರತಃ ।
ಸಂತುಷ್ಟಃ ಶೌಚ ಸಂಪನ್ನಃ ಸ್ವಾಧ್ಯಾಯ ನಿರತಃ ಸದಾ ॥೧೨೪॥

---

೧೨೦–೧೨೨. ಯೋಗಿಯು ಆತ್ಮನನ್ನು ಆರುವಿಧವಾಗಿಯೂ, ಆರು, ನಾಲ್ಕು, ಹತ್ತು, ಹನ್ನೆರಡು ಬಗೆಯಲ್ಲಿಯೂ, ಹದಿನಾರು ವಿಧವಾಗಿಯೂ, ಎರಡು ವಿಧದಲ್ಲಿಯೂ, ಧ್ಯಾನಮಾಡಿದರೆ ಮೋಕ್ಷವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಈ ಬಗೆಗಳ ವಿಶೇಷ ಪ್ರಕಾರಗಳನ್ನು ಶಿವರಹಸ್ಯದ ಹತ್ತನೆಯ ಅಂಶದಲ್ಲಿ ಹೇಳಿದೆ. ಶುದ್ಧವಾದ ಚಿನ್ನದ ಬಣ್ಣವುಳ್ಳ ಹೊಗೆಯಿಲ್ಲದ ಬೆಂಕಿಗೆ ಸಮಾನವಾದ, ಹೊಂಬಣ್ಣದ, ಕೆಂಪಗಿರುವ, ಬೆಳ್ಳಗಿರುವ, ಕೋಟ್ಯಾಂತರ ಮಿಂಚಿಗೆ ಸಮಾನ ಕಾಂತಿಯುಳ್ಳ ಯೋಗಿಯು ಜ್ಞಾನವನ್ನು ಹೊಂದಿ, ಮನಸ್ಸನ್ನು ಬ್ರಹ್ಮರಂದ್ರದ ಕಡೆಗೆ ತಿರುಗಿಸಿ, ಪ್ರಯತ್ನ ಪೂರ್ವಕವಾಗಿ ಮೋಕ್ಷವನ್ನು ಹೊಂದಬೇಕು.

೧೨೩–೧೨೫. ಅಥವಾ ಧ್ಯಾನಯೋಗಿಯು ಬಿಳಿಯ, ಕಪ್ಪಾದ, ಕೆಂಪನೆಯ, ಮತ್ತು ಹೊಂಬಣ್ಣದ ಆಕಾರವನ್ನು ಧ್ಯಾನಿಸದೆ ಕಡೆಗೆ ನಿರಾಲಂಬ ಧ್ಯಾನದಿಂದ ಬ್ರಹ್ಮಜ್ಞಾನಿಯಾಗಬೇಕು. ಮತ್ತು ಇಂತಹ ಜ್ಞಾನವುಂಟಾಗಬೇಕಾದರೆ ಅನುಸರಿಸ ಬೇಕಾದ ನಿಯಮಗಳು ಇವು. ಇವನು ಸತ್ಯವನ್ನು ಹೇಳುವವನಾಗಿಯೂ, ಕಳ್ಳತನವಿಲ್ಲದವನಾಗಿಯೂ, ದಾನವೇ ಮುಂತಾದುದನ್ನು ತೆಗೆದುಕೊಳ್ಳದೇ ಇರುವವನಾಗಿಯೂ,

ಮದ್ಭಕ್ತ ಶ್ಚಾಭ್ಯಸೇ ಧ್ಯಾನಂ ಗುರು ಸಂಪರ್ಕಜಂ ಧ್ರುವಂ ।
ನ ಬುಧ್ಯತಿ ತಥಾ ಧ್ಯಾತಾ ಸ್ಥಾಪ್ಯ ಚಿತ್ತಂ ದ್ವಿಜೋತ್ತಮಾಃ ॥

ನ ಜಾಂಭಿ ಮನ್ಯತೇ ಯೋಗೀ ನ ಪಶ್ಯತಿ ಸಮಂತತಃ ।
ನ ಘ್ರಾತಿ ನ ಶೃಣೋತ್ಯೇವ ಲೀನಃ ಸ್ವಾತ್ಮನಿ ಯಃ ಸ್ವಯಂ ॥೧೨೬॥

ನ ಚ ಸ್ಪರ್ಶಂ ವಿಜಾನಾತಿ ಸ ವೈ ಸಮರಸಃ ಸ್ಮೃತಃ ।
ಪಾರ್ಥಿವೇ ಪಟಲೇ ಬ್ರಹ್ಮಾ ವಾರಿತತ್ತ್ವೇ ಹರಿಃ ಸ್ವಯಂ ॥೧೨೭॥

ವಾಹ್ನೇಯೇ ಕಾಲ ರುದ್ರಾಖ್ಯೋ ವಾಯು ತತ್ತ್ವೇ ಮಹೇಶ್ವರಃ ।
ಸುಷಿರೇ ಸ ಶಿವಃ ಸಾಕ್ಷಾತ್ ಕ್ರಮಾದೇವಂ ವಿಚಿಂತಯೇತ್ ॥

---

ಬ್ರಹ್ಮಚಾರಿಯಾಗಿಯೂ, ದೃಢನಿಶ್ಚಯ ಉಳ್ಳವನಾಗಿಯೂ, ಸಂತೋಷ ಉಳ್ಳವನಾಗಿಯೂ, ಶುದ್ಧನಾಗಿಯೂ, ವೇದಾಧ್ಯಯನದಲ್ಲಿ ಆಸಕ್ತನಾಗಿಯೂ, ಶಿವನಾದ ನನ್ನ ಭಕ್ತನಾಗಿಯೂ, ಇರುತ್ತಾ ಗುರುವಿನ ಈಕ್ಷಣಾನುಗ್ರಹದ ಸಂಗದಿಂದ ಲಭಿಸಿದ ಧ್ಯಾನಯೋಗವನ್ನು ಆಚರಿಸುತ್ತಿರಬೇಕು. ಧ್ಯಾನಮಾಡುವವನು ಶಿವನಲ್ಲಿಯೇ ಮನಸ್ಸನ್ನಿಟ್ಟು ಉಳಿದ ಯಾವ ವಿಷಯುಗಳನ್ನೂ ತಿಳಿಯುವುದೇ ಇಲ್ಲ.

೧೨೬–೧೨೮. ಧ್ಯಾನಯೋಗವನ್ನು ಅಭ್ಯಾಸಮಾಡುವವನು ಯಾವ ಇತರ ವಿಷಯುಗಳಲ್ಲಿಯೂ, ಅಭಿಮಾನವಿಡುವುದಿಲ್ಲ. ಸುತ್ತಮುತ್ತಲೂ ನೋಡುವುದಿಲ್ಲ. ಅವನಿಗೆ ಏನನ್ನೂ ಮೂಸಿ ನೋಡುವುದಾಗಲೀ, ಕೇಳುವುದಾಗಲೀ ಇಲ್ಲ. ಅವನು ಈ ರೀತಿಯಲ್ಲಿ ಪರಮಾತ್ಮನಲ್ಲಿ ಅಡಗಿರುತ್ತಾನೆ. ಅವನಿಗೆ ಮುಟ್ಟುವಿಕೆಯೂ ಗೊತ್ತಾಗುವುದಿಲ್ಲ. ಹೀಗೆ ಅವನು ಮನಸ್ಸನ್ನು ಸಾಮ್ಯ ಸ್ಥಿತಿಯಲ್ಲಿ ರಾಗದ್ವೇಷಗಳಿಲ್ಲದಂತೆ ಹಿಡಿದಿರುತ್ತಾನೆ. ಅವನು ಮಣ್ಣಿನಲ್ಲಿ ಬ್ರಹ್ಮತತ್ತ್ವವನ್ನೂ, ನೀರಿನಲ್ಲಿ ವಿಷ್ಣುತತ್ತ್ವವನ್ನೂ, ಬೆಂಕಿಯಲ್ಲಿ ಪ್ರಳಯಕಾಲದ ರುದ್ರನನ್ನೂ, ವಾಯುವಿನಲ್ಲಿ ಮಹೇಶ್ವರನನ್ನೂ, ಆಕಾಶದಲ್ಲಿ ಸಾಕ್ಷಾತ್ ಶಿವನನ್ನೂ, ಕ್ರಮವಾಗಿ ಧ್ಯಾನಮಾಡಬೇಕು. ಹೀಗೆ ಪಂಚಭೂತತತ್ತ್ವಗಳಲ್ಲಿ ಆಯಾ ದೇವತಾ ಧ್ಯಾನವನ್ನು ಮಾಡುತ್ತಿರಬೇಕು.

**ಕ್ಷಿತೌ ಶರ್ವಃ ಸ್ಮೃತೋ ದೇವೋ ಹ್ಯಪಾಂ ಭವ ಇತಿ ಸ್ಮೃತಃ ।**
**ರುದ್ರ ಏವ ತಥಾ ವಹ್ನಾ ವುಗ್ರೋ ವಾಯೌ ವ್ಯವಸ್ಥಿತಃ ॥೧೨೯॥**
**ಭೀಮಃ ಸುಷಿರ ನಾಕೇಽಸೌ ಭಾಸ್ಕರೇ ಮಂಡಲೇ ಸ್ಥಿತಃ ।**
**ಈಶಾನಃ ಸೋಮ ಬಿಂಬೇ ಚ ಮಹಾದೇವ ಇತಿ ಸ್ಮೃತಃ ॥೧೩೦॥**
**ಪುಂಸಾಂ ಪಶುಪತಿ ರ್ದೇವಃ ಚಾಽಷ್ಟಧಾಽಹಂ ವ್ಯವಸ್ಥಿತಃ ।**
**ಕಾಠಿನ್ಯಂ ಯತ್ತನೌ ಸರ್ವಂ ಪಾರ್ಥಿವಂ ಪರಿಗೀಯತೇ ॥೧೩೧॥**
**ಆಪ್ಯಂ ದ್ರವಮಿತಿ ಪ್ರೋಕ್ತಂ ವರ್ಣಾಖ್ಯೋ ವಹ್ನಿರುಚ್ಯತೇ ।**
**ಯತ್ಸಂಚರತಿ ತದ್ವಾಯುಃ ಸುಷಿರಂ ಯದ್ದ್ವಿಜೋತ್ತಮಾಃ ॥೧೩೨॥**
**ತದಾಕಾಶಂ ಚ ವಿಜ್ಞಾನಂ ಶಬ್ದಜಂ ವ್ಯೋಮ ಸಂಭವಂ ।**
**ತಥೈವ ವಿಪ್ರಾ ವಿಜ್ಞಾನಂ ಸ್ಪರ್ಶಾಖ್ಯಂ ವಾಯು ಸಂಭವಂ ॥೧೩೩॥**
**ರೂಪಂ ವಾಹ್ನೇಯ ಮಿತ್ಯುಕ್ತ ಮಾಪ್ಯಂ ರಸಮಯಂ ದ್ವಿಜಾಃ ।**
**ಗಂಧಾಖ್ಯಂ ಪಾರ್ಥಿವಂ ಭೂಯಃ ಚಿಂತಯೇ ದ್ಭಾಸ್ಕರಂ ಕ್ರಮಾತ್**

---

೧೨೯—೧೩೧. ಸ್ವಾಮಿಯಾದ ಶಿವನು, ಭೂಮಿಯಲ್ಲಿ ಶರ್ವನೆಂದೂ, ನೀರಿನಲ್ಲಿ ಭವ ನೆಂದೂ, ಬೆಂಕಿಯಲ್ಲಿ ರುದ್ರನೆಂದೂ, ವಾಯುವಿನಲ್ಲಿ ಉಗ್ರನೆಂದೂ, ಆಕಾಶದಲ್ಲಿ ಭೀಮನೆಂದೂ, ಸೂರ್ಯಮಂಡಲದಲ್ಲಿ ಈಶಾನನೆಂದೂ, ಚಂದ್ರ ಬಿಂಬದಲ್ಲಿ ಮಹಾದೇವನೆಂದೂ, ಕರೆಯಲ್ಪಡುತ್ತಾನೆ. 'ಪುರುಷರಿಗೂ ಮತ್ತು ಪಶುಗಳಿಗೂ ಅಧಿಪತಿಯಾದ ನಾನು ಎಂಟು ವಿಧವಾಗಿ ಅಷ್ಟಮೂರ್ತಿ ಸ್ವರೂಪನೂ, ಆಗಿದ್ದೇನೆ. ಇನ್ನು ಶರೀರದಲ್ಲಿರುವ ಪಂಚಭೌತ ಭಾಗಗಳು ಹೀಗಿವೆ. ಗಟ್ಟಿಯಾದ ಭಾಗವು ಭೂಮಿಗೆ ಸಂಬಂಧ ಪಟ್ಟದ್ದೆಂದು ತಿಳಿಯಬೇಕು.

೧೩೨—೧೩೪. ಶರೀರದಲ್ಲಿ ದ್ರವಭಾಗವು ನೀರಿಗೆ ಸಂಬಂಧಪಟ್ಟದ್ದೆಂದೂ, ಬಣ್ಣವು ಬೆಂಕಿಗೆ ಸಂಬಂಧಪಟ್ಟದ್ದೆಂದೂ, ಚಲಿಸುವ ಕಾರ್ಯವು ವಾಯುವಿಗೆ ಸಂಬಂಧಪಟ್ಟದ್ದೆಂದೂ, ರಂಧ್ರಗಳು ಆಕಾಶಕ್ಕೆ ಸಂಬಂಧ ಪಟ್ಟದ್ದೆಂದೂ, ತಿಳಿದು ಧ್ಯಾನಮಾಡುತ್ತಿರಬೇಕು. ಅಲ್ಲದೆ ಮುಟ್ಟುವಿಕೆಯು ವಾಯುವಿನಿಂದ ಬಂದದ್ದೆಂದೂ, ರೂಪವು ಬೆಂಕಿಯಿಂದ ಬಂದದ್ದೆಂದೂ, ರುಚಿಯು ನೀರಿನಿಂದ ಬಂದದ್ದೆಂದೂ, ವಾಸನೆಯು ಭೂಮಿಯಿಂದ ಬಂದದ್ದೆಂದೂ, ತಿಳಿಯಬೇಕು. ಅಲ್ಲದೆ ಶರೀರದ ಅವಯವಗಳಲ್ಲಿ ಧ್ಯಾನಿಸಬೇಕಾದ ದೇವತೆಗಳು ಇವು.

ನೇತ್ರೇ ಚ ದಕ್ಷಿಣೇ ವಾಮೇ ಸೋಮಂ ಹೃದಿ ವಿಭುಂ ದ್ವಿಜಾಃ ।
ಆಜಾನು ಪೃಥಿವೀತತ್ತ್ವಮಾನಾಭೇ ರ್ವಾರಿ ಮಂಡಲಂ ॥೧೩೫॥

ಆ ಕಂಠಂ ವಹ್ನಿ ತತ್ತ್ವಂ ಸ್ಯಾ ಲ್ಲಲಾಟಾಂತಂ ದ್ವಿಜೋತ್ತಮಾಃ ।
ವಾಯುವ್ಯಂ ವೈ ಲಲಾಟಾದ್ಯಂ ವ್ಯೋಮಾಖ್ಯಂವಾ ಶಿಖಾಗ್ರಕಂ ॥

ಹಂಸಾಽಖ್ಯಂ ಚ ತತೋ ಬ್ರಹ್ಮ ವ್ಯೋಮ್ನ ಶ್ಚೋರ್ಧ್ವಂ ತತಃ ಪರಂ
ವ್ಯೋಮಾಖ್ಯೋ ವ್ಯೋಮ ಮಧ್ಯಸ್ಥೋ ಹ್ಯಯಂಪ್ರಾಥಮಿಕಃ ಸ್ಮರೇತ್ ॥೧೩೬॥

ಸ ಜೀವಃ ಪ್ರಕೃತಿಃ ಸತ್ತ್ವಂ ರಜಶ್ಚಾಥ ತಮಃ ಪುನಃ ।
ಮಹಾಂ ಸ್ತಥಾಽಭಿಮಾನಶ್ಚ ತನ್ಮಾತ್ರಾಣೀಂದ್ರಿಯಾಣಿ ಚ ॥೧೩೮॥

ವ್ಯೋಮಾದೀನಿ ಚ ಭೂತಾನಿ ನೈತೀಹ ಪರಮಾರ್ಥತಃ ।
ವ್ಯಾಪ್ಯ ತಿಷ್ಠ ದ್ಯತೋ ವಿಶ್ವಂ ಸ್ಥಾಣು ರಿತ್ಯಭಿ ಧೀಯತೇ ॥೧೩೯॥

---

೧೩೫–೧೩೬. ಈ ರೀತಿಯಾಗಿ ಬಲಗಣ್ಣಿನಲ್ಲಿ ಸೂರ್ಯನೂ, ಎಡಗಣ್ಣಿನಲ್ಲಿ ಚಂದ್ರನೂ, ಹೃದಯದಲ್ಲಿ ಶಿವನೂ, ಮೊಳಕಾಲು ವರೆಗೂ ಭೂಮಿಯೆಂಬ ತತ್ತ್ವವೂ, ಹೊಕ್ಕುಳಿನವರೆಗೂ ನೀರಿನ ಮಂಡಲ ಎಂದರೆ ಜಲತತ್ವವೂ, ಕತ್ತಿನವರೆಗೂ ಬೆಂಕಿಯೆಂಬ ಪ್ರಕೃತಿಯ ಅಗ್ನಿ ತತ್ವವೂ, ಹಣೆಯೂ, ಹಣೆಯವರೆಗಿನ ಪ್ರದೇಶವೂ, ವಾಯುವಿಗೆ ಸಂಬಂಧಪಟ್ಟದ್ದೆಂದೂ, ತಲೆಕೂದಲಿನ ಅಂಚು ಆಕಾಶಕ್ಕೆ ಸಂಬಂಧಪಟ್ಟದ್ದೆಂದೂ, ಅದರ ಮೇಲಿನಭಾಗವು ಹಂಸನೆಂದು ಹೆಸರುಳ್ಳ ಪರಬ್ರಹ್ಮನಿಗೆ ಸಂಬಂಧಪಟ್ಟದ್ದೂ, ಅದರ ಮೇಲಿನ ಭಾಗವು ಆಕಾಶ ತತ್ವಕ್ಕೆ ಸಂಬಂಧಪಟ್ಟದ್ದೂ, ಅದಕ್ಕಿಂತಲೂ ಮೇಲಿನ ಭಾಗವು ಶಿವನಿಗೆ ಸಂಬಂಧಪಟ್ಟ ಮೊದಲನೆಯ ಭಾಗವಾಗಿಯೂ ಇರುತ್ತದೆ. ಇಂಥಾ ಶಿವನನ್ನು ಮೊದಲು ಧ್ಯಾನಮಾಡಬೇಕು.

೧೩೮–೧೪೦. ಜೀವನಾಗಲೀ, ಪ್ರಕೃತಿಯಾಗಲೀ, ಸತ್ವ, ರಜಸ್ಸು, ತಮಸ್ಸುಈ ಗುಣಗಳಾಗಲಿ, ಮಹತ್ತೆಂಬ ಪ್ರಕೃತಿಯ ತತ್ವವಾಗಲಿ, ಅಹಂಕಾರವಾಗಲಿ, ಪಂಚತನ್ಮಾತ್ರಗಳೆಂಬ ಪ್ರಕೃತಿಯ ತತ್ತ್ವಗಳಾಗಲಿ, ಆಕಾಶವೇ ಮೊದಲಾದ ಐದು ಭೂತಗಳಾಗಲಿ, ವಾಸ್ತವವಾಗಿ ಇಲ್ಲವೇ ಇಲ್ಲ. ಶಿವನೇ ಇದರಲ್ಲೆಲ್ಲಾ ವ್ಯಾಪಿಸಿ, ಸ್ಥಿರನಾಗಿ, ಸ್ಥಾಣುವೆಂಬ ಹೆಸರಿನಿಂದ

**ಉದೇತಿ ಸೂರ್ಯೋ ಭೀತಶ್ಚ ಪವತೇ ವಾತ ಏವ ಚ ।**
**ದ್ಯೋತತೇ ಚಂದ್ರಮಾ ವಹ್ನಿಃ ಜ್ವಲತ್ಯಾಪೋ ವಹಂತಿ ಚ ॥೧೪೦॥**
**ದಧಾತಿ ಭೂಮಿ ರಾಕಾಶ ಮವಕಾಶಂ ದದಾತಿ ಚ ।**
**ತದಾ ಜ್ಞಯಾ ತತಂ ಸರ್ವಂ ತಸ್ಮಾದ್ವೈ ಚಿಂತಯೇ ದ್ದ್ವಿಜಾಃ ॥**
**ತೇನೈ ವಾ ಧಿಷ್ಠಿತಂ ತಸ್ಮಾದೇತ ತ್ಸರ್ವಂ ದ್ವಿಜೋತ್ತಮಾಃ ।**
**ಸರ್ವ ರೂಪ ಮಯಃ ಶರ್ವ ಇತಿಮತ್ವಾ ಸ್ಮರೇದ್ಭವಂ ॥೧೪೩॥**
**ಸಂಸಾರ ವಿಷ ತಪ್ತಾನಾಂ ಜ್ಞಾನ ಧ್ಯಾನಾಽಮೃತೇನ ವೈ ।**
**ಪ್ರತೀಕಾರಃ ಸಮಾಖ್ಯಾತೋ ನಾಽನ್ಯಥಾ ದ್ವಿಜಸತ್ತಮಾಃ ॥೧೪೩॥**
**ಜ್ಞಾನಂ ಧರ್ಮೋದ್ಭವಂ ಸಾಕ್ಷಾತ್ ಜ್ಞಾನಾದ್ವೈರಾಗ್ಯ ಸಂಭವಃ ।**
**ವೈರಾಗ್ಯಾ ತ್ಪರಮಂ ಜ್ಞಾನಂ ಪರಮಾಽರ್ಥ ಪ್ರಕಾಶಕಂ ॥೧೪೪॥**

---

ಪ್ರಕಾಶಿಸುತ್ತಿರುವನೆಂದು ತಿಳಿಯಬೇಕು. ಪರಮಾತ್ಮನಾದ ಶಿವನ ಅಪ್ಪಣೆಯನ್ನು ಮೀರಬಾರದೆಂಬ ಭಯದಿಂದಲೇ ಸೂರ್ಯನು ಉದಯಿಸುವುದೂ ಮತ್ತು ಗಾಳಿಯು ಬೀಸುವುದೂ ನೆರವೇರುತ್ತಿರುತ್ತದೆ. ಹಾಗೆಯೇ ಚಂದ್ರನೂ ಕೂಡ ಬೆಳಗುತ್ತಿರುವನು, ಬೆಂಕಿಯು ಸುಡುತ್ತಿರುವುದು, ನೀರು ಹರಿಯುತ್ತಿರುವುದು.

೧೪೧–೧೪೩. ಈಶ್ವರನ ಅಪ್ಪಣೆಯಿಂದಲೇ ಭೂಮಿಯು ಧರಿಸಿರುತ್ತದೆ. ಆಕಾಶವು ಟೊಳ್ಳಾಗಿದೆ. ಎಲೈ ಬ್ರಾಹ್ಮಣರೇ, ಆದ್ದರಿಂದ ಈಶ್ವರನ ಅಪ್ಪಣೆಯಿಂದಲೇ ಎಲ್ಲವೂ ತಂತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತವೆ. ಎಲೈ ಬ್ರಾಹ್ಮಣ ಶ್ರೇಷ್ಠರೇ, ಶಿವನಿಂದಲೇ ಎಲ್ಲವೂ ವ್ಯಾಪಿಸಲ್ಪಟ್ಟದೆ. ಎಲ್ಲಾ ಸ್ವರೂಪವನ್ನೂ ಧರಿಸಿದವನು ಶಿವನೇ ಎಂದು ಅವನನ್ನೇ ಸ್ಮರಿಸಬೇಕು. ಸಂಸಾರವೆಂಬ ವಿಷದಿಂದ ಸಂಕಟಪಡುವ ಜನರಿಗೆ ಶಿವನ ಜ್ಞಾನ ಮತ್ತು ಧ್ಯಾನಗಳೆಂಬ ಅಮೃತ ಸೇವನೆಯೇ ಪ್ರತೀಕಾರೋಪಾಯವೆಂದೂ, ಬೇರೊಂದೂ ಇದಕ್ಕೆ ಪ್ರತಿಕಾರೋಪಾಯವಲ್ಲವೆಂದೂ ತಿಳಿಯಿರಿ.

೧೪೪–೧೪೬. ಜ್ಞಾನವು ಧರ್ಮದಿಂದ ಹುಟ್ಟಿದ್ದೆಂದೂ, ಜ್ಞಾನದಿಂದ ವೈರಾಗ್ಯವು ಹುಟ್ಟುವುದೆಂದೂ, ವೈರಾಗ್ಯದಿಂದ ಪರಮಾತ್ಮನ ಜ್ಞಾನವುಂಟಾಗಿ, ಅವನ ಸಾಕ್ಷಾತ್ಕಾರವಾಗುವುದೆಂದೂ ತಿಳಿಯಬೇಕು. ಎಲೈ

**ಜ್ಞಾನ ವೈರಾಗ್ಯ ಯುಕ್ತಸ್ಯ ಯೋಗಸಿದ್ಧಿಃ ದ್ವಿಜೋತ್ತಮಾಃ**
**ಯೋಗ ಸಿದ್ಧ್ಯಾ ವಿಮುಕ್ತಿಃ ಸ್ಯಾ ತ್ಸತ್ತ್ವನಿಷ್ಠಸ್ಯ ನಾನ್ಯಥಾ ॥೧೪೫॥**

**ತಮೋ ವಿದ್ಯಾ ಪದ ಚ್ಛನ್ನಂ ಚಿತ್ರಂ ಯತ್ಪದ ಮವ್ಯಯಂ ।**
**ಸತ್ವ ಶಕ್ತಿಂ ಸಮಾಸ್ಥಾಯ ಶಿವ ಮಭ್ಯರ್ಚಯೇತ್ ದ್ವಿಜಾಃ ॥೧೪೬॥**

**ಯಃ ಸತ್ತ್ವನಿಷ್ಠೋ ಮದ್ಭಕ್ತೋ ಮದರ್ಚನ ಪರಾಯಣಃ ।**
**ಸರ್ವತೋ ಧರ್ಮ ನಿಷ್ಠ ಶ್ಚ ಸದೋತ್ಸಾಹೀ ಸಮಾಹಿತಃ ॥೧೪೭॥**

**ಸರ್ವದ್ವಂದ್ವ ಸಹೋ ಧೀರಃ ಸರ್ವಭೂತ ಹಿತೇ ರತಃ ।**
**ಋಜುಸ್ವಭಾವಃ ಸತತಂ ಸ್ವಸ್ಥಚಿತ್ತೋ ಮೃದುಃ ಸದಾ ॥೧೪೮॥**

**ಅಮಾನೀ ಬುದ್ಧಿಮಾನ್ ಶಾಂತಃ ತ್ಯಕ್ತ ಸ್ಪರ್ಧೋ ದ್ವಿಜೋತ್ತಮಾಃ**
**ಸದಾ ಮುಮುಕ್ಷುಃ ಧರ್ಮಜ್ಞಃ ಸ್ವಾತ್ಮ ಲಕ್ಷಣ ಲಕ್ಷಿತಃ ॥**

---

ಬ್ರಾಹ್ಮಣ ಶ್ರೇಷ್ಠರೇ, ಜ್ಞಾನ ಮತ್ತು ವೈರಾಗ್ಯಗಳೆರಡೂ, ಇರುವ ಮನುಷ್ಯನಿಗೆ ಯೋಗದಲ್ಲಿ ಸಿದ್ಧಿಯುಂಟಾಗುವುದು, ಯೋಗದ ಸಿದ್ಧಿಯಿಂದ ಸಾತ್ತ್ವಿಕನಾದ ಮನುಷ್ಯನಿಗೆ ಮೋಕ್ಷವುಂಟಾಗುವುದು. ಇದಕ್ಕೆ ಬೇರೊಂದು ಉಪಾಯವೇ ಇಲ್ಲ. ಎಲೈ ಬ್ರಾಹ್ಮಣರೇ, ತಮಸ್ಸು ಮತ್ತು ಅವಿದ್ಯೆ, ಎಂಬ ಅರ್ಥವನ್ನು ಕೊಡತಕ್ಕ, ಮಾಯಾ, ಎಂಬ ಪದದ ಅರ್ಥವನ್ನು ತಿಳಿಯಿರಿ. ಜ್ಞಾನದ ಸ್ವರೂಪವನ್ನು ಚೆನ್ನಾಗಿ ಅರಿತು ಶಿವನ ಪೂಜೆಯನ್ನು ಮಾಡಿರಿ.

೧೪೭–೧೪೮. ಯಾವನು ಸಾತ್ವಿಕನಾಗಿಯೂ, ನನ್ನ ಭಕ್ತನಾಗಿಯೂ, ನನ್ನ ಪೂಜೆಯಲ್ಲೇ ಆಸಕ್ತನಾಗಿಯೂ, ಎಲ್ಲಾ ವಿಧದಲ್ಲಿಯೂ, ಧರ್ಮ ಕಾರ್ಯಗಳಲ್ಲಿ ಆಸಕ್ತನಾಗಿಯೂ, ಯಾವಾಗಲೂ ನನ್ನ ತತ್ವವಿಚಾರ ಮುಂತಾದ ಎಲ್ಲ ಬಗೆಯ ಆರಾಧನೆಯಲ್ಲಿ ಉತ್ಸಾಹವನ್ನು ತೋರಿಸುವವನಾಗಿಯೂ, ಧೀರನಾಗಿಯೂ, ಎಲ್ಲಾ ಪ್ರಾಣಿಗಳ ಸೌಖ್ಯದಲ್ಲಿ ಆಶೆಯುಳ್ಳವನಾಗಿಯೂ. ನೇರವಾದ ನಡತೆಯುಳ್ಳವನಾಗಿಯೂ, ಯಾವಾಗಲೂ ಸಮಾಧಾನದಿಂದ ಇರತಕ್ಕವನಾಗಿಯೂ, ಶಾಂತನಾಗಿಯೂ ಇರುವನೋ ಅಂತಹ ಉಪಾಸಕನು ಸ್ವರ್ಗಲೋಕವನ್ನು ಹೊಂದುವನು.

೧೪೯–೧೫೧. ಅವನು ಅಹಂಕಾರವಿಲ್ಲದವನೂ, ಸಾಮ್ಯಬುದ್ಧಿಯುಳ್ಳವನೂ, ಶಾಂತನೂ ಆಗಿರುತ್ತಾ, ಇತರರೊಂದಿಗೆ ಸ್ಪರ್ಧೆಯಿಲ್ಲದವನಾಗಿರಬೇಕು. ಅಲ್ಲದೆ ಯಾವಾಗಲೂ ಮೋಕ್ಷದಲ್ಲೇ ಬಯಕೆಯುಳ್ಳವನಾಗಿ

ಋಣತ್ರಯ ವಿನಿರ್ಮುಕ್ತಃ ಪೂರ್ವಜನ್ಮನಿ ಪುಣ್ಯಭಾಕ್ ।
ಜರಾಯುಕ್ತೋ ದ್ವಿಜೋ ಭೂತ್ವಾ ಶ್ರದ್ಧಯಾ ಚ ಗುರೋಃ
ಕ್ರಮಾತ್ ॥೧೫೦॥

ಅನ್ಯಥಾ ವಾಽಪಿ ಶುಶ್ರೂಷಾಂ ಕೃತ್ವಾ ಕೃತ್ರಿಮ ವರ್ಜಿತಃ ।
ಸ್ವರ್ಗಲೋಕ ಮನುಪ್ರಾಪ್ಯ ಭುಕ್ತ್ವಾ ಭೋಗಾ ನನು ಕ್ರಮಾತ್ ॥

ಆಸಾದ್ಯ ಭಾರತಂ ವರ್ಷಂ ಬ್ರಹ್ಮ ವಿಜ್ಞಾಯತೇ ದ್ವಿಜಾಃ ।
ಸಂಪರ್ಕಾತ್ ಜ್ಞಾನ ಮಾಸಾದ್ಯ ಜ್ಞಾನಿನೋ ಯೋಗವಿದ್ಭವೇತ್ ॥

ಕ್ರಮೋಽಯಂ ಮಲಪೂರ್ಣಸ್ಯ ಜ್ಞಾನಪ್ರಾಪ್ತೇ ರ್ದ್ವಿಜೋತ್ತಮಾಃ
ತಸ್ಮಾದನೇನ ಮಾರ್ಗೇಣ ತ್ಯಕ್ತಸಂಗೋ ದೃಢವ್ರತಃ ॥೧೫೩॥

ಸಂಸಾರ ಕಾಲ ಕೂಟಾಖ್ಯಾ ನ್ಮುಚ್ಯತೇ ಮುನಿಪುಂಗವಾಃ ।
ಏವಂ ಸಂಕ್ಷೇಪತಃ ಪ್ರೋಕ್ತಂ ಮಯಾ ಯುಷ್ಮಾಕ ಮಚ್ಯುತಂ ॥

---

ವಿಚಾರವನ್ನು ತಿಳಿದವನಾಗಿ, ಆತ್ಮವಿಚಾರ ಮಾಡುವವನಾಗಿರುತ್ತಾ, ಅವನ ಹಿಂದಿನ ಜನ್ಮದಲ್ಲಿಯೇ ಆರ್ಜಿಸಿದ ಪುಣ್ಯವುಳ್ಳವನಾಗಿ, ದೇವ ಋಣ, ಪಿತೃಋಣ, ಋಷಿಋಣಗಳೆಂಬ ಮೂರು ವಿಧವಾದ ಋಣ ಗಳಿಂದ ಬಿಡಲ್ಪಟ್ಟವನಾಗಿರುವುದರಿಂದ ಪುಣ್ಯವಂತನಾಗಿಯೂ, ಇರುವ ವೃದ್ಧನಾದ ಬ್ರಾಹ್ಮಣನಾದ ಗುರುವನ್ನು ಸಮೀಪಿಸಿ, ಶ್ರದ್ಧಾ ಭಕ್ತಿ ಗಳಿಂದ ಅವನ ಸೇವೆಯನ್ನು ಮಾಡಿ, ಅದಕ್ಕೆ ಫಲವಾದ ಸ್ವರ್ಗಲೋಕ ವನ್ನು ಹೊಂದಿ, ಅನೇಕ ಭೋಗಗಳನ್ನು ಅನುಭವಿಸುವನು.

೧೫೧–೧೫೪. ಅನಂತರದಲ್ಲಿ ಈ ಬ್ರಾಹ್ಮಣನು ಭಾರತ ಭೂಮಿ ಯನ್ನು ಸೇರಿ ಬ್ರಹ್ಮಜ್ಞಾನಿಯಾಗುವನು. ಜ್ಞಾನಿಯ ಸಂಪರ್ಕವನ್ನು ಪಡೆದು ಯೋಗದ ಸ್ವರೂಪವನ್ನು ತಿಳಿಯುವನು. ಕಲ್ಮಷದಿಂದ ಪೂರ್ಣ ನಾದ ಅಜ್ಞಾನಿಯಾದ ಜೀವನ ಜ್ಞಾನಪ್ರಾಪ್ತಿಗೆ ಹೀಗೆ ಧ್ಯಾನ, ಜ್ಞಾನ, ಎಂಬ ಎರಡು ಮಾರ್ಗಗಳಿವೆಯೆಂದು ತಿಳಿಯಬೇಕು. ಆದ್ದರಿಂದ ಇಂಥಾ ಶ್ರೇಷ್ಠವಾದ ಉಪಾಯದಿಂದ, ವೈರಾಗ್ಯ, ದೃಢ ನಿಶ್ಚಯಗಳುಳ್ಳ ಮನು ಷ್ಯನು ಸಂಸಾರವೆಂಬ ಕಾಲಕೂಟ ವಿಷದಿಂದ ಬಿಡುಗಡೆಯನ್ನು ಹೊಂದು ತ್ತಾನೆ. ಎಲೈ ಮುನಿಶ್ರೇಷ್ಠರೇ, ಹೀಗೆ ನಾಶರಹಿತವಾದ ತಪ್ಪದೆ ಫಲಿಸುವ ಜ್ಞಾನಮಾರ್ಗವನ್ನು ನಿಮಗೆ ಸಂಕ್ಷೇಪವಾಗಿ ತಿಳಿಸಿದ್ದೇನೆ.

ಜ್ಞಾನ ಸ್ಯೈವೇಹ ಮಾಹಾತ್ಮ್ಯಂ ಪ್ರಸಂಗಾದಿಹ ಶೋಭನಂ ।
ಏವಂ ಪಾಶುಪತಂ ಯೋಗಂ ಕಥಿತಂ ತ್ವೀಶ್ವರೇಣ ತು ॥೧೫೫॥
ನ ದೇಯಂ ಯಸ್ಯ ಕಸ್ಯಾಽಪಿ ಶಿವೋಕ್ತಂ ಮುನಿ ಪುಂಗವಾಃ ।
ದಾತವ್ಯಂ ಯೋಗಿನೇ ನಿತ್ಯಂ ಭಸ್ಮ ನಿಷ್ಠಾಯ ಸುಪ್ರಿಯಂ ॥೧೫೬॥
ಯಃ ಪಠೇತ್ ಶೃಣುಯಾ ದ್ವಾಽಪಿ ಸಂಸಾರ ಶಮನಂ ನರಃ ।
ಸ ಯಾತಿ ಬ್ರಹ್ಮ ಸಾಯುಜ್ಯಂ ನಾಽತ್ರ ಕಾರ್ಯಾ ವಿಚಾರಣಾ ॥೧೫೭॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸಂಸಾರ ಸ್ವರೂಪ
ವರ್ಣನಂ ನಾಮ ಷಡಶೀತಿ ತಮೋಽಧ್ಯಾಯಃ

---

೧೫೫–೧೫೭. ಹೀಗೆ ಈಶ್ವರನಿಂದ ಪಾರ್ವತಿಗೆ ಉಪದೇಶಿಸಲ್ಪಟ್ಟ ಮಂಗಳಕರವಾದ ಜ್ಞಾನದ ಮಹಿಮೆಯನ್ನೂ ಪ್ರಸಂಗ ಬಂದದ್ದರಿಂದ ಹೇಳಲಾಯಿತು. ಅಲ್ಲದೇ ಪಶುಪತಿಗೆ ಸಂಬಂಧಪಟ್ಟ ವ್ರತಯೋಗ ವಿಷಯವೂ ಹೇಳಲ್ಪಟ್ಟಿತು. ಎಲೈ ಋಷಿಶ್ರೇಷ್ಠರೇ, ಇಂಥಾ ಶ್ರೇಷ್ಠವಾದ, ಶಿವನಿಂದ ಹೇಳಲ್ಪಟ್ಟ, ಜ್ಞಾನಯೋಗದ ವಿಷಯವನ್ನು ಯಾರಿಗೆ ಬೇಕಾದರೂ ಯೋಗ್ಯತೆಯನ್ನು ವಿಮರ್ಶಿಸಿ ಗೊತ್ತುಮಾಡಿಕೊಳ್ಳದೆ ಹೇಳಬೇಡಿರಿ. ಬೂದಿಯನ್ನು ಹಚ್ಚಿಕೊಂಡು ಯೋಗಾಭ್ಯಾಸವನ್ನು ಮಾಡುವ ಮನುಷ್ಯನಿಗೆ ಮಾತ್ರ, ಶ್ರೇಷ್ಠವಾದ, ಶಿವನಿಗೆ ಪ್ರಿಯವಾದ, ಈ ವಿಚಾರವನ್ನು ಹೇಳಬೇಕು. ಈ ಜ್ಞಾನಯೋಗಶಾಸ್ತ್ರವನ್ನು ಯಾವನು ಓದುವನೋ ಅಥವಾ ಕೇಳುವನೋ ಅಂಥಾ ಮನುಷ್ಯನಿಗೆ ಸಂಸಾರ ಕ್ಲೇಶವು ನಾಶವಾಗಿ, ಕೊನೆಗೆ ಅವನು ಬ್ರಹ್ಮನಲ್ಲಿಯೇ ಐಕ್ಯವನ್ನು ಪಡೆಯುವನು, ಎಂಬುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸಂಸಾರವೆಂಬ ವಿಷದ
ಸ್ವರೂಪ ವಿವರಣೆ ಎಂಬ ಎಂಬತ್ತಾರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸಪ್ತಾಶೀತಿತಮೋಽಧ್ಯಾಯಃ

॥ ಸೂತ ಉವಾಚ ॥

ನಿಶಮ್ಯ ತೇ ಮಹಾಪ್ರಾಜ್ಞಾಃ ಕುಮಾರಾದ್ಯಾಃ ಪಿನಾಕಿನಂ ।
ಪ್ರೋಚುಃ ಪ್ರಣಮ್ಯ ವೈ ಭೀತಾಃ ಪ್ರಸನ್ನಂ ಪರಮೇಶ್ವರಂ ॥ ೧ ॥

ಏವಂ ಚೇ ದನಯಾ ದೇವ್ಯಾ ಹೈಮವತ್ಯಾ ಮಹೇಶ್ವರ ।
ಕ್ರೀಡಸೇ ವಿವಿಧೈ ರ್ಭೋಗೈಃ ಕಥಂ ವಕ್ತುಮಿಹಾರ್ಹಸಿ ॥ ೨ ॥

॥ ಸೂತ ಉವಾಚ ॥

ಏವಮುಕ್ತಃ ಪ್ರಹಸ್ಯೇಶಃ ಪಿನಾಕೀ ನೀಲ ಲೋಹಿತಃ ।
ಪ್ರಾಹ ತಾಮಂಬಿಕಾಂ ಪ್ರೇಕ್ಷ್ಯ ಪ್ರಣಿಪತ್ಯ ಸ್ಥಿತಾನ್ದ್ವಿಜಾನ್ ॥ ೩ ॥

---

**ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತೇಳನೆಯ ಅಧ್ಯಾಯವು.**

೧-೩. ಸೂತನು ಹೇಳಿದನು :—ಸನತ್ಕುಮಾರನೇ ಮೊದಲಾದ ಮಹಾ ಜ್ಞಾನಿಗಳಾದ ಋಷಿಗಳು, ಶಿವನ ಈ ಮಾತನ್ನು ಕೇಳಿ, ಅವನಿಗೆ ಭಯಭಕ್ತಿಗಳಿಂದ ನಮಸ್ಕರಿಸಿ, ತಮ್ಮಲ್ಲಿ ಪ್ರಸನ್ನನಾದ ಶಿವನನ್ನು ಕುರಿತು ಹೀಗೆ ಪ್ರಶ್ನೆಮಾಡಿದರು. ಸ್ವಾಮಿಯೇ, ಹೀಗೆ ಎಲ್ಲವೂ ನಿನ್ನ ಸ್ವರೂಪವೇ ಆಗಿ, ಬೇರೊಂದಿಲ್ಲದಿದ್ದ ಮೇಲೆ, ನೀನು ಹೈಮವತೀ ಎಂದರೆ ಪರ್ವತ ರಾಜನಾದ ಹಿಮವಂತನ ಮಗಳಾದ ಪಾರ್ವತೀ ದೇವಿಯೊಂದಿಗೆ ಅನೇಕ ಬಗೆಯ ವಿನೋದಗಳನ್ನು ಅನುಭವಿಸುತ್ತಿರುವುದು ಹೇಗೆ ? ಎಂಬ ವಿಷಯವನ್ನು ದಯವಿಟ್ಟು ನಮಗೆ ತಿಳಿಯ ಹೇಳಬೇಕು. ಕಪ್ಪಾದ ಕತ್ತುಳ್ಳ, ಪಿನಾಕವೆಂಬ ಆಯುಧವನ್ನು ಧರಿಸಿರುವ, ಈಶ್ವರನು ಋಷಿಗಳ ಈ ಮಾತನ್ನು ಕೇಳಿ, ನಕ್ಕು, ಪಾರ್ವತಿಯ ಕಡೆಗೆ ನೋಡಿ, ನಮಸ್ಕಾರಮಾಡಿ ಪ್ರಶ್ನೆ ಮಾಡುತ್ತಿರುವ ಋಷಿಗಳನ್ನು ಕುರಿತು ಹೀಗೆ ಹೇಳಿದನು.

ಬಂಧ ಮೋಕ್ಷೌ ನ ಚೈವೇಹ ಮಮ ಸ್ವೇಚ್ಛಾ ಶರೀರಿಣಃ ।
ಅಕರ್ತಾಽಜ್ಞಃ ಪಶುರ್ಜೀವೋ ವಿಭುರ್ಭೋಕ್ತಾ ಹ್ಯಣುಃ
ಪುಮಾನ್ ॥ ೪ ॥
ಮಾಯೀ ಚ ಮಾಯಯಾ ಬದ್ಧಃ ಕರ್ಮಭಿ ರ್ಯುಜ್ಯತೇ ತು ಸಃ ।
ಜ್ಞಾನಂ ಧ್ಯಾನಂ ಚ ಬಂಧಶ್ಚ ಮೋಕ್ಷೋ ನಾಽಸ್ತ್ಯಾತ್ಮನೋ
ದ್ವಿಜಾಃ ॥ ೫ ॥
ಯದ್ಯೇವಂ ಮಯಿ ವಿದ್ವಾನ್ ಯಸ್ತಸ್ಯಾಪಿ ಸ ಚ ಸರ್ವತಃ ।
ಏಷಾ ವಿದ್ಯಾ ಹ್ಯಹಂ ವೇದ್ಯಃ ಪ್ರಜ್ಞೈಷಾ ಚ ಶ್ರುತಿಃ ಸ್ಮೃತಿಃ ॥ ೬ ॥
ಧೃತಿರೇಷಾ ಮಯಾ ನಿಷ್ಠಾ ಜ್ಞಾನಶಕ್ತಿಃ ಕ್ರಿಯಾ ತಥಾ ।
ಇಚ್ಛಾಽಽಜ್ಞಾ ಚ ತಥಾ ಹ್ಯಾಜ್ಞಾ ದ್ವೇ ವಿದ್ಯೇ ಚ ನ ಸಂಶಯಃ ॥

---

೪–೬. ನನ್ನ ಇಚ್ಛೆಯಿಂಲೇ ಶರೀರವನ್ನು ಹೊಂದುವವನಾದ ನನಗೆ, ಸಂಸಾರವೆಂಬ ಕಟ್ಟಾಗಲೀ, ಅದರ ಬಿಡುಗಡೆಯಾಗಲೀ ವಾಸ್ತವ ವಾಗಿ ಇಲ್ಲವೇ ಇಲ್ಲ. ಜೀವನಿಗೂ ಕರ್ತೃತ್ವವು ವಾಸ್ತವವಾಗಿ ಇಲ್ಲ. ಆದರೆ ಅವನು ಅಜ್ಞಾನದಿಂದ ಕೂಡಿದ್ದಾನೆ. ಅವನು ವ್ಯಾಪಕನಾಗಿದ್ದರೂ ಸಂಸಾರ ಭೋಗದಲ್ಲಿ ತನ್ನನ್ನು ಬಂಧವನ್ನು ಹೊಂದಿರುವವನಂತೆ ತಿಳಿದಿದ್ದಾನೆ. ಅವನು ಬಹಳ ಸಣ್ಣವಸ್ತುವೂ, ಪುರುಷನೂ, ಅಜ್ಞಾನವುಳ್ಳವನೂ ಆಗಿ,ಮಾಯೆಯಿಂದ ಕಟ್ಟಲ್ಪಟ್ಟಿದ್ದಾನೆ. ಆದ್ದರಿಂದಲೇ ಅವನು ಕರ್ಮದ ಪಾಶಕ್ಕೆ ಸಿಕ್ಕಿದಂತಿದ್ದಾನೆ. ಎಲೈ ಬ್ರಾಹ್ಮಣರೇ, ಪರಮಾತ್ಮನಿಗೆ ಜ್ಞಾನ. ಧ್ಯಾನ, ಸಂಸಾರದ ಕಟ್ಟು, ಆದರಿಂದ ಬಿಡುಗಡೆ, ಇವು ಒಂದೂ ವಾಸ್ತವ ವಾಗಿ ಇಲ್ಲವು. ಈ ರೀತಿಯಾಗಿ ಯಾವನು ತನ್ನ ನಿಜರೂಪದ ತಿಳಿವಳಿಕೆಯನ್ನು ಪಡೆದಿದಾನೋ ಅವನೇ ಜ್ಞಾನಿಯು. ಸಮಸ್ತ ವೇದಾಂತ ಶಾಸ್ತ್ರಗಳಿಂದಲೂ ತಿಳಿಯಲ್ಪಡತಕ್ಕವನು ನಾನೇ. ಇದೇ ನಿಜವಾದ ಜ್ಞಾನವು. ನಾನೇ ಅದರಿಂದ ತಿಳಿಯಲ್ಪಡತಕ್ಕವನು ಎಂಬ ಜೀವ ಬ್ರಹ್ಮೈಕ್ಯ ರೂಪವಾದ ಜ್ಞಾನವೇ, ವೇದ ಮತ್ತು ಸ್ಮೃತಿಗಳೂ ಬೋಧಿಸುವ ತಿಳಿವಳಿಕೆಯೂ ಆಗಿರುತ್ತದೆ. ಅಲ್ಲದೆ ತಿಳಿಯಲ್ಪಡತಕ್ಕ ತತ್ವವು ನಾನು, ತಿಳಿವಳಿಕೆಯು ಪಾರ್ವತಿಯು, ಎಂದು ತಿಳಿಯಿರಿ.

೭–೯. ಅಲ್ಲದೆ ಇದೇ ಧಾರಣಶಕ್ತಿ ಸ್ವರೂಪಳಾದ ಪಾರ್ವತಿಯು.

ನ ಹ್ಯೇಷಾ ಪ್ರಕೃತಿರ್ಜೀವೀ ವಿಕೃತಿಶ್ಚ ವಿಚಾರತಃ ।
ವಿಕಾರೋ ನೈವ ಮಾಯೈಷಾ ಸದಸದ್ವ್ಯಕ್ತಿ ವರ್ಜಿತಾ ॥ ೮ ॥
ಪುರಾ ಮಮಾಽಜ್ಞಾ ಮದ್ವಕ್ತ್ರಾತ್ಸಮುತ್ಪನ್ನಾ ಸನಾತನೀ ।
ಪಂಚವಕ್ತ್ರಾ ಮಹಾಭಾಗಾ ಜಗತಾ ಮಭಯಪ್ರದಾ ॥ ೯ ॥
ತಾಮಾಜ್ಞಾಂ ಸಂಪ್ರ ವಿಶ್ಯಾಽಹಂ ಚಿಂತಯನ್ ಜಗತಾಂ ಹಿತಂ ।
ಸಪ್ತವಿಂಶತ್ಪ್ರಕಾರೇಣ ಸರ್ವಂ ವ್ಯಾಪ್ಯಾಽನಯಾ ಶಿವಃ ॥೧೦॥
ತದಾ ಪ್ರಭೃತಿ ಮೈ ಮೋಕ್ಷ ಪ್ರವೃತ್ತಿರ್ದ್ವಿಜ ಸತ್ತಮಾಃ ।

॥ ಸೂತ ಉವಾಚ ॥

ಏವಮುಕ್ತ್ವಾ ತದಾಽಪಶ್ಯ ದ್ಭವಾನೀಂ ಪರಮೇಶ್ವರಃ ॥೧೧॥

---

ನನ್ನಲ್ಲಿಡಬೇಕಾದ ಭಕ್ತಿಯು ಹಾಗೆಯೇ ಜ್ಞಾನಶಕ್ತಿ ಮತ್ತು ಇಚ್ಛಾ ಶಕ್ತಿಯೂ ಇದೇ ಈಶ್ವರೇಚ್ಛೆಯು ಮತ್ತು ನನ್ನ ಅಪ್ಪಣೆಯೂ ಆಗಿದೆ. ಅಲ್ಲದೇ ಇದೇ ಪರಾ, ಅಪರಾ ಎಂಬ ಎರಡು ಬಗೆಯ ವಿದ್ಯೆಗಳೆಂಬುದರಲ್ಲಿ ಸಂದೇಹವಿಲ್ಲ. ಅಜ್ಞಾನವು ಜೀವನ ಸ್ವಭಾವವಲ್ಲ ಮತ್ತು ವಿಚಾರಮಾಡಿದರೆ ಅವನ ವಿಕಾರವೂ ಅಲ್ಲವೆಂದು ಗೊತ್ತಾಗುವುದು. ಜೀವನಿಗೆ ಈ ನಾಶ ರೂಪವಾದ ವಿಕಾರವು ಮಾಯೆಯಿಂದ ಆಗುತ್ತಾ ಇರುವಂತೆ ತೋರುತ್ತಾ ಇರುವುದು. ಮತ್ತು ಇದು ವಾಸ್ತವವಾಗಿ ಇಲ್ಲದಿರುವುದು. ಇದು ಹೀಗೆ ಇರುವಿಕೆ ಇಲ್ಲದಿರುವಿಕೆ ಎಂಬೆರಡರ ಸ್ವಭಾವವುಳ್ಳದ್ದೂ ಆಗಿರುವುದೆಂದೂ, ತಿಳಿಯಬೇಕು. ಬಹಳ ಹಿಂದೆ ನನ್ನ ಈ ಮಾಯಾ ವಿಶಿಷ್ಟವಾದ ಬ್ರಹ್ಮ ಸ್ವರೂಪಿಣಿಯಾದ ಅಪ್ಪಣೆಯೇ ನನ್ನ ಮುಖದಿಂದ ಹೊರಟು, ಐದು ಮುಖಗಳುಳ್ಳ, ಎಂದರೆ ಪಂಚರೂಪವುಳ್ಳದ್ದಾಗಿಯೂ, ಬಹಳ ಪುಣ್ಯವುಳ್ಳದ್ದಾಗಿಯೂ, ಜಗತ್ತಿಗೆ ಮಂಗಳವನ್ನುಂಟು ಮಾಡುವುದಾಗಿಯೂ, ಆಯಿತು. ಅಥವಾ ನನ್ನ ಅಪ್ಪಣೆಯಿಂದ ಐದು ಬಗೆಯಾದ ಸೃಷ್ಟಿ, ಸ್ಥಿತಿ, ಲಯ, ಅನುಗ್ರಹ, ತಿರೋಧಾನವೆಂಬ ಐದು ರೂಪಾದ ಪ್ರಪಂಚವೂ ಆಯಿತೆಂದು ತಿಳಿಯಿರಿ. ನಾನು ಇಪ್ಪತ್ತೇಳು ತತ್ತ್ವರೂಪದಲ್ಲಿರುತ್ತೇನೆ.

೧೦-೧೨. ನನ್ನ ಅಪ್ಪಣೆ (ಮಾಯೆ) ಯನ್ನೇ ಅನುಸರಿಸಿ ನಾನು

ಭವಾನೀ ಚ ತಮಾ ಲೋಕ್ಯ ಮಾಯಾ ಮಹರ ದನ್ಯಯಾ ।
ತೇ ಮಾಯಾ ಮಲನಿರ್ಮುಕ್ತಾ ಮುನಯಃ ಪ್ರೇಕ್ಷ್ಯ ಪಾರ್ವತೀಂ॥
ಪ್ರೀತಾ ಬಭೂವು ರ್ಮುಕ್ತಾಶ್ಚ ತಸ್ಮಾ ದೇಷಾ ಪರಾ ಗತಿಃ ।
ಉಮಾ ಶಂಕರಯೋ ರ್ಭೇದಃ ನಾಽಸ್ತ್ಯೇವ ಪರಮಾರ್ಥತಃ ॥೧೩॥
ದ್ವಿಧಾಽಸೌ ರೂಪಮಾಸ್ಥಾಯ ಸ್ಥಿತ ಏವ ನ ಸಂಶಯಃ ।
ಯದಾ ವಿದ್ವಾನ ಸಂಗಃ ಸ್ಯಾ ದಾಜ್ಞಯಾ ಪರಮೇಷ್ಠಿನಃ ॥೧೪॥
ತದಾ ಮುಕ್ತಿಃ ಕ್ಷಣಾದೇವ ನಾಽನ್ಯಥಾ ಕರ್ಮಕೋಟಿಭಿಃ ।
ಕ್ರಮೋ ವಿವಕ್ಷಿತೋ ಭೂತ ವಿವೃದ್ಧಃ ಪರಮೇಷ್ಠಿನಃ ॥೧೫॥

---

ಜಗತ್ತಿನಲ್ಲಿರುತ್ತೇನೆ ಎಂದು ತಿಳಿಯಿರಿ. ಎಲೈ ಬ್ರಾಹ್ಮಣಶ್ರೇಷ್ಠರೇ, ಆಗಿನಿಂದಲೇ ಈ ರೀತಿಯಾಗಿ ಮೋಕ್ಷದ ಮಾರ್ಗವೂ ಪ್ರಸಿದ್ಧವಾಯಿತು. ಸೂತನು ಹೇಳಿದನು: ಶಿವನು ಹೀಗೆ ಹೇಳಿ ಪಾರ್ವತಿಯ ಕಡೆ ನೋಡಿದನು. ನಾಶರಹಿತಳಾದ, ಆ ಪಾರ್ವತಿಯೂ ಶಿವನನ್ನು ನೋಡಿ, ಆ ಮಾಯೆಯನ್ನು ಅವರಿಂದ ಪರಿಹರಿಸಿದಳು. ಆಗ ಋಷಿಗಳು ಪಾರ್ವತಿಯನ್ನು ನೋಡಿ ಮಾಯೆಯೆಂಬ ಅಜ್ಞಾನದ ಕೊಳಕಿನಿಂದ ಬಿಡುಗಡೆಯನ್ನು ಹೊಂದಿದರು. ಅಲ್ಲದೆ ಉಮಾಶಂಕರರಿಗೆ ಅಭೇದವು ವಾಸ್ತವವಾದುದರಿಂದ

೧೩–೧೫. ಆ ಋಷಿಗಳು ಸಂತೋಷವನ್ನು ಹೊಂದಿ, ಮೋಕ್ಷವನ್ನು ಪಡೆದರು. ಆದ್ದರಿಂದ ಪಾರ್ವತಿಯೇ ಉತ್ಕೃಷ್ಟಳಾದ ಸದ್ಗತಿಯೆಂದು ತಿಳಿಯಬೇಕು. ಪಾರ್ವತಿ ಮತ್ತು ಶಿವನಿಗೆ ಭೇದವೆಂಬುದು ವಾಸ್ತವವಾಗಿ ಇಲ್ಲವೇ ಇಲ್ಲ. ಶಿವನೇ ಈ ಎರಡು ರೂಪಗಳನ್ನು ತೆಗೆದುಕೊಂಡು ಇದ್ದಾನೆಂದು ತಿಳಿಯುವುದರಲ್ಲಿ ಸಂದೇಹ ಪಡಬಾರದು. ಪರಮೇಶ್ವರನ ಅನುಗ್ರಹರೂಪವಾದ ಆಜ್ಞೆಯಂತೆ ಜ್ಞಾನಿಯು ವೈರಾಗ್ಯ ವಿವೇಕಗಳುಳ್ಳವನಾದರೆ, ಮೋಕ್ಷವು ಕ್ಷಣಮಾತ್ರದಲ್ಲಿಯೇ ಸಿದ್ಧಿಸುವುದು. ಹಾಗಲ್ಲದೇ ಕೋಟಿಗಟ್ಟಲೆಯಾಗಿ ಕರ್ಮಗಳನ್ನು ಮಾಡಿದರೂ ಉಪಯೋಗವಿಲ್ಲ. ಶಿವನು ಹೇಳಿದ ಈ ಕ್ರಮವನ್ನು ಬಿಟ್ಟು, ಹಿಂದಿನ ಋಷಿಗಳು ಹೇಳಿದ ಪ್ರಾಕೃತ ಕ್ರಮವು ತತ್ತ್ವ ದೃಷ್ಟಿಯಿಂದ ಅಷ್ಟು ನಿಯಾಮಕವಾಗಲಾರದು.

ಪ್ರಸಾದೇನ ಕ್ಷಣಾನ್ಮುಕ್ತಿಃ ಪ್ರತಿಜ್ಞೈಷಾ ನ ಸಂಶಯಃ ।
ಗರ್ಭಸ್ಥೋ ಜಾಯಮಾನೋ ವಾ ಬಾಲೋ ವಾ ತರು
ಣೋಽಪಿ ವಾ ॥೧೬॥

ವೃದ್ಧೋ ವಾ ಮುಚ್ಯತೇ ಜಂತುಃ ಪ್ರಸಾದಾ ತ್ಪರಮೇಷ್ಠಿನಃ ।
ಅಂಡಜಶ್ಚೋದ್ಭಿಜೋ ವಾಽಪಿ ಸ್ವೇದಜೋ ವಾಽಪಿ ಮುಚ್ಯತೇ ॥

ಪ್ರಸಾದಾ ದ್ದೇವ ದೇವಸ್ಯ ನಾಽತ್ರ ಕಾರ್ಯಾ ವಿಚಾರಣಾ ।
ಏಷ ಏವ ಜಗನ್ನಾಥೋ ಬಂಧ ಮೋಕ್ಷಕರಃ ಶಿವಃ ॥೧೮॥

ಭೂರ್ಭುವಃ ಸ್ವರ್ಮಹಶ್ಚೈವ ಜನಃ ಸಾಕ್ಷಾತ್ತಪಃ ಸ್ವಯಂ ।
ಸತ್ಯಲೋಕ ಸ್ತಥಾಽಂಡಾನಾಂ ಕೋಟಿ ಕೋಟಿ ಶತಾನಿ ಚ ॥೧೯॥

---

೧೬. ಶಿವನ ಪ್ರಸಾದದಿಂದ ಒಂದು ಕ್ಷಣ ಕಾಲದಲ್ಲಿಯೇ ಮೋಕ್ಷವು ಸಿದ್ಧಿಸುವುದು. ಇದು ನೇರವಾಗಿ ಯಾವಾಗಲೂ ತಪ್ಪದ ನಿಯಮವಾಗಿದೆ. ಬರಿಯ ಪ್ರತಿಜ್ಞೆಯಲ್ಲ. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಆ ಭಕ್ತನು ಗರ್ಭದಲ್ಲಿರಲಿ, ಹುಟ್ಟುತ್ತಿರಲಿ, ಹುಡುಗನಾಗಿರಲಿ, ಶಿವನ ಪ್ರಸಾದವಾದರೆ, ಆ ಕೂಡಲೆ ಮೋಕ್ಷವುಂಟಾಗುವುದರಲ್ಲಿ ಸಂದೇಹವಿಲ್ಲ.

೧೭–೧೯. ಪರಬ್ರಹ್ಮರೂಪಿಯಾದ ಶಿವನ ಅನುಗ್ರಹದಿಂದ ಆ ಶಕ್ತಿಯನ್ನು ಪೂಜಿಸಿ ವೃದ್ಧನೇ ಆಗಿರುವ ಮನುಷ್ಯನಾದರೂ ಮೋಕ್ಷವನ್ನು ಹೊಂದುತ್ತಾನೆ. ಅಂಡದಲ್ಲಿ ಹುಟ್ಟುವ ಪ್ರಾಣಿಗಳಿಗಾಗಲೀ, ಬೀಜದಿಂದ ಹುಟ್ಟುವ ವಸ್ತುವಾಗಲಿ, ಬೆವರಿನಿಂದ ಹುಟ್ಟುವ ಪ್ರಾಣಿಯಾಗಲಿ, ಈ ಪ್ರಾಣಿಗಳು ದೇವದೇವನಾದ ಶಿವನ ಅನುಗ್ರಹದಿಂದ ಮೋಕ್ಷವನ್ನು ಹೊಂದುತ್ತವೆ. ಇದರಲ್ಲಿ ಸಂದೇಹವೇ ಇಲ್ಲ. ಜಗತ್ತಿಗೆ ಒಡೆಯನಾದ ಶಿವನೇ ಸಂಸಾರವೆಂಬ ಬಲೆಯ ಕಟ್ಟನ್ನು ಕೊಡುವವನೂ, ಅದನ್ನು ನಾಶಮಾಡುವವನೂ ಆಗಿದ್ದಾನೆ. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ ಸತ್ಯಲೋಕಗಳೂ, ಮತ್ತು ಅಲ್ಲಿ ವಾಸಿಸುವ ಜನಗಳೂ, ಮತ್ತು ಕೋಟ್ಯಂತರ

ವಿಗ್ರಹಂ ದೇವದೇವಸ್ಯ ತಥಾಽಂಡಾ ವರಣಾಷ್ಟಕಂ ।
ಸಪ್ತದ್ವೀಪೇಷು ಸರ್ವೇಷು ಪರ್ವತೇಷು ವನೇಷು ಚ ॥೨೦॥

ಸಮುದ್ರೇಷು ಚ ಸರ್ವೇಷು ವಾಯುಸ್ಕಂಧೇಷು ಸರ್ವತಃ ।
ತಥಾಽನ್ಯೇಷು ಚ ಲೋಕೇಷು ವಸಂತಿ ಚ ಚರಾಚರಾಃ ॥೨೧॥

ಸರ್ವೇ ಭವಾಂಶಜಾ ನೂನಂ ಗತಿಸ್ತ್ವೇಷಾಂ ಸ ಏವ ವೈ ।
ಸರ್ವೋ ರುದ್ರೋ ನಮಸ್ತಸ್ಮೈ ಪುರುಷಾಯ ಮಹಾತ್ಮನೇ ॥೨೨॥

ವಿಶ್ವಂ ಭೂತಂ ತಥಾ ಜಾತಂ ಬಹುಧಾ ರುದ್ರ ಏವ ಸಃ ।
ರುದ್ರಾಜ್ಞೈಷಾ ಸ್ಥಿತಾ ದೇವೀ ಹ್ಯನಯಾ ಮುಕ್ತಿರಂಬಿಕಾ ॥೨೩॥

ಇತ್ಯೇವಂ ಖೇಚರಾಃ ಸಿದ್ಧಾ ಜಜಲ್ಪುಃ ಪ್ರೀತಮಾನಸಾಃ ।
ಯದಾಽವಲೋಕ್ಯ ತಾನ್ ಸರ್ವಾನ್ ಪ್ರಸಾದಾದನಯಾಽಂಬಿಕಾ ॥

---

ಬ್ರಹ್ಮಾಂಡಗಳೂ, ಶಿವನ ಕರುಣೆಯಿಂದಲೇ ಉಂಟಾಗಿವೆ, ಮತ್ತು ಬದುಕಿವೆ.

೨೦–೨೨. ಮತ್ತು ಇವೆಲ್ಲವೂ ಶಿವನ ಶರೀರವಾಗಿವೆ. ಹಾಗೆಯೇ ಬ್ರಹ್ಮಾಂಡದ ಎಂಟು ಆವರಣಗಳೂ, ಏಳುದ್ವೀಪಗಳಲ್ಲಿಯೂ, ಎಲ್ಲಾ ಪರ್ವತಗಳಲ್ಲಿಯೂ, ಕಾಡುಗಳಲ್ಲಿಯೂ, ಎಲ್ಲಾ ಸಮುದ್ರಗಳಲ್ಲಿಯೂ, ಏಳುವಿಧವಾದ ವಾಯು ಮಾರ್ಗಗಳಲ್ಲಿಯೂ, ಬೇರೆಬೇರೆ ಲೋಕಗಳಲ್ಲಿಯೂ, ಇರುವ ಸ್ಥಾವರಜಂಗಮಗಳಾದ ವಸ್ತುಗಳೂ ಇವೆಲ್ಲವೂ ಶಿವನ ಅಂಶದಿಂದಲೇ ಹುಟ್ಟಿದುವು. ಇದಕ್ಕೆಲ್ಲಕ್ಕೂ ಶಿವನೇ ರಕ್ಷಕನು. ಹೀಗೆ ಎಲ್ಲಾ ವಸ್ತುಗಳ ಸ್ವರೂಪನೂ ಆದ ಪರಮ ಪುರುಷನಾದ, ಜೀವರ ಹಾರ್ದಾಕಾಶದಲ್ಲೂ ತೋರುವ ಮಹಾತ್ಮನಾದ ಶಿವನಿಗೆ ಅನೇಕ ನಮಸ್ಕಾರಗಳು.

೨೩–೨೫. ಹಿಂದೆಯೂ, ಈಗಲೂ, ಮುಂದೆಯೂ, ಉಂಟಾಗುವ ಉಂಟಾಗಿರುವ ಸಕಲ ಜಗತ್ತೂ ಶಿವನ ನಾನಾರೂಪಗಳೇ ಆಗಿವೆ. ಶಿವನ ಅಪ್ಪಣೆಯಿಂದಲೇ ಮೋಕ್ಷಸ್ವರೂಪಳಾದ ಈ ತಾಯಿಯು, ವಿರಾಜಮಾನಳಾಗಿದ್ದಾಳೆ. ಹೀಗೆ ಆಕಾಶದಲ್ಲಿ ಸಂಚರಿಸುವ ದೇವತೆಗಳೂ, ಮತ್ತು

ತದಾ ತಿಷ್ಠಂ ತಿ ಸಾಯುಜ್ಯಂ ಪ್ರಾಪ್ತಾಸ್ತೇ ಖೇಚರಾಃ ಪ್ರಭೋಃ ॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಸಪ್ತಾಶೀತಿತಮೋಽಧ್ಯಾಯಃ

---

ಸಿದ್ಧರೂ, ಬಹಳ ಸಂತೋಷದಿಂದ ಸ್ತೋತ್ರಮಾಡಿದರು. ಇವರ ಸ್ತೋತ್ರವನ್ನು ಕೇಳಿ ತಾಯಿಯಾದ ಪಾರ್ವತಿಯು ಮೆಚ್ಚಿದಳು. ಹೀಗೆ ಶಿವ ಪಾರ್ವತಿಯರ ಮೆಚ್ಚಿಗೆಯಿಂದ ಅವರೆಲ್ಲರೂ ಶಿವೈಕ್ಯವನ್ನು ಪಡೆದರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮುನಿಗಳ ಅಜ್ಞಾನವನ್ನು
ನಿವಾರಣೆ ಮಾಡುವುದು ಎಂಬ ಎಂಬತ್ತೇಳನೆಯ ಅಧ್ಯಾಯವು
ಮುಗಿದುದು.



ಶ್ರೀ ಲಿಂಗಮಹಾಪುರಾಣ

ಮಹಿಶೂರಾಧಿಪ ಜಯಚಾಮರಾಜೇಂದ್ರ ಶಾಸನಾತ್ ।
ಮಹಾಪುರಾಣಂ ಲೈಂಗಾಖ್ಯಂ ವರಕರ್ಣಾಟ ಭಾಷಯಾ ॥
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ಪರ್ಯವರ್ತಯದಾದರಾತ್ ॥
ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥

ಶ್ರೀ ಸಾಂಬಸದಾಶಿವಾ
ರ್ಪಣಮಸ್ತು



ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚಿನಲ್ಲಿ ಮುದ್ರಿಸಲ್ಪಟ್ಟಿತು.